# ಹಾವೇರಿ ಜಿಲ್ಲೆಯ ಜೈನ ಶಾಸನಗಳು ಮತ್ತು ಐತಿಹ್ಯಗಳು : ಒಂದು ಅಧ್ಯಯನ.

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಶಾಸನಶಾಸ್ತ್ರ ವಿಭಾಗಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು
ರವಿಕುಮಾರ ಕೆ. ನವಲಗುಂದ

ಮಾರ್ಗದರ್ಶಕರು
ಪ್ರೊ. ಡಿ.ವಿ. ಪರಮಶಿವಮೂರ್ತಿ.
ಪ್ರಾಧ್ಯಾಪಕರು.

ಶಾಸನಶಾಸ್ತ್ರ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೮

# ಹಾವೇರಿ ಜಿಲ್ಲೆಯ ಜೈನ ಶಾಸನಗಳು ಮತ್ತು ಐತಿಹ್ಯಗಳು : ಒಂದು ಅಧ್ಯಯನ.

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯದ ಶಾಸನಶಾಸ್ತ್ರ ವಿಭಾಗಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು
**ರವಿಕುಮಾರ ಕೆ. ನವಲಗುಂದ.**

ಮಾರ್ಗದರ್ಶಕರು
**ಪ್ರೊ. ಡಿ.ವಿ. ಪರಮಶಿವಮೂರ್ತಿ.**
ಪ್ರಾಧ್ಯಾಪಕರು.

ಶಾಸನಶಾಸ್ತ್ರ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ.**
ವಿದ್ಯಾರಣ್ಯ – ೫೮೩ ೨೭೬.

೨೦೧೮.

## ಮಾರ್ಗದರ್ಶಕರ ದೃಢೀಕರಣ ಪತ್ರ

**ರವಿಕುಮಾರ ಕೆ. ನವಲಗುಂದ** ಇವರು ಪಿಎಚ್.ಡಿ ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **"ಹಾವೇರಿ ಜಿಲ್ಲೆಯ ಜೈನ ಶಾಸನಗಳು ಮತ್ತು ಐತಿಹ್ಯಗಳು: ಒಂದು ಅಧ್ಯಯನ"** ಎಂಬ ಈ ಮಹಾ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಶಾಸನಶಾಸ್ತ್ರ ವಿಭಾಗಕ್ಕೆ** ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ಪ್ರೊ. ಡಿ.ವಿ. ಪರಮಶಿವಮೂರ್ತಿ**
ಪ್ರಾಧ್ಯಾಪಕರು.

**ಸ್ಥಳ :** ವಿದ್ಯಾರಣ್ಯ.
**ದಿನಾಂಕ :** 02/08/2018

## ಸಂಶೋಧಕರ ಘೋಷಣಾ ಪತ್ರ

**ರವಿಕುಮಾರ ಕೆ. ನವಲಗುಂದ** ಎಂಬ ನಾನು **"ಹಾವೇರಿ ಜಿಲ್ಲೆಯ ಜೈನ ಶಾಸನಗಳು ಮತ್ತು ಐತಿಹ್ಯಗಳು: ಒಂದು ಅಧ್ಯಯನ"** ಎಂಬ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯದ ಶಾಸನಶಾಸ್ತ್ರ ವಿಭಾಗದ ಪ್ರಾಧ್ಯಾಪಕರಾದ **ಪ್ರೊ. ಡಿ.ವಿ. ಪರಮಶಿವಮೂರ್ತಿ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಮತ್ತು ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

**ರವಿಕುಮಾರ ಕೆ. ನವಲಗುಂದ.**
ಪಿಎಚ್.ಡಿ. ಸಂಶೋಧನಾರ್ಥಿ
**ಶಾಸನಾಸ್ತ್ರ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬.

**ಸ್ಥಳ :** ವಿದ್ಯಾರಣ್ಯ
**ದಿನಾಂಕ :** ೦೨.೦೮.೨೦೧೮

## ಪರಿವಿಡಿ

# ಹಾವೇರಿ ಜಿಲ್ಲೆಯ ಜೈನಶಾಸನಗಳು ಮತ್ತು ಐತಿಹ್ಯಗಳು: ಒಂದು ಅಧ್ಯಯನ.

## ಸಂಕ್ಷಿಪ್ತ ಪದಸೂಚಿ.

| | | |
|---|---|---|
| ಎ.ಇ. | – | ಎಫಿಗ್ರಫಿಯಾ ಇಂಡಿಕಾ. |
| ಎ.ಆರ್.ಎಸ್.ಐ.ಇ. (ARSIE) | – | ಆನ್ಯುವಲ್ ರಿಪೋರ್ಟ್ ಆನ್ ಸೌತ್ ಇಂಡಿಯನ್ ಎಫಿಗ್ರಫಿ. |
| ಎ.ಕ. | – | ಎಫಿಗ್ರಫಿಯಾ ಕರ್ನಾಟಿಕ. |
| ಇಂ.ಎ. | – | ಇಂಡಿಯನ್ ಆ್ಯಂಟಿಕ್ವೆರಿ. |
| ಕ.ಇ. | – | ಕರ್ನಾಟಕ ಇನ್ಸ್‌ಕ್ರಿಪ್ಶನ್ಸ್. |
| ಸೌ.ಇ.ಇ. | – | ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಶನ್ಸ್. |
| ಬ್ಯಾತಾ | – | ಬ್ಯಾಡಗಿ ತಾಲ್ಲೂಕು. |
| ರಾತಾ | – | ರಾಣೆಬೆನ್ನೂರು ತಾಲ್ಲೂಕು. |
| ಶಿತಾ | – | ಶಿಗ್ಗಾವಿ ತಾಲ್ಲೂಕು. |
| ಸತಾ | – | ಸವಣೂರು ತಾಲ್ಲೂಕು. |
| ಹಾನತಾ | – | ಹಾನಗಲ್ಲು ತಾಲ್ಲೂಕು. |
| ಹಾತಾ | – | ಹಾವೇರಿ ತಾಲ್ಲೂಕು. |
| ಹಿತಾ | – | ಹಿರೇಕೆರೂರು ತಾಲ್ಲೂಕು. |
| ಬಿಜಿ | – | ಬಿಜಾಪುರ ಜಿಲ್ಲೆ. |
| ಬೀಜಿ | – | ಬೀದರ್ ಜಿಲ್ಲೆ. |
| ರಾಜಿ | – | ರಾಯಚೂರು ಜಿಲ್ಲೆ. |
| ಶಿಜಿ | – | ಶಿವಮೊಗ್ಗ ಜಿಲ್ಲೆ. |

# ಅಧ್ಯಾಯ-೦೧.

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ.

೧. ಅಧ್ಯಯನದ ಉದ್ದೇಶ.

೨. ವ್ಯಾಪ್ತಿ.

೩. ಇದುವರೆಗೂ ನಡೆದ ಅಧ್ಯಯನ.

೪. ಆಕರಗಳು.

೫. ಅಧ್ಯಯನ ರೂಪುರೇಷಗಳು.

# ಅಧ್ಯಾಯ-೦೧.

## ಅಧ್ಯಯನ ಉದ್ದೇಶ ಮತ್ತು ವ್ಯಾಪ್ತಿ.

ಸಾಮಾನ್ಯ ವ್ಯಕ್ತಿ ತನ್ನ ಇಂದ್ರಿಯಗಳನ್ನು ಹಿಡಿತದಲ್ಲಿರಿಸಿಕೊಳ್ಳುವುದರ ಮೂಲಕ 'ಶೂನ್ಯತ್ವದಿಂದ ದೈವತ್ವ'ದ ಹಂತ ತಲುಪಲು ಸಾಧ್ಯ ಎಂದು ಬಲವಾಗಿ ಪ್ರತಿಪಾದಿಸಿದ್ದು ಜೈನಧರ್ಮ. ಈ ಧರ್ಮ ಸ್ವರ್ಗದಿಂದ ಬಂದಿದ್ದಲ್ಲ; ಬದಲಾಗಿ ನೆಲದಲ್ಲಿಯೇ ಹುಟ್ಟಿದ ಧರ್ಮ. ಕರ್ಮಸಿದ್ಧಾಂತದ ತಳಹದಿಯಲ್ಲಿ ರಚಿತವಾದ ಜೈನಧರ್ಮವು ಶ್ರೀಸಾಮಾನ್ಯನಿಂದ ಮೊದಲ್ಗೊಂಡು ಕವಿಗಳು, ಮಂತ್ರಿಮಹೋದಯರು, ರಾಜ-ಮಹಾರಾಜರನ್ನು ಬಹುಬೇಗ ತನ್ನತ್ತ ಸೆಳೆದುಕೊಂಡಿತು. "ಜಾತಿಗಳಲ್ಲಿ ಬ್ರಾಹಣವೇ ಉತ್ತಮ; ತಾನು ಇನ್ನೂ ಉತ್ತಮನಾಗಬೇಕಾದರೆ ಸ್ವೀಕರಿಸಬಹುದಾದ ಬೇರೆ ಜಾತಿ ಯಾವುದು? ಎಂದು ಆಲೋಚಿಸಿ, ತಂದೆಯಾದ ಭೀಮಪಯ್ಯ ಜೈನಧರ್ಮವನ್ನು ಸ್ವೀಕರಿಸಿದ ಎಂದು ಪಂಪ ಹೇಳುತ್ತಾನೆ."[೧] ಸನಾತನ ಧರ್ಮದ ಅನುಸರಣೆ ಬಿಟ್ಟ ಭೀಮಪಯ್ಯ ಜೈನಧರ್ಮವನ್ನು ಅಪ್ಪಿಕೊಂಡಿದ್ದು, ಒಪ್ಪಿಕೊಂಡಿದ್ದು ಆ ಧರ್ಮದ ಸಿದ್ಧಾಂತಗಳನ್ನು ಮೆಚ್ಚಿ ಎಂಬುದನ್ನು ಮನಗಾಣಬೇಕು. ಮೇಲಾಗಿ ಕರ್ಮಸಿದ್ಧಾಂತವನ್ನು ಪ್ರತಿಪಾದಿಸಿದ ತೀರ್ಥಂಕರೆಲ್ಲರೂ ಅದನ್ನು ಚಾಚುತಪ್ಪದೆ ಅನುಸರಿಸಿದರು. ನುಡಿದಂತೆ ನಡೆಯುವ ನಾಯಕರಿದ್ದಾಗ ಶ್ರೀಸಾಮಾನ್ಯ ಅವರ ಹಿಂಬಾಲಕನಾಗುತ್ತಾನೆ ಎಂಬುದು ದಿಟ. ಈ ಗುಣದಿಂದಲೇ ಜಿನಧರ್ಮ-ಜನಧರ್ಮವಾಯಿತು.

ಕರ್ಮಸಿದ್ಧಾಂತ, ಅಹಿಂಸಾ ಗುಣಗಳನ್ನು ಮೂಲಾಧಾರವನ್ನಾಗಿ ಮಾಡಿಕೊಂಡ ಜೈನಧರ್ಮ ಬಹುಬೇಗ ಜನರನ್ನು ಆಕರ್ಷಿಸಿತು. ಆ ಧರ್ಮವನ್ನು ಪ್ರಚಾರ-ಪ್ರಸಾರ ಮಾಡುವ ಕ್ರಿಯೆಯಲ್ಲಿ ಸಾಮಾನ್ಯ ಶ್ರಾವಕನಿಂದ ಹಿಡಿದು ರಾಜಸತ್ತೆಗಳೂ ಪಾಲ್ಗೊಂಡವು. ಈ ಪ್ರಕ್ರಿಯೆಯು ಕರ್ನಾಟಕಕ್ಕೆ ಹೊರತಾಗಲಿಲ್ಲ. ರಾಷ್ಟ್ರಕೂಟರ ಕಾಲಾವಧಿಯಲ್ಲಿ ಜೈನರ ಸಂಖ್ಯೆ ಶೇಕಡಾ ೩೦ರಷ್ಟಿತ್ತು.[೨] ಕರ್ನಾಟಕದಲ್ಲಿ ಎಲೆಮರೆಯ ಕಾಯಿಯಾಗಿದ್ದ ಜೈನ ಧರ್ಮವನ್ನು ಪುನರುಜ್ಜೀವನಗೊಳಿಸಿದವರು ಜಿನಮುನಿಗಳು. ಔತ್ತರೇಯ ಮೂಲದಿಂದ ಬಂದ ಭದ್ರಬಾಹು ಮುನಿಯು ಕರ್ನಾಟಕದಲ್ಲಿ ಜಿನಧರ್ಮ ಪುನಶ್ಚೇತನಗೊಳ್ಳಲು ಒತ್ತಾಸೆಯಾದರು.[೩] ತದನಂತರ ಮುನಿಸಂಘಗಳು ಕರ್ನಾಟಕದಾದ್ಯಂತ ಜಿನಧರ್ಮ ಪ್ರಸರಣ ಕೈಗೊಂಡವು. ಒಂದರ್ಥದಲ್ಲಿ ಮುನಿಸಂಘದಿಂದಲೆ ಜೈನಧರ್ಮ ಅತ್ಯಧಿಕವಾಗಿ ಪ್ರಸರಣಗೊಂಡಿತು ಎಂದರೆ ತಪ್ಪಾಗಲಾರದು. ಮೂಲಸಂಘ (ನಿರ್ಗ್ರನ್ಥ ಮಹಾಶ್ರಮಣ ಸಂಘ)[೪]ದ ದೇಸಿಯಗಣ, ಸಗರಗಣ, ದೇವಗಣ, ಸೂರಸ್ಥಗಣ, ಕಾಣೂರುಗಣ, ಬಳಗಾರಗಣ, ಸಿಂಹಗಣ, ಸೇನಗಣ, ಭದ್ರಗಣ., ಯಾಪನೀಯ ಸಂಘದ ಕಾಣೂರುಗಣ, ಕಾರೇಯಗಣ, ಕುಮುದಿಗಣ, ಕೋಟಿಮಡುವಗಣ, ಪರಲೂರುಗಣ, ಬಲತ್ಕಾರಗಣ, ವಂದಿಯೂರ್ಗಣ, ವವಿಯೂರುಗಣ, ಪುನ್ನಾಗವೃಕ್ಷಮೂಲಗಣ, ಸೂರಸ್ಥಗಣ ಇತ್ಯಾದಿ ೨೨

ಗಣಗಳು, ಗಚ್ಛಗಳು ಅನ್ವಯ, ಬಳಿ ಪರಂಪರೆಯ ಮುನಿ ಗುಂಪುಗಳು ಜೈನಧರ್ಮವನ್ನು ಕರ್ನಾಟಕದ ಮೂಲೆಮೂಲೆಗೂ ಕೊಂಡೊಯ್ದವು.[೫] ಈ ಧರ್ಮ ಪ್ರಸರಣ ಕಾರ್ಯಕ್ಕೆ ಕದಂಬ, ಗಂಗ, ಚಲುಕ್ಯ, ರಾಷ್ಟ್ರಕೂಟ, ಚಾಳುಕ್ಯ, ಹೊಯ್ಸಳ ರಾಜಸತ್ತೆಗಳು ಬಲ-ಬೆಂಬಲವನ್ನೂ ಕೊಟ್ಟವು. ಅಂತೆಯೇ ಜೈನ ಸಂಸ್ಕೃತಿಯ ವಿವಿಧ ಮಜಲುಗಳು ಕಾವ್ಯವಾದವು, ಕಥೆಯಾದವು, ಹಾಡಾದವು. ಒಂದು ಧರ್ಮಸಂಸ್ಕೃತಿಯು ಗ್ರಂಥಸ್ಥ ಮತ್ತು ಕಂಠಸ್ಥ ಪರಂಪರೆಯ ಒಡಲಾಳವಾದಾಗ ಬಹುದಿನ ಬದುಕುತ್ತದೆ ಎಂಬ ಮಾತು ದಿಟ. ಜೈನಧರ್ಮ ಈ ಎರಡು ಕ್ಷೇತ್ರಗಳಲ್ಲೂ ತನ್ನ ಛಾಪನ್ನು ಒತ್ತದೇ ಬಿಡಲಿಲ್ಲ. ಕನ್ನಡ ಸಾಹಿತ್ಯದ ಆರಂಭಿಕ ಕವಿಗಳಾದ ಪಂಪ, ಪೊನ್ನ, ರನ್ನ, ನಾಗವರ್ಮ, ನಾಗಚಂದ್ರ ಜನ್ನ ಇತ್ಯಾದಿ ಕವಿಗಳು ಜೈನ ಸಂಸ್ಕೃತಿಯನ್ನು ತಮ್ಮ ಕೃತಿಗಳಲ್ಲಿ ಅನಾವರಣಗೊಳಿಸಿದ ಅಗ್ರಮಾನ್ಯ ಜೈನಕವಿಗಳು. ಇನ್ನು ಈ ಕುರಿತಾಗಿ ಜನಪದರಲ್ಲಿ ಕತೆ, ಹಾಡುಗಳು ಪ್ರವಹಿಸಿಕೊಂಡು ಬಂದಿದ್ದು ಕಂಠಸ್ಥ ಪರಂಪರೆಗೆ ಉದಾಹರಣೆಗಳಾಗಿವೆ.[೬]

ಜೈನಧರ್ಮ ಕರ್ನಾಟಕದಲ್ಲಿ ಭದ್ರವಾಗಿ ನೆಲೆಗೊಂಡಿದ್ದು ಪ್ರಮುಖವಾಗಿ ಜಿನಮುನಿಗಳಿಂದ ಎಂದು ಈಗಾಗಲೇ ತಿಳಿದ ವಿಚಾರ. ಜಿನಧರ್ಮವನ್ನು ಗಟ್ಟಿಕೊಳಿಸಲು ಜಿನಮುನಿಗಳು ಕಂಡುಕೊಂಡ ಒಂದು ಮಾರ್ಗವೆಂದರೆ ಬಸದಿಗಳನ್ನು ನಿರ್ಮಿಸುವುದು. ಬಸದಿ ಕೇವಲ ಪೂಜಾಗೃಹವಾಗಿ ಉಳಿಯದೆ ಅದು ಧರ್ಮವನ್ನು ಗಟ್ಟಿಗೊಳಿಸುವ ನೆಲೆಯೂ ಹೌದು. ಈ ಅಂಶವನ್ನರಿತ ಮುನಿಗಳು ರಾಜರನ್ನು, ದಂಡನಾಯಕರನ್ನು, ಮಂತ್ರಿಮಹೋದಯರನ್ನು ಹುರಿದುಂಬಿಸಿ ಜಿನಾಲಯಗಳನ್ನೆತ್ತಿಸಿದರು.[೭] ಇನ್ನು ಪ್ರಾದೇಶಿಕ ಮಟ್ಟದಲ್ಲಿ ಆರ್ಥಿಕವಾಗಿ ಸದೃಢವಾದ ಜೈನ ವ್ಯಾಪಾರಿಗಳನ್ನು ಪ್ರೇರೇಪಿಸುವ ಮೂಲಕ ಆಡಳಿತದ ಕೊನೆಯ ಘಟಕವಾದ ಗ್ರಾಮಸಮುದಾಯದಲ್ಲೂ ಚೈತ್ಯಾಲಯಗಳು ಉದಯಿಸುವಂತೆ ಮಾಡಿದರು. ಈ ಪ್ರಕ್ರಿಯೆಯ ನುಡಿಗನ್ನಡಿ ಅದಂದಿನ ಶಾಸನಗಳಲ್ಲಿ ಪ್ರವಹಿಸಿದೆ.

ಶಾಸನಗಳು ಅಂದಂದಿನ ಸಾಂಸ್ಕೃತಿಯ ಅಸ್ಮಿತೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಪ್ರಸ್ತುತ ಒಂದು ಧರ್ಮದ ಹಣೆಪಟ್ಟಿಯನ್ನು ಹೊತ್ತ ಶಾಸನಗಳು ಆ ಧರ್ಮದ ಪ್ರಾಚೀನ ಸಂಸ್ಕೃತಿಯ ಬಹುಮುಖಿ ಆಯಾಮಗಳನ್ನು ಕಾಪಿಟ್ಟುಕೊಂಡಿರುವುದು ಅನನ್ಯ. ಈ ನೆಲೆಯಲ್ಲಿ ಜೈನಶಾಸನಗಳ ಕುರಿತಾಗಿ ಅಧ್ಯಯನ ಮಾಡಬೇಕೆಂಬ ಮಹದಾಸೆ ಇತ್ತು. ಜೈನಶಾಸನಗಳ ಹರವು ಬಹುದೊಡ್ಡದು. ಇವುಗಳನ್ನು ಇಡಿಯಾಗಿ ಅಧ್ಯಯನ ಮಾಡುವುದಕ್ಕಿಂತ ಬಿಡಿ-ಬಿಡಿಯಾಗಿ ಅಧ್ಯಯನ ಮಾಡುವುದು ಸಮಂಜಸವೆನಿಸಿತು. ಬಿಡಿ-ಬಿಡಿಯ ಅಧ್ಯಯನವೇ ಇಡಿಯಾದ ವಿಷಯಗ್ರಹಿಕೆಗೆ ಒತ್ತಾಸೆಯೂ ಹೌದು. ಈ ನಿಟ್ಟಿನಲ್ಲಿ ಹಾವೇರಿ ಜಿಲ್ಲೆಯ ಪ್ರಾಚೀನ ಜೈನಸಂಸ್ಕೃತಿ ಅಭ್ಯಾಸ ಯೋಗ್ಯವೆನಿಸಿತು. ಹಾವೇರಿ ಜಿಲ್ಲೆಯಲ್ಲಿ ಪ್ರಸರಣಗೊಂಡಿರುವ ಜೈನಶಾಸನಗಳ ಹಿನ್ನೆಲೆಯಲ್ಲಿ ಆ ಧರ್ಮದ ಮೂಲ-ಚೂಲಗಳನ್ನು ಹುಡುಕುವ ಇಂಗಿತ ಬಹುದಿನದಿಂದ ನನ್ನ ಮನಸ್ಸಿನಲ್ಲಿ ಅಂತರ್ಗತವಾಗಿತ್ತು.

ಜೈನಶಾಸನಗಳಂತೆ ಹಾವೇರಿ ಪರಿಸರದಲ್ಲಿ ಜೈನ ಐತಿಹ್ಯಗಳು ಪ್ರಸರಣವೂ ಹೆಚ್ಚಾಗಿ ಕಂಡು ಬರುವುದು. ಶಾಸನಗಳು ಬರವಣಿಗೆ ಸಂಸ್ಕೃತಿಯಾದರೆ; ಐತಿಹ್ಯಗಳು ಬಾಯಿಯ ಸಂಸ್ಕೃತಿ. ಒಂದು ಗ್ರಂಥಸ್ಥ (ಲಿಪಿಬದ್ಧ); ಇನ್ನೊಂದು ಕಂಠಸ್ಥ, ಒಂದು ಲಿಖಿತ ಪರಂಪರೆ ಮತ್ತೊಂದು ಮೌಖಿಕ ಪರಂಪರೆ. ಮೌಖಿಕ ಪರಂಪರೆ ಲಿಖಿತ ಪರಂಪರೆಯ ತಾಯಿಬೇರು. ಆದ್ದರಿಂದಲೆ ಜಾನಪದೀಯ ಮೂಲದ ಐತಿಹ್ಯಗಳನ್ನು ಶಾಸನಗಳ ಜೊತೆಗೆ ತೌಲನಿಕವಾಗಿ ಅಧ್ಯಯನ ಮಾಡುವ ಅವಶ್ಯ ಕಂಡುಬಂದಿತು. ಜೈನಧರ್ಮದ ಸಂಸ್ಕೃತಿಯ ಪ್ರಸರಣದಲ್ಲೂ ಐತಿಹ್ಯಗಳು ಸಹಕಾರಿಯಾಗಿದ್ದು ಹಾವೇರಿ ಪರಿಸರದಲ್ಲಿ ಅತ್ಯಧಿಕವಾಗಿ ಪ್ರಸರಣದಲ್ಲಿವೆ. ಒಂದು ಧರ್ಮದ ಸಂಸ್ಕೃತಿಯ ಸತ್ಯಾಂಶಗಳು ಐತಿಹ್ಯದಲ್ಲಿ ಅಡಗಿದ್ದು ಅಧ್ಯಯನಕ್ಕೆ ಯೋಗ್ಯ ಎನಿಸುತ್ತವೆ. ಆದ್ದರಿಂದಲೇ ಹಾವೇರಿ ಪರಿಸರದಲ್ಲಿ ದೊರೆಯುವ ಜೈನಶಾಸನಗಳು ಮತ್ತು ಐತಿಹ್ಯಗಳನ್ನು ಸಮೀಕರಿಸಿ ಅಂತರ್‌ಶಿಸ್ತಿನ ಅಧ್ಯಯನ ಮಾಡುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

## ೦೨. ವ್ಯಾಪ್ತಿ.

ಪ್ರಸ್ತುತ ಅಧ್ಯಯನವು ಒಂದು ನಿರ್ಧಿಷ್ಟ ಪರಿಸರದ ವ್ಯಾಪ್ತಿಗೆ ಒಳಪಟ್ಟಿದ್ದು, ಇಂದಿನ ಹಾವೇರಿ ಜಿಲ್ಲೆಗೆ ಸೀಮಿತವಾಗಿದೆ. ಈ ಜಿಲ್ಲೆಯಲ್ಲಿ ಬ್ಯಾಡಗಿ, ರಾಣೆಬೆನ್ನೂರು, ಶಿಗ್ಗಾವಿ, ಸವಣೂರು, ಹಾನಗಲ್ಲು, ಹಾವೇರಿ, ಹಿರೇಕೆರೂರು ಎಂಬ ಏಳು ತಾಲ್ಲೂಕುಗಳಿದ್ದು, ಒಟ್ಟು ೭೩೫ ವಸತಿನೆಲೆ (ಗ್ರಾಮ, ಪಟ್ಟಣ, ನಗರ)ಗಳನ್ನು ಹೊಂದಿದೆ. ೭೩೫ ವಸತಿನೆಲೆಗಳ ಕ್ಷೇತ್ರಕಾರ್ಯದ ಸಮೀಕ್ಷೆಯು ಅಧ್ಯಯನದ ವ್ಯಾಪ್ತಿಗಳಿಗೆ ಒಳಪಡುತ್ತವೆ. ೪೮೫೧ ಚದುರು ಕಿ.ಮಿ. ಭೂಪ್ರದೇಶವನ್ನು ಹೊಂದಿದ ಹಾವೇರಿ ಜಿಲ್ಲೆಯ ೯೦ ಗ್ರಾಮಗಳಲ್ಲಿ ಜೈನ ಸ್ಮಾರಕಗಳು, ೬೫ ಶಾಸನೋಕ್ತ ಬಸದಿಗಳು, ೨೫ ಮತಾಂತರಗೊಂಡ ಬಸದಿಗಳು, ೧೫೦ ಜೈನ ಶಾಸನಗಳು, ಸಾಕಷ್ಟು ಸಂಖ್ಯೆಯ ಐತಿಹ್ಯಗಳು ದೊರೆಯುತ್ತಿದ್ದು, ಇಡೀ ಜಿಲ್ಲೆಯಾದ್ಯಂತ ತಮ್ಮ ವ್ಯಾಪ್ತಿಯ ಪರಿಧಿಯನ್ನು ವಿಸ್ತರಿಸಿಕೊಂಡಿವೆ. ಈ ಜಿಲ್ಲೆಯ ಜೈನಧರ್ಮದ ಕುರಿತಾದ ಶಾಸನಗಳು ಮತ್ತು ಐತಿಹ್ಯಗಳು ಜಿಲ್ಲೆಯ ಸೀಮಾರೇಖೆಯ ವ್ಯಾಪ್ತಿಯನ್ನು ಮೀರಿದವುಗಳಾಗಿದ್ದು ಸಂದರ್ಭೋಚಿತವಾಗಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಶೀರ್ಷಿಕೆ 'ಹಾವೇರಿ ಜಿಲ್ಲೆಯ ಜೈನಶಾಸನಗಳು ಮತ್ತು ಐತಿಹ್ಯಗಳು: ಒಂದು ಅಧ್ಯಯನ ಎಂಬುದಾಗಿದ್ದು, ಜಿಲ್ಲೆಯಾದ್ಯಂತ ದೊರೆಯುವ ಅತೇದಿ ಐತಿಹ್ಯಗಳನ್ನು ಮತ್ತು ಬನವಾಸಿ ಕದಂಬರಿಂದ ಹಿಡಿದು ವಿಜಯನಗರ ಕಾಲಾವಧಿವರೆಗೂ ದೊರೆಯಬಹುದಾದ ಜೈನ ಶಾಸನಗಳಿಗೆ ಮಿತಿಗೊಳಿಸಿ ಅಧ್ಯಯನವನ್ನು ಕೈಗೊಂಡು ಮಹಾಪ್ರಬಂಧವನ್ನು ಸಿದ್ಧಗೊಳಿಸಲಾಗಿದೆ.

## ೦೩. ಇದುವರೆಗೂ ನಡೆದ ಅಧ್ಯಯನ.

ಹಾವೇರಿ ಜಿಲ್ಲೆಯ ಜೈನಶಾಸನಗಳು ಮತ್ತು ಐತಿಹ್ಯಗಳ ಕುರಿತಾಗಿ ಇದುವರೆಗೂ ಸಮಗ್ರವಾದ ಅಧ್ಯಯನ ನಡೆದಿಲ್ಲ. ಕೆಲವು ವಿದ್ವಾಂಸರಿಂದ ಜೈನಶಾಸನಗಳ ಬಿಡಿಬಿಡಿಯಾದ ಅಧ್ಯಯನ ನಡೆದಿದೆ. ಆದರೆ ಈ ಜಿಲ್ಲೆಯ ಐತಿಹ್ಯಗಳ ಕುರಿತಾದ ಅಧ್ಯಯನ ನಡೆದದ್ದು ಈ ವರೆಗೆ

ಕಂಡುಬರುವುದಿಲ್ಲ. ಹಾವೇರಿ ಪರಿಸರದ ಕೆಲವು ತಾಲ್ಲೂಕುಗಳು ಮತ್ತು ಜೈನಧರ್ಮದ ನೆಲೆಗಳಿಗೆ ಸಂಬಂಧಿಸಿದಂತೆ ಕೆಲವಾರು ಅಧ್ಯಯನಗಳು ನಡೆದುಬಂದಿವೆ. ಈ ನಿಟ್ಟಿನಲ್ಲಿ ಕ್ರಿ.ಶ. ೧೯೯೦ರಲ್ಲಿ ಬಂದ ಚೆನ್ನಕ್ಕ ಎಲಿಗಾರ ಅವರ 'ಬಂಕಾಪುರ ಶೋಧನ' ಪ್ರಮುಖವಾದುದು. ಬಂಕಾಪುರ ಅಭಿವೃದ್ಧಿ ಹೊಂದುವಲ್ಲಿ ಚಲ್ಲಕೇತನರ ಪಾತ್ರ, ಜೈನ ಚಟುವಟಿಕೆಗಳು ಗರಿಗೆದುರುವಲ್ಲಿ ಮುನಿಗಳ ಪಾತ್ರದ ತಲಸ್ಪರ್ಷಿ ಅಧ್ಯಯನ, ಜೈನ ವಿದ್ಯಾಕೇಂದ್ರವಾಗಿ ಬಂಕಾಪುರದ ಪ್ರಸಿದ್ಧತೆಯನ್ನು ಸಾರುವ ಅಂಶಗಳನ್ನು ವ್ಯಾಪಕವಾಗಿ ಈ ಕೃತಿಯಲ್ಲಿ ಚರ್ಚಿಸಲಾಗಿದೆ. ಜೈನಧರ್ಮದ ಅಧ್ಯಯನ ಈ ಕೃತಿಯಲ್ಲಿ ಪ್ರತ್ಯಕ್ಷ-ಪರೋಕ್ಷವಾಗಿದ್ದರೂ ಹಾವೇರಿಯ ಜೈನ ಪರಿಸರವೊಂದರ ಬಗ್ಗೆ ಅಧ್ಯಯನ ಮಾಡಿದ ಹೆಗ್ಗಳಿಕೆ ಗಳಿಸಿಕೊಂಡಿದೆ.

ಕ್ರಿ.ಶ. ೧೯೯೫ರಲ್ಲಿ ಹೊರಬಂದ ಭೋಜರಾಜ ಪಾಟೀಲ ಅವರ 'ನಾಗರಖಂಡ-೭೦'. ಕೃತಿಯು ಹೆಸರೇ ಹೇಳುವಂತೆ ಪ್ರಾಚೀನ ಆಡಳಿತ ಘಟಕವಾದ ನಾಗರಖಂಡ-೭೦ರ ಕುರಿತಾದ ಅಧ್ಯಯನ. ನಾಗರಖಂಡ ೭೦ರ ಆಡಳಿತ ವಿಭಾಗದಲ್ಲಿ ಈಗಿನ ಹಾವೇರಿ ಜಿಲ್ಲೆಯ ಹಿರೇಕೆರೂರು ಮತ್ತು ಹಾನಗಲ್ಲು ತಾಲ್ಲೂಕಿನ ಕೆಲವು ಪ್ರದೇಶಗಳು ಬರುವುದರಿಂದ ಈ ಕೃತಿಯೂ ಹಾವೇರಿ ಪರಿಸರದ ಕೆಲವು ಸ್ಥಳಗಳನ್ನು ಅಧ್ಯಯನ ಮಾಡಿದ ಯೋಗ್ಯಕೃತಿ. ಇದರಲ್ಲಿ ಹಾವೇರಿ ಪರಿಸರದ ಹಿರೇಕೆರೂರು ತಾಲ್ಲೂಕಿನ ಹಿರೇಕೋಣತಿ, ಅಬ್ಬಲೂರು ಜೈನಧರ್ಮದ ಸಂಕ್ಷಿಪ್ತ ಅಧ್ಯಯನ ಆನುಷಂಗಿಕವಾಗಿ ಕೈಗೊಳ್ಳಲಾಗಿದೆ.

ಕರ್ನಾಟಕದ ವಿವಿಧ ಸ್ಥಳ ಪರಿಸರದಲ್ಲಿ ಹಬ್ಬಿ ಹರಡಿದ ಜೈನ ಸಂಸ್ಕೃತಿಯನ್ನು ಅಧ್ಯಯನ ಮಾಡಿದ ಕೃತಿ ಹೆಚ್.ಎ. ಪಾರ್ಶ್ವನಾಥ ಅವರ 'ಜಿನಮನ' (ಕ್ರಿ.ಶ. ೨೦೦೦). ಹಾವೇರಿ ಪರಿಸರದ ಅರಟಾಳ, ಕರಗುದರಿ, ಶೀಲವಂತ ಸೋಮಾಪುರ, ಯಳವಟ್ಟಿ, ಬಾಳಂಬೀಡ, ಗುತ್ತಲ, ಸಂಗೂರು ಮುಂತಾದ ಜೈನ ನೆಲೆಗಳ ಅಧ್ಯಯನದ ಅನಾವರಣ ಈ ಕೃತಿಯಲ್ಲಿದೆ. ಕೆಲವು ಕಡೆ ಶಾಸನಗಳ ಉಲ್ಲೇಖಗಳನ್ನು ಬಳಸಿಕೊಳ್ಳಲಾಗಿದೆ. ಕೃತಿ ಚಿಕ್ಕದಾದರೂ ಚೊಕ್ಕದಾದ ನಿರೂಪಣೆ. ಸಂಪೂರ್ಣ ಹಾವೇರಿ ಪರಿಸರದ ಜೈನ ಶಾಸನಗಳ ಅಧ್ಯಯನ ಈ ಕೃತಿಯಲ್ಲಿ ಅನಾವಣರಗೊಂಡಿಲ್ಲ.

ಅಪ್ಪಣ್ಣ.ಎನ್.ಹಂಜೆಯವರ 'ಶಿಗ್ಗಾಂವ ಪ್ರದೇಶದ ಪುರಾತತ್ವ' (ಪಿ.ಎಚ್.ಡಿ. ಮಹಾಪ್ರಬಂಧ, ಅಪ್ರಕಟಿತ ೨೦೦೬), ಗುರುರಾಜ ನವಲಗುಂದ ಅವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' [(ಶಿಗ್ಗಾವ್ ತಾಲ್ಲೂಕು ಅನುಲಕ್ಷಿಸಿ) ಎಂ.ಫಿಲ್ ನಿಬಂಧ ೨೦೦೮-೦೯)]ಗಳು ಶಿಗ್ಗಾವಿ ತಾಲ್ಲೂಕಿನಲ್ಲಿ ದೊರೆತ ಅರಟಾಳ, ಶಿಗ್ಗಾವಿ, ಶಿಲವಂತಸೋಮಾಪುರ ಜೈನಶಾಸನಗಳ ಬಗ್ಗೆ ಆನುಷಂಗಿಕವಾಗಿ ಅಭ್ಯಸಿಸಿವೆ. ಆದರೂ ಸಂಪೂರ್ಣ ಹಾವೇರಿ ಜಿಲ್ಲೆಯ ಜೈನಶಾಸನಗಳ ಅಧ್ಯಯನ ಇಲ್ಲಿ ನಡೆದಿಲ್ಲ.

ಹಾವೇರಿ ಪರಿಸರದ ಶಾಸನಗಳ ಬಗ್ಗೆ ಶೋಧನೆ ಮತ್ತು ಲೇಖನಗಳು, ಸಾಂದರ್ಭಿಕ ಚರ್ಚೆಗಳು ಕೆಲವೊಂದು ಕೃತಿಗಳಲ್ಲಿ ಪ್ರಕಟಗೊಂಡಿವೆ. ಅವುಗಳಲ್ಲಿ ಹಂಪನಾರವರ 'ಶಾಸನಗಳಲ್ಲಿ ಜೈನ ತೀರ್ಥಗಳು' (೧೯೯೮), 'ಚಂದ್ರಕೊಡೆ' (೧೯೯೭), 'ಯಾಪನೀಯ ಸಂಘ' (೧೯೯೯), ಹನುಮಾಕ್ಷಿ ಗೋಗಿಯವರ 'ಅನುಶಾಸನ' (೨೦೦೨), 'ಜಿನಸಮಯ' (೨೦೦೭), ಅಪ್ಪಣ್ಣ.ಎನ್.ಹಂಜೆಯವರ 'ಸಮವಸರಣ' (೨೦೧೫), ಎಂ.ಬಿ.ನೇಗಿನಹಾಳ ಅವರ 'ನೇಗಿನಹಾಳ ಪ್ರಬಂಧಗಳು' (೧೯೯೯), ಎನ್.ಬಸವಾರಾಧ್ಯ ಸಂಪಾದಕತ್ವದ 'ಶಾಂತನಿರಂಜನ ವಿರಚಿತ ಅಬ್ಬಲೂರು ಚರಿತೆ' (೧೯೭೩), ವಾಸುದೇವ ಬಡಿಗೇರ ಅವರ ಸಂಪಾದಕತ್ವದಲ್ಲಿ 'ಹಾನಗಲ್ಲು' (೨೦೦೮), ಮಲ್ಲಿಕಾರ್ಜುನ.ಕೆ, ವಿ.ಎಸ್. ಮಾಳಿ, ಬಿ.ಎಸ್. ಬಿರಾದರ, ಅಶೋಕ ನರೋಡೆಯವರುಗಳ ಸಂಪಾದಕತ್ವದ 'ಡಾ.ಬಿ.ಆರ್. ಹಿರೇಮಠರ ಶಾಸನ ಅಧ್ಯಯನ' (೨೦೧೨), ರವಿಕುಮಾರ.ಕೆ.ನವಲಗುಂದ ಅವರ 'ಉಪಸರ್ಗ' (೨೦೦೬) ಕೃತಿಗಳು ಪ್ರಮುಖವಾಗಿವೆ. ಇವಷ್ಟೇ ಅಲ್ಲದೇ ನಿಯಕಾಲಿಕೆಗಳಾದ 'ಶಾಸನ ಅಧ್ಯಯನ' (ಕನ್ನಡ ವಿಶ್ವವಿದ್ಯಾಲಯ, ಶಾಸನಶಾಸ್ತ್ರ ವಿಭಾಗ) 'ಶೋಧ' (ಉಜಿರೆ), ದಿನಪತ್ರಿಕೆಗಳಾದ ಪ್ರಜಾವಾಣಿ, ಉದಯವಾಣಿ, ವಿಜಯವಾಣಿ, ಸಂಯುಕ್ತ ಕರ್ನಾಟಕ, ವಿಜಯ ಕರ್ನಾಟಕ, ಬೆಂಗಳೂರು ಮಿರರ್ ಮತ್ತು 'ಜೈನ ಹೆರಿಟೇಜ್ ಸೆಂಟರ್ಸ್' ವೆಬ್ ತಾಣದಲ್ಲಿ ಹಾವೇರಿ ಜಿಲ್ಲೆಗೆ ಸಂಬಂಧಿಸಿದ ಕೆಲವು ಜೈನಶಾಸನಗಳು, ಲೇಖನಗಳು ಪ್ರಕಟವಾಗಿವೆ.

ಮೇಲೆ ತಿಳಿಸಲಾದ ಅಧ್ಯಯನಗಳೆಲ್ಲವೂ ಹಾವೇರಿ ಜಿಲ್ಲೆಯ ಜೈನಶಾಸನಗಳ ಬಿಡಿ ಬಿಡಿಯಾದ ಅಧ್ಯಯನಗಳು. ಇಡೀ ಜಿಲ್ಲೆಯ ಜೈನಶಾಸನಗಳನ್ನು ಒಂದು ಕಡೆ ಕಲೆಹಾಕಿ ಅವುಗಳ ಸ್ವರೂಪದ ಆಧಾರದ ಮೇಲೆ ಪ್ರಾಚೀನ ಜೈನಧರ್ಮದ ಅಧ್ಯಯನದ ಅವಶ್ಯಕತೆ ಇತ್ತು. ಹಾವೇರಿ ಪರಿಸರವು ಪ್ರಾಚೀನ ಕಾಲದಿಂದಲೂ ಹಲವು ಧರ್ಮಗಳ ನೆಲೆಯಾಗಿದೆ. ಕರ್ನಾಟಕದ ಪ್ರಬಲ ಧರ್ಮಗಳಲ್ಲಿ ಒಂದಾದ ಜೈನ ಧರ್ಮವು ಹಾವೇರಿ ಜಿಲ್ಲೆಯ ಅನೇಕ ಕಡೆ ಪ್ರಮುಖವಾದ ಧರ್ಮವಾಗಿ ಬೆಳೆದಿತ್ತು. ಇದರಿಂದಾಗಿ ಜೈನ ಸಂಸ್ಕೃತಿಯ ತಾಣಗಳಾಗಿ ಬಾಳೂರು, ಯಳವಟ್ಟಿ, ಆಡೂರು (ಹಾನತಾ), ದೇವಗಿರಿ (ಹಾತಾ), ಹಿರೇಅಣಜಿ (ಬ್ಯಾತಾ), ಹಿರೇಕೋಣತಿ (ಹಿತಾ) ಮುಂತಾದ ಸ್ಥಳಗಳು ಇಂದಿಗೂ ಅನೇಕ ಬಸದಿಗಳನ್ನು, ಜೈನ ಶಿಲ್ಪಗಳನ್ನು ಒಳಗೊಂಡಿವೆ. ಕೆಲವೆಡೆ ಈಗಲೂ ಜೈನರು ನೆಲೆನಿಂತಿದ್ದಾರೆ. ಈ ಕಾರಣಗಳಿಂದಾಗಿ ಹಾವೇರಿ ಪರಿಸರದಲ್ಲಿ ಜೈನ ಸ್ಮಾರಕಗಳು, ಶಾಸನಗಳು ಮತ್ತು ಇವುಗಳಿಗೆ ಸಂಬಂಧಿಸಿದ ಐತಿಹ್ಯಗಳು ಹೇರಳವಾಗಿ ದೊರೆಯುತ್ತವೆ. ಇವುಗಳ ಅಧ್ಯಯನದಿಂದ ಈ ಪರಿಸರದ ಪ್ರಾಚೀನ ಜೈನ ಧರ್ಮ ಬೆಳೆದು ಬಂದ ಬಗೆ, ವಿಸ್ತಾರ ಹೊಂದಿದ ಕ್ರಮಗಳು ಮತ್ತು ಅದು ನಶಿಸಿದ ಅಂಶಗಳ ಬಗ್ಗೆ ತಿಳಿಯಬಹುದಾಗಿದೆ. ಆದ್ದರಿಂದ ಇಡೀ ಹಾವೇರಿ ಜಿಲ್ಲೆಯಲ್ಲಿ ದೊರೆಯಬಹುದಾದ ಜೈನ ಶಾಸನಗಳನ್ನು ಮತ್ತು ಆ ಸಂಬಂಧಿ ಐತಿಹ್ಯಗಳನ್ನು ಒಂದು ಜಿಲ್ಲೆಯ ಚೌಕಟ್ಟಿಗೆ ತಂದು ಪ್ರಸ್ತುತ ಮಹಾಪ್ರಬಂಧವನ್ನು ಸಿದ್ಧಗೊಳಿಸಲಾಗಿದೆ.

## ೦೪. ಆಕರಗಳು.

'ಹಾವೇರಿ ಜಿಲ್ಲೆಯ ಜೈನ ಶಾಸನಗಳು ಮತ್ತು ಐತಿಹ್ಯಗಳು ಒಂದು ಅಧ್ಯಯನ' ಎಂಬ ಶೀರ್ಷಿಕೆಯ ಈ ಮಹಾಪ್ರಬಂಧದ ರಚನೆಗೆ ಭಾರತ ಸರ್ಕಾರದ ಶಾಸನ ಇಲಾಖೆಯಿಂದ ಪ್ರಕಟವಾಗುತ್ತಿರುವ ಸೌತ್ ಇಂಡಿಯನ್ ಇನ್‌ಸ್ಕ್ರಿಪ್‌ಷನ್ಸ್ ಸಂಪುಟ (೧೫, ೧೮, ೨೦, ೨೧)ಗಳನ್ನು, ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನೆ ಸಂಸ್ಥೆಯು ಹೊರತಂದಿರುವ ಕರ್ನಾಟಕ ಇನ್‌ಸ್ಕ್ರಿಪ್‌ಷನ್ಸ್ ಸಂಪುಟ (೦೧, ೦೪, ೦೫, ೦೬)ಗಳನ್ನು, ಮೈಸೂರು ವಿಶ್ವವಿದ್ಯಾಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯು ಹೊರತಂದಿರುವ ರಾಷ್ಟ್ರಕೂಟರ ಶಾಸನ ಸಂಪುಟ (೦೧, ೦೨)ಗಳನ್ನು, ಎಫಿಗ್ರಪಿಯಾ ಇಂಡಿಕಾ (ಸಂ – ೩೨), ಇಂಡಿಯನ್ ಆ್ಯಂಟಿಕ್ವೈರಿ (ಸಂ – ೦೫, ೦೭) ಸಂಪುಟಗಳನ್ನು ಬಳಸಿಕೊಳ್ಳಲಾಗಿದೆ.

ನಾಡಿನ ವಿವಿಧ ಸಂಶೋಧಕರಾದ ಎಂ.ಬಿ. ನೇಗಿನಹಾಳರವರು 'ನೇಗಿನಹಾಳ ಪ್ರಬಂಧಗಳು' ಎಂಬ ಕೃತಿಯಲ್ಲಿ, ಡಾ.ಬಿ.ಆರ್. ಹಿರೇಮಠರ ಶಾಸನ ಅಧ್ಯಯನ ಕೃತಿಯಲ್ಲಿ, ಹನುಮಾಕ್ಷಿ ಗೋಗಿಯವರು 'ಅನುಶಾಸನ', 'ಜಿನಸಮಯ' ಎಂಬ ಕೃತಿಗಳಲ್ಲಿ, ರವಿಕುಮಾರ.ಕೆ.ನವಲಗುಂದರವರ 'ಉಪಸರ್ಗ್ಗ' ಕೃತಿಯಲ್ಲಿ ಪ್ರಸ್ತುತ ಅಧ್ಯಯನ ಪರಿಸರದ ಶಾಸನಗಳು ಪ್ರಕಟಗೊಂಡಿವೆ. ಇವುಗಳನ್ನೂ ಸಹ ಅಧ್ಯಯನಕ್ಕೆ ಬಳಸಿಕೊಳ್ಳಲಾಗುವುದು. ಅಲ್ಲದೆ ಕನ್ನಡ ವಿಶ್ವವಿದ್ಯಾಲಯದ ಶಾಸನಶಾಸ್ತ್ರ ವಿಭಾಗವು ಹೊರತರುವ 'ಶಾಸನ ಅಧ್ಯಯನ', ಉಜಿರೆಯ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜಿನ ಡಾ.ಹಾಮಾನಾ ಸಂಶೋಧನ ಸಂಸ್ಥೆಯು ಹೊರತರುತ್ತಿರುವ 'ಶೋಧ' ನಿಯತಕಾಲಿಕೆಗಳು, ಕರ್ನಾಟಕ ಇತಿಹಾಸ ಅಕಾಡೆಮಿಯ 'ಇತಿಹಾಸ ದರ್ಶನ' ಸಂಪುಟಗಳು ಅಧ್ಯಯನದ ಪ್ರಮುಖ ಆಕರ ಸಾಮಗ್ರಿಯಾಗಿ ಬಳಸಿಕೊಳ್ಳಲಾಗಿದೆ.

ಹಾವೇರಿ ಪರಿಸರದಲ್ಲಿ ಜೈನ ಶಾಸನಗಳ ಸಂಖ್ಯೆ ವಿಪುಲವಾಗಿದ್ದು ಮೇಲೆ ಉದೃತಗೊಳಿಸಿದ ಆಕರಳಿಂದ ಲಭ್ಯವಾಗುತ್ತವೆ. ಆದರೂ ಬಹುತೇಕ ಜೈನಶಾಸನಗಳು ಅಪ್ರಕಟಿತವಾಗಿದ್ದು ಕ್ಷೇತ್ರಕಾರ್ಯದ ಮೂಲಕ ಮೂಲ ಆಕರ ಸಂಸ್ಕೃತಿಯನ್ನು ಸಂಗ್ರಹಿಸಲಾಗಿದೆ. ಇನ್ನು ಐತಿಹ್ಯಗಳನ್ನು ಕ್ಷೇತ್ರಕಾರ್ಯದ ಮೂಲಕವೇ ಸಂಗ್ರಹಿಸಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

## ೦೫. ಅಧ್ಯಯನದ ರೂಪುರೇಷಗಳು.

ಪ್ರಸ್ತುತ ಅಧ್ಯಯನದಲ್ಲಿ ಬನವಾಸಿ ಕದಂಬ ವಂಶದವರಿಂದ ಮೊದಲ್ಗೊಂಡು ವಿಜಯನಗರದವರೆಗೂ ಹಾವೇರಿ ಜಿಲ್ಲೆಯಲ್ಲಿ ದೊರೆಯುವ ಜೈನಶಾಸನಗಳನ್ನು ಮತ್ತು ಐತಿಹ್ಯಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಮಹಾಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕೋಸ್ಕರ ಆರು ಅಧ್ಯಾಯಗಳನ್ನಾಗಿ ವಿಭಾಗಿಸಿಕೊಳ್ಳಲಾಗಿದೆ. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನ ಉದ್ದೇಶ, ಅಧ್ಯಯನ ವ್ಯಾಪ್ತಿ, ಪ್ರಬಂಧ ರಚನೆಯಲ್ಲಿ ಸಹಾಯಕ ಸಾಮಗ್ರಿಗಳಾದ ಆಕರಗಳು, ಪ್ರಸ್ತುತ ಅಧ್ಯಯನದ ಬಗ್ಗೆ ನಡೆದ ಅಧ್ಯಯನಗಳನ್ನು ಮತ್ತು ರೂಪುರೇಷಗಳನ್ನು ವಿವರಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಜಿಲ್ಲೆಯ ಜೈನಪರಂಪರೆಯ ಐತಿಹಾಸಿಕ ಹಿನ್ನೋಟವನ್ನು ಹಾವೇರಿ ಜಿಲ್ಲೆಯಲ್ಲಿ ದೊರೆಯುವ ಒಟ್ಟು ಜೈನಶಾಸನಗಳ ವಿವರಗಳಿಂದ ವಿಶ್ಲೇಷಿಸಲಾಗಿದೆ. ಪ್ರತಿಯೊಂದು ಶಾಸನದ ವಿಶೇಷತೆಯನ್ನು ಈ ಅಧ್ಯಾಯದಲ್ಲಿ ಪರಿಚಯಿಸಲಾಗಿದೆ. ಇದೇ ಅಧ್ಯಾಯದಲ್ಲಿ ಹಾವೇರಿ ಪರಿಸರದಲ್ಲಿ ಸಂಚರಿಸಿದ ಜಿನಮುನಿ ಪರಂಪರೆಯ ಸಂಕ್ಷಿಪ್ತ ಚರಿತೆ ಇದೆ. ಅಲ್ಲದೆ ಹಾವೇರಿ ಪರಿಸರದ ಪ್ರಾಚೀನ ಜೈನ ಕ್ಷೇತ್ರಗಳ ಅಧ್ಯಯನವೂ ಪ್ರಸ್ತುತ ಅಧ್ಯಾಯದಲ್ಲಿದೆ. ಶಾಸನಗಳು, ಮುನಿಪರಂಪರೆ, ಜೈನಕೇಂದ್ರಗಳ ಅಧ್ಯಯನದಿಂದ ಪ್ರಾಚೀನ ಹಾವೇರಿ ಪರಿಸರದ ಜೈನಧರ್ಮದ ಉಚ್ಛ್ರಾಯ ಹಂತದ ಸಂಸ್ಕೃತಿಯ ಅಭ್ಯಾಸ ಪ್ರಸ್ತುತ ಅಧ್ಯಾಯದ ಉದ್ದೇಶವಾಗಿದೆ.

ಮೂರನೆಯ ಅಧ್ಯಾಯವು ಹಾವೇರಿ ಪರಿಸರದಲ್ಲಿ ದೊರೆಯುವ ಒಟ್ಟು ಜೈನಶಾಸನಗಳ ಅಧ್ಯಯನವಾಗಿದ್ದು, ಶಾಸನಗಳ ಪ್ರಸರಣ, ವಿಂಗಡನೆ, ಶಾಸನಗಳ ಸಾಹಿತ್ಯ ಅಧ್ಯಯನವನ್ನು ಮಾಡಲಾಗಿದೆ. ಜಿಲ್ಲೆಯಾದ್ಯಂತ ಪ್ರಸರಣಗೊಂಡ ಶಾಸನಗಳನ್ನು ಆರ್ಥಿಕತೆ, ರಾಜಕೀಯ, ಧಾರ್ಮಿಕ, ನಿಸರ್ಗ ಎಂಬಂಶಗಳನ್ನು ವಿವಿಧ ದೃಷ್ಟಿಕೋನಗಳಿಂದ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇನ್ನು ಶಾಸನ ಪ್ರಸರಣವು ವಸ್ತು ಆಧರಿತ ವಿಂಗಡಣೆಯಾಗಿ, ವಂಶಾಧರಿತ ವಿಂಗಡಣೆಯಾಗಿ, ವಿಷಯಾಧಾರಿತ ವಿಂಗಡನೆಯಾಗಿ ಅಧ್ಯಯನಗೊಂಡಿದೆ. ಈ ಅಧ್ಯಾಯದ ಇನ್ನೊಂದು ಉಪವಿಭಾಗ ಶಾಸನಗಳ ಸಾಹಿತ್ಯ ಅಧ್ಯಯನ. ಇಡೀ ಅಧ್ಯಯನದ ಹೃದಯ ಭಾಗವಿದು. ಜೈನಶಾಸನಗಳಲ್ಲಿ ಅಂತರ್ಗತಗೊಂಡ ಸಾಹಿತ್ಯ ಅಂಶಗಳನ್ನು ಮತ್ತು ಶಾಸನ ಸಂಸ್ಕೃತಿಯನ್ನು ಪರಿಚಯಿಸಿದ ಅಧ್ಯಾಯವಿದು. ಇಲ್ಲಿ ಶಾಸನದಲ್ಲಿ ವ್ಯಕ್ತವಾದ ವರ್ಣನೆಗಳು (ಪ್ರಕೃತಿ, ವ್ಯಕ್ತಿ, ಸ್ಥಳ) ಛಂದಸ್ಸು (ಕಂದ, ವೃತ್ತ ಗದ್ಯ, ಪ್ರಾಸ, ರೂಪಕ, ಉಪಮೆ), ರಾಜಪ್ರಶಸ್ತಿ, ಕಾಲದ ಉಲ್ಲೇಖ, ಶಾಪಾಶಯಗಳು, ಶಾಸನ ಕವಿಗಳು ಮತ್ತು ರೂವಾರಿಗಳು, ಜೈನಶಾಸನ ಶಿಲ್ಪ (ದಾನ, ನಿಸಿಧಿ, ವೀರಗಲ್ಲು, ಇತರೆ) ಹೀಗೆ ಒಂದು ಸಂಸ್ಕೃತಿಯ ಚಿತ್ರಣದ ಅಧ್ಯಯನವನ್ನು ವಿವರವಾಗಿ ಅಧ್ಯಯನ ಮಾಡಲಾಗಿದೆ.

ಜಾನಪದ ನೆಲೆಗಟ್ಟಿನ ಜೈನ ಐತಿಹ್ಯಗಳು ನಾಲ್ಕನೆಯ ಅಧ್ಯಾಯದ ವಸ್ತುವಾಗಿದೆ. ಐತಿಹ್ಯಗಳ ಅರ್ಥ ಮತ್ತು ಅಧ್ಯಯನದ ಅವಶ್ಯಕತೆಯನ್ನು ಇಲ್ಲಿ ಚರ್ಚಿಸಲಾಗಿದೆ. ಇತಿಹಾಸವನ್ನು ಮರಳಿ ರಚಿಸುವುದರಲ್ಲಿ ಐತಿಹ್ಯಗಳು ಸಹಕಾರಿಯಾದ್ದರಿಂದ ಜಿಲ್ಲೆಯಲ್ಲಿ ದೊರೆಯುವ ಜೈನ ಐತಿಹ್ಯಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ. ಈ ಅಧ್ಯಯನ ಶಾಸನ, ಬಸದಿ, ಧರ್ಮ, ವ್ಯಕ್ತಿ, ವ್ಯಕ್ತಿ, ಶಿಲ್ಪ ಮತ್ತು ಅವಶೇಷ ಸಂಬಂಧಿತ ಐತಿಹ್ಯಗಳ ನೆಲೆಗಟ್ಟಿನಲ್ಲಿ ಸಾಗಿದೆ. ಅಧ್ಯಯನದ

ದೃಷ್ಟಿಯಿಂದ ಐತಿಹ್ಯಗಳ ನೇರವಾಗಿ ಚರ್ಚಿಸಿದ್ದು ಅವು ಇತಿಹಾಸ ರಚಿಸುವಲ್ಲಿ ಅತ್ಯಂತ ಮಹತ್ವಕಾರಿ ದಾಖಲೆಗಳು ಎಂದು ಶೃತಪಡಿಸಲಾಗಿದೆ.

'ಲಿಪಿ ವೈವಿಧ್ಯತೆ' ಎಂಬ ಐದನೆಯ ಅಧ್ಯಾಯವು ಜಿಲ್ಲೆಯ ದೊರೆಯಬಹುದಾದ ಒಟ್ಟು ಜೈನ ಶಾಸನಗಳ ಲಿಪಿ ಅಧ್ಯಯನವಾಗಿದೆ. ಇಲ್ಲಿಯ ಒಟ್ಟು ಶಾಸನಗಳನ್ನು ಕದಂಬ, ಚಲುಕ್ಯ, ರಾಷ್ಟ್ರಕೂಟ, ಚಾಳುಕ್ಯ, ಕಳಚೂರ್ಯ–ಹೊಯ್ಸಳ–ಸೇವುಣ, ವಿಜಯನಗರ ರಾಜಸತ್ತೆಗೆ ಅನುಗುಣವಾಗಿ ವಿಂಗಡಿಸಿ, ಲಿಪಿ ಕಂಡುಕೊಂಡ ವೈವಿಧ್ಯತೆ ಅವಸ್ಥಾಬೇಧಗಳನ್ನು ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ.

ಕೊನೆಯ ಅಧ್ಯಾಯ ಮತ್ತು ಆರನೆಯ ಅಧ್ಯಾಯ ಸಮಾರೋಪದಾಗಿದ್ದು, ಇದರಲ್ಲಿ ನಾನು ನನ್ನ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ಹಾಗೂ ನನ್ನ ಅಧ್ಯಯನದ ಕೊಡುಗೆಗಳನ್ನು ಕುರಿತಾಗಿ ಚರ್ಚಿಸಲಾಗಿದೆ. ಅನುಬಂಧದಲ್ಲಿ ಗ್ರಂಥಋಣ, ಹಾವೇರಿ ಜಿಲ್ಲೆ ಜೈನ ಶಾಸನಗಳ ಸೂಚಿ, ಕೆಲವು ಅಪ್ರಕಟಿತ ಶಾಸನಗಳ ಪಾಠ, ಛಾಯಾ ಚಿತ್ರಗಳು, ನಕ್ಷೆಗಳು, ಶಾಸನಗಳ ಪ್ರಸರಣ ಪಟ್ಟಿಯ ವಿವರಗಳನ್ನು ನೀಡಲಾಗಿದೆ.

## ಅಡಿ ಟಿಪ್ಪಣಿಗಳು.

೧. ಎಂ.ಎಂ. ಕಲಬುರ್ಗಿ – ಮಾರ್ಗ (ಸಂಪುಟ–೦೩). ಪು ೩೯೭.

೨. ಸೂರ್ಯನಾಥ ಕಾಮತ್ – ಕರ್ನಾಟಕದ ಸಂಕ್ಷಿಪ್ತ ಇತಿಹಾಸ, ಪು ೭೯.

೩. ಎ.ಕ. ೦೨. ನಂ–೦೧ ಚಿಕ್ಕಬೆಟ್ಟ (ಶ್ರವಣಬೆಳಗೊಳ). ೦೬–೦೮ನೆಯ ಶ, ಪುಟ ೦೩.

೪. ಬಾ.ರಾ. ಗೋಪಾಲ – ಬನವಾಸಿ ಕದಂಬರು, ಪು ೧೩.

೫. ಹನುಮಾಕ್ಷಿ ಗೋಗಿ – ಲಕ್ಕುಂಡಿಯ ಶಾಸನಗಳು. ಪು ೫೫–೫೬.

೬. ಎಫ್.ಟಿ. ಹಳ್ಳಿಕೇರಿ, ಡಾ.ಕೆ. ರವೀಂದ್ರನಾಥ – ಕನ್ನಡ ಜೈನ ಹಾಡುಗಳು.

೭. ಕದಂಬ ಮೃಗೇಶವರ್ಮನು ಹಲಸಿಯಲ್ಲೊಂದು ಜಿನಾಲಯ ನಿರ್ಮಿಸಿ ಅಲ್ಲಿನ ಮುನಿ ಸಂಘಗಳ ಆಹಾರಕ್ಕೆ ಭೂದಾನ ಮಾಡಿದ (ಐ.ಎ.೦೫), ಇದೇ ಅರಸ ಬೃಹತ್ಪರಲೂರಿನ ಜಿನೇಂದ್ರಭವನಕ್ಕೆ ಭೂದಾನ ನೀಡಿದ (ಐ.ಎ.೦೬), ಇದೇ ಮನೆತನದ ವಿಜಯ ಶಿವಮೃಗೇಶವರ್ಮ ಬೃಹತ್ಪರಲೂರಲ್ಲಿರುವ ಜಿನಾಲಯಕ್ಕೆ, ಶ್ವೇತಪಟ, ನಿರ್ಗ್ರನ್ಥ ಮುನಿ ಸಂಘಕ್ಕೆ ಪ್ರತ್ಯೇಕವಾಗಿ ಕಾಲವಂಗ ಗ್ರಾಮದಿಂದ ಆದಾಯವನ್ನು ಮೂರುಭಾಗ ಮಾಡಿಕೊಟ್ಟನು. ರಾಷ್ಟ್ರಕೂಟ ಧ್ರುವನ ಮಗ ರಣಾವಲೋಕ ಕಂಬಯ್ಯ ಕ್ರಿ.ಶ. ೮೦೮ರಲ್ಲಿ ಕೊಂಡಕೊಂದಾನ್ವಯದ ವರ್ಧಮಾನ ಮುನಿಗೆ ವದನಗುಪ್ಪಿ ಎಂಬ ಹಳ್ಳಿಯನ್ನು ದಾನವಾಗಿ ಕೊಟ್ಟ (ರಾಷ್ಟ್ರಕೂಟರ ಶಾಸನಗಳು ಸಂ–೦೧, ನಂ–೪೬) ಹೊಯ್ಸಳ ಭಂಡಾರಿ ಹುಳ್ಳಮಯ್ಯ, ದಂಡನಾಯಕ ಗಂಗರಾಜ, ರಾಣಿ ಶಾಂತಲೆ, ಹೀಗೆ ಒಂದು ರಾಜಸತ್ತೆಯ ದೊಡ್ಡ ದಂಡೇ ಜೈನಧರ್ಮದ ಪ್ರಚಾರ ಪ್ರಸಾರದಲ್ಲಿ ಕೈಜೋಡಿಸಿತು. ಈ ಕುರಿತಾಗಿ ಎರಡನೆಯ ಅಧ್ಯಾಯದ ಶಾಸನಾಧಾರಿತ ಹಿನ್ನೋಟದಲ್ಲಿ ವಿವರವಾಗಿ ಚರ್ಚಿಸಲಾಗಿದೆ.

## ಅಧ್ಯಾಯ–೦೨.
## ಜಿಲ್ಲೆಯ ಜೈನ ಪರಂಪರೆಯ ಐತಿಹಾಸಿಕ ಹಿನ್ನೋಟ.

### ಅ. ಶಾಸನಾಧಾರಿತ ಹಿನ್ನೋಟ.

೦೧. ಕದಂಬ ಪೂರ್ವ ಯುಗದ ಜೈನಧರ್ಮ.
೦೨. ಬನವಾಸಿ ಕದಂಬರು.
೦೩. ಬಾದಾಮಿಯ ಚಲುಕ್ಯರು.
೦೪. ರಾಷ್ಟ್ರಕೂಟರು.
೦೫. ಕಲ್ಯಾಣದ ಚಾಳುಕ್ಯರು.
೦೬. ಗುತ್ತವೊಳಲಿನ ಗುತ್ತರು.
೦೭. ಕಳಚೂರ್ಯರು.
೦೮. ಅತೇದಿ ಶಾಸನಗಳು (೧೨ನೆಯ ಶತಮಾನ).
೦೯. ಹೊಯ್ಸಳರು.
೧೦. ಸೇವುಣರು.
೧೧. ಅತೇದಿ ಶಾಸನಗಳು (೧೩ನೆಯ ಶತಮಾನ).
೧೨. ವಿಜಯನಗರ ಸಾಮ್ರಾಜ್ಯ.
೧೩. ಅತೇದಿ ಶಾಸನಗಳು (೧೪–೧೬ನೆಯ ಶತಮಾನ).

### ಆ.ಮುನಿ ಪರಂಪರೆ.

೦೧. ಮುನಿ ಚರಿತೆ.
೦೨. ಮುನಿ ಸಂಘ.
೨.೧ ನಿರ್ಗ್ರನ್ಥ ಮಹಾಶ್ರಮಣ ಸಂಘ.
೨.೨ ಶ್ವೇತಪಟ ಮಹಾಶ್ರಮಣ ಸಂಘ.
೨.೩ ಯಾಪನೀಯ ಸಂಘ.
೦೩. ಪ್ರಮುಖ ಮುನಿಗಳು.
೩.೧ ಪೂಜ್ಯಪಾದರು. ೩.೨ ವಿನಯ ನಂದಿ.
೩.೩ ಪ್ರಭಾಚಂದ್ರ. ೩.೪ ಮೋನಿಗುರುವ.
೩.೫ ನಾಗಣನ್ದಿ. ೩.೬ ವೃಷಭಣನ್ದಿ ಗೊರವ, ತಿರಳಣನ್ದಿಗೊರವ.
೩.೭ ಜಿನಸೇನಾಚಾರ್ಯ. ೩.೮ ಗುಣಭದ್ರಾಚಾರ್ಯ.
೩.೯. ಚಂದ್ರಪ್ರಭ ಭಟ್ಟಾರಕ. ೩.೧೦ ದೇವೇಂದ್ರ ಸಿದ್ಧಾಂತದೇವ.

೩.೧೧ ಅಜಿತ ಸೇನಾಚಾರ್ಯ. ೩.೧೨ ಕನಕಚಂದ್ರ ಸಿದ್ಧಾಂತದೇವ.

೩.೧೩ ಹರಿಣಂದಿದೇವ. ೩.೧೪ ಚಂದ್ರಮತಿ ಅವ್ವೆ.

೩.೧೫ ಕುಕ್ಕಟೇಶ ಮಲಧಾರಿ ದೇವ. ೩.೧೬ ಬಾಳಚಂದ್ರ ಸಿದ್ಧಾನ್ತದೇವ.

೩.೧೭ ಸೋಮದೇವ. ೩.೧೮ ಶ್ರೀಮತಿ ಅವ್ವೆ. ೩.೧೯ ನಾಗಚಂದ್ರ ಮುನಿಪ.

೩.೨೦ ಕುಮಾರಸೇನ. ೩.೨೧ ಕಲ್ಯಾಣಕೀರ್ತಿ ಭಟ್ಟಾರಕ.

೩.೨೨ ನಂನ್ದಿಭಟ್ಟಾರಕ ದೇವ.

**೩. ಪ್ರಾಚೀನ ಜೈನ ಕೇಂದ್ರಗಳು.**

೦೧. ದೇವಗಿರಿ. ೦೨. ಆಡೂರು. ೦೩. ಬಂಕಾಪುರ. ೦೪. ಹಾನಗಲ್ಲು.

೦೫. ಬಾಳೂರು. ೦೬. ಯಳವಟ್ಟಿ. ೦೭. ಹಾವೇರಿ. ೦೮. ಸಂಗೂರು.

೦೯. ನೆಗಳೂರು. ೧೦. ಅರಟಾಳ. ೧೧. ಸವಣೂರು. ೧೨. ಕಡಕೋಳ.

೧೩. ಹೊನ್ನತ್ತಿ. ೧೪. ಸುಣಕಲ್ಲಬಿದರಿ. ೧೫. ನದಿಹರಳಹಳ್ಳಿ. ೧೬. ಕಾಗಿನೆಲೆ.

೧೭. ಮಲ್ಲೂರು. ೧೮. ಮೋಟೆಬೆನ್ನೂರು. ೧೯. ಹಿರೇಅಣಜಿ.

೨೦. ಆಲದಗೆರೆ. ೨೧. ಹಿರೇಕೊಣತಿ. ೨೨. ಅಬ್ಬಲೂರು.

## ಅಧ್ಯಾಯ-೦೨.

# ಜಿಲ್ಲೆಯ ಜೈನಪರಂಪರೆಯ ಐತಿಹಾಸಿಕ ಹಿನ್ನೋಟ.

ತುಂಗಭದ್ರಾ ನದಿಪಾತ್ರದ ಎಡದಂಡೆಗೆ ಹೊಂದಿಕೊಂಡ ಹಾವೇರಿ ಜಿಲ್ಲೆ; ಉತ್ತರ ಕರ್ನಾಟಕದ ಸಂಪರ್ಕ ಸೇತು. ರಾಜಕೀಯ, ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕವಾಗಿ ದಕ್ಷಿಣ ಕರ್ನಾಟಕಕ್ಕಿಂತ ಇದು ಭಿನ್ನ. ಆಹಾರ, ಉಡುಪು, ಭಾಷೆ, ವಾಕ್‌ಶೈಲಿ ಹೀಗೆ ವಿಭಿನ್ನವಾದ ಸಂಸ್ಕೃತಿಯನ್ನು ಪಟ್ಟಿ ಮಾಡುತ್ತಾ ಹೋಗಬಹುದು. ಪ್ರಾಚೀನ ಕರ್ನಾಟಕದ ಭಾಗವಾಗಿ ಹಾವೇರಿ ಜಿಲ್ಲೆಯನ್ನು ಅಧ್ಯಯನ ಮಾಡಿದಾಗ ಇದೊಂದು ಕದನಭೂಮಿಯಾಗಿದ್ದುದು ದಿಟವಾಗುತ್ತದೆ. ಬಹುಶ: ಬಯಲು ಸೀಮೆಯಾದ ಈ ಪರಿಸರ 'ರಣರಂಗ'ಕ್ಕೆ ಹೇಳಿಮಾಡಿಸಿದ ಜಾಗ. ಉತ್ತರ-ದಕ್ಷಿಣ ಕರ್ನಾಟಕದ ಅರಸೊತ್ತಿಗೆಗಳು ತಮ್ಮ ಹಕ್ಕು ಸ್ಥಾಪನೆಗಾಗಿ ಯುದ್ಧ ಮಾಡಲು ಮುಖಾಮುಖಿಯಾಗುತ್ತಿದ್ದುದು ಇಲ್ಲಿಯೇ. ಹಾವೇರಿ ಪರಿಸರದಲ್ಲಿ ಅತ್ಯಧಿಕ ಸಂಖ್ಯೆಯಲ್ಲಿ ದೊರೆಯುವ ವೀರಗಲ್ಲುಗಳನ್ನು ಈ ಹೇಳಿಕೆಗೆ ಪ್ರಮಾಣೀಕರಿಸಬಹುದು. ರಾಜಸ್ವಗಳ ಹಕ್ಕು ಚಲಾವಣೆ ಒಂದು ಕಡೆಯಾದರೆ; ಇನ್ನೊಂದು ಧರ್ಮ ಪರಾಕಾಷ್ಠೆಯ ಕದನ. ಹಿರೇಕೆರೂರು ತಾಲ್ಲೂಕಿನ ಅಬ್ಬಲೂರಿನಲ್ಲಿ ಈ ರೀತಿಯ ಧಾರ್ಮಿಕ ಕಲಹದ ಚಿತ್ರಣಗಳನ್ನು ಗಮನಿಸಬಹುದು. ಜೈನ ಮತ್ತು ಶೈವ ಧರ್ಮಗಳ ಧರ್ಮಪ್ರತಿಷ್ಠಾಪನಾ ಅಂಗವಾಗಿ ಕದನ ನಡೆದು ಜೈನರಿಗೆ ಸೋಲಾಗಿರುವುದಕ್ಕೆ ಆಧಾರಗಳಿವೆ.

ಹಾವೇರಿ ಜಿಲ್ಲಾ ಪರಿಸರವು ಪ್ರಾಚೀನ ಆಡಳಿತ ಘಟಕಗಳಾದ ಬನವಾಸಿ ೧೨೦೦೦, ಪುಲಿಗೆರೆ-೩೦೦, ಬೆಳ್ವಲ-೩೦೦ರಲ್ಲಿ ಸಮಾಗಮವಾಗಿತ್ತು. ಇಲ್ಲಿ ಚತುಸ್ಸಮಯ (ಶೈವ, ವೈಷ್ಣವ, ಜೈನ, ಬೌದ್ಧ)[೧] ಧರ್ಮಗಳು ಪ್ರಸರಣದಲ್ಲಿದ್ದವು ಎಂಬ ಉಲ್ಲೇಖಗಳಿದ್ದರೂ; ಜನಬಳಕೆಯಲ್ಲಿ ಶೈವ, ವೈಷ್ಣವ ಮತ್ತು ಜೈನ ಅವ್ಯಾಹಿತವಾಗಿದ್ದವು. ಇವುಗಳಲ್ಲಿ ಪ್ರಬಲವಾಗಿದ್ದವು ಶೈವ ಮತ್ತು ಜೈನ ಧರ್ಮಗಳು ಮಾತ್ರ. ಸದ್ಯದ ಪರಿಸ್ಥಿತಿಯಲ್ಲಿ ಜೈನ ಧರ್ಮ ಈ ಪರಿಸರದಲ್ಲಿ ಪ್ರಬಲವಲ್ಲದಿದ್ದರೂ; ಪ್ರಾಚೀನ ಸ್ಮಾರಕಗಳಿಂದ ಸಾಂಸ್ಕೃತಿಕವಾಗಿ ಪುರಾತನವೆನಿಸಿದ ಧರ್ಮಗಳಲ್ಲೊಂದಾಗಿದೆ. ಈ ಪ್ರದೇಶದ ಜೈನಧರ್ಮದ ವೈಭವಕ್ಕೆ ಸಾಕ್ಷಿಯಾದ ಶಾಸನಗಳು, ಜೈನ ನೆಲೆಗಳು, ಮುನಿಗಳ ಪರಂಪರೆಗಳ ಆಧಾರ ನಮಗೆ ಈಗಲೂ ಲಭ್ಯ. ಹಾಗೆಯೇ ವೈಭವದ ಜೈನಧರ್ಮದ ಪ್ರಾಬಲ್ಯ ತಗ್ಗಿಹೋದದ್ದಕ್ಕೂ ಕುರುಹುಗಳು ಹಾವೇರಿ ಪರಿಸರದಲ್ಲಿ ಒದಗುತ್ತವೆ. ಈ ಎಲ್ಲ ಅಂಶಗಳನ್ನು ಆಧರಿಸಿ ಜೈನ ಪರಂಪರೆಯ ಐತಿಹಾಸಿಕ ಹಿನ್ನೋಟವನ್ನು ಪ್ರಸ್ತುತ ಅಧ್ಯಾಯದಲ್ಲಿ ಅಭ್ಯಸಿಸಲಾಗಿದೆ.

## ಅ. ಶಾಸನಾಧಾರಿತ ಹಿನ್ನೋಟ.

ಶಾಸನಗಳು ರಾಜಾಜ್ಞೆಯ ಬರಹಗಳಾಗಿದ್ದು ಮೊದಲ ಹಂತವಾದರೆ; ಆ ಪರಿಧಿಯನ್ನು ವಿಸ್ತರಿಸಿಕೊಂಡು ಅಂದಂದಿನ ಕಾಲಘಟ್ಟದ ಸಂಸ್ಕೃತಿಯ ಪ್ರತಿಬಿಂಬಗಳಾಗಿದ್ದು ಎರಡನೆಯ ಘಟ್ಟ. ರಾಜಾಜ್ಞೆ, ರಾಜಪ್ರಶಸ್ತಿ, ದಾನಿಗ, ದಾನ, ವೀರ, ಮಹಾಸತಿ, ತ್ಯಾಗಿ, ಕಾಲ, ವಾರ, ತಿಥಿ, ಗ್ರಹಣ, ದಿನ, ದಾನದ ವಿಧ, ಪ್ರಮಾಣ, ಶಾಪಾಶಯ ಮುಂತಾದ ವಿಷಯಗಳನ್ನು ಸಂದರ್ಭಾನುಸಾರ ದಾಖಲಿಸುವುದು ಶಾಸನಗಳ ಮುಖ್ಯ ಕರ್ತವ್ಯ ಎನಿಸಿದರೂ; ಅದರಾಚೆಗೆ ಅವುಗಳು ಅಂದಿನ ಸಾಂಸ್ಕೃತಿಕ ವಿವಿಧ ಮಜಲುಗಳನ್ನು ತೆರೆದಿಡುತ್ತವೆ. ಈ ಪ್ರಕ್ರಿಯೆಗೆ ಜೈನಶಾಸನಗಳು ಹೊರತಾದವಲ್ಲ. ಸದ್ಯ ಇದೂವರೆಗೂ ಹಾವೇರಿ ಪರಿಸರದಲ್ಲಿ ೧೫೦ ಜೈನ ಶಾಸನಗಳು ಲಭ್ಯವಿವೆ.[೨] ಇವುಗಳ ಆಧಾರದಿಂದ ಅಂದಂದಿನ ರಾಜಸ್ವ ಮತ್ತು ಅದರ ತೆಕ್ಕೆಯಲ್ಲಿ ಬೆಳೆದುಬಂದ ಜೈನಧರ್ಮವನ್ನು ಇಲ್ಲಿ ಸಂಕ್ಷಿಪ್ತವಾಗಿ ಒಡಮೂಡಿಸಲಾಗಿದೆ.

ಹಾವೇರಿ ಪರಿಸರದಲ್ಲಿ ಬನವಾಸಿ ಕದಂಬ, ಬಾದಾಮಿ ಚಲುಕ್ಯ, ರಾಷ್ಟ್ರಕೂಟ, ಕಲ್ಯಾಣದ ಚಾಳುಕ್ಯ, ಕಳಚೂರ್ಯ, ಹೊಯ್ಸಳ, ಸೇವುಣ, ವಿಜಯನಗರ ರಾಜಸ್ವಗಳು ಜೈನಧರ್ಮವನ್ನು ಪೋಷಿಸಿ ಬೆಳೆಸಿವೆ. ಜೈನರಿಗೆ ಅಧಿಕಾರ ಕೊಡುವುದರ ಮೂಲಕ (ಸಾಮಂತರು, ನಾಳ್ಗಾವುಂಡರು, ಗಾವುಂಡರು, ದಂಡನಾಯಕರು) ಬಸದಿಗಳಿಗೆ ದಾನ-ದತ್ತಿಯನ್ನೀಯುವುದರ ಮೂಲಕ, ಬಸದಿಗಳಿಗೆ ದಾನವನ್ನು ಕೊಡುವಂತೆ ಪ್ರೇರೇಪಿಸುವ ಮೂಲಕ ಹೀಗೆ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ರಾಜಸ್ವಗಳ ಉತ್ತೇಜನ ಮತ್ತು ಗೌರವಾದರಗಳಿಂದ ಈ ಪರಿಸರದಲ್ಲಿ ಜೈನಧರ್ಮ ಔನತ್ಯ ಕಂಡುಕೊಂಡಿದ್ದು ದಿಟವಾಗುತ್ತದೆ. ಬನವಾಸಿ ೧೨೦೦೦, ಪುಲಿಗೆರೆ-೩೦೦, ಬೆಳ್ವಲ-೩೦೦ ಪ್ರಮುಖ ಆಡಳಿತ ಗುಚ್ಛಗಳಲ್ಲಿ ಸಮೀಕರಣಗೊಂಡ ಹಾವೇರಿ ಪರಿಸರವು ಪಾನುಂಗಲ್ಲು-೫೦೦, ನಾಗರಖಂಡ-೭೦, ಸತ್ತಳಿಗೆ-೭೦, ಜಿಟ್ಟಪಳ್ಳಿ ನೂಱುಂಬಾಡ, ಬಾಸವೂರು-೧೪೦, ಎಡೆವಟ್ಟೆ-೭೦, ೩೬ ಬಾಡವೆರಡು, ಕಾಗಿನೆಲೆ-೧೨ ಬೆನ್ನವೂರು-೧೨, ಬೆಣ್ಣೆಯೂರು-೧೨, ಅರಕೆಱೆ-೧೨, ಹೊನ್ನವರ್ತ್ತಿ-೧೨ ಎಂಬ ಉಪಮುಖ್ಯ ಆಡಳಿತ ವಿಭಾಗಗಳಲ್ಲಿ ಹಂಚಿಹೋಗಿತ್ತು. ಬಿಡಿಬಿಡಿಯಾದ ಆಡಳಿತ ಇಲ್ಲಿದ್ದರೂ ಇಡೀಯಾಗಿ ಜೈನಧರ್ಮ ಬೆಳೆಯಿತು.

## ೧. ಕದಂಬ ಪೂರ್ವಯುಗದ ಜೈನಧರ್ಮ.

ವಿಶಾಲ ಭಾರತದ ಬಹುತೇಕ ಪ್ರದೇಶಗಳ ಮೇಲೆ ನಂದರು, ಗುಪ್ತರು, ಮೌರ್ಯರು, ಶಾತವಾಹನರು ತಮ್ಮ ಆಳ್ವಿಕೆಯ ಮುದ್ರೆಯನ್ನೊತ್ತಿದ್ದು ಇತಿಹಾಸ ಅಧ್ಯಯನದಿಂದ ತಿಳಿದುಬರುತ್ತದೆ. ಅಂತೆಯೇ ಕುಂತಳನಾಡೂ (ಕರ್ನಾಟಕ) ಇವರ ಆಳ್ವಿಕೆಗೆ ಒಳಪಟ್ಟಿತ್ತು. ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ಬಂದಳಿಕೆಯ ಕ್ರಿ.ಶ. ೧೨೦೪ರ ಶಾಸನವು

ವಸುಧಾಕಾಂತೆಯ ಕುಂತಳೋಪಮಮೆನಿಪ್ಪೀ ಕುಂತಳಕೋಣಿಯಂ
ಪೆಸರ್ವೆತ್ತಾ ನವನಂದ ಗುಪ್ತಕುಲ ಮೌರ್ಯಕ್ಷ್ಮಾಪರಾಳ್ದರ್ಲನ
ಜ್ಜಸದಾಣ್ಮರ್ಕಲಿ ರಟ್ಟರಾಳ್ದರವರಿಂ ಚಾಳುಕ್ಯರಾಳ್ದರ್ವಳಿ
ಕ್ಕೆಸೆದಿರ್ದಾ ಕಳಚುರ್ಯವಂಶರೊಳಾಳ್ದಂ ಬಿಜ್ಜಲಕ್ಷೋಣಿಪಂ ॥[೩]

ಎಂದು ವಸುಧೆಯ ಕಾಂತೆಯೆನಿಸಿದ ಕುಂತಳ ಪ್ರದೇಶವನ್ನು ನವನಂದ, ಗುಪ್ತ, ಮೌರ್ಯ, ರಾಷ್ಟ್ರಕೂಟ, ಚಾಳುಕ್ಯ, ಕಳಚೂರಿ ಮನೆತನಗಳು ಆಳಿದವು ಎಂಬುದನ್ನು ಸ್ಪಷ್ಟಪಡಿಸುತ್ತದೆ. ಹಾವೇರಿ ಪರಿಸರ ನವನಂದ ಗುಪ್ತರ ಆಳ್ವಿಕೆ ಒಳಪಟ್ಟಿತ್ತೇನೊ ನಿಜ, ಆದರೆ ಇವರ ಆಳ್ವಿಕೆ ಅವಧಿಯಲ್ಲಿ ಈ ಪರಿಸರದಲ್ಲಿ ಜೈನ ಚಟುವಟಿಕೆಯ ಕುರುಹುಗಳು ನನ್ನ ಅಧ್ಯಯನದ ಹಿನ್ನೆಲೆಯಲ್ಲಿ ಲಭ್ಯವಾಗಿಲ್ಲ.

ಕರ್ನಾಟಕದಲ್ಲಿ ಜೈನಧರ್ಮದ ಪ್ರಚಾರ–ಪ್ರಸಾರ ಊರ್ಧ್ವಗೊಂಡಿದ್ದು ಮೌರ್ಯರ ಆಡಳಿತಾವಧಿಯಲ್ಲಿ. ಮೌರ್ಯ ಸಾಮ್ರಾಟ್ ಚಂದ್ರಗುಪ್ತ ಸ್ವತ: ಜೈನಧರ್ಮಿಯನಾಗಿದ್ದ ಎಂದು ವೃಷಭಾಚಾರ್ಯರ 'ತಿಲೋಯಪಣ್ಣತ್ತಿ' ಎಂಬ ಎರಡನೆಯ ಶತಮಾನದ ಪ್ರಾಕೃತ ಕೃತಿಯಲ್ಲಿ ಉಲ್ಲೇಖಿಸಲಾಗಿದೆ.

ಮುಡಧರೇಸುಂ ಚರಿಮೋ ಜಿಣದಿಕ್ಷಂ ಧರದಿ ಚಂದ್ರಗುತ್ತೋ
ಯ ತತ್ತೋ ಮಉಡಧರಾ ದುಪ್ಪವ್ವಜ್ಜಂ ಣೇವ ಗೆಣ್ಹಂತಿ॥[೪]

ಮಕುಟ ಧರಿಸಿದ ರಾಜರಲ್ಲಿ ಚಂದ್ರಗುಪ್ತನು ಅಂತಿಮವಾಗಿ ಜಿನದೀಕ್ಷೆಯನ್ನು ಸ್ವೀಕಾರ ಮಾಡಿದನು. ಇವನ ನಂತರ ಮಕುಟ ಪ್ರಾಯರಾದ ಅರಸರಾರೂ ಜಿನದೀಕ್ಷೆಯನ್ನು ಅನುಸರಿಸಲಿಲ್ಲ ಎಂಬುದು ಪದ್ಯದ ಭಾವ. ಹೀಗೆ ಕಿರೀಟಧಾರಿ ಚಂದ್ರಗುಪ್ತನು ಜಿನದೀಕ್ಷೆಯನ್ನು ಪಡೆದಿದ್ದು ಮಹಾಮುನಿ ಭದ್ರಬಾಹುಗಳಲ್ಲಿ. ಗುರು–ಶಿಷ್ಯರ ಅನುಬಂಧವನ್ನು ಉದ್ಧರಿಸುವ ಶಾಸನಗಳೂ ಲಭ್ಯವಿವೆ 'ಶ್ರೀಭದ್ರವಾಹು ಸ ಚನ್ದ್ರಗುಪ್ತಮುನೀನ್ದ್ರ ಯುಗ್ಮದಿನೊಪ್ಪೆವಲ್'[೫] ಎಂದು ಭದ್ರಬಾಹು ಮತ್ತು ಚಂದ್ರಗುಪ್ತರನ್ನು ಸ್ಮರಿಸುವ ಈ ಶಾಸನ ಶ್ರವಣಬೆಳಗೊಳದ ಚಿಕ್ಕಬೆಟ್ಟದಲ್ಲಿದೆ. ಇದೇ ರೀತಿ ಇನ್ನೊಂದು ಶಾಸನ ಇದೇ ಸ್ಥಳದ ಪಾರ್ಶ್ವನಾಥ ಬಸದಿಯೊಳಗಣ ಕಂಭಶಾಸನದಲ್ಲಿದೆ.[೬]

ಮೌರ್ಯರ ಇನ್ನೊಬ್ಬ ಸಾಮ್ರಾಟ ಅಶೋಕನು ಬೌದ್ಧಧರ್ಮದ ಅನುಯಾಯಿಯಾಗಿದ್ದು ದಿಟ. " "ಆತ್ಮವು ಅವಿನಾಶಿಯಾಗಿದೆ" ಎನ್ನುವ ಅಶೋಕನ ರಾಜ್ಯಶಾಸನದ ವಾಕ್ಯವೂ ಬೌದ್ಧಧರ್ಮಕ್ಕಿಂತ ಜೈನಧರ್ಮವನ್ನೇ ಹೆಚ್ಚಾಗಿ ಪ್ರತಿನಿಧಿಸುತ್ತದೆ. ಆರಂಭದಲ್ಲಿ ಹುಟ್ಟಿದ ಅಶೋಕನ ಲೇಖನಗಳಲ್ಲೆಲ್ಲ ರಾಜನ ಉಪನಾಮವೆಂದು 'ದೇವನಾಂಪಿಯ ಪಿಯದಸೀ' ಎಂಬ ಪದವು ಇದೆ. 'ದೇವನಾಂಪಿಯ' ಎಂಬುದು ವಿಶೇಷತ: ಜೈನ ಗ್ರಂಥಗಳಲ್ಲಿಯೇ ರಾಜನ ಉಪಾಧಿಯಂತೆ

ಉಪಯೋಗಿಸಿದ್ದು ಕಂಡುಬರುತ್ತದೆ. ಆದರೆ ಅಶೋಕನ ೨೭ನೆಯ ವರುಷದ ಪ್ರಶಸ್ತಿಯಲ್ಲಿ ಅವನ ಪದವಿಯು ಕೇವಲ 'ಪಿಯದಸೀ' ಎಂದಿದೆ. ಅದರಲ್ಲಿ 'ದೇವಾನಾಂಪಿಯ' ಎಂಬ ಪದವು ಇಲ್ಲ. ಈ ಸಮಯಕ್ಕೆ ಅಶೋಕನು ಬೌದ್ಧ ಧರ್ಮವನ್ನು ಸ್ವೀಕರಿಸಿರಬೇಕು; ಇದಲ್ಲದೆ ಅಶೋಕನು ಅಹಿಂಸೆಯ ವಿಷಯಕ್ಕೆ ಹಾಕಿದ ನಿಯಮವು ಬೌದ್ಧಧರ್ಮದ ಗ್ರಂಥಗಳಿಗಿಂತ ಜೈನಗ್ರಂಥಗಳಲ್ಲಿ ಇರುವ ನಿಯಮಕ್ಕೆ ನಿಕಟವರ್ತಿಯಾಗಿದೆ."[೭] ಅಶೋಕನ ಮೊಮ್ಮಗನಾದ ಸಂಪ್ರತಿಯ ಕಾಲಕ್ಕೆ ಮತ್ತೆ ಮೌರ್ಯವಂಶ ಜೈನಧರ್ಮವನ್ನು ಸ್ವೀಕರಿಸಿತು. ಇವನಿಗೆ ಜೈನಾಚಾರ್ಯನಾದ ಸುಹಸ್ತಿಯು ಉಜ್ಜಯನಿಯಲ್ಲಿ ಜೈನಧರ್ಮ ದೀಕ್ಷೆಯನ್ನು ಕೊಟ್ಟನು. ತದನಂತರ ಸಂಪ್ರತಿಯೂ ಸಹ ಚಂದ್ರಗುಪ್ತ ಮೌರ್ಯನಂತೆ ಜೈನಧರ್ಮದ ಪ್ರಚಾರಕಾರ್ಯದಲ್ಲಿ ತೊಡಗಿಕೊಂಡನು.

ಕ್ರಿಸ್ತಪೂರ್ವದ ಕರ್ನಾಟಕದಲ್ಲಿ ಮೌರ್ಯರ ಆಡಳಿತಾವಧಿಯಲ್ಲಿ ಜೈನಧರ್ಮ ಹೆಚ್ಚು ಪ್ರಸರಣಗೊಂಡಿತು. ಈ ಕೀರ್ತಿ ಭದ್ರಬಾಹುಮುನಿ ಮತ್ತು ಚಂದ್ರಗುಪ್ತ ಮುನಿಗಳಿಗೆ ಸಲ್ಲಬೇಕು. ಕ್ರಿ.ಶ. ೭ನೆಯ ಶತಮಾನದ ರಚನೆಯಾದ ಶ್ರವಣಬೆಳಗೊಳದ ಚಿಕ್ಕಬೆಟ್ಟದ ಪಾರ್ಶ್ವನಾಥ ಬಸದಿಯ ಬಲಗಡೆ ಬಂಡೆಯ ಮೇಲಿನ ಶಾಸನವು ಭದ್ರಬಾಹು ಮುನಿಗಳು ತಮ್ಮ ಮುನಿ ಸಂಘದೊಂದಿಗೆ ಕರ್ನಾಟಕಕ್ಕೆ ಆಗಮಿಸಿದ ಬಗ್ಗೆ ತಿಳಿಸುತ್ತದೆ "ವರ್ಧಮಾನ ಮಹಾವೀರ ತೀರ್ಥಂಕರರ ಅನಂತರ ಬಂದ ಗೌತಮ ಗಣಧರ ಎಂಬ ಮಹರ್ಷಿಗಳು ಪ್ರಸಿದ್ಧರು. ಗೌತಮ ಗಣಧರರ ನಂತರ ಇವರ ಶಿಷ್ಯರಾದ ಲೋಹಾರ್ಯ್ಯ ಜಂಬು, ವಿಷ್ಣುದೇವ, ಅಪರಾಜಿತ, ಗೋವರ್ಧನ, ಭದ್ರಬಾಹು, ವಿಶಾಖ, ಪ್ರೋಷ್ಠಿಲ, ಕೃತಿಕಾರ್ಯ್ಯ, ಜಯನಾಮ, ಸಿದ್ಧಾರ್ಥ, ದೃತಿಷೇಣ, ಬುದ್ಧಿಲ ಎಂಬುವರು ಆಗಿಹೋದರು. ಇಂಥಹ ಗುರು-ಶಿಷ್ಯರು ಪರಂಪರೆಯಲ್ಲಿ ಬಂದ ಭದ್ರಬಾಹುಗಳು ತ್ರಿಕಾಲಜ್ಞಾನಿಗಳಾಗಿದ್ದರು. ಇವರು ತಮ್ಮ ದಿವ್ಯಜ್ಞಾನದಿಂದ ಹನ್ನೆರಡು ವರ್ಷಗಳ ಕಾಲ ಭೀಕರ ಬರಗಾಲ ಆವರಿಸುವುದೆಂದು ತಿಳಿದು ಉಜ್ಜಯಿನಿಯಿಂದ ತಮ್ಮ ಸಂಘ ಪರಿವಾರದೊಡನೆ ದಕ್ಷಿಣದ ಕಡೆಗೆ ಬಂದರು"[೮]

ಕ್ರಿ.ಪೂ. ಮೂರನೆಯ ಶತಮಾನದ ಹೊತ್ತಿಗೆ ಭದ್ರಬಾಹು ಮುನಿಗಳು ಚಂದ್ರಗುಪ್ತನೊಡಗೂಡಿ ಭಾರತದ ದಾಕ್ಷಿಣಾತ್ಯ ಭಾಗವಾದ 'ಕಟ್ವಪ್ಪು'ವಿಗೆ ಬಂದದ್ದು ದಿಟ. "ಶಿವ ಕೋಟಿ ಆಚಾರ್ಯನ ಭಗವತೀ ಆರಾಧನಾ (ಕ್ರಿ.ಶ. ಸುಮಾರು ೧ನೆಯ ಶ), ಹರಿಷೇಣಾಚಾರ್ಯನ ಬೃಹತ್ಕಥಾಕೋಶ (ಕ್ರಿ.ಶ. ೯೩೧), ರತ್ನನಂದಿಯ ಭದ್ರಬಾಹು ಚರಿತ್ರೆ (ಕ್ರಿ.ಶ. ೧೫೧೮), ಬ್ರಹ್ಮಜಿನದಾಸನ ಭದ್ರಬಾಹುರಾಸ (ಕ್ರಿ.ಶ. ಸು ೧೫ನೇ ಶ), ಚಿದಾನಂದ ಕವಿಯ ಮುನಿವಂಶಾಭ್ಯುದಯ (ಕ್ರಿ.ಶ. ೧೬೮೦), ದೇವಚಂದ್ರನ ರಾಜಾವಳಿ ಕಥಾಸಾರ (ಕ್ರಿ.ಶ. ೧೮೨೯), ಕೆಂಪುನಾರಾಯಣನ ಮುದ್ರಾಮಂಜೂಷ (ಕ್ರಿ.ಶ. ೧೮೨೩), ಹೇಮಚಂದ್ರನ ಪರಿಶಿಷ್ಟ ಪರ್ವ ಮೊದಲಾದ ಕೃತಿ ಕಾವ್ಯಗಳು,[೯] ಹಾಗೂ ಶ್ರವಣಬೆಳಗೊಳ, ಪಾಂಡವಪುರ ತಾಲ್ಲೂಕಿನ ಕ್ಯಾತನಹಳ್ಳಿ, ಶ್ರೀರಂಗಪಟ್ಟಣ ತಾಲ್ಲೂಕಿನ ರಾಂಪುರ, ಮಹಾರಾಷ್ಟ್ರದ ಕೊಲ್ಲಾಪುರ ಜಿಲ್ಲೆಯ ಶಿರೋಳ ತಾಲ್ಲೂಕಿನ

ನಾಂದಣಿಯ ಶಾಸನಗಳು[೧೦] ಭದ್ರಬಾಹು ಭಟ್ಟಾರಕರು ಮತ್ತು ಚಂದ್ರಗುಪ್ತನ ಸಂಬಂಧವನ್ನು ಚಿತ್ರಿಸುವ ಅನೇಕ ವಿಚಾರಗಳು ಪ್ರಸ್ತಾಪಿಸಿವೆ.

ಹನ್ನೆರಡು ಸಾವಿರ ಅಪಾರ ಮುನಿಶಿಷ್ಯರೊಡನೆ ದಾಕ್ಷಿಣಾತ್ಯ ಪ್ರದೇಶದಿಂದ ಹೊರಟು "ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ಕಟೆದು ಪೋಗಿ ಕಟ್ಟಪ್ಪು ನಾಡನೆಯ್ದಿ ಪೋಗುತ್ತಂ ಭದ್ರಬಾಹು ಭಟಾರರ್ ತಮ್ಮಾಯುಷ್ಯಪ್ರಮಾಣಮಜೆದಾಮಿಲ್ಲಿ ಸಂನ್ಯಸನಂ ಗೆಯ್ದಪ್ಪವು ನೀಮೆಲ್ಲಂ ಪೋಗಿ"[೧೧] ಎಂದು ತಮ್ಮ ಶಿಷ್ಯರಲ್ಲಿ ಎಂಟು ಸಾವಿರ ಮುನಿಗಳನ್ನು ವಿಶಾಖಾಚಾರ್ಯರೊಡನೆ ದ್ರಾವಿಡ ದೇಶಕ್ಕೆ ಕಳುಹಿಸಿದರು. ಕಟ್ಟಪ್ಪು ಎಂಬುದು ಈಗಿನ ಶ್ರವಣಬೆಳಗೊಳದ ಒಂದು ಬೆಟ್ಟ. ಚಂದ್ರಗುಪ್ತ ಸಮಾಧಿಯಾದ ಪ್ರಯುಕ್ತ ಇದಕ್ಕೆ ಚಂದ್ರಗಿರಿ ಎಂಬ ಉಪನಾಮವಿದೆ. ಸ್ಥಳೀಯರು ಇದನ್ನು ಚಿಕ್ಕಬೆಟ್ಟ ಎಂದೇ ಕರೆಯುತ್ತಾರೆ. ವಿಶಾಲ ಕಲ್ಲುಬಂಡೆಯ ಹಾಸು, ಬೆಟ್ಟದ ಮೇಲೆಯೇ ನೀರಿನ ಸೌಕರ್ಯಗಳು, ನಿರ್ಜನ ಪ್ರದೇಶ, ಪ್ರಶಾಂತತೆ ಮುಂತಾದ ಸೌಲಭ್ಯಗಳು ಭದ್ರಬಾಹುಗಳನ್ನು ಇಲ್ಲಿ ತಂಗುವಂತೆ ಮಾಡಿದವು. ಇಂಥಹ ಮುನಿಇಷ್ಟದ ಪ್ರದೇಶಕ್ಕೆ ಭದ್ರಬಾಹುಗಳು ಉತ್ತರ ಭಾರತದಿಂದ ಬಂದಿರುವ ಮಾರ್ಗವಾದರೂ ಯಾವುದು?. ನಿಸ್ಸಂಶಯವಾಗಿ ಅದು ಉತ್ತರ ಕರ್ನಾಟಕದ ಮಾರ್ಗವೇ ಆಗಿದೆ. ಕ್ರಿಸ್ತಶಕದ ನಂತರ ಈ ಭಾಗದಲ್ಲಿ ವಿಪುಲವಾಗಿ ಹರಡಿದ ಜೈನಧರ್ಮ ಸಾಕ್ಷಿಯಾಗಿ ನಿಲ್ಲುತ್ತದೆ. ಅಂತೆಯೇ ಉತ್ತರ ಕರ್ನಾಟಕದ ಭಾಗದಲ್ಲಿ 'ಹಲಸಿ' ಮತ್ತು 'ಬೃಹತ್ಪರಲೂರು' (ದೇವಗಿರಿ)ರಲ್ಲಿ ಜಿನಾಲಯಗಳೆದ್ದವು. ಜೊತೆಗೆ ಜಿನಮುನಿಗಳ ತವರುಮನೆಗಳಾದವು.

ಮೌರ್ಯರ ಕಾಲಾವಧಿಯಲ್ಲಿ ಅಥವಾ ಭದ್ರಬಾಹುಗಳ ಆಗಮನದಿಂದ ಕರ್ನಾಟಕಕ್ಕೆ ಜೈನಧರ್ಮ ಪ್ರವೇಶವಾಯ್ತು ಎಂಬುದು ಹಲವು ವಿದ್ವಾಂಸರ ಅಭಿಪ್ರಾಯ. ಆದರೆ ಅವರು ಬರುವ ಮೊದಲೇ ಇಲ್ಲಿ ಜೈನಧರ್ಮ ಇತ್ತು. ಏಕೆಂದರೆ ಹನ್ನೆರಡು ಸಾವಿರದಷ್ಟು ಮುನಿಗಳು ಉತ್ತರದಲ್ಲಿ ಆಹಾರ ಸಮಸ್ಯೆಯಾಗಿ ದಕ್ಷಿಣದತ್ತ ಪ್ರಯಾಣಬೆಳೆಸಬೇಕೆಂದರೆ ಇಲ್ಲಿ ಜೈನರಿದ್ದರೆಂದೇ ಅರ್ಥ. ಜಿನಮುನಿಗಳು ಶ್ರಾವಕರಲ್ಲಿ ಮಾತ್ರ ಆಹಾರ ಸ್ವೀಕರಿಸುವರು. ಅಪಾರ ಪ್ರಮಾಣದ ಮುನಿ ಸಮುದಾಯಕ್ಕೆ ಆಹಾರ ವಿನಿಯೋಗವಾಗಿದೆಯೆಂದರೆ ಕರ್ನಾಟಕದಲ್ಲಿ ಅಥವಾ ದಕ್ಷಿಣ ಭಾರತದಲ್ಲಿ ಬಹುಸಂಖ್ಯೆಯಲ್ಲಿ ಜೈನರಿದ್ದರೆಂದೇ ಅರ್ಥ.[೧೨]

ಬೌದ್ಧರ ಧಾರ್ಮಿಕ ಗ್ರಂಥವಾದ 'ಮಹಾವಂಶ'ದ ಹತ್ತನೆಯ ಅಧ್ಯಾಯದಲ್ಲಿ ಸಿಂಹಳದ ರಾಜಕುಮಾರನಾದ ಪಾಂಡುಕಾಭಯನು (Pandukabhaya) ತನ್ನ ರಾಜಧಾನಿಯಾದ ಅನುರಾಧಾಪುರದಲ್ಲಿ ನಿರ್ಗ್ರಂಥರಿಗೋಸ್ಕರ ಒಂದು ದೇವಾಲಯವನ್ನು ನಿರ್ಮಿಸಿದ ಬಗ್ಗೆ ವಿವರಗಳಿವೆ.[೧೩] ನಿರ್ಗ್ರಂಥ ಎಂದರೆ ಬೆತ್ತಲೆ; ನಿರ್ಗ್ರಂಥರು ಎಂದರೆ ನಗ್ನತ್ವವನ್ನು ಪಾಲಿಸುವ ಜಿನಮುನಿಗಳು. ಇವರಿಗೋಸ್ಕರ ಪಾಂಡುಕಾಭಯನು ದೇವಾಲಯ (ಬಸದಿ)ವನ್ನು ಕಟ್ಟಿಸುತ್ತಾನೆ.

ಒಂದು ಧರ್ಮದ ಸಂಸ್ಕೃತಿಯ ಬಹುಕಾಲದ ಪ್ರಯತ್ನವೇ ದೇವಾಲಯ ಅಥವಾ ಬಸದಿ. ಬಸದಿ ನಿರ್ಮಾಣದ ನೂರಾರು ವರ್ಷಗಳ ಮುಂಚೆಯೇ ಅದರ ಅನುಯಾಯಿಗಳು ಇರುತ್ತಾರೆ. ಮಹಾವಂಶದ ಪ್ರಕಾರ ಪಾಂಡುಕಾಭಯನು ಜೈನ ದೇವಾಲಯವನ್ನು ಕಟ್ಟಿಸಿದ್ದು ಕ್ರಿ.ಪೂ. ನಾಲ್ಕನೆಯ ಶತಮಾನ. ಅದ್ದರಿಂದ ಸಿಂಹಳದಲ್ಲಿ ಜೈನಧರ್ಮ ಕ್ರಿ.ಪೂ. ನಾಲ್ಕನೆಯ ಶತಮಾನದ ಹಿಂದೆಯೇ ಪ್ರಸರಣದಲ್ಲಿತ್ತು ಎಂಬುದನ್ನು ಒಪ್ಪಬಹುದು. ಹಾಗಾದರೆ ಸಿಂಹಳಕ್ಕೆ ಜೈನಧರ್ಮ ಪ್ರವೇಶವಾದದ್ದಾದರೂ ಹೇಗೆ? ಉತ್ತರವಾಗಿ ಕರ್ನಾಟಕದ ಮಾರ್ಗವಾಗಿ ತಮಿಳುನಾಡಿನ ಮೂಲಕ ಎಂದು ಅರಿಯಬಹುದು. ತಮಿಳುನಾಡು ಮತ್ತು ಸಿಂಹಳ (ಶ್ರೀಲಂಕಾ)ಕ್ಕೆ ಬಹು ಹಿಂದಿನಿಂದಲೂ ಅವಿನಾಭಾವ ಸಂಬಂಧ ಇದೆ. ಈಗಲೂ ಸಾಕಷ್ಟು ತಮಿಳಿಗರು ಶ್ರೀಲಂಕಾದಲ್ಲಿದ್ದಾರೆ.

ಮೇಲಿನ ಚರ್ಚೆಯ ಮುಖ್ಯಗ್ರಹಿತೆ ಮೌರ್ಯರು ಅಥವಾ ಭದ್ರಬಾಹುಗಳು ಕರ್ನಾಟಕಕ್ಕೆ ಬರುವ ಮೊದಲೇ ಇಲ್ಲಿ ಜೈನಧರ್ಮ ವ್ಯಾಪಕವಾಗಿ ಹರಡಿಕೊಂಡಿತ್ತು ಎಂಬುದು. ಈ ವಿಚಾರದಿಂದ ಭದ್ರಬಾಹು ಮುನಿಗಳಿಂದ ಕರ್ನಾಟಕದಲ್ಲಿ ಜೈನಧರ್ಮ ಪರಿಚಯವಾಗಲಿಲ್ಲ ಅದಾಗಲೆ ಇತ್ತು ಎಂಬಂಶ ಸ್ಪಷ್ಟವಾಗುತ್ತದೆ. ಬೇಕಾದರೆ ಭದ್ರಬಾಹುಗಳಿಂದ ಕರ್ನಾಟಕದಲ್ಲಿ ಜೈನಧರ್ಮ ತನ್ನ ವ್ಯಾಪ್ತಿಯನ್ನು ಹೆಚ್ಚಿಸಿಕೊಂಡಿತು ಎನ್ನಲು ಅಡ್ಡಿಯಿಲ್ಲ. ಭದ್ರಬಾಹು, ಚಂದ್ರಗುಪ್ತ, ಅಸಂಖ್ಯಾತ ಮುನಿಗಳು, ಮುನಿಗಣಗಳು, ಚಕ್ರವರ್ತಿಗಳು, ರಾಜರು, ಸಾಮಂತರು, ರಾಣಿಯರು, ಮಂತ್ರಿಮಹೋದಯರು, ದಂಡನಾಯಕರು, ವರ್ತಕರು, ಶ್ರೀಸಾಮಾನ್ಯರು, ಪರಧರ್ಮಸಹಿಷ್ಣುಗಳು, ನಾಳ್ಗಾವುಂಡರು, ಗಾವುಂಡರು ಶ್ರಾವಕ-ಶ್ರಾವಿಕೆಯರು, ಕವಿಪುಂಗವರು, ಹೀಗೆ ಇನ್ನೂ ಅನೇಕ ಮಹನೀಯರು ಕರ್ನಾಟಕದಲ್ಲಿ ಜೈನಧರ್ಮ ಪ್ರಾಬಲ್ಯವಾಗಲು ಶ್ರಮಿಸಿದ್ದಾರೆ. ಹತ್ತನೆಯ ಶತಕದ ಹೊತ್ತಿಗೆ ಕರ್ನಾಟಕದ ಕುಗ್ರಾಮಗಳಲ್ಲೂ ಬಸದಿಗಳು ನಿರ್ಮಾಣವಾದವು ಎಂದರೆ ಅದು ಆ ಧರ್ಮಕ್ಕೆ ಇರುವ ತತ್ವಸಿದ್ಧಾಂತ, ಜನಾಶ್ರಯ, ಆರ್ಥಿಕ ನೆಲೆಗಟ್ಟು ಮತ್ತು ರಾಜಾಶ್ರಯವೇ ಮುಖ್ಯಕಾರಣವಾಗುತ್ತದೆ.

ಮೌರ್ಯರ ಕಾಲಾವಧಿಯ ಹಾವೇರಿ ಪರಿಸರದಲ್ಲಿ ಜೈನ ಧರ್ಮಸಂಬಂಧಿ ಚಟುವಟಿಕೆಗಳಾವುವು ನಡೆದದ್ದು ಲಿಖಿತ ಪರಂಪರೆಯಲ್ಲಿ ದಾಖಲಾದದ್ದು ನನ್ನ ಗಮನಕ್ಕೆ ಬಂದಿರುವುದಿಲ್ಲ. ಆದರೆ ಭದ್ರಬಾಹು ಮತ್ತು ಚಂದ್ರಗುಪ್ತ ಸಹಿತ ಅಪಾರ ಮುನಿ ಸಮುದಾಯ ಕಟ್ವಪ್ಪುವಿಗೆ ಹೋಗುವಾಗ ಹಾವೇರಿ ಪರಿಸರದ ಸ್ಥಳಗಳ ಮೂಲಕ ಹಾದುಹೋದರು ಎಂಬುದು ಜನಪದರ ಮಾತು. ಇದಕ್ಕೆ ಪುಷ್ಟಿಯೆಂಬಂತೆ ಹಿರೇಕೆರೂರು ತಾಲ್ಲೂಕಿನ ಲಿಂಗದೇವರಕೊಪ್ಪ ಮತ್ತು ಕುಂಚೂರು ಗ್ರಾಮಗಳ ಮಾರ್ಗ ಆಧಾರವಾಗಿ ನಿಲ್ಲುತ್ತದೆ. ಈ ಊರ ಜನ ಶ್ರವಣಬೆಳಗೊಳಕ್ಕೆ ಹೋಗುವ ದಿಗಂಬರ ಮುನಿಗಳು ನಮ್ಮ ಊರ ಮೂಲಕವೇ ಹೋಗುತ್ತಾರೆ ಎಂದು ಹೇಳುತ್ತಾರೆ. ನಮ್ಮ ತಾತ-ಮುತ್ತಾತ (ಅಜ್ಜ-ಮುತ್ತಜ್ಜ)ರ ಕಾಲದಿಂದಲೂ ಈ ಕ್ರಿಯೆ ನಡೆದುಕೊಂಡು ಬರುತ್ತಿದೆ ಎನ್ನುತ್ತಾರೆ ಗ್ರಾಮಸ್ಥರು. ಈಗಲೂ ಮುನಿಗಳ ಸಂಚಾರ ಈ ಮಾರ್ಗದಲ್ಲಿದೆ. ಕುಂಚೂರು

ಮಾರ್ಗವಾಗಿ ತುಂಗಭದ್ರಾನದಿ ಅಂಚಿಗೆ ನಡೆದುಕೊಂಡು ಶಿವಮೊಗ್ಗ ಪರಿಸರದ ಮೂಲಕ ಶ್ರವಣಬೆಳಗೊಳಕ್ಕೆ ಸೇರುವುದು ಒಳದಾರಿ. ಈ ದಾರಿ ಸಮೀಪವೂ ಹೌದು.

ಕುಂಚೂರು ಹತ್ತು–ಹನ್ನೆರಡನೆಯ ಶತಮಾನದ ಹೊತ್ತಿಗೆ ಒಂದು ದೊಡ್ಡ ಜೈನ ಕೇಂದ್ರವಾಗಿತ್ತು. ಇಲ್ಲಿ ಒಂದು 'ಪುರದ ಜಿನಾಲಯ', ಎರಡು ನಿಸಿಧಿಗಳು, ಎರಡು ಪಾದಪೀಠ ಶಾಸನಗಳು ಒಂದು ಪಾರ್ಶ್ವನಾಥ ಮೂರ್ತಿ, ಒಂದು ಬೀಸ್–ಚೌವ್ವೀಸ ಮೂರ್ತಿ ಮತ್ತು ಇತರೆ ಜೈನಾವಶೇಷಗಳು ಕಂಡುಬರುತ್ತವೆ.[೧೪] ಕುಂಚೂರು ನವಿಲುಗರಿಯ ಕುಂಚವನ್ನು ಹಿಡಿದುಕೊಳ್ಳುವ 'ಕೂರ್ಚಕ' ಜಿನಮುನಿಗಳ ಅಪರೂಪದ ಊರಾಗಿತ್ತು.[೧೫] ಈ ಊರು ಭದ್ರಬಾಹು ಮುನಿಗಳ ಕಾಲಕ್ಕೆ ಆಸ್ತಿತ್ವದಲ್ಲಿ ಇತ್ತೊ–ಇಲ್ಲವೋ ತಿಳಿಯದು. ಆದರೆ ಕಟ್ವಿಪ್ಪುವಿಗೆ ಉತ್ತರ ಕರ್ನಾಟಕದಿಂದ ಚಲಿಸುವ ಮಹಾಮಾರ್ಗವನ್ನು ಅವರು ಹಾಕಿಕೊಟ್ಟರು. ತದನಂತರದ ಜಿನಮುನಿಗಳು ಈ ಮಾರ್ಗವನ್ನು ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ದಾಟಿಸಿಕೊಂಡು ಬಂದಿದ್ದಾರೆ. ಅರಸೊತ್ತಿಗೆ ಆಡಳಿತ, ಕಾಲ, ನಾಡು ಬದಲಾದರೂ ಪರಂಪರೆಯಿಂದ ಬಳುವಳಿಯಾಗಿ ಬಂದ, ಮುನಿಗಳ ಸುಪ್ತ ಪ್ರಜ್ಞೆಯಲ್ಲಿ ಅಚ್ಚೊತ್ತಿದ ಶ್ರವಣಬೆಳಗೊಳದ 'ಮಹಾಮಾರ್ಗ' ಈಗಲೂ ಚಾಲ್ತಿಯಲ್ಲಿದೆ. ಆದ್ದರಿಂದ ಮೌರ್ಯರ ಕಾಲದಲ್ಲಿಯೇ ಹಾವೇರಿ ಪರಿಸರದಲ್ಲಿ ಜೈನ ಧರ್ಮದ ಚಟುವಟಿಕೆಗಳು ನಡೆಯಲು ಪ್ರೇರಣೆಯಾಗುವಂತಹ ಕೆಲವೊಂದು ಘಟನೆಗಳು ಜರುಗಿದುವು ಎಂದರೆ ತಪ್ಪಾಗಲಾರದು.

ಮೌರ್ಯರ ತರುವಾಯ ಪೈಠಣದ ಶಾತವಾಹನರು (ಕ್ರಿ.ಪೂ. ೧೩೦– ಕ್ರಿ.ಶ. ೨೩೦) ಕರ್ನಾಟಕದ ಕೆಲವು ಭಾಗಗಳನ್ನಾಳಿದರು. ಇವರ ಕಾಲಾವಧಿಯಲ್ಲಿ ನಡೆದ ಮುಖ್ಯ ಜೈನ ಸಂಬಂಧಿ ಘಟನಾವಳಿ 'ಯಾಪನೀಯ ಸಂಘ'ದ ಸ್ಥಾಪನೆ. "ದೇವಸೇನಸೂರಿ (ಕ್ರಿ.ಶ. ೯೩೮) 'ದರ್ಶನಸಾರ' ಎಂಬ ಪ್ರಾಕೃತ ಕೃತಿಯಲ್ಲಿ ಹೀಗೆ ಹೇಳಿದ್ದಾನೆ.

ಕಲ್ಲಾಣೇ ವರಣಯರೇ ದುಣ್ಣಿಸವಿ ಪಂಚ ಉತ್ತರೇ ಜಾದೇ ।
ಜಾವಣಿಯ ಸಂಘ ಭಾವೋ ಸಿರಿಕಲಸಾದೋ ಹುಸೇವಡದೋ ॥

ಶ್ವೇತಾಂಬರ ಪಂಥದ ಶ್ರೀಕಲಶ ಮುನಿ ವಿಕ್ರಮ ಸಂವತ್ಸರ ೨೦೫ರಲ್ಲಿ (ಕ್ರಿ.ಶ. ೧೪೮) 'ಕಲ್ಯಾಣ ಪಟ್ಟಣ'ದಲ್ಲಿ ಜಾವಣಿಯ ಸಂಘವನ್ನು ಸ್ಥಾಪನೆ ಮಾಡಿದನು".[೧೬] ಜಾವಣಿಯ ಸಂಘ ಎಂಬುದು ಯಾಪನೀಯ ಸಂಘದ ಜ್ಞಾತಿ ರೂಪ. "ಯಾಪನೀಯ, ಜಾಪನೀಯ, ಯಾಪುಲೀಯ, ಅಪುಲೀಯ, ಜಾವುಲಿಯ, ಜಾವಿಲಿಯ, ಆಪನೀಯ, ಜಾಮಳಿಗೆಯ, ಜಾವಳಿಯೆ, ಯಾಪನೀ, ಯವನಕ, ಜಾಪುಲಿ, ಜಾವುಣಿ ಹೀಗೆ ಹತ್ತಾರು ನಾಮರೂಪಗಳು ಯಾಪನೀಯವನ್ನು ನಿರ್ದೇಶಿಸುವ ಜ್ಞಾತಿರೂಪಗಳು ಸಿಗುತ್ತವೆ."[೧೭]

ಯಾಪನೀಯ ಮುನಿಗಳು ನಗ್ನತ್ವದ ಮೂಲಕ ದಿಗಂಬರ ಸಂಪ್ರದಾಯವನ್ನು ಪ್ರತಿನಿಧಿಸಿದರೂ; ಅವರು ಶ್ವೇತಾಂಬರ ತತ್ವಗಳನ್ನು ಒಡಂಬಡಿಸಿಕೊಂಡಿದ್ದರು. "ಯಾಪನೀಯಕ್ಕೆ ಎರಡು ತುದಿಗಳಿದ್ದು ಶ್ವೇತಾಂಬರ ಒಂದು ತುದಿ, ದಿಗಂಬರ ಇನ್ನೊಂದು ತುದಿಯಾಗಿತ್ತು. ಇವೆರಡರ ನಡುವೆ ನಿಂತ ಮಧ್ಯಮಾರ್ಗ ಯಾಪನೀಯ"[೧೮] ಕರ್ನಾಟಕದ ಈಗಿನ ಬಸವಕಲ್ಯಾಣ (ಕಲ್ಲಾಣೇ)ದಲ್ಲಿ ಜನಿಸಿದ ಈ ಸಂಘ ಕದಂಬರ ಕಾಲಕ್ಕಾಗಲೇ ಹುಲುಸಾಗಿ ಬೆಳೆದು ಸ್ವತಂತ್ರ ಅಸ್ತಿತ್ವವನ್ನು ಕಂಡುಕೊಂಡಿತು. ಅಲ್ಲದೇ ರಾಜಸ್ವದಿಂದ ದಾನ-ದತ್ತಿ ಪಡೆಯುವಷ್ಟು ಪ್ರೌಢ ಮತ್ತು ಪ್ರವರ್ಧಮಾನಗೊಂಡಿತು. ಕ್ರಿ.ಶ. ೪೬೨-೬೩ರ ಹೊತ್ತಿಗೆ ಕದಂಬರ ಮೃಗೇಶವರ್ಮ ತಂದೆ ಶಾನ್ತಿವರ್ಮನ ಪರೋಕ್ಷ ವಿನಯಾರ್ಥವಾಗಿ ಹಲಸಿ (ಬೆಳಗಾವಿ ಜಿ)ಯಲ್ಲಿ ಜಿನಾಲಯವೊಂದನ್ನು ಕಟ್ಟಿಸಿ ಅಲ್ಲಿದ್ದ "ಯಾಪನೀಯ – ನಿರ್ಗ್ರನ್ಥ – ಕೂರ್ಚ್ಚಕ" ಸಂಘಗಳಿಗೆ ೩೩ ನಿವರ್ತನದಷ್ಟು ಭೂಮಿಯನ್ನು ದತ್ತಿಯಿತ್ತ."[೧೯] ದಿಗಂಬರ ಮತ್ತು ಶ್ವೇತಾಂಬರ ಸಂಪ್ರದಾಯಗಳಷ್ಟೇ ಯಾಪನೀಯಕ್ಕೂ ಸಮಾನ ಗೌರವ ಕೊಟ್ಟಿರುವುದು ಆ ಸಂಘದ ಪ್ರಸಿದ್ಧತೆಯನ್ನು ಅನುಸರಿಸಿಯೇ ಎಂಬುದನ್ನು ಗಮನಿಸಬೇಕು.

ಯಾಪನೀಯರ ಪ್ರಭಾವದಿಂದ ಹಾವೇರಿ ಪರಿಸರ ಹೊರತಾಗಿಲ್ಲ. ಬೃಹತ್ ಪರಲೂರು [ಇಂದಿನ ದೇವಗಿರಿ (ಹಾತಾ)] ಇವರ ಕೇಂದ್ರಗಳಲ್ಲೊಂದು. ಇಲ್ಲಿದ್ದ ಯಾಪನೀಯ ಮುನಿಗಳಿಗೆ ಕ್ರಿ.ಶ. ೪೬೦ರಲ್ಲಿ ಕದಂಬ ಯುವರಾಜ ದೇವವರ್ಮನು ಸಿದ್ಧಕೇದಾರದಲ್ಲಿ ೧೨ ನಿವರ್ತನ ಭೂಮಿಯನ್ನು ದಾನಮಾಡಿದ.[೨೦] ಕದಂಬರ ಕಾಲಕ್ಕಾಗಲೇ ಬೃಹತ್‌ಪರಲೂರಲ್ಲಿ ಯಾಪನೀಯರು ನೆಲೆಸಿದ್ದರೆಂದರೆ ಅವರು ೨-೩ನೆಯ ಶತಮಾನಗಳಲ್ಲಿ ಹಾವೇರಿ ಪರಿಸರದಲ್ಲಿ ಸಂಚರಿಸಿದ್ದರು ಎಂದು ವೇದ್ಯವಾಗುತ್ತದೆ. ಜಿನಮುನಿಗಳು ಪಾದಚಾರಿಗಳು ಆದ್ದರಿಂದ ಇವರು ಈ ಪರಿಸರದ ಸಾಕಷ್ಟು ಸ್ಥಳಗಳ ಮೂಲಕ ಪರಲೂರಿಗೆ ಬಂದಿರುತ್ತಾರೆ. ಅಂತೆಯೇ ಹಾವೇರಿ ಪರಿಸರದಲ್ಲಿ ವ್ಯಾಪಕವಾಗಿ ಜೈನಧರ್ಮ ಪ್ರಸಾರವಾಗಲೂ ಕಾರಣರಾದರು. ಒಟ್ಟಾರೆಯಾಗಿ ಕದಂಬ ಪೂರ್ವಯುಗದಲ್ಲಿಯೇ ಹಾವೇರಿ ಪರಿಸರದಲ್ಲಿ ಜೈನಧರ್ಮದ ಚಟುವಟಿಕೆಗಳು ರಸಗಟ್ಟಿದ್ದವು. ರಾಜ್ಯಾಶ್ರಯ ದೊರೆತ ನಂತರ ಈ ಚಟುವಟಿಕೆಗಳು ಇಡೀ ಪರಿಸರದಲ್ಲಿ ಹರಡಿಕೊಂಡವು.

### ೨. ಬನವಾಸಿ ಕದಂಬರು (ಕ್ರಿ.ಶ. ೩೨೫-೬೫೫).

ಒಂದು ಪ್ರಭುತ್ವ ಗಟ್ಟಿಗೊಳ್ಳಬೇಕಾದರೆ ಅದು ತನ್ನ ಪ್ರಜೆಗಳ ಬೌದ್ಧಿಕ ಜ್ಞಾನವಲಯಗಳಿಗೆ ಸ್ಪಂದಿಸಬೇಕಾಗುತ್ತದೆ. ಹಾಗಾದಾಗಲೇ ಪ್ರಜೆಗಳು ಪ್ರಭುತ್ವವನ್ನು ಒಪ್ಪುತ್ತಾರೆ ಮತ್ತು ಪ್ರೀತಿಸುತ್ತಾರೆ. ಒಂದು ರಾಜ್ಯದಲ್ಲಿ ವಿವಿಧ ನೆಲೆಗಟ್ಟಿನ ಜ್ಞಾನವಲಯದ ಸಂಸ್ಕೃತಿಗಳು ಪ್ರತಿಷ್ಠೆಯಾಗಿದ್ದು; ಅವುಗಳಿಗೆಲ್ಲ ರಾಜ ಮನ್ನಣೆ ಕೊಡಬೇಕಾಗುತ್ತದೆ. ಇಂಥಹ ಪ್ರಭುತ್ವ ಪೋಷಣೆಯ ಕೃಪೆಯಿಂದಾಗಿ ತನ್ನ ಬೌದ್ಧಿಕ ಮತ್ತು ಭೌತಿಕ ಪರಂಪರೆಯನ್ನು ಔನತ್ಯಕ್ಕೆ ಕೊಂಡೊಯ್ದದ್ದು ಜೈನಧರ್ಮ. ಕದಂಬರಿಂದ ಮೈಸೂರು ಒಡೆಯರವರೆಗೆ ಜೈನಧರ್ಮಕ್ಕೆ ಪೋಷಣೆ ದೊರೆತಿದೆ.

ಕನ್ನಡ ಸಂಸ್ಕೃತಿಯ ಆರಂಭದ ರಾಜಸ್ವ ಬನವಾಸಿ ಕದಂಬರದ್ದು. ಇವರು ಜೈನೇತರರು ಆದರೂ ಜೈನಸಂಸ್ಕೃತಿಯನ್ನು ಕರ್ನಾಟಕದಲ್ಲಿ ಕಾಪಿಟ್ಟುಕೊಂಡು ಬಂದವರು. ಅನ್ಯಮತಗಳ ಸಾಂಸ್ಕೃತಿಕ ಚಟುವಟಿಕೆಗಳಿಗೆ ನೀರೆರೆವುದು ರಾಜಧರ್ಮವೂ ಹೌದು. ಕದಂಬರು ಎಷ್ಟರಮಟ್ಟಿಗೆ ಜೈನಧರ್ಮದ ಪೋಷಕರಾಗಿದ್ದರೆಂದರೆ; ಜೈನ ಚಟುವಟಿಕೆಗಳಿಂದ ಇವರು ಜೈನರೇ ಎಂದು ಭಾಸವಾಗತೊಡಗಿದರು. ಬಹುಶಃ ಕದಂಬರ ಪ್ರಸಿದ್ಧ ದೊರೆ ಕಾಕುಸ್ಥ್ಸವರ್ಮನನ್ನು ಶ್ರುತಕೀರ್ತಿ ಎಂಬ ಜೈನಸೇನಾನಿ ಕಾಪಾಡಿದ ಸಲುವಾಗಿ ಕದಂಬರು ಜೈನಧರ್ಮವನ್ನು ಅಪಾರವಾಗಿ ಪ್ರೀತಿಸತೊಡಗಿದಂತೆ ಕಾಣುತ್ತದೆ. ಕಾಕುಸ್ಥ್ಸವರ್ಮ ಯಾವುದೋ ಒಂದು ಯುದ್ಧದಲ್ಲಿ ಹೋರಾಡುವಾಗ ಶತ್ರುಗಳು ಅವನ ಮೇಲೆರಗಿ ಕೊಲ್ಲುವಂತಹ ಸಂದರ್ಭದಲ್ಲಿ ಶ್ರುತಕೀರ್ತಿ (ಶೃತಕೀರ್ತ್ತಿ) ಎಂಬ ಸೇನಾಪತಿ ಅವನನ್ನು ಕಾಪಾಡುತ್ತಾನೆ. ಈ ಮಹದುಪಕ್ಕಾರಕ್ಕಾಗಿ ಕಾಕುಸ್ಥ್ಸವರ್ಮನು ಶ್ರುತಕೀರ್ತಿಗೆ 'ಖೇಟಗ್ರಾಮ'ವನ್ನು ಬಳುವಳಿಯಾಗಿ ನೀಡುವನು.

> "ಕದಂಬಾನಾಮ್ ಯುವರಾಜಃ ಶ್ರೀಕಾಕುಸ್ಥವರ್ಮ ಸ್ವವೈಜಯತೆ
> ಅಶೀತಿತಮೆ ಸಂವತ್ಸರೆ ಭಗವತಾಮರ್ಹಾತಾಮ್ ಸರ್ವಭೂತಶರಣ್ಯಾನಾಮ್
> ತ್ರೈಲೋಕ್ಯ ನಿಸ್ತಾರಕಾನಾಮ್॥ ಖೇಟಗ್ರಾಮೇ ಭೂಮಿ ಬಳೋವರ
> ಕ್ಷೇತ್ರಮ್ ಶೃತಕೀರ್ತ್ತಿ ಸೇನಾಪತಯೆ ॥ ಆತ್ಮನಿಸ್ತಾರಣಾರ್ತ್ಥಮ್ ದತ್ತವಾನ್ ॥[೨೧]

ಇದು ಹಲಸಿಯ ಶಾಸನ. ಹಲಸಿ ಕದಂಬರ ಎರಡನೆಯ ರಾಜಧಾನಿ. ಸದ್ಯ ಬೆಳಗಾವಿ ಜಿಲ್ಲೆಯ ಈ ಊರು ಕದಂಬರ ಕಾಲಕ್ಕೆ ಒಂದು ದೊಡ್ಡ ಜೈನಕೇಂದ್ರ. ತಮ್ಮ ಸಾಮ್ರಾಜ್ಯದ ಒಬ್ಬ ರಾಜನನ್ನು ಕಾಪಾಡಿದ ಸಲುವಾಗಿ ತದನಂತರದ ಕದಂಬ ದೊರೆಗಳು ಜೈನಧರ್ಮದ ಅಪರಿಮಿತ ಪೋಷಕರಾದರು.

ಹಲಸಿಯಲ್ಲಿ ಕದಂಬರ ೦೭ ತಾಮ್ರ ಶಾಸನಗಳು ದೊರೆತಿವೆ. ಇವು ಜೈನಶಾಸನಗಳು. ಜೈನಧರ್ಮದ ಮೇಲೆ ಕದಂಬರಿಗಿದ್ದ ಗೌರವ ಇಷ್ಟೊಂದು ಪ್ರಮಾಣದ ಶಾಸನಗಳಿಂದಲೇ ದೃಢವಾಗುತ್ತದೆ. ಕಾಕುಸ್ಥ್ಸವರ್ಮ ಶೃತಕೀರ್ತಿಗೆ ಗ್ರಾಮವೊಂದನ್ನು ದಾನಕೊಟ್ಟ ವಿಷಯ ಒಂದನೆಯ ಶಾಸನದಲ್ಲಿದ್ದರೆ,[೨೨] ತನ್ನ ತಂದೆ ಶಾನ್ತಿವರ್ಮನ ಸ್ಮರಣಾರ್ಥ ಅಥವಾ ಪರೋಕ್ಷ ವಿನಯಾರ್ಥ ಬಸದಿಯೊಂದನ್ನು ಕಟ್ಟಿಸಿ, ಇಲ್ಲಿದ್ದ ಯಾಪನೀಯ, ನಿರ್ಗ್ರನ್ಥ, ಕೂರ್ಚಕ ಸಂಘದ ಮುನಿಗಳ ಆಹಾರಕ್ಕಾಗಿ ಬಸದಿಯ ನಿತ್ಯ ಪೂಜೆಗಾಗಿ ಭೂಮಿಯನ್ನು ಮೃಗೇಶವರ್ಮ (ಕ್ರಿ.ಶ. ೪೫೫–೪೮೦) ದಾನ ಮಾಡಿದ ಸಂಗತಿ ಎರಡನೆಯ ತಾಮ್ರಶಾಸನದಲ್ಲಿದೆ.[೨೩] ಭಾನುವರ್ಮ (ಕ್ರಿ.ಶ. ೫೦೩–೫೩೮)ನ ಶಾಸನಗಳು,[೨೪] ಹರಿವರ್ಮ (ಕ್ರಿ.ಶ. ೫೧೮–೫೩೦) ಶಾಸನಗಳು[೨೫] ಹಲಸಿಯಲ್ಲಿದ್ದ ಜಿನಾಲಯಕ್ಕೆ, ವಿವಿಧ ಜಿನಮುನಿ ಸಂಘಗಳ ನಿತ್ಯ ಆಹಾರಕ್ಕೆ, ಪರ್ವಗಳಿಗೆ ದಾನ–ದತ್ತಿ ಕೊಟ್ಟ ವಿಚಾರಗಳನ್ನು ಸಾದರಪಡಿಸುತ್ತವೆ. ಕದಂಬರು ಜೈನಧರ್ಮಕ್ಕೆ ಕೊಟ್ಟ ಇನ್ನೊಂದು

ದೊಡ್ಡ ಕೊಡುಗೆ ಎಂದರೆ ಕಾಮಜಿನಾಲಯವನ್ನು ನಿರ್ಮಾಣ ಮಾಡಿದ್ದು. ಶಾನ್ತಿವರ್ಮನ ನೆನಪಿಗಾಗಿ ಮೃಗೇಶವರ್ಮ ಹಲಸಿಯಲ್ಲಿ ಜಿನಾಲಯವನ್ನು ಕಟ್ಟಿಸಿದಂತೆ, ಇವನ ಮಗ ರವಿವರ್ಮನೂ ಅಪ್ಪನಂತೆ ಗುಡ್ಡತಟಾಕ (ಗುಡ್ನಾಪುರ)ದಲ್ಲಿ ಕಾಮದೇವ (ಮನ್ಮಥ) ಬಾಹುಬಲಿಗೆ ಒಂದು ಬಸದಿಯನ್ನು ಕಟ್ಟಿದ. ಇದು ಇಡೀ ಕರ್ನಾಟಕದ ಮೊದಲ ಬಾಹುಬಲಿಯ ಜಿನಾಲಯ.[೨೬]

ಹಲಸಿಯಂಥ ಕದಂಬ ರಾಜಸ್ವ ಪೋಷಿತ ಮತ್ತೊಂದು ಜೈನಕೇಂದ್ರ ಹಾವೇರಿ ಪರಿಸರದ ಬೃಹತ್ ಪರಲೂರು. ಈ ಪರಿಸರದ ಮೊದಲ ಜೈನಕೇಂದ್ರವೂ ಇದೆ. ಇದು ಇಂದಿನ ದೇವಗಿರಿ. ಹಾವೇರಿ ಜಿಲ್ಲೆಗೆ ಸಂಬಂಧಿಸಿದ ಮೊಟ್ಟಮೊದಲು ಜೈನಶಾಸನ ದೇವಗಿರಿಯಲ್ಲಿಯೇ ದೊರೆತಿದೆ. ಇದೊಂದು ತಾಮ್ರಶಾಸನವಾಗಿದ್ದು ಕದಂಬ ರಾಜ ಮೃಗೇಶವರ್ಮನ ಕಾಲದ್ದು. ಒಟ್ಟು ಕದಂಬರ ಮೂರು ತಾಮ್ರಶಾಸನಗಳು ದೇವಗಿರಿಯಲ್ಲಿ ದೊರೆತಿವೆ. ಮೊದಲನೆಯದು ಮೃಗೇಶವರ್ಮನಿಗೆ ಸಂಬಂಧಿಸಿದರೆ; ಇನ್ನೊಂದು ವಿಜಯ ಶಿವಮೃಗೇಶವರ್ಮನಿಗೆ, ಮತ್ತೊಂದು ಯುವರಾಜ ದೇವವರ್ಮನಿಗೆ ಸಂಬಂಧಿಸಿದ್ದು. ಬೃಹತ್ ಪರಲೂರನ್ನು ಹಲಸಿಯಂತೆಯೆ ಒಂದು ದೊಡ್ಡ ಜೈನ ಕೇಂದ್ರವನ್ನಾಗಿ ಮಾಡಿದ, ಪೋಷಿಸಿದ ಕದಂಬರು ಈ ಊರನ್ನು ತಮ್ಮ ಮತ್ತೊಂದು ರಾಜಧಾನಿಯನ್ನಾಗಿ ಮಾಡಿಕೊಂಡರು.

ಬೃಹತ್‌ಪರಲೂರು ಪ್ರಾಕೃತಿಕವಾಗಿ ನಿರ್ಮಾಣಗೊಂಡ ಗುಡ್ಡಗಳ ಮೇಲಿರುವ ಊರು. ಮೂರು ಗುಡ್ಡಗಳ ಸಮಾಗಮದಿಂದ ಈ ಊರಿಗೆ ಸಂಸ್ಕೃತಿಕರಣವಾದ 'ತ್ರೀಪರ್ವತ' ಎಂಬ ಪ್ರಾಕೃತಿಕನಾಮ ಬಂದಿರಲಿಕ್ಕೂ ಸಾಕು. ಎತ್ತರ ಪ್ರದೇಶ, ಹತ್ತಿರದಲ್ಲಿ ವರದಾ ನದಿಯ ನೀರಿನ ಸೌಲಭ್ಯದಿಂದ ಪರಲೂರು ಕದಂಬರ ಇನ್ನೊಂದು ರಾಜಧಾನಿಯಾಯ್ತು. ವಿವಿಧ ವಿದ್ವಾಂಸರು ಈ ತ್ರಿಪರ್ವತವು ಉಚ್ಚಂಗಿ, ಚಂದ್ರವಳ್ಳಿ ಸಮೀಪದ ಧವಳಪ್ಪನಗುಡ್ಡ, ಬೇಲೂರು, ಸವದತ್ತಿ ತಾಲ್ಲೂಕಿನ ಮುರಗೋಡ, ಮುಳುಗುಂದ ಎಂಬುದಾಗಿ ಅಭಿಪ್ರಾಯಪಟ್ಟಿದ್ದಾರೆ.[೨೭] ನನ್ನ ಸಂಶೋಧನೆಯಲ್ಲಿ ಕಂಡುಕೊಂಡ ಸತ್ಯದ ಪ್ರಕಾರ ಇಂದಿನ ದೇವಗಿರಿಯೆ (ಪರಲೂರು) ಅಂದಿನ ತ್ರೀಪರ್ವತವಾಗಿತ್ತು. ಇದಕ್ಕೆ ಆಧಾರವಾಗಿದ್ದು ದೇವವರ್ಮನ ಇದೇ ದೇವಗಿರಿಯ ಶಾಸನ.

ಒಂದನೆಯ ಕೃಷ್ಣವರ್ಮ (ಕ್ರಿ.ಶ. ೪೩೦–೪೬೦)ನ ಮಗ ಯುವರಾಜ ದೇವವರ್ಮನ ದೇವಗಿರಿ [(ಬೃಹತ್ ಪರಲೂರು (ಪರಲೂರು) > ತ್ರೀಪರ್ವತ)] ಶಾಸನದಲ್ಲಿ "ಶ್ರೀಕೃಷ್ಣನೃಪ ಪುತ್ರೇಣ ಕದಮ್ಬಕುಲಕೇತುನಾ ರಣಪ್ರಿಯೇಣ ದೇವೇನ ದತ್ತಾ ಭೂಮಿ ತ್ರಿಪರ್ವ್ವತೇ॥"[೨೮] ಎನ್ನುವ ಒಕ್ಕಣಿಯಿದೆ. ಇದು ದೇವವರ್ಮ ತ್ರೀಪರ್ವತದಲ್ಲಿ ಇದ್ದುದಾಗಿಯೇ ಸೂಚಿಸುತ್ತದೆ. ಇದೇ ಶಾಸನದ ಮುಂದುವರೆದ ಬರಹವು "ದಯಾಮೃತ ಸುಖಸ್ವಾದಪೂತ ಪುಣ್ಯಗುಣಪ್ಸುನಾ ದೇವವರ್ಮ್ಮೈಕವೀರೇಣದತ್ತ ಜೈನಾಯ ಭೂರಿಯಂ॥"[೨೯] ಎಂದಿದೆ. ಈ ವಾಕ್ಯಕ್ಕೆ ಡಾ.ಬಿ.ಆರ್. ಗೋಪಾಲ ಅವರು "ಶಾಸನದಲ್ಲಿ ಕೊನೆಯಲ್ಲಿ ಮತ್ತೊಮ್ಮೆ ದಾನದ ಪ್ರಸ್ತಾಪವನ್ನು ಸೂಕ್ಷ್ಮವಾಗಿ

ರಣಪ್ರಿಯನೆನಿಸಿದ ದೇವ (ದೇವವರ್ಮ)ನು ಜೈನ (ಜಿನ)ನಿಗೆ (ಜೈನಾಯ) ತ್ರಿಪರ್ವತದಲ್ಲಿ ಭೂಮಿಯನ್ನು ಕೊಟ್ಟನೆಂದು ಪುನರುಚ್ಚರಿಸಲಾಗಿದೆ." ಎಂದು ಭಾಷ್ಯ ಬರೆದಿದ್ದಾರೆ.

ಮೇಲಿನ ಚರ್ಚೆಯಲ್ಲಿ ಗಮನಿಸಬೇಕಾದ ಮುಖ್ಯ ಸಂಗತಿ 'ಜಿನ' ಎಂಬ ನಾಮವನ್ನು. ತ್ರೀಪರ್ವ್ವತದಲ್ಲಿರುವ ಜಿನ (ಜೈನಾಯ) ಎಂದರೆ ಇಲ್ಲಿನ ಬಸದಿಯಲ್ಲಿರುವ ಜಿನ (ಮೂರ್ತಿ ರೂಪದ) ಎಂದೇ ಅರ್ಥ. ಆದಿಕದಂಬರ ಕಾಲಕ್ಕೆ ಜಿನಾಲಯವಿದ್ದ ಏಕಮಾತ್ರ ತ್ರೀಪರ್ವ್ವತ ಎಂದರೆ ಅದು ಬೃಹತ್ ಪರಲೂರು (ದೇವಗಿರಿ) ಮಾತ್ರ. ಆದ್ದರಿಂದ ಬೃಹತ್ ಪರಲೂರೆ (ದೇವಗಿರಿ) ತ್ರೀಪರ್ವ್ವತವಾಗಿತ್ತು ಎಂದು ಸ್ಪಷ್ಟವಾಗಿ ಹೇಳಬಹುದು. ವಿದ್ವಾಂಸರು ಹೇಳಿದ ಊರುಗಳಾದವು ತ್ರೀಪರ್ವ್ವತವಾಗಲಾರವು. ಏಕೆಂದರೆ ಕದಂಬರ ಕಾಲಕ್ಕೆ ಅಲ್ಲಿ ಜಿನಾಲಯವಿದ್ದ ಯಾವ ಕುರುಹುಗಳು ಲಭ್ಯವಿಲ್ಲ. ಮುಳುಗುಂದದಲ್ಲಿ ಜಿನಾಲಯಗಳಿದ್ದರೂ ಅವು ಹತ್ತನೆಯ ಶತಮಾನಕ್ಕೆ ಸಂಬಂಧಿಸಿದವು. ಆದ್ದರಿಂದ ತ್ರೀಪರ್ವ್ವತ ಇಂದಿನ ದೇವಗಿರಿಯಾಗಿತ್ತು. ಇದು ಕದಂಬರ ಇನ್ನೊಂದು ರಾಜಧಾನಿಯಾಗಿದ್ದು, ಇಲ್ಲಿಂದಲೇ ಯುವರಾಜ ದೇವವರ್ಮ ಆಳ್ವಿಕೆ ನಡೆಸುತ್ತಿದ್ದ. ಇಲ್ಲಿರುವ ಚೈತ್ಯಾಲಯಕ್ಕೆ ಮೃಗೇಶವರ್ಮ ಮತ್ತು ವಿಜಯ ಶಿವಮೃಗೇಶ ವರ್ಮರು ಭೂದಾನ ಮಾಡಿದಂತೆ ದೇವರ್ಮನೂ ಸಹ ತ್ರೀಪರ್ವ್ವತದ ಚೈತ್ಯಾಲಯದ ಜೀರ್ಣೋದ್ಧಾರಕ್ಕೆ ಇಲ್ಲಿದ್ದ ವಿವಿಧ ಮುನಿಸಂಘದವರಿಗೆ ಭೂಮಿಯನ್ನು ದಾನವಾಗಿ ನೀಡುತ್ತಾನೆ.

ಐತಿಹಾಸಿಕತೆಯನ್ನು ತನ್ನೊಡಲಲ್ಲಿ ಹುದುಗಿಸಿಕೊಂಡಿಟ್ಟುಕೊಂಡಿರುವ ದೇವಗಿರಿ ಹಾವೇರಿಯಿಂದ ಉತ್ತರಕ್ಕೆ ೦೮ ಕಿ.ಮೀ. ದೂರದಲ್ಲಿದೆ. " ದೇವಗಿರಿ ಎಂಬುದು ಅನಂತರ ರೂಢಿಗೆ ಬಂದಿರುವ ಹೆಸರು. ಇದರ ಹಳೆಯ ಹೆಸರು ಹಾಗೂ ಹಿಂದಣ ಹೆಸರು 'ಪರಲೂರು'. ಈ ಹೆಸರಿನ ಎರಡು ಊರುಗಳಿದ್ದುದರಿಂದ ಮತ್ತು ಇದು ತುಸು ದೊಡ್ಡದಾಗಿದ್ದುದರಿಂದ ಈ ಗ್ರಾಮಕ್ಕೆ ಹಿರಿಯ(ಹಿರೇ)ಪರಲೂರು ಎಂದು ಹೆಸರಾಯಿತು. ಇದನ್ನು ಸಂಸ್ಕೃತದಲ್ಲಿ 'ಬೃಹತ್ ಪರಲೂರು' ಎಂದು ನಮೂದಿಸಿದರು."[೩೦] ಈ ಬೃಹತ್‌ಪರಲೂರು ಆದಿಕದಂಬರ ಕಾಲದಲ್ಲಿ ತ್ರೀಪರ್ವ್ವತ ಎಂಬ ಇನ್ನೊಂದು ಪ್ರಾಕೃತಿಕ ಉಪನಾಮ ಪಡೆದು ಜನಬಳಕೆಯಲ್ಲಿ ಪರಲೂರಾಗಿ ಉಳಿಯಿತು. ಪರಲ್ ಎಂದರೆ ಕಲ್ಲಿನ ಸಣ್ಣ ಚೂರು; ಹರಳು; ನೊರಜು ವಜ್ರ ಮೊದಲಾದ ಬಹಳ ಬೆಲೆಬಾಳುವ ಮಣಿ; ರತ್ನ; ಚೂರು ಮುಂತಾದ ಅರ್ಥಗಳನ್ನು ನಿಘಂಟಿನಲ್ಲಿ ಕೊಡಲಾಗಿದೆ.[೩೧] ಇಲ್ಲಿ ಕೊಟ್ಟಿರುವ ಅರ್ಥಗಳ ಪ್ರಕಾರ ಸಣ್ಣ ಕಲ್ಲಿನ ಚೂರುಗಳಿಂದ ಆವೃತವಾದ, ವಜ್ರ, ಮಣಿ, ರತ್ನ, ಹರಳುಗಳು ದೊರೆಯುವ ಪ್ರದೇಶವೆ ಪರಲೂರು ಎಂದಿಟ್ಟುಕೊಳ್ಳಬಹುದು. ಅಮೂಲ್ಯವಾದ ವಜ್ರ ಮಣಿರತ್ನಗಳು ದೊರೆಯುವ ಪ್ರದೇಶವೆಂದು ಕದಂಬರು ಇದನ್ನು ತಮ್ಮ ಇನ್ನೊಂದು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರೇ ಎಂಬುದಕ್ಕೆ ಖಚಿತ ಆಧಾರಗಳಿಲ್ಲ. ಶಾಸನ ಉಲ್ಲೇಖಿತ ಬೃಹತ್‌ಪರಲೂರು ತದನಂತರ ಶಾಸನಗಳಲ್ಲಿ ಪರಲೂರು[೩೨] ಎಂದು ಕರೆಯಲ್ಪಟ್ಟಿದೆ. ಹನ್ನೆರಡನೆಯ ಶತಮಾನ ಬರುವ ಹೊತ್ತಿಗೆ ಪರಲೂರು > ದೇವಗಿರಿ[೩೩] ಯಾಯ್ತು. ಕದಂಬ

ಯುವರಾಜ ದೇವವರ್ಮನ ಹೆಸರಿಂದ ದೇವಗಿರಿ ಎಂಬ ಹೆಸರು ಬಂದಿರುವುದಕ್ಕೆ ಆಧಾರಗಳು ಅಲಭ್ಯ.

ಆದಿಕದಂಬ ರಾಜಸ್ವದ ಸಂಸ್ಕೃತಭೂಯಿಷ್ಠ ೦೩ ತಾಮ್ರಶಾಸನಗಳು ದೇವಗಿರಿಯಲ್ಲೇ ದೊರೆತಿವೆ. ಇವು ಹಾವೇರಿ ಪರಿಸರದ ಜೈನಧರ್ಮದ ಇತಿಹಾಸ ದಾಖಲಿಸುವ ಗಟ್ಟಿದಡಗಳು. ಮೃಗೇಶವರ್ಮನ ಮೂರನೆಯ ವರ್ಷದ ಆಳ್ವಿಕೆ (ಕ್ರಿ.ಶ. ೪೫೮)ಯ ಸಂದರ್ಭದಲ್ಲಿ ರಚನೆಯಾದ ದೇವಗಿರಿಯ ಶಾಸನವೊಂದು ಕ್ರಿ.ಶ. ೪೫೮ರ ಕಾಲಕ್ಕಾಗಲೇ ದೇವಗಿರಿಯಲ್ಲೊಂದು ಚೈತ್ಯಾಲಯವಿದ್ದುದಾಗಿ ಹೇಳುತ್ತದೆ.[೩೪] ಈ ಚೈತ್ಯಾಲಯದ ನಿತ್ಯಶುದ್ಧಿಗೆ, ಉಪಲೇಪನಕ್ಕೆ, ಅರ್ಚನೆಗೆ, ಜೀರ್ಣೋದ್ಧಾರಕ್ಕೆ ೪೦ ನಿವರ್ತನ ಕಪ್ಪು ಭೂಮಿಯನ್ನು, ಚೈತ್ಯಾಲಯದ ಹೊರಗೆ ೦೫ ನಿವರ್ತನ ಭೂಮಿ, ಅಂಗಳಕ್ಕೆ ೦೧ ನಿವರ್ತನ ಭೂಮಿಯನ್ನು ಒಟ್ಟು ೪೬ ನಿವರ್ತನ ಭೂಮಿಯನ್ನು ಮೃಗೇಶವರ್ಮ ದಾನಬಿಟ್ಟ. ಒಬ್ಬ ರಾಜನಿಂದ ಇಷ್ಟೊಂದು ಪ್ರಮಾಣದ ಭೂದಾನ ಒಂದು ಚೈತ್ಯಾಲಯಕ್ಕೆ ಸಂದಿರುವುದನ್ನು ಗಮನಿಸಿದಾಗ ಆ ಚೈತ್ಯಾಲಯ ಐತಿಹಾಸಿಕವೂ, ಪ್ರಸಿದ್ಧತೆಯನ್ನು ಪಡೆದಿತ್ತು ಎಂಬುದನ್ನು ಅರಿಯಬೇಕಾಗುತ್ತದೆ. ಈ ಪ್ರಸಿದ್ಧತೆಯೇ ವಿವಿಧ ಜಿನಮುನಿಗಳ ಸಂಘ ತನ್ನತ್ತ ಬರಮಾಡಿಕೊಂಡಿತು. ಇದು 'ರಾಜಪೋಷಿತ ಜಿನಾಲಯ' ಎಂಬುದಕ್ಕೆ ಎರಡು ಮಾತಿಲ್ಲ. ತದನಂತರ ಕದಂಬ ದೊರೆಗಳಿಂದಲೂ ಚೈತ್ಯಾಲಯಕ್ಕೆ ದತ್ತಿಗಳು ಸಂದಿರುವುದರಿಂದ ಇದು 'ಕದಂಬ ರಾಜ್ಯ ಪೋಷಿತ ಜಿನಾಲಯ'ವೇ ಸರಿ

ದೇವಗಿರಿಗೆ ಸಂಬಂಧಿಸಿದ ಎರಡನೆಯ ತಾಮ್ರಶಾಸನ ವಿಜಯಶಿವಮೃಗೇಶವರ್ಮನದ್ದು.[೩೫] ಈ ಶಾಸನ ಪರಲೂರ ಬಗ್ಗೆ ಮಹತ್ತರವಾದ ಅಂಶಗಳನ್ನು ಒದಗಿಸುತ್ತದೆ. ಈ ಶಾಸನ ರಚನೆಯಾಗುವ ವೇಳೆಗಾಗಲೇ ಪರಲೂರಲ್ಲಿ ಜೈನ ವಿವಿಧ ಮುನಿಸಂಘಗಳು ನೆಲೆಗೊಂಡಿದ್ದವು. ಹಲಸಿಯಂತೆಯೇ ಕದಂಬರು ಜಿನಮುನಿಗಳಿಗೆ ಆಶ್ರಯ ಕೊಟ್ಟಂತೆ ಪರಲೂರಲ್ಲೂ ಕೊಟ್ಟರು. ಅಂತೆಯೇ ಇಲ್ಲಿ ಶ್ವೇತಪಟ (ಶ್ವೇತಾಂಬರ), ನಿರ್ಗ್ರಂಥ (ದಿಗಂಬರ) ಮುನಿಗಳ ಸಂಘಗಳು ಸ್ವಾಧ್ಯಾಯ-ತಪದಲ್ಲಿ ನಿರತವಾಗಿದ್ದವು. ಹೀಗಿರುವಾಗ ವಿಜಯ ಶಿವಮೃಗೇಶವರ್ಮನು 'ಕಾಲವೋಜ್ಞೂ' ಎಂಬ ಗ್ರಾಮದ ಆದಾಯವನ್ನು ಮೂರು ಭಾಗ ಮಾಡಿ ಒಂದನ್ನು ಅರ್ಹಮಹಾ ಜಿನೇಂದ್ರನಿಗೆ (ಚೈತ್ಯಾಲಯಕ್ಕೆ); ಇನ್ನೊಂದನ್ನು ಶ್ವೇತಪಟ ಮಹಾಶ್ರಮಣ ಸಂಘಕ್ಕೆ; ಮತ್ತೊಂದನ್ನು ನಿರ್ಗ್ರಂಥ ಮಹಾಶ್ರಮಣ ಸಂಘದ ಉಪಭೋಗಕ್ಕೆ ಕೊಟ್ಟ. ತದನಂತರ ಬಂದ ಯುವರಾಜ ದೇವರ್ಮನು ದೇವಗಿರಿಯ ಮೂರನೆಯ ತಾಮ್ರಶಾಸನ[೩೬]ದಲ್ಲಿ ಉಲ್ಲೇಖಿಸಿದಂತೆ ಪರಲೂರಲ್ಲಿದ್ದ ಅರ್ಹತಃಭಗವತ ಚೈತ್ಯಾಲಯಕ್ಕೆ ಮತ್ತು ಯಾಪನೀಯ ಶ್ರಮಣ ಸಂಘಕ್ಕೆ ಸಿದ್ಧಕೇದಾರದಲ್ಲಿ ೧೨ ನಿವರ್ತನ ಭೂಮಿಯನ್ನು ದಾನಮಾಡಿದ.[೩೭] ಈ ಎಲ್ಲ ಬೆಳವಣಿಗೆಗಳ ಜೊತೆಗೆ ಪರಲೂರದ್ದೇ ಆದ 'ಪರಲೂರು ಗಣ' ಎಂಬ ಜಿನಮುನಿಗಣ ಹುಟ್ಟಿಕೊಳ್ಳುತ್ತದೆ.[೩೮] ಇವೆಲ್ಲಾ ಅಂಶಗಳಿಂದ 'ಪರಲೂರು' ಜೈನರ ಒಂದು ದೊಡ್ಡ ಶ್ರದ್ಧಾಕೇಂದ್ರವಾಗಿತ್ತು ಎಂದೇ ಹೇಳಬಹುದು.

ಆದಿಕದಂಬರು ಪರಲೂರಲ್ಲಿರುವ ಚೈತ್ಯಾಲಯ ಮತ್ತು ವಿವಿಧ ಶ್ರಮಣ ಸಂಘಗಳಿಗೆ ಅಪಾರ ದಾನ-ದತ್ತಿಗಳನ್ನು ಅರ್ಪಿಸುವುದರ ಮೂಲಕ ಹಾವೇರಿ ಪರಿಸರದಲ್ಲಿ ಜೈನಧರ್ಮವನ್ನು ಉಚ್ಛ್ರಾಯ ಹಂತಕ್ಕೆ ಕೊಂಡೊಯ್ದರು. ಪರಲೂರು ಕೇವಲ ಅವರ ಉಪ ರಾಜಧಾನಿಯಾಗಿ ಅಷ್ಟೇ ಆಗದೇ ಅದು ಹಾವೇರಿ ಪರಿಸರದ ಜೈನಧರ್ಮ ಚಟುವಟಿಕೆಗಳ ರಾಜಧಾನಿಯೂ ಆಯಿತು. ಇಡೀ ಮಧ್ಯಕರ್ನಾಟಕದ ಜೈನ ಶ್ರದ್ಧಾಕೇಂದ್ರವಾಗಿತ್ತೆಂದರೂ ಅತಿಶಯವಾಗುವುದಿಲ್ಲ. ಕದಂಬರ ಆಳ್ವಿಕೆ ಈ ಪ್ರದೇಶದಲ್ಲಿ ಇಳಿಮುಖಗೊಂಡರೂ ಪರಲೂರು ಮಾತ್ರ ಹನ್ನೆರಡನೆಯ ಶತಮಾನದವರೆಗೂ ಒಂದು ಜೈನ ತೀರ್ಥಕ್ಷೇತ್ರವಾಗಿ ಬೆಳೆಯಿತು. ಈ ಕೀರ್ತಿಗೆ ಕದಂಬರ ರಾಜಾಶ್ರಯವೇ ಕಾರಣ.

## ೦೩. ಬಾದಾಮಿಯ ಚಲುಕ್ಯರು (ಕ್ರಿ.ಶ. ೫೦೦-೭೫೭).

ಜೈನಧರ್ಮ ಎಂಬ ವೃಕ್ಷವನ್ನು ಪೋಷಣೆ ಮಾಡಿದವರು ಆದಿಕದಂಬರು. ಈ ವೃಕ್ಷಕ್ಕೆ ಮತ್ತಷ್ಟು ಬಲಸಂವರ್ಧನೆ ತಂದುಕೊಟ್ಟವರು ಬಾದಾಮಿ ಚಲುಕ್ಯರು. ಇವರು "ಆರಂಭದಲ್ಲಿ ವೈಷ್ಣವರಾಗಿದ್ದು ಮುಂದೆ ವಿಕ್ರಮಾದಿತ್ಯ ೧ನೆಯ ಕಾಲದಿಂದ ಶೈವರಾದರು. ಆದರೆ ಎಲ್ಲ ಸಂಪ್ರದಾಯಗಳನ್ನು ಅವರು ಪ್ರೋತ್ಸಾಹಿಸಿದರು".[೩೯] ರಾಜಮನ್ನಣೆಯ ಕೃಪೆಗೆ ಪಾತ್ರವಾಗಿದ್ದ ಜೈನಧರ್ಮಕ್ಕೆ ಚಲುಕ್ಯರು ಕೊಟ್ಟ ದೊಡ್ಡ ಕೊಡುಗೆ ಎಂದರೆ ಬಾದಾಮಿ ಮತ್ತು ಐಹೊಳೆಯಲ್ಲಿ ಗುಹಾಂತರ ಬಸದಿಗಳನ್ನು ನಿರ್ಮಿಸಿದ್ದು. ಬಾದಾಮಿಯಲ್ಲಿ ನಾಲ್ಕು ಗುಹಾಂತರ ದೇವಾಲಯಗಳಿದ್ದು, "ನಾಲ್ಕನೆಯ ಗುಹೆಯು ಒಂದು ಜಿನಾಲಯ. ಇದು ಇಲ್ಲಿಯ ಗುಹೆಗಳ ಪೈಕಿ ಎಲ್ಲಾ ಗುಹೆಗಳಿಗೂ ಮೇಲ್ಭಾಗದಲ್ಲಿದೆ. ಆದುದರಿಂದ ಇದಕ್ಕೆ ಮೇಗಣ ಬಸದಿಯೆಂದು ಕರೆಯುತ್ತಿದ್ದು ಕಾಲಕ್ರಮೇಣ ಮೇಣಬಸದಿ ಎಂಬ ಹೆಸರು ರೂಢಿಗೆ ಬಂದಿರುವುದು ವ್ಯಕ್ತವಾಗುತ್ತದೆ. ಈ ಗುಹೆಯ ಕಾಲ ಕ್ರಿ.ಶ. ೬ನೇ ಶತಮಾನವೆಂದೂ ಮತ್ತು ಈ ಊರು ಎಲ್ಲಾ ಗುಹೆಗಳಿಗಿಂತಲೂ ಅತೀ ಪ್ರಾಚೀನವೆಂಬುದು ಕೆಲವು ವಿದ್ವಾಂಸರ ಅಭಿಪ್ರಾಯ."[೪೦]

ಬಾದಾಮಿಯ ಮೇಣಬಸದಿ ಕರ್ನಾಟಕದ ಮೊಟ್ಟಮೊದಲ ಗುಹಾಂತರ ಬಸದಿ. ಈಗಲೂ ಸುಸ್ಥಿತಿಯಲ್ಲಿರುವ ಪ್ರಾಚೀನ ಜಿನಾಲಯಗಳಲ್ಲಿ ಇದು ಒಂದು. ಇದು ಒಂದು ಆದಿನಾಥ ಜಿನಾಲಯ. ಗರ್ಭಗೃಹದಲ್ಲಿ ಆದಿನಾಥ ತೀರ್ಥಂಕರ ಬಿಂಬವಿದೆ. ನವರಂಗದ ಪ್ರಾಂಗಳ ಭಿತ್ತಿಗಳಲ್ಲಿ ಪಾರ್ಶ್ವನಾಥ, ಮಹಾವೀರ, ಬಾಹುಬಲಿ, ಪದ್ಮಾವತಿ ಯಕ್ಷಿ ಮತ್ತು ಚೌವ್ವೀಸ ತೀರ್ಥಂಕರ ಉಬ್ಬು ಶಿಲ್ಪಗಳ ಅನಾವರಣವಿದೆ. ಮಂದಸ್ಮಿತ ಮೊಗದ ಬಹುಬಲಿ ಶಿಲ್ಪ ಅತ್ಯಾಕರ್ಷಕವಾಗಿದ್ದು, ಕಾಲುಗಳನ್ನು ಬಳಸಿದ ಬಳ್ಳಿಗಳು, ಹೆಗಲಮೇಲೆ ಜಡೆಯುಕ್ತ ಅಪರೂಪದ ಶಿಲ್ಪವಿದ್ದು. ಉತ್ತರ ಕರ್ನಾಟಕದ ಮೊದಲ ಹಾಗೂ ಈಗಲೂ ಉಳಿದುಬಂದಿರು ಬಾಹುಬಲಿ ಶಿಲ್ಪವೆಂದರೆ ಅದು ಬಾದಾಮಿ ಬಾಹುಬಲಿ ಶಿಲ್ಪವಾಗಿದೆ. ಇದೇ ರೀತಿ ಮತ್ತೊಂದು ಗುಹಾಂತರ ಬಸದಿ ಐಹೊಳೆಯಲ್ಲೂ ಇದೆ. ಅದನ್ನೂ ಸಹ ಬಾದಾಮಿಯ ಚಲುಕ್ಯರೆ ಕಟ್ಟಿಸಿದ್ದು.

ಚಲುಕ್ಯರ ರಾಜಧಾನಿಗೆ ಹತ್ತಿರ ಪ್ರದೇಶ ಐಹೊಳೆ. ಇದೂ ಸಹ ದೇವಾಲಯಗಳ ತೊಟ್ಟಿಲು. ಇಡೀ ಐಹೊಳೆಯಲ್ಲಿ ಕಾಲವನ್ನು ಉಲ್ಲೇಖಿಸುವ ಮೊದಲ ದೇವತಾಸ್ಮಾರಕ ಮೇಗುತಿ ಬಸದಿ. ಇದನ್ನು ಪೊಲೆಕೇಶಿ (ಕ್ರಿ.ಶ. ೬೧೦–೪೨)ಯ ಸೇನಾನಿ ಮತ್ತು ಆಪ್ತಕವಿ ರವಿಕೀರ್ತಿಯು ಕ್ರಿ.ಶ. ೬೩೪–೩೫ರಲ್ಲಿ ಕಟ್ಟಿಸಿದ. ಜೊತೆಗೆ ತಾನೇ ಈ ಕುರಿತಾಗಿ ಒಂದು ಶಾಸನವನ್ನು ಬರೆದು ಬಸದಿಯ ಹೊರಗೆ ಹಾಕಿಸಿದ. ಇದೊಂದು ಪೊಲೆಕೇಶಿಯ ಪ್ರಶಸ್ತಿ ಶಾಸನವೂ ಹೌದು. ಪೊಲೆಕೇಶಿಯಿಂದ ಈ ಜಿನಾಲಯಕ್ಕೆ ಹಲವು ಗ್ರಾಮಗಳು ದತ್ತಿಯಾಗಿ ಸಂದವು. ಈ ಬಸದಿಯ ವಾಸ್ತುಶಿಲ್ಪ ಶ್ರೇಷ್ಠ ಮಾದರಿಯದು. ಬಾದಾಮಿ ಮತ್ತು ಐಹೊಳೆಗಳಂತೆ ಕೊಪ್ಪಳ, ಪಟ್ಟದಕಲ್ಲು, ಅಣ್ಣಿಗೇರಿ, ಲಕ್ಷ್ಮೇಶ್ವರ, ಹೂಲಿ, ಹಳ್ಳೂರು, ಹಲಸಿ ಇತ್ಯಾದಿ ಜೈನಕೇಂದ್ರಗಳು ಬಾದಾಮಿ ಚಲುಕ್ಯರಿಂದ ಪೋಷಣೆಯಾದವು. ಅಂತೆಯೇ ಹಾವೇರಿ ಪ್ರದೇಶದಲ್ಲಿ ಇವರ ಕಾಲಾವಧಿಯಲ್ಲಿ ಜೈನಚಟುವಟಿಕೆಗಳು ನಡೆದಿದ್ದವು ಎನ್ನುವುದಕ್ಕೆ ಶಿಗ್ಗಾವಿ ಮತ್ತು ಅಡೂರಲ್ಲಿ ದೊರೆತ ಶಾಸನಗಳು ಪ್ರಮಾಣವಾಗಿ ನಿಲ್ಲುತ್ತವೆ.

ಚಲುಕ್ಯರಿಗೆ ಸಂಬಂಧಿಸಿದ ಒಟ್ಟು ಎರಡು ಜೈನಶಾಸನಗಳು ಹಾವೇರಿ ಪರಿಸರದಲ್ಲಿ ಲಭ್ಯವಿವೆ. ಒಂದು ಶಿಗ್ಗಾವಿ (ಶಿತಾ)ಯ ತ್ರಾಮಶಾಸನ; ಇನ್ನೊಂದು ಅಡೂರಿನ (ಹಾನತಾ) ಶಿಲಾಶಾಸನ. ಶಿಗ್ಗಾವಿಯ ಶಾಸನ ಕ್ರಿ.ಶ. ೭೦೭ರಲ್ಲಿ ರಚನೆಯಾಗಿದ್ದು ವಿಜಯಾದಿತ್ಯನ ಆಡಳಿತಾವಧಿಯದ್ದು.[೪೧] ಕೀರ್ತಿವರ್ಮ (ಕ್ರಿ.ಶ. ೭೪೫–೪೭)ನ ಆಡಳಿತಾವಧಿಯ ಆಡೂರಿನ ಶಾಸನ ಕ್ರಿ.ಶ. ೭೫೦ರಲ್ಲಿ ರಚನೆಯಾಗಿದೆ.[೪೨] ಇವುಗಳಲ್ಲಿ ಮೊದಲನೆಯ ಶಾಸನ ಸಂಸ್ಕೃತ ಭಾಷೆ ಕನ್ನಡ ಲಿಪಿಯನ್ನು ಹೊಂದಿದ್ದರೆ; ಎರಡನೆಯದು ಕನ್ನಡ ಮತ್ತು ಸಂಸ್ಕೃತ ಭಾಷೆ, ಕನ್ನಡ ಲಿಪಿ ಹೊಂದಿರುವ ಹಾವೇರಿ ಪರಿಸರದ ಮೊದಲ ಜಿನಶಾಸನ.

ಚಲುಕ್ಯ ಚಕ್ರಿ ವಿಜಯಾದಿತ್ಯ ರಾಜ್ಯಭಾರ ಮಾಡುವ ಸಂದರ್ಭದಲ್ಲಿ ಬನವಾಸಿಯನ್ನು ಆಳುಪರ ಗುಣಸಾಗರರ ಮಗನಾದ ಚಿತ್ರವಾಹನ ಆಳುತ್ತಿದ್ದ. ಇವನು ಚಕ್ರವರ್ತಿ ವಿಜಯಾದಿತ್ಯನಲ್ಲಿ ವಿನಂತಿಸಿಕೊಂಡು, ತನ್ನ ಹೆಂಡತಿಯಾದ ಕುಂಕುಮದೇವಿ ಕಟ್ಟಿಸಿದ 'ಪುರಿಗೆರೆ' (ಪುಲಿಗೆರೆ > ಲಕ್ಷ್ಮೇಶ್ವರ) ಬಸದಿ[೪೩]ಗೆ ಗುಡ್ಡಿಗೆರೆ (ಗುಡಗೇರಿ) ಗ್ರಾಮವನ್ನು ದಾನಮಾಡಿಸಿದ್ದು ಶಿಗ್ಗಾವಿ ತಾಮ್ರಶಾಸನದ ಮುಖ್ಯಸಾರ.

ಅಳುಪರ ಚಿತ್ರವಾಹನ ದಕ್ಷ ರಾಜತಾಂತ್ರಿಕ. ಇವನು ಚಲುಕ್ಯ ಚಕ್ರಿ ವಿಜಯಾದಿತ್ಯನ ಸಹೋದರಿಯಾದ ಕುಂಕುಮ ಮಹಾದೇವಿಯನ್ನು ವಿವಾಹವಾಗಿ ಚಲುಕ್ಯ ಮತ್ತು ಅಳುಪರ ರಾಜಕೀಯ ಸಂಬಂಧಗಳನ್ನು ಗಟ್ಟಿಗೊಳಿಸಿದ. ಅಂತೆಯೇ ವಿಜಯಾದಿತ್ಯನ ಭಾವನಾದ ಚಿತ್ರವಾಹನನು ಪುರಿಗೆರೆ (ಆನೆಸೆಜ್ಜೆಯ)ಬಸದಿಗೆ ರಾಜಸ್ವದಿಂದ ದಾನ ಕೊಡಿಸುವಲ್ಲಿ ಯಶಸ್ವಿಯಾದ. ದಂಪತಿಗಳ ಜಿನಭಕ್ತಿ ಅನನ್ಯ. ಹೆಂಡತಿ ಬಸದಿಯನ್ನು ಕಟ್ಟಿಸಿದರೆ; ಗಂಡ ಅದರ ನಿರಂತರ ರಕ್ಷಣೆಗೆ

ಮುಂದಾಗಿ ಅರಸೊತ್ತಿಗೆಯಿಂದ ಇಡೀ ಒಂದು ಗ್ರಾಮವನ್ನೇ ದತ್ತಿ ಕೊಡಿಸುವಲ್ಲಿ ಸಫಲನಾದ. ಚಲುಕ್ಯರಿಗೂ ಮತ್ತು ಅಳುಪರ ನಡುವೆ ಇರುವ ವೈವಾಹಿಕ ಸಂಬಂಧಕ್ಕೆ ಈ ಶಾಸನ ಸಾಕ್ಷಿಯಾಗುತ್ತದೆ.

ಹಾವೇರಿ ಪರಿಸರದಲ್ಲಿ ಮೊದಲ ಜೈನಶಿಲಾಶಾಸನ ಮತ್ತು ಕನ್ನಡ ಭಾಷೆಯ ಶಾಸನ ನಿರ್ಮಿಸಿದ ಕೀರ್ತಿ ಚಲುಕ್ಯರಿಗೆ ಸಲ್ಲುತ್ತದೆ. ಎರಡನೆಯ ಕೀರ್ತಿವರ್ಮನ (ಕ್ರಿ.ಶ. ೬೯೬-೭೩೩) ಕಾಲಾವಧಿಯಲ್ಲಿ ಗಂಗಿಪಾಣ್ಡಿಯೂರಿನಲ್ಲಿ ಈ ಶಾಸನ ರಚನೆಯಾಗಿದೆ.[೪೪] ಶಾಸನೋಕ್ತ ಗಂಗಿಪಾಣ್ಡಿಯೂರು ಈಗಿನ ಆಡೂರು (ಹಾನತಾ) ಈ ಶಾಸನದ ಮತ್ತೊಂದು ವಿಶೇಷತೆ ದ್ವಿಭಾಷಾ ಬಳಕೆ. ಪ್ರಾರಂಭದಲ್ಲಿ ಹದಿನಾಲ್ಕು ಸಾಲುಗಳು ಸಂಸ್ಕೃತ ಭಾಷೆ, ಕನ್ನಡ ಲಿಪಿಯಲ್ಲಿ ರಚನೆಯಾಗಿದ್ದರೆ; ಉಳಿದಾರು ಸಾಲುಗಳು ಕನ್ನಡ ಭಾಷೆ, ಲಿಪಿಯಲ್ಲಿ ರಚನೆಯಾಗಿವೆ.

ಸಂಸ್ಕೃತ ಜವನಿಕೆಯನ್ನು ಓಸರಿಸಿಕೊಂಡು ಕನ್ನಡತನದ ಛಾಪನ್ನು ಅನುಷ್ಠಾನಗೊಳಿಸುವಲ್ಲಿ ಈ ಶಾಸನ ಹಾವೇರಿ ಪರಿಸರಕ್ಕೆ ಹಿರಿಮೆಯನ್ನು ತಂದುಕೊಟ್ಟಿದೆ. ಈಗಾಗಲೇ ಗಂಗಿಪಾಣ್ಡಿಯೂರಲ್ಲಿ ಧರ್ಮಗಾಮುಣ್ಡ ಕಟ್ಟಿದ ಬಸದಿಗೆ ದಾನಬಿಡುವ ಮಾಹಿತಿಯನ್ನು ಶಾಸನ ಒದಗಿಸುತ್ತದೆ. ಪರಲೂರು ಗಣಕ್ಕೆ ಅಗ್ರಗಣ್ಯರು ವಿನಯನಂದಿ. ಇವರ ಶಿಷ್ಯ ಪ್ರಭಾಚಂದ್ರ. ಪ್ರಭಾಚಂದ್ರ ಶ್ರಾವಕ ಶಿಷ್ಯ ಧರ್ಮಗಾಮುಣ್ಡ. ಇವರ ಮಗ ಶ್ರೀಪಾಲ. ಇವನು ಪ್ರಭಾಚನ್ದ್ರರಿಗೆ ೨೫ ನಿವರ್ತನ ಭೂಮಿಯನ್ನು ದಾನಕೊಟ್ಟ ವಿಚಾರ ಸಂಸ್ಕೃತ ಭಾಗದಲ್ಲಿದೆ. ಕನ್ನಡ ಭಾಗದಲ್ಲಿ ದೋಣಗಾಮುಣ್ಡ, ಎಳಮಗಾಮುಣ್ಡ, ಕರಣಿಕ ಮುಂತಾದವರು ಜಿನೇಂದ್ರಭವನಕ್ಕೆಂದು ಎಂಟು ಮತ್ತರು ಗದ್ದೆಯನ್ನು ಪರಲೂರು(ದೇವಗಿರಿ) ಚೇದಿ(ಚೈತ್ಯಾಲಯ)ಯ ಬಳಿ ಪ್ರಭಾಚನ್ದ್ರರಿಗೆ ಕೊಟ್ಟ ಸಂಗತಿ ದಾಖಲಾಗಿದೆ. ಹಾವೇರಿ ಪರಿಸರದ ಶಾಸನೋಕ್ತ ಎರಡನೆಯ ಬಸದಿ ಆಡೂರಿನದ್ದು ಎಂಬುದು ಗಮನೀಯ ಅಂಶ.

ಹಾವೇರಿ ಪರಿಸರದಲ್ಲಿ ಬಾದಾಮಿ ಚಲುಕ್ಯರ ಜೈನಶಾಸನಗಳು ಅಲ್ಪವಾದರೂ; ಕಲ್ಪವನ್ನು ತಂದುಕೊಟ್ಟಿವೆ. ಶಿಲಾಶಾಸನದ ಮೊದಲ ಬಳಕೆ, ಕನ್ನಡ ಭಾಷೆಯ ಅನುಷ್ಠಾನ, ಪರಧರ್ಮ ಸಹಿಷ್ಣುತೆ, ಬಸದಿ ನಿರ್ಮಾಣ, ಪೋಷಣೆ ದಾನ-ದತ್ತಿ ಹೀಗೆ ಹಲವಾರು ಆಯಾಮಗಳಲ್ಲಿ ಜೈನ ಧರ್ಮಕ್ಕೆ ಚಲುಕ್ಯರ ಕೊಡುಗೆ ಅನನ್ಯ.

### ೦೪. ರಾಷ್ಟ್ರಕೂಟರು (ಕ್ರಿ.ಶ. ೭೩೫-೧೦೦೦).

ಆದಿಕದಂಬರು, ಗಂಗರು, ಬಾದಾಮಿ ಚಲುಕ್ಯರ ತರುವಾಯ ಕರ್ನಾಟಕದ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ ಜೈನಧರ್ಮಕ್ಕೆ ಬಲಸಂವರ್ಧನೆ ತಂದುಕೊಟ್ಟವರು ಮಾನ್ಯಖೇಟದ ರಾಷ್ಟ್ರಕೂಟರು. ಈ ಸಂವರ್ಧನೆ ಶಾಸನ, ಕಲೆ, ಶಿಲ್ಪ, ಸಾಹಿತ್ಯ, ಸಂಸ್ಕೃತಿ ಹೀಗೆ ಬಹುಮುಖಗಳಲ್ಲಿ ಔನತ್ಯ

ಕಂಡುಕೊಂಡಿತು. ರಾಷ್ಟ್ರಕೂಟರ ಕಾಲವನ್ನು ಕರ್ನಾಟಕದ "ಜೈನ ಧರ್ಮದ ಸುವರ್ಣ ಯುಗ" ಎನ್ನುವುದು ಅತಿಶಯದ ಮಾತಲ್ಲ. ಕನ್ನಡ ಮತ್ತು ಸಂಸ್ಕೃತ ಬರಹಗಾರರಲ್ಲಿ ಬಹುತೇಕ ಜೈನಕವಿಗಳು ಈ ಕಾಲಾವಧಿಯಲ್ಲಿದ್ದರು. ಅಂತೆಯೇ ಕರ್ನಾಟಕದ ಒಟ್ಟು ಜನಸಂಖ್ಯೆಯಲ್ಲಿ ಶೇಕಡಾ ೩೦%ರಷ್ಟು ಜೈನರಿದ್ದರು ಎಂಬ ಡಾ. ಆಳ್ತೇಕರ್‌ರವರ ಮಾತು ನಿಜ.[೪೫] ಜೈನಧರ್ಮದ ಮೇಲೆ ರಾಷ್ಟ್ರಕೂಟರಿಗೆ ಇದ್ದ ಗೌರವ–ಒಲವು ಈ ಧರ್ಮ ಪ್ರಬಲವಾಗಿ ಬೆಳೆಯಲೂ ಕಾರಣವಾಯ್ತು. ಒಂದನೆಯ ಅಮೋಘವರ್ಷ (ಕ್ರಿ.ಶ. ೮೧೪–೭೮)ನಂತೂ ಜಿನಧರ್ಮದ ಅನುಯಾಯಿಯಾಗಿ ಜಿನಸೇನಾಚಾರ್ಯರಲ್ಲಿ ಶಿಷ್ಯತ್ವ ಸ್ವೀಕರಿಸಿ ಜೈನಧರ್ಮಕ್ಕೆ ಆನೆಬಲವನ್ನು ತಂದುಕೊಟ್ಟ. ಇನ್ನು ರಾಷ್ಟ್ರಕೂಟರ ೪ನೆಯ ಇಂದ್ರ ಸಲ್ಲೇಖನ ಸ್ವೀಕರಿಸುವ ಮೂಲಕ ಜಿನಧರ್ಮದಲ್ಲಿ ಧನ್ಯತೆಯನ್ನು ಕಂಡುಕೊಂಡ.

ರಾಷ್ಟ್ರಕೂಟರ ಕಾಲಾವಧಿಯಲ್ಲಿ ಶ್ರೀವಿಜಯನ 'ಕವಿರಾಜಮಾರ್ಗ' ಎಂಬ ಪ್ರಸಿದ್ಧ ಲಾಕ್ಷಣಿಕ ಗ್ರಂಥ, ಪಂಪನ 'ಆದಿಪುರಾಣ' ಮತ್ತು 'ವಿಕ್ರಮಾರ್ಜುನ ವಿಜಯ', ಪೊನ್ನನ 'ಶಾಂತಿಪುರಾಣ', ಭುವನೈಕರಾಮಾಭ್ಯುದಯ', ವೀರಸೇನನ 'ಧವಲಾ', ಜಿನಸೇನನ 'ಜಯಧವಲಾ', 'ಆದಿಪುರಾಣ', 'ಪಾರ್ಶ್ವಾಭ್ಯುದಯ', ಗುಣಭದ್ರನ 'ಉತ್ತರ ಪುರಾಣ', ಭರತನ 'ಮಹಾಪುರಾಣ', 'ಜಸಉರಚರಿವು', 'ಣಾಯಕುಮಾರ ಚರಿಉ', ವೀರಾಚಾರ್ಯನ 'ಗಣಿತಸಾರ ಸಂಗ್ರಹ', ಅಮೋಘವರ್ಷನ 'ಪ್ರಶ್ನೋತ್ತರ ರತ್ನಮಾಲಾ', ಹೀಗೆ ಉತ್ಕೃಷ್ಟ ಕಾವ್ಯಗಳು ಮತ್ತು ಕವಿಗಳು ಬೆಳಕಿಗೆ ಬಂದರು. ಇಷ್ಟೇ ಅಲ್ಲದೇ ಕನ್ನಡ ಸಾಹಿತ್ಯದ ವಿವಿಧ ಕೃತಿಗಳಲ್ಲಿ ಉಲ್ಲೇಖಿತರಾದ ಅಸಗ, ಗುಣನಂದಿ, ಗುಣವರ್ಮ ಇತ್ಯಾದಿ ಪಂಪಪೂರ್ವ ಕಾಲದ ಕವಿಗಳು ರಾಷ್ಟ್ರಕೂಟರ ಕಾಲಾವಧಿಯಲ್ಲಿಯೇ ಇದ್ದರು.

ಕಾವೇರಿಯಿಂದ ಗೋದಾವರಿಯಾಚೆಗೂ ಪಸರಿಸಿದ್ದ ರಾಷ್ಟ್ರಕೂಟರ ಸಾಮ್ರಾಜ್ಯ; ಕರ್ನಾಟಕ, ಆಂಧ್ರಪ್ರದೇಶ, ಮಹಾರಾಷ್ಟ್ರಗಳಲ್ಲಿ ಜೈನಸ್ಮಾರಕಗಳನ್ನು ನಿರ್ಮಿಸುವುದರ ಜೊತೆಗೆ ಅವುಗಳಿಗೆ ದಾನ–ದತ್ತಿಗಳನಿತ್ತಿತು. ಸದ್ಯಕ್ಕೆ ಇವರ ೬೨೨ ಶಾಸನಗಳು ದೊರೆತಿವೆ.[೪೬] ಇವುಗಳಲ್ಲಿ ಜೈನಶಾಸನಗಳ ಸಂಖ್ಯೆ ಅಲ್ಪವಾದರೂ; ಅವುಗಳ ಹಿರಿಮೆ ದೊಡ್ಡದು. ಬಸದಿಯ ನಿರ್ಮಾಣ, ಜೀರ್ಣೋದ್ಧಾರ. ಇತ್ಯಾದಿ ಚಟುವಟಿಕೆಗಳಿಗೆ ರಾಷ್ಟ್ರಕೂಟರು ಮತ್ತು ಅವರ ಸಾಮಂತರಾದ ಚಾಳುಕ್ಯರು, ಚಲ್ಲಕೇತನರು. ಸಾಂತರರು, ಗಂಗರು, ನೊಳಂಬರು, ರಟ್ಟರು, ಬಾಣರು ಮುಂತಾದವರು ದಾನ–ದತ್ತಿಯನ್ನಿಟ್ಟರು.

ಮಾನ್ಯಖೇಟ (ಮಳಖೇಡ)ವನ್ನು ರಾಜಧಾನಿ ಮಾಡಿಕೊಂಡು ಸುದೀರ್ಘ ೨೫೦ ವರ್ಷಗಳ ಕಾಲ ಕರ್ನಾಟಕವನ್ನಾಳಿದ ರಾಷ್ಟ್ರಕೂಟರ ಕಾಲಾವಧಿಯಲ್ಲಿ ಅನೇಕ ಜೈನಕೇಂದ್ರಗಳು ಅಸ್ತಿತ್ವದಲ್ಲಿದ್ದವು. ಅವುಗಳಲ್ಲಿ "ಮಳಖೇಡ, ಸವದತ್ತಿ, ಯಡ್ರಾಮಿ, ಬಂಕಾಪುರ, ಕೊಣ್ಣೂರು, ಲಕ್ಕುಂಡಿ, ನರೇಗಲ್ಲ, ಮುಳುಗುಂದ, ಮಲ್ಲಸಂದ್ರ, ಕಳಸಾಪುರ, ಲಕ್ಷ್ಮೇಶ್ವರ, ಅಸುಂಡಿ, ಪಟ್ಟದಕಲ್ಲು,

ಹೊಂಬುಜ, ಹರಸೂರು, ಹಳ್ಳೂರು, ಬಂಕೂರು, ಜೇವರ್ಗಿ, ಹರಿಜನವಾಡ, ಬಂದಣಿಕೆ, ಶ್ರವಣಬೆಳಗೊಳ, ಕೊಪ್ಪಳ, ಅಣ್ಣಿಗೇರಿ, ಕಂಬದಹಳ್ಳಿ[೪೭] ಇತ್ಯಾದಿಗಳು ಪ್ರಮುಖವಾದವುಗಳು.

ಜೈನಧರ್ಮಕ್ಕೆ ರಾಷ್ಟ್ರಕೂಟರು ಕೊಟ್ಟ ಒಂದು ಅದ್ಭುತ ಕೊಡುಗೆ ಎಂದರೆ ಎಲ್ಲೋರ (ಮಹಾರಾಷ್ಟ್ರ)ದಲ್ಲಿ ವಿಶ್ವಪ್ರಸಿದ್ಧ ೦೫ ಗುಹಾಂತರ ಬಸದಿಗಳನ್ನು ನಿರ್ಮಿಸಿದ್ದು, ಇವುಗಳಲ್ಲಿ ೩೨ನೆಯ ಜೈನ ಗುಹೆಯ 'ಇಂದ್ರಸಭೆ' ಶ್ರೇಷ್ಠ ಜೈನಕಲಾಕೃತಿ ಎಂದು ವಿದ್ವಾಂಸರ ಮೆಚ್ಚುಗೆಗೆ ಪಾತ್ರವಾಗಿದೆ. ಇಂದ್ರ-ಶಚಿದೇವಿಯ ವಿಗ್ರಹಗಳು, ಶಾಂತಿನಾಥ, ಪಾರ್ಶ್ವನಾಥ ತೀರ್ಥಂಕರುಗಳ ಬಿಂಬದ ಜೊತೆ ಬಾಹುಬಲಿ ಶಿಲ್ಪ, ಕುಸುರಿಕೆತ್ತನೆಯ ಅಂಬಿಕಾ ಯಕ್ಷಿಯ ಶಿಲ್ಪಗಳನ್ನು ಇಂದ್ರಸಭೆಯಲ್ಲಿ ಕಾಣಬಹುದು. ಚಲುಕ್ಯರ ಬಾದಾಮಿಯ ಮೇಗಣ (ಮೇಣ) ಬಸದಿಯ ಕಲಾ ಮಾದರಿ ಇಂದ್ರ ಸಭೆಯಲ್ಲಿ ಕಂಡಂತೆ ತೋರಿದರೂ; ರಾಷ್ಟ್ರಕೂಟರು ಚಲುಕ್ಯರ ಕಲೆ, ವಾಸ್ತುಶಿಲ್ಪದ ರಚನೆಗಳನ್ನು ಅನುಸಂಧಾಸಿಕೊಂಡಂತೆ ಸ್ಪಷ್ಟವಾಗುತ್ತದೆ. ಇದು ಕಲೆಯ ಅಪಹರಣವಲ್ಲ; ಸ್ವೀಕರಣ.

ರಾಷ್ಟ್ರಕೂಟ ದೊರೆಗಳೇ ಬಸದಿಗಳಿಗೆ ನೇರವಾಗಿ ದತ್ತಿಬಿಟ್ಟ ವಿವರಗಳು ಹಲವಾರು ಶಾಸನಗಳಲ್ಲಿ ದಾಖಲಾಗಿವೆ. ದೇವನೂರಿನಲ್ಲಿ (ನಂಜನಗೂಡು ತಾ/ಮೈಸೂರು ಜಿ) ಧಾರಾವರ್ಷ ಧ್ರುವನ ಮಗನಾದ ರಣಾವಲೋಕ ಕಂಬಯ್ಯನು ಕ್ರಿ.ಶ. ೮೦೮ರಲ್ಲಿ ಕೊಂಡಕೊಂದಾನ್ವಯದ ವರ್ಧಮಾನ ಮುನಿಗೆ ವದನಗುಪ್ಪಿ ಎಂಬ ಹಳ್ಳಿಯನ್ನು ದಾನವಾಗಿ ಕೊಟ್ಟ.[೪೮] ಮಹಾರಾಜ ಮೂರನೆಯ ಗೋವಿಂದ (ಕ್ರಿ.ಶ. ೭೮೨-೮೧೫)ನು ಮಣ್ಣೆ (ನೆಲಮಂಗಲ ತಾ/ಬೆಂಗಳೂರು ಗ್ರಾ ಜಿ)ಯ ಬಸದಿಯ ಅಂಗಭೋಗ, ರಂಗಭೋಗ ಸೇವೆಗಳಿಗೆ 'ಪೆರ್ವ್ವಡಿ' ಎಂಬ ಗ್ರಾಮವನ್ನು ದತ್ತಿಬಿಟ್ಟ.[೪೯] ಅಮೋಘವರ್ಷ ನೃಪತುಂಗ (ಕ್ರಿ.ಶ. ೮೧೪-೭೮) ಚಕ್ರವರ್ತಿಯು ಸಾಮಂತ ದಂಡಾಧಿಪತಿಯಾದ ಬಂಕೇಶ (ಬಂಕೇಯ)ನ ಇಷ್ಟಾರ್ಥದಂತೆ ಕೊಳನೂರು [(ಕೊಣ್ಣೂರು) ನವಲಗುಂದ ತಾ)] ಬಸದಿಯ ನಿಮಿತ್ತ 'ತಲೆಯೂರು' ಮತ್ತು ಇತರ ಹಳ್ಳಿಗಳಲ್ಲಿ ಮೂಲಸಂಘ ದೇಸಿಯಗಣ ಪುಸ್ತಕಗಚ್ಛದ ದೇವೇಂದ್ರ ಮುನಿಗೆ ಭೂಮಿಯನ್ನು ದಾನ ಮಾಡಿದ.[೫೦] ಹೀಗೆ ಅರಸರು ಅವರ ಸಾಮಂತರು, ದಂಡಾಧಿಪರು, ನಾಳ್ಗಾವುಂಡರುಗಳು, ಗಾವುಂಡರು ಬಸದಿಗಳ ನಿರ್ಮಾಣ, ಅವುಗಳ ಜೀರ್ಣೋದ್ಧಾರ ಮುಂತಾದ ಜೈನ ಸಂಸ್ಕೃತಿ ಚಟುವಟಿಕೆಗಳನ್ನು ರಾಷ್ಟ್ರಕೂಟರ ಕಾಲಾವಧಿಯಲ್ಲಿ ಕೈಗೊಂಡರು. ಈ ಪ್ರಕ್ರಿಯೆಗೆ ಹಾವೇರಿ ಜಿಲ್ಲಾ ಪರಿಸರ ಹೊರತಾಗಿಲ್ಲ.

ಹಾವೇರಿ ಪರಿಸರದಲ್ಲಿ ಒಟ್ಟು ಹತ್ತು ರಾಷ್ಟ್ರಕೂಟರ ಶಿಲಾಶಾಸನಗಳು ಲಭ್ಯವಿವೆ. ಇವುಗಳಲ್ಲಿ ೦೯ ದಾನಶಾಸನಗಳು. ೦೧ ಗೋಸಾಸ ನಿಸಿಧಿಶಾಸನ. ಇವು ಮೂರನೆಯ ಗೋವಿಂದ, ಒಂದನೆಯ ಅಮೋಘವರ್ಷ, ಎರಡನೆಯ ಕೃಷ್ಣ, ಖೊಟ್ಟಿಗನ ಕಾಲಕ್ಕೆ ಸಂಬಂಧಿಸಿದ ಶಾಸನಗಳು. ಈ ಎಲ್ಲಾ ಶಾಸನಗಳು ಕ್ರಿ.ಶ. ೭೮೨ ರಿಂದ ಹತ್ತನೆಯ ಶತಮಾನದ ಮಧ್ಯದ ಅವಧಿಯಲ್ಲಿ ರಚನೆಯಾಗಿವೆ.

ರಾಜಪ್ರಶಸ್ತಿ ಮತ್ತು ಶಾಪಾಶಯ ಹೊರತುಪಡಿಸಿ ಸಂಪೂರ್ಣ ಕನ್ನಡ ಭಾಷೆಯ ಜೈನ ಶಾಸನವನ್ನು ರಾಷ್ಟ್ರಕೂಟರು ಹಾವೇರಿ ಪರಿಸರದ ಮೇದೂರು (ಹಿತಾ)ನಲ್ಲಿ ರಚಿಸಿದರು.[೫೧] ಇದು ಹಾವೇರಿ ಪರಿಸರದ ಮೊದಲ ಪೂರ್ಣಪ್ರಮಾಣದ ಕನ್ನಡ ಜೈನ ಶಾಸನ. ಮೂರನೆಯ ಗೋವಿಂದ (ಕ್ರಿ.ಶ. ೭೮೨–೮೧೪)ನ ಆಳ್ವಿಕೆಯಲ್ಲಿ ಇದು ನಿರ್ಮಾಣವಾಯ್ತು. ಅಂತೆಯೇ ಈ ಕೀರ್ತಿಯು ಅವನಿಗೆ ಸಲ್ಲುತ್ತದೆ. ಈ ಹಿಂದೆ ಮೇಜವೂರು (ಮೇದೂರು)ನಲ್ಲಿ ಇದ್ದ 'ದೇಮಲ್ಲವೆ ವಸದಿ'ಗೆ ಭೂದಾನ ಕೊಡುವ ಪ್ರಸ್ತಾಪವಿಲ್ಲಿದೆ "ನನ್ದಶಿಲಿಯರಾ ಪೆಗುಳ್ಳನುಂ . ಗಾಟಿರೆ ಆಳೆ [ಗಾ] ಮುಣ್ಡನುಂ [ಚೆ]ಳ್ಳಗಿರಿಯರಾ ಗುಜಗಾಮುಣ್ಡನು ಮ....ಳಗಿಯಂ ದಳಿಮ್ಬನುಂ ಇನ್ತಿ ಐವರು ಗಾಮುಣ್ದುಗೆಯೆ ಕಜೆ[ತು]....ಮತ್ತು ಪರಮೇಶ್ವರ ನಿಯೋಗಿ ರಾಜಾದಿತ್ಯರಸ"ರ ಸಹಿತ ದೇಮಲ್ಲವೆ ವಸದಿ (ಬಸದಿ)ಗೆ ೧೨ ಮತ್ತರು ಭೂಮಿಯನ್ನು ಮೋನಿಗುರುವರ ಶಿಷ್ಯರಾದ ಶ್ರೀಪಾಲದೇವನಿಗೆ ಕೊಟ್ಟರು. ಈ ಸಮಯದಲ್ಲಿ ಬನವಾಸಿ ೧೨೦೦೦ ಮತ್ತು ಎಡೆವಟ್ಟೆ – ೭೦ನ್ನು ಸತ್ಯಸಳುಕಿ (ಚಳುಕ್ಯ)ಯರ ರಾಜಾದಿತ್ಯ ಅರಸ ಆಳುತ್ತಿದ್ದ. ಚಲುಕ್ಯರು ರಾಷ್ಟ್ರಕೂಟರ ಸಾಮಂತ ಅರಸರಾಗಿದ್ದರು ಎಂಬುದಕ್ಕೆ ಈ ಶಾಸನ ಸಾಕ್ಷಿಯಗಿ ನಿಲ್ಲುತ್ತದೆ. ಇದೇ ಊರಲ್ಲಿ ರಾಷ್ಟ್ರಕೂಟರ ಇನ್ನೊಂದು ತ್ರುಟಿತ ಜಿನಶಾಸನವೊಂದಿದ್ದು, 'ಮೋನಿಗುರುವ'ರ ಉಲ್ಲೇಖವಿದೆ.[೫೨] ಈ ಮುನಿಯ ಉಲ್ಲೇಖದ ಶಾಸನ ೮–೯ನೆಯ ಶತಮಾನಕ್ಕೆ ಸಲ್ಲುತ್ತದೆ.

ಹಿರೂರು (ಹಾನತಾ)ವಿನಲ್ಲಿ ದೊರೆಯುವ ಹಾವೇರಿ ಪರಿಸರದ ಪ್ರಥಮ ಜೈನ ಗೋಸಾಸ ವಿಶಿಷ್ಟವಾದುದು.[೫೩] ಎಂಟು–ಒಂಭತ್ತನೆಯ ಶತಮಾನಕ್ಕೆ ಸಲ್ಲುವ ಈ ಗೋಸಾಸ ಸ್ಮಾರಕವು ಶಾಸನಯುಕ್ತ ನಿಸಿಧಿಯೂ ಹೌದು. ಅನಾಮಧೇಯ ಶ್ರಾವಕನೊಬ್ಬ ಗೋವುಗಳನ್ನು ಅಗತ್ಯ ಪಾತ್ರರಿಗೆ ದಾನಮಾಡಿ ಸನ್ಯಸನ ವಿಧಾನದಿಂದ ಸಾವನ್ನು ಆಹ್ವಾನಿಸಿದ. ಈ ನೆನಪಿಗಾಗಿ ಅವನ ತಮ್ಮ ಮನ್ನಯ್ಯ ಮತ್ತು ಮಗ ಉತ್ತವಯ್ಯ ಪ್ರಸ್ತುತ ಸ್ಮಾರಕವನ್ನು ಪ್ರತಿಷ್ಠೆಗೊಳಿಸಿದರು. "ಇದು ಜೈನ ಧರ್ಮಿಯನಾದ ವ್ಯಕ್ತಿಯೊಬ್ಬ ಬ್ರಾಹ್ಮಣರಿಗೆ ಸಹಸ್ರ ಗೋವುಗಳನ್ನು ದಾನ ನೀಡಿದ ತುಂಬ ಅಪರೂಪದ ಮತ್ತು ಮೊಟ್ಟ ಮೊದಲ ಗೋಸಾಸವಾಗಿದೆ."[೫೪] ಸಮಾಧಿ ಮರಣವನ್ನು ಹೊಂದುವ ಮೊದಲು ಶ್ರಾವಕನು ಚತುರ್ವಿಧ ದಾನ (ಆಹಾರ, ಅಭಯ, ಔಷಧ, ಶಾಸ್ತ್ರ)ವಲ್ಲದೇ ಗೋವುಗಳನ್ನೂ ದಾನ ಕೊಡುವ ಪದ್ಧತಿ ಇತ್ತು ಎಂಬುದಕ್ಕೆ ಪ್ರಸ್ತುತ ಶಾಸನ ಪ್ರಮಾಣವಾಗುತ್ತದೆ.

ಜಯತುಂಗ ಪ್ರತಾವಲೋಕನ ಎಂಬ ನಾಮಾವಳಿಯ ಮೂರನೆಯ ಗೋವಿಂದನ ಕಾಲಾವಧಿಯ ಜಿನಶಾಸನವು ಶಿರಗಂಬಿ (ಹಿತಾ)ಯಲ್ಲಿದ್ದು ವಿಶಿಷ್ಟವಾಗಿದೆ.[೫೫] ಬನವಾಸಿ ೧೨೦೦೦ವನ್ನು ಆಳುತ್ತಿದ್ದ ಎಜೆಯಮ್ಮನ ಪತ್ನಿ ಅಪೊಲಬ್ಬೆಯು ತಿರಿಗೆಮ್ಮ (ಶಿರಗಂಬಿ) ಹಳ್ಳಿಯಲ್ಲಿರುವ 'ಬೆಳ್ದೇವರಿಗೆ' ಆರು ಮತ್ತರು ಭೂಮಿಯನ್ನು ದಾನ ಬಿಟ್ಟಿದು ಶಾಸನ ಸಾರ. ಈ ಸಂದರ್ಭದಲ್ಲಿ ಊರಾಳ್ವೆಯನ್ನು ಅಮ್ಮರಸ, ಆರಿದ, ಗಾವದಿ, ಕತ್ತಲಗ ಗಾವುಂಡರು ನೋಡಿಕೊಳ್ಳುತ್ತಿದ್ದರು.

ಇಲ್ಲಿ ಬೆಳ್ದೇವರು (ಬಿಳಿಯ + ದೇವರು) ಎಂಬ ಗುಣವಾಚಕ ವಿಶೇಷವಾದುದು. ಬೆಳ್ದೇವರು ಎಂದರೆ ತೀರ್ಥಂಕರ ಎಂದರ್ಥ. ತೀರ್ಥಂಕರ ಸಿದ್ಧಗತಿಯನ್ನು ಕಂಡುಕೊಂಡಾಗ ನಿರಾಕಾರನಾಗುತ್ತಾನೆ. ನಿರಾಕಾರಕ್ಕೆ ಬಿಳಿ ಬಣ್ಣವನ್ನು ಸಂಕೇತಿಸುವ ಪ್ರಕ್ರಿಯೆಯನ್ನಿಲ್ಲಿ ಗಮನಿಸಬೇಕು. ಬಿಳಿ ವರ್ಣವು ಶುಭ್ರ, ನಿರಾಕಾರ, ಧವಳವೂ ಆದ್ದರಿಂದ ತೀರ್ಥಂಕರನಿಗೆ ಆರೋಪಿಸುವ ಪ್ರಕ್ರಿಯೆ ಜೈನಧರ್ಮದಲ್ಲಿ ಈಗಲೂ ಚಾಲ್ತಿಯಲ್ಲಿದೆ. ಪಂಚಪರಮೇಷ್ಠಿಗಳಾದ ಅರಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸರ್ವಸಾಧುಗಳ ಪ್ರತಿಮೆಯಲ್ಲಿ ಸಿದ್ಧರನ್ನು ನಿರಾಕಾರವಾಗಿ ಗುರುತಿಸಲಾಗುತ್ತದೆ. ಸದ್ಯ ಬೆಳ್ದೇವರು ಎಂದರೆ ಬಸದಿಯಲ್ಲಿರುವ ತೀರ್ಥಂಕರರ ಮೂರ್ತಿ ಎಂದೇ ಗ್ರಹಿಸಬೇಕು.

ಇದೇ ಶಾಸನದ ಅರ್ಧ ಭಾಗದಲ್ಲಿ ಮೂರನೆಯ ಗೋವಿಂದನ ಇನ್ನೊಂದು ಶಾಸನವಿದ್ದು, ಬನವಾಸಿ ಪನ್ನಿಚ್ಛಾಸಿರವನ್ನು ರಾಜಾದಿತ್ಯರಸ ಆಳುತ್ತಿದ್ದ. ಈ ಸಂದರ್ಭದಲ್ಲಿ ತಿರಿಗೆಮ್ಮೆ (ಶಿರಗಂಬಿ)ಯನ್ನು ಅವರೆವರಸನಾಳುತ್ತಿದ್ದ. ಇವನ ಹೆಂಡತಿಯಾದ ಲೋಕಬ್ಬೆಯು ಸ್ಥಳೀಯ ಮಾಪನವಾದ 'ಎರೆಉಳ್ಮನ್ನಳದ ಕೆಯ್ಯುಳೆ ಕೂಡೆ ರಾಜಮಾನದ ನಾಳ್ವತ್ತರ್ಮಣ್ಣ'[೩೬]ನ್ನು ಧರ್ಮ ಕಾರ್ಯನಿಮಿತ್ತ ಬೆಳ್ಳವಾಸದ ಗುರುವರ ಶಿಶ್ಯನಾದ ನಾಗಣನ್ದಿ ಗುರುವರಿಗೆ ಕೊಟ್ಟಳು. ಮೇಲೆ ಹೇಳಿದ ಅಮ್ಮರಸ, ಆರಿದ, ಗಾವದಿ, ಕತ್ತಲಗರ ಉಲ್ಲೇಖದ ಪ್ರಸ್ತಾಪ ಈ ಶಾಸನದಲ್ಲಿದೆ.

ಶಾಸನದಲ್ಲಿ ಉಕ್ತವಾದ ಬೆಳ್ಳವಾಸದ ಗುರುವ ಜಿನಮುನಿಯ ನಾಮಾವಳಿಯನ್ನು ಮುಖ್ಯವಾಗಿ ಗಮನಿಸಬೇಕು. "ಬೆಳ್ಳವಾಸಿ ಎಂದರೆ ಹಿಮ ಅಥವಾ ಕೊರೆಯುವ ನೊರೆನೀರಿನಲ್ಲಿ ಕದಲದೆ ನಿಂತು ದೇಹದಂಡಿಸಿ, ಆತ್ಮಕಲ್ಯಾಣಕ್ಕಾಗಿ ಯೋಗಮುದ್ರೆಯಲ್ಲಿರುವುದು"[೩೭] ಅತೀ ಕಠಿಣ ಯೋಗ ಪಟ್ಟು ಬೆಳ್ಳವಾಸಿ ಎಂಬ ಪಟ್ಟವನ್ನು ತಂದುಕೊಟ್ಟಿರಲಿಕ್ಕೂ ಸಾಕು. ಈ ತರಹದ ಮುನಿಗಳ ಒಂದು ಪರಂಪರೆಯೇ ಇದ್ದುದಾಗಿ ಮೇದೂರಿನ ರಾಷ್ಟ್ರಕೂಟರ ಶಾಸನ ಅರಹುತ್ತದೆ.[೩೮] ಈ ಮುನಿಪರಂಪರೆಗೆ 'ವಳ್ಳಕರಾನ್ವಯ' ಪರಂಪರೆ ಎಂದು ಇದೇ ಶಾಸನ ಹೆಸರಿಸಿದೆ. ವೆಳ್ಳ > ಬೆಳ್ಳ, ವೆಳ್ಳ > ವಳ್ಳ. ಬಹುಶ: ಇದು ವೆಳ್ಳಕರಾನ್ವಯ ಇದ್ದಂತೆ ತೋರುತ್ತದೆ. ಶಾಸನ ತ್ರುಟಿತಗೊಂಡು 'ಎ' ಕಾರದ ಕೊಂಬು ಇಲ್ಲವಾಗಿ ವಳ್ಳಕರಾನವ್ಯ ಎಂದು ಓದಲಾಗಿದೆ. ಇಲ್ಲಿ ಬಂದಿರುವ ಬೆಳ್ಳವಾಸಿ ಗುರುವರ ಬೆಳ್ದೇವರ ತತ್ವಗಳ ಅನುಪಾಲಕ ಎಂದರ್ಥ. ಬೆಳ್ದೇವರು – ಬೆಳ್ಳವಾಸಿ – ವೆಳ್ಳಕರಾನ್ವಯ ಪರಂಪರೆ ವಿಶೇಷವಾಗಿ ರಾಷ್ಟ್ರಕೂಟರ ಕಾಲಾವಧಿಯ ಶಾಸನಗಳಲ್ಲಿ ಹೆಚ್ಚು ಉಲ್ಲೇಖಗೊಂಡಿರುವುದು ಪ್ರತ್ಯೇಕ ಅಧ್ಯಯನಕ್ಕೆ ಯೋಗ್ಯನೀಯ.

ಒಂದನೆಯ ಅಮೋಘವರ್ಷ (ಕ್ರಿ.ಶ. ೮೧೪–೮೭೮)ನ ಕಾಲಾವಧಿಯ ಒಂದು ಜೈನಶಾಸನವು ರಾಣೇಬೆನ್ನೂರಿನಲ್ಲಿದ್ದು (ಈಗ ಕೆ.ಆರ್.ಐ.ದಲ್ಲಿದೆ),[೩೯] ಕ್ರಿ.ಶ. ೮೧೯–೬೦ರಲ್ಲಿ ಸ್ಥಾಪಿತವಾಗಿದೆ. ನಾಗುಳರ ಪೊಲ್ಲಬ್ಬೆ ಮಾಡಿಸಿದ 'ನಾಳುಗ ವಸದಿ'ಗೆ ವಿವಿಧ ಸ್ಥಳಗಳಲ್ಲಿ ೨೬ ಮತ್ತರು ಭೂಮಿಯನ್ನು 'ಸಿಂಘವುರ ಗಣ'ದ ನಾಗಣನ್ದ್ಯಾಚಾರ್ಯ್ಯರಿಗೆ ದಾನ ಕೊಡಲಾಗುತ್ತದೆ.

ಶಾಸನದಲ್ಲಿ ಭೂಮಿಗೆ ಜನಬಳಕೆಯ 'ಮಣ್ಣು' ಎಂಬ ಪದಪ್ರಯೋಗ ವಿಶಿಷ್ಟವಾಗಿದೆ. ಇಲ್ಲಿ ಪ್ರಸ್ತಾಪವಾದ ಸಿಂಘವುರ ಗಣ ಜಿನಮುನಿಗಳ ಪ್ರಾಚೀನ ಗಣಗಳಲ್ಲಿ ಒಂದು.

ಎರಡನೆಯ ಕೃಷ್ಣ (ಕ್ರಿ.ಶ. ೮೮೫-೯೧೨)ನ ಒಂದು ಜಿನಶಾಸನ ಇಟಗಿ (ಹಾವೇರಿ ಜಿ/ತಾ)ಯಲ್ಲಿದ್ದು, ಪುಲಿಗೆರೆ ವಿಷಯದ 'ಮೂಲಿಗೆರೆ ಸಿರಿಗಲಿ' ಎಂಬ ಗ್ರಾಮವನ್ನು ಪುಲಿಕರ ನಗರದಲ್ಲಿನ 'ಶಂಖ ಜಿನಾಲಯ'ಕ್ಕೆ ದಾನಕೊಟ್ಟ ವಿಷಯವನ್ನು ಸೂಚಿಸುತ್ತದೆ.[೬೦] ಶಂಖಜಿನಾಲಯವು ಇಂದಿನ ಲಕ್ಷ್ಮೇಶ್ವರದಲ್ಲಿದೆ (ಪುಲಿಕರ > ಪುಲಿಗೆರೆ). ಈ ಬಸದಿಯು "ಬಾದಾಮಿ ಚಲುಕ್ಯ ಪಟ್ಟಜಿನಾಯಲಯ, ಮನೆದೇಗುಲ."[೬೧] ಎರಡನೆಯ ಪೊಲೆಕೇಶಿ (ಕ್ರಿ.ಶ. ೬೧೦-೪೨) ಅಧೀನನಾದ ಸೇಂದ್ರಕ ದುರ್ಗಶಕ್ತಿಯು ಶಂಬಜಿನಾಲಯಕ್ಕೆ ಭೂದಾನ ನೀಡಿದ.[೬೨] ಇದೇ ಜಿನಾಲಯಕ್ಕೆ ಚಲುಕ್ಯಚಕ್ರಿಗಳಾದ ವಿನಯಾದಿತ್ಯ,[೬೩] ವಿಜಯಾದಿತ್ಯ,[೬೪] ಇಮ್ಮಡಿ ವಿಕ್ರಮಾದಿತ್ಯ,[೬೫] ಗಂಗರ ಮಾರಸಿಂಹ[೬೬]ರು ದಾನವಾಗಿ ಊರುಗಳನ್ನು ಮತ್ತು ಭೂಮಿಯನ್ನು ಕೊಟ್ಟಿದ್ದಾರೆ. ಅಂತೆಯೇ ರಾಜಮನ್ನಣೆಯನ್ನು ಪಡೆದ ಪುಲಿಗೆರೆಯ ಶಂಖಜಿನಾಲಯದ ಅಸ್ಮಿತೆ ಅರಿತು ಹಾವೇರಿ ಪರಿಸರದ ಇಟಗಿ ಗ್ರಾಮದಿಂದ ದಾನ ಸಂದಿದೆ. ಇಟಗಿ ಗ್ರಾಮ ಹಾವೇರಿ ತಾಲ್ಲೂಕಿನದ್ದಾಗಿರದೆ; ರಾಣೆಬೆನ್ನೂರು ತಾಲ್ಲೂಕಿನ ಇಟಗಿ ಇದ್ದಂತಿದೆ. ಯಾಕೆಂದರೆ ಇಲ್ಲಿ ಜೈನ ಧರ್ಮ ಪ್ರಸರಣದಲ್ಲಿತ್ತು. ಸಾಕ್ಷಿಯಾಗಿ ಊರಲ್ಲಿ ಇರುವ ಜಿನಬಿಂಬ. ಅಲ್ಲದೆ ಹಾವೇರಿ ತಾಲ್ಲೂಕಿನಲ್ಲಿ ಯಾವುದೇ ಇಟಗಿ ನಾಮಾಂಕಿತ ಗ್ರಾಮ ಇರುವುದಿಲ್ಲ.

ಒಂಭತ್ತು-ಹತ್ತನೆಯ ಶತಮಾನದ ಅತೇದಿ ರಾಷ್ಟ್ರಕೂಟರ ಶಾಸನವೊಂದು ಕದರಮಂಡಲಗಿ (ಬ್ಯಾತಾ)ಯಲ್ಲಿದೆ.[೬೭] ರಾಜನ ಹೆಸರು ತ್ರುಟಿತವಾಗಿದೆ. ಆಯಿಚವರ್ಮರಸ ಎಂಬುವನು ಬನವಾಸಿ-೧೨೦೦೦ವನ್ನು ಆಳುತ್ತಿದ್ದು, ಮಾಟ್ಟರ (ಮಾಟೂರು) ವಂಶಕ್ಕೆ ಸೇರಿದವನಾಗಿದ್ದ. ಈ ಸಂದರ್ಭದಲ್ಲಿ ಸತ್ತಳಿಗೆ ೭೦ನ್ನು ನಾಟ್ಗಾಮುಣ್ಡಗೆಯುತ್ತಿದ್ದ ಚಿಕ್ಕಂಬರ ಕುಳುಗಗಾಮುಣ್ಡ ವಿದ್ಯಾದಾನಕ್ಕಾಗಿ ನೀರ್ಮಣ್ಣು (ಗದ್ದೆ) ತೋಣ್ಟ (ತೋಟ)ವನ್ನು ವೃಷಭಣನ್ದಿಗೊರವರ ಪರಂಪರೆಯ ಕಳನೂರ್ಗ್ಗಣ (ಕಾನೂರುಗಣ)ದ 'ತಿರಳಣನ್ದಿ' ಗೊರವರ ಕಾಲ್ಗಟ್ಚಿ ಕೊಟ್ಟ. ಇಲ್ಲಿ ಒಂದು 'ಸಕ್ಕಿ ಬಸದಿ' ಇದ್ದು ಕುಳಗಗಾಮುಣ್ಡ ಮತ್ತು ಊರ ವಿವಿಧ ಗಾವುಂಡರುಗಳ ಸಹಿತವಾಗಿ ಈ ಬಸದಿಯ ಖಣ್ಡಸ್ಫುಟಿತ ಜೀರ್ಣ್ಣೋದ್ಧಾರಕ್ಕೆ, ಬಸದಿಗೆ ಬರುವ ಅಭ್ಯಾಗತರಿಗೆ (ಮುನಿಗಳು ಮತ್ತು ಶಿಕ್ಷಣಾರ್ಥಿಗಳು) ಮುಂದಾಡುವೋರ್ಗಂ (ಬಸದಿಯ ಉತ್ಸವದಲ್ಲಿ ಪಾಲ್ಗೊಳ್ಳುವ ವಿವಿಧ ಕಲಾವಿದರು ಅಥವಾ ನೃತ್ಯಗಾರರು) ಅಪಾರ ಪ್ರಮಾಣದ ಭೂದಾನ ಬಿಟ್ಟರು. ರಾಷ್ಟ್ರಕೂಟರು ಕಾಲಾವಧಿಯಲ್ಲಿ ಕದರಮಂಡಲಗಿ ಒಂದ ಜೈನ ವಿದ್ಯಾಕೇಂದ್ರವಾಗಿತ್ತು ಎಂದು ಪ್ರಸ್ತುತ ಕಲ್ಬರೆಹದಿಂದ ದಿಟವಾಗುತ್ತದೆ.

ಹಾವೇರಿ ತಾಲ್ಲೂಕು ಕೋಳೂರಿನ ಕಲಿದೇವೇಶ್ವರ, ಕಲಮೇಶ್ವರ, ಕೋಳೂರು ಕೊಡಗೂಸು ಎಂದೆಲ್ಲಾ ಕರೆಯುವ ದೇವಾಲಯದ ಹತ್ತಿರ ಬಿದ್ದಿರುವ ಜಿನಶಿಲ್ಪದ ಮೇಲೆ ರಾಷ್ಟ್ರಕೂಟರ ಖೊಟ್ಟಿಗನ ಆಡಳಿತದ ತ್ರುಟಿತ ಶಾಸನವಿದೆ. "ಜಿನಶಾಸನದ ಹೊಗಳಿಕೆಯಿಂದ ಶಾಸನವು ಪ್ರಾರಂಭವಾಗುತ್ತದೆ. ಮಹಾರಾಜನ ಸಾಮಂತನಾದ ಗಂಗವಂಶದ (ಹೆಸರು ಹಾಳಾಗಿದೆ) ವ್ಯಕ್ತಿಯ ಬಗ್ಗೆ ಉಲ್ಲೇಖಿಸುತ್ತದೆ. ಈತನಿಗೆ ಸತ್ಯವಾಕ್ಯ ಕೊಂಗುಣಿವರ್ಮ್ಮ ಮತ್ತು ಧರ್ಮ ಮಹಾರಾಜನೆಂಬ ಬಿರುದುಗಳು ಇದ್ದದನ್ನು ತಿಳಿಸುತ್ತದೆ".[೬೮]

ಅತೇದಿ ಹತ್ತನೆಯ ಶತಮಾನದ ಆದಿಭಾಗದ ಶಾಸನವೊಂದು ಮೋಟೆಬೆನ್ನೂರು (ಬ್ಯಾತಾ)ನಲ್ಲಿದೆ.[೬೯] ಲಿಪಿಸಾದೃಶ್ಯದಿಂದ ಈ ಶಾಸನ ರಾಷ್ಟ್ರಕೂಟ ಕಾಲಾವಧಿಯ ರಚನೆಯೆಂದು ಖಚಿತಪಡಿಸಿಕೊಳ್ಳಬಹುದು. ಅತೀ ತ್ರುಟಿತವಾದ ಕಲ್ಬರೆಹವು ಊರಲ್ಲಿದ್ದ ಬಸದಿಯೊಂದಕ್ಕೆ ದಾನ ಕೊಟ್ಟ ಸಂಬಂಧಿ ರಚನೆಯಗಿದೆ. ಚನ್ದ್ರನನ್ದಿಭಟಾರ, ತವಣನ್ದಿ ಮುನಿಗಳ ಉಲ್ಲೇಖ ಇಲ್ಲಿದೆ. ಇದೇ ಊರಿನ ಕ್ರಿ.ಶ. ೧೦೬೬ರ ಶಾಸನ[೭೦] ದಲ್ಲಿ ಬರುವ 'ನನ್ದಿ' ಪರಂಪರೆಯ ಮುನಿಗಳ ಹೆಸರನ್ನು ಗಮನಿಸಿದಾಗ ಚನ್ದ್ರನನ್ದಿ, ತವಣನ್ದಿಯರು ಮೂಲಸಂಘ ದೇಸಿಯಗಣದ ಚಂದ್ರಿಕಾವಾಟ ವಂಶಕ್ಕೆ ಸೇರಿದವರಾಗಿದ್ದರು ಎಂಬುದನ್ನು ದೃಢಪಡಿಸಬಹುದು. ಶಾಸನದ ಕೊನೆಯಲ್ಲಿ 'ಸ್ವದತ್ತಂಪರದತ್ತಂ' ಎಂಬ ಸಾಂಪ್ರದಾಯಿಕ ಶಾಪಾಶಯ ಇದ್ದು ಲಿಪಿಕಾರ 'ಇನ್ದರ ಸೇನಬೋವ ಕುನ್ದಮಯ್ಯ' ಎಂಬುದನ್ನು ತಿಳಿಸುತ್ತದೆ.

ರಾಷ್ಟ್ರಕೂಟರ ರಾಜಸತ್ತೆಯಲ್ಲಿ ಜೈನಧರ್ಮ ಊರ್ಧ್ವಗೊಂಡಿದ್ದು ಸತ್ಯ. ಅಂತೆಯೇ ದಿಟ್ಟತನದ ಜೈನ ಸೇನಾನಿಗಳನ್ನೂ ಪೋಷಣೆ ಮಾಡಿದ್ದು ದಿಟ. ಈ ಮನೆತನದ ಯಾವೊಬ್ಬ ದೊರೆಯೂ ಹಾವೇರಿ ಪರಿಸರದಲ್ಲಿ ಬಸದಿಗಳನ್ನು ಕಟ್ಟಿಸಲಿಲ್ಲ. ಜೀರ್ಣೋದ್ಧಾರಗೊಳಿಸಲಿಲ್ಲ. ಆದರೆ ನೂರಾರು ಬಸದಿಗಳನ್ನು ನಿತ್ಯಪೊಸದಾಗಿಸುವ ಶಕ್ತಿ ಸಾಮರ್ಥ್ಯ ಹೊಂದಿದ ಚೆಲ್ಲಕೇತನರನ್ನು ನೆಲೆಗೊಳಿಸಿದರು. ಪೋಷಿಸಿದರು. ಅಧಿಕಾರ ಕೊಟ್ಟರು. ರಾಷ್ಟ್ರಕೊಟ್ಟರು. ಜೈನ ಮತಾವಲಂಬಿಗಳಾಗಿದ್ದ ಚಲ್ಲಕೇತನರು ಹಾವೇರಿ ಪರಿಸರದ ಬಂಕಾಪುರವನ್ನು ತಮ್ಮ ಆಡಳಿತದ ಮುಖ್ಯಕೇಂದ್ರವನ್ನಾಗಿಸಿಕೊಂಡಿದ್ದರು. ಎರಕೋರಿಯಿಂದ ಆರಂಭವಾದ ಈ ಮನೆತನ "ಒಂದನೆಯ ಧೋರ > ಒಂದನೆಯ ಬಂಕೇಯ (ಕ್ರಿ.ಶ. ೮೬೦) ಇವನ ಮಕ್ಕಳಾದ ಕುಂದಟ್ಟೆ (ಕ್ರಿ.ಶ. ೮೭೮) ಲೋಕಾದಿತ್ಯ (ಕ್ರಿ.ಶ. ೮೯೬), ಲೋಕಾದಿತ್ಯನ ಮಕ್ಕಳಾದ ಒಂದನೆಯ ಕಲಿವಿಟ್ಟ, ಎರಡನೆಯ ಧೋರ (ಕ್ರಿ.ಶ. ೯೦೫) ಎರಡನೆಯ ಬಂಕೇಯ (ಕ್ರಿ.ಶ. ೯೧೦), ಎರಡನೆಯ ಬಂಕೇಯನ ಮಗನಾದ ಎರಡನೆಯ ಕಲಿವಿಟ್ಟ (ಕ್ರಿ.ಶ. ೯೪೫)"[೭೧] ಹೀಗೆ ೦೬ ತಲೆಮಾರುಗಳ ಆಳ್ವಿಕೆ ಹಾವೇರಿ ಪರಿಸರದಲ್ಲಿ ಜೈನಧರ್ಮಕ್ಕೆ ಮತ್ತಷ್ಟು ಔನತ್ಯವನ್ನು ತಂದುಕೊಟ್ಟಿತು.

ಚಲ್ಲಕೇತನರ ಒಂದನೆಯ ಧೋರ ಬಂಕಾಪುರದಲ್ಲಿ ಚಂದ್ರಪ್ರಭ ಜಿನಾಲಯವನ್ನು,[೨೨] ಒಂದನೆಯ ಬಂಕೇಯ ಕೊಣ್ಣೂರು (ಗೋಕಾಕ ತಾ/ಬೆಳಗಾವಿ ಜಿ) ಜಿನಾಲಯವನ್ನು[೨೩] ಕಲಿವಿಟ್ಟನು ಬಂಕಾಪುರ ಜಿನಾಲಯವನ್ನು,[೨೪] ಲೋಕಟೆ (ಲೋಕಾದಿತ್ಯ)ಯು ಬಂದಳಿಕೆ (ಶಿಕಾರಿಪುರ ತಾ/ಶಿವಮೊಗ್ಗ ಜಿ) ಬಸದಿಯನ್ನು[೨೫] ಮತ್ತು ಲೋಕಾಪುರ ಬಸದಿ (ಮುಧೋಳ ತಾ/ಬಿಜಾಪುರ ಜಿ)ಯನ್ನು[೨೬] ನಿರ್ಮಿಸಿದರು. ಇಷ್ಟೇ ಅಲ್ಲದೇ ಬಂಕಾಪುರ ಒಂದು ಪ್ರಸಿದ್ಧ ಜೈನ ತೀರ್ಥವಾಯ್ತು. ಹೀಗೆ ರಾಷ್ಟ್ರಕೂಟರು ಮತ್ತು ಅವರ ಸಾಮಂತರಾದ ಚಲ್ಲಕೇತನರು ಹಾವೇರಿ ಪರಿಸರದಲ್ಲಿ ಜೈನ ಧರ್ಮವನ್ನು ರಸಫಟ್ಟಿಸಿದರು. ಕೊನೆಗೆ ಇದೇ ಬಂಕಾಪುರದಲ್ಲಿ ರಾಷ್ಟ್ರಕೂಟರ ನಾಲ್ಕನೆಯ ಇಂದ್ರ ಸಲ್ಲೇಖನದೊಂದಿಗೆ ಸಮಾಧಿ ಮರಣ ಹೊಂದಿದ.

### ೧೫. ಕಲ್ಯಾಣದ ಚಾಳುಕ್ಯರು (ಕ್ರಿ.ಶ. ೯೭೩–೧೧೯೮).

ಇಮ್ಮಡಿ ತೈಲಪ (ಕ್ರಿ.ಶ. ೯೭೩–೯೭)ನಿಂದ ಕರ್ನಾಟಕದ ಉತ್ತರ ಭಾಗದಲ್ಲಿ ಆಳ್ವಿಕೆಯನ್ನು ಪ್ರಾರಂಭಿಸಿದ ಚಾಳುಕ್ಯರು, ನಾಲ್ಕನೆಯ ಸೋಮೇಶ್ವರ (ಕ್ರಿ.ಶ. ೧೧೫೮–೯೮) ಕಾಲದವರೆಗೂ ರಾಜ್ಯಭಾರ ಮಾಡಿದರು. ನರ್ಮದೆಯಿಂದ ಕಾವೇರಿ ನದಿಯವರೆಗೂ ಹಬ್ಬಿದ್ದ ಇವರ ಸಾಮ್ರಾಜ್ಯ ಸುಧೀರ್ಘ ೨೦೦ ವರ್ಷ (ಕಳಚೂರ್ಯರು ಆಕ್ರಮಿಸಿದ ಸಾಮ್ರಾಜ್ಯವನ್ನು ಹೊರತುಪಡಿಸಿ)[೨೭]ಗಳ ಕಾಲ ಆಡಳಿತ ನಡೆಸಿತು. ಕಲ್ಯಾಣ (ಬಸವ ಕಲ್ಯಾಣ)ವನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದ ಚಾಳುಕ್ಯರಿಗೆ 'ಕಲ್ಯಾಣ ಚಾಳುಕ್ಯ' ಎಂಬ ಅಭಿದಾನ ಬಂದಿರುವುದು ದಿಟ. ಈ ಮನೆತನದಲ್ಲಿ ತ್ರಿಭುವನಮಲ್ಲ ವಿಶೇಷಣದ ಆರನೆಯ ವಿಕ್ರಮಾದಿತ್ಯ (ಕ್ರಿ.ಶ. ೧೦೭೬–೧೧೨೬)ನು ಕರ್ನಾಟಕ ಕಂಡ ಅಗ್ರಪಂಕ್ತಿಯ ರಾಜರಲ್ಲಿ ಒಬ್ಬನಾಗಿದ್ದ. ಇಡೀ ಪ್ರಪಂಚದಲ್ಲಿಯೇ ಅತೀ ಹೆಚ್ಚು ಶಾಸನಗಳನ್ನು ಹಾಕಿಸಿದ ಕೀರ್ತಿ ಇವನಿಗೆ ಸಲ್ಲುತ್ತದೆ.

ಶೈವ ಮತಾವಲಂಬಿಗಳಾದ ಚಾಳುಕ್ಯರು; ಜೈನರಾಗಿದ್ದೂ ಉಂಟು. ಜಗದೇಕಮಲ್ಲ ಎರಡನೆಯ ಜಯಸಿಂಹ (ಕ್ರಿ.ಶ. ೧೦೧೫–೧೦೪೪) ಜೈನನಾಗಿದ್ದು ಅವನನ್ನು ವೀರಶೈವ ಧರ್ಮಕ್ಕೆ ಮತಾಂತರ ಮಾಡಲಾಗುತ್ತದೆ.[೨೮] ಧಾರ್ಮಿಕ ವಲಸೆಗಳು ಚಾಳುಕ್ಯರಲ್ಲಿ ಕಂಡುಬಂದರೂ ಜೈನಧರ್ಮಕ್ಕೆ ಸಾಕಷ್ಟು ಒಳಿತುಗಳನ್ನು ಮಾಡಿದ್ದಾರೆ. ಅಂದಂದಿನ ಧಾರ್ಮಿಕ ಆಂದೋಲನಗಳು ಪ್ರಭುತ್ವದ ಜೊತೆಗೆ ಮುಖಾಮುಖಿಗೊಂಡು ತಮ್ಮ ಪ್ರಭಾವ ಬೀರುವುದು ಸಹಜ ಪ್ರಕ್ರಿಯೆ. ಇದಕ್ಕೆ ಚಾಳುಕ್ಯರೂ ಹೊರತಾದವರಲ್ಲ. ಇವರ ಕಾಲಾವಧಿಯಲ್ಲಿ ಶೈವ ಪಂಥಗಳಾದ ಕಾಳಾಮುಖ, ಪಾಶುಪತ ಮತ್ತು ವೀರಶೈವ ಸಂಪ್ರದಾಯಗಳು ಪ್ರಬಲವಾಗಿದ್ದವು. ಅಂತೆಯೇ ಈ ಘಟ್ಟದಲ್ಲಿ ಜಿನಧರ್ಮದ ಪ್ರಭಾವನೆಯ ಏರಿಳಿತಗಳು ಸಹಜವಾಗಿದ್ದವು.

ಶಕ್ತಿಕವಿ ರನ್ನ, ನಾಗಚಂದ್ರ, ಬ್ರಹ್ಮಶಿವ, ನಯಸೇನ ಇವರುಗಳು ಚಾಳುಕ್ಯರ ಕಾಲದ ಅಗ್ರಪಂಕ್ತಿಯ ಜೈನಕವಿಗಳು. ಇವರಲ್ಲಿ ರನ್ನನನ್ನು ಹೊರತುಪಡಿಸಿ ಉಳಿದವರು ಸ್ವತಂತ್ರ ಕವಿಗಳು.

ರನ್ನ ಮಾತ್ರ ಸತ್ಯಾಶ್ರಯ ಇವಬೆಡಂಗನ ಆಸ್ಥಾನ ಕವಿಯಾಗಿದ್ದ. ರನ್ನನು 'ಅಜಿತ ತೀರ್ಥಂಕರ ಪುರಾಣ ತಿಲಕಂ; 'ಸಾಹಸಭೀಮ ವಿಜಯ', ನಾಗಚಂದ್ರನು 'ಮಲ್ಲಿನಾಥ ಪುರಾಣ', 'ರಾಮಚಂದ್ರಚರಿತ ಪುರಾಣ' ಎಂಬ ಆಗಮಿಕ ಮತ್ತು ಲೌಕಿಕ ಕಾವ್ಯಗಳನ್ನು ರಚನೆ ಮಾಡಿದರೆ; ಬ್ರಹ್ಮಶಿವನು 'ಸಮಯ ಪರೀಕ್ಷೆ', ನಯಸೇನನು 'ಧರ್ಮಾಮೃತ' ಎಂಬ ಕೃತಿಗಳನ್ನು ರಚಿಸಿ ಜೈನಧರ್ಮದ ಪಾರಮ್ಯತೆ ಮತ್ತು ಜೈನೇತರ ಧರ್ಮಗಳನ್ನು ವಿಡಂಬನೆ ಮಾಡಿದರು.

ಕಲ್ಯಾಣ ಚಾಲುಕ್ಯರ ಕಾಲಾವಧಿಯಲ್ಲಿ ನೆನೆಸಿಕೊಳ್ಳಬಹುದಾದ ಬಹುದೊಡ್ಡ ಹೆಸರು ಅತ್ತಿಮಬ್ಬೆಯದು. ಪೊನ್ನಕವಿಯ 'ಶಾಂತಿಪುರಾಣ'ವನ್ನು ೧೦೦೦ ಪ್ರತಿಗಳನ್ನು ಮಾಡಿಸಿ, ೧೫೦೦ ಬಸದಿಗಳನ್ನು, ೧೫೦೦ ಜಿನಬಿಂಬಗಳನ್ನು ಮತ್ತು ಮಣಿಗಂಟೆಗಳನ್ನು ಮಾಡಿಸಿದ ಕೀರ್ತಿಯಿಂದ ಅತ್ತಿಮಬ್ಬೆಯು 'ದಾನಚಿಂತಾಮಣಿ' ಎಂಬ ಅಭಿದಾನಕ್ಕೆ ಭಾಜನಳಾದಳು. ರನ್ನನಿಗೆ ಅಜಿತಪುರಾಣವನ್ನು ಬರೆಯುವಂತೆ ಪ್ರೋತ್ಸಾಹವಿತ್ತ ಅತ್ತಿಮಬ್ಬೆಯು ಕನ್ನಡ ಸಾಹಿತ್ಯದಲ್ಲಿ ಮತ್ತು ಜೈನ ಸಂಸ್ಕೃತಿಯಲ್ಲಿ ಒಂದು ಸ್ಮರಣಿಕೆ. ಇವಳ ಇಡೀ ಕುಟುಂಬ ಚಾಳುಕ್ಯರ ನೆಚ್ಚಿನ ಸೇವಕರಾಗಿದ್ದರು. "ಕರ್ನಾಟಕವನ್ನು ಆಳಿದ ಕಲ್ಯಾಣ ಚಾಳುಕ್ಯ ಸಾಮ್ರಾಜ್ಯಕ್ಕಾಗಿ ಒಂದು ಇಡೀ ಕುಟುಂಬ ಬಲಿದಾನವಾಯಿತು; ಅದೇ ಅತ್ತಿಮಬ್ಬೆಯ ಮನೆತನ. ಆಕೆ ತಂದೆ ಮಲ್ಲಪಯ್ಯ. ಚಿಕ್ಕಪ್ಪ ಪುನ್ನಮಯ್ಯ, ಸೋದರರಾದ ಗುಂಡಮಯ್ಯ ಎಳಮಯ್ಯ ಪೊನ್ನಮಯ್ಯ ಅಹವಮಲ್ಲ ವಲ್ಲ ಎಂಬ ಐವರು, ಮಾವನಾದ ದಲ್ಲಪಯ್ಯ, ಗಂಡನಾದ ನಾಗದೇವ, ಮಗನಾದ ಅಣ್ಣಿಗದೇವ ಇವರೆಲ್ಲರೂ ಚಾಳುಕ್ಯ ಸೈನ್ಯದ ಚಮೂಪತಿಗಳಾಗಿ ಹೋರಾಡಿದರು."[೭೯]

ಬೆಳಗಾವಿ, ಹುಣಸೇಕಟ್ಟಿ, ಹೂಲಿ, ಬೈಲಹೊಂಗಲ, ಕೊಣ್ಣೂರು, ಸವದತ್ತಿ (ಬೆಳಗಾವಿ ಜಿ), ಗುಡಗೇರಿ, ಅಮ್ಮಿನಬಾವಿ, ಅಣ್ಣಿಗೆರೆ, ಡೋಣಿ (ಧಾರವಾಡ ಜಿ), ಲಕ್ಷ್ಮೇಶ್ವರ, ಲಕ್ಕುಂಡಿ (ಗದಗ ಜಿ) ಕಮ್ಮಟದುರ್ಗ್ಗ, ಅನೆಗೊಂದಿ, ಕೊಪ್ಪಳ, (ಕೊಪ್ಪಳ ಜಿ). ಉದ್ಧರೆ, ಹೆಬ್ಬಂಡೆ, ಹಿರೇಆವಲಿ, ಈಸೂರು, ಬಳ್ಳಿಗಾವೆ, ಗೊಗ್ಗ, ಸಾಲೂರು (ಶಿವಮೊಗ್ಗ ಜಿ), ಶಾಮನೂರು (ದಾವಣಗೆರೆ ಜಿ), ಕೋಗಳಿ (ಬಳ್ಳಾರಿ ಜಿ), ಮಸ್ಕಿ (ರಾಯಚೂರು ಜಿ), ಇಂಗಳಗಿ, ಸೇಡಂ, ಅಡಕೆ (ಗುಲ್ಬರ್ಗ ಜಿ) ಗೊರಟ, ಹೊನ್ನವಾಡ (ಬೀದರ ಜಿ) ಮುಂತಾದ ಊರುಗಳಲ್ಲಿ ಕಲ್ಯಾಣ ಚಾಳುಕ್ಯರ ಕಾಲಾವಧಿಯಲ್ಲಿ ಬಸದಿಗಳೆದ್ದಿವೆ. ದಾನದತ್ತಿಗಳು ಸಂದಿವೆ. ಬಿಜಾಪುರ ಜಿಲ್ಲೆಯ ಬಾಗೇವಾಡಿ ತಾಲ್ಲೂಕಿನ ಇಂಗಳೇಶ್ವರದಲ್ಲಿ ಆರನೆಯ ವಿಕ್ರಮಾದಿತ್ಯನ ರಾಣಿಯಾದ ಚಾಕಲದೇವಿಯು ಕ್ರಿ.ಶ. ೧೦೯೪ರಲ್ಲಿ ಬಸದಿಯೊಂದನ್ನು ಕಟ್ಟಿಸಿದ್ದು ಹೆಗ್ಗುರುತು.[೮೦] ನಾಡಿನ ವಿವಿಧ ಸ್ಥಳಗಳಲ್ಲಿ ಬಸದಿಗಳನ್ನು ಕಟ್ಟಲು ಸಹಕರಿಸಿದ ಚಾಳುಕ್ಯರು ಹಾವೇರಿ ಪ್ರದೇಶದಲ್ಲಿಯೂ ಈ ರೀತಿಯ ಜೈನಧಾರ್ಮಿಕ ಕಟ್ಟಡಗಳನ್ನು ನಿರ್ಮಿಸುವಲ್ಲಿ ಬೆಂಬಲಿಸಿದರು.

ಹಾವೇರಿ ಪರಿಸರದ ಜೈನಧರ್ಮಕ್ಕೆ ಕಲ್ಯಾಣ ಚಾಳುಕ್ಯರ ಕೊಡುಗೆ ಅನನ್ಯ. ಇವರ ಕಾಲಾವಧಿಯಲ್ಲಿ ಅಜಿತಸೇನಾಚಾರ್ಯರ ನೇತೃತ್ವದಲ್ಲಿ ಬಂಕಾಪುರ ಒಂದು ಜೈನ ವಿದ್ಯಾಕೇಂದ್ರವಾಗಿ ಬೆಳೆಯಿತು. ಈ ವಿದ್ಯಾಕೇಂದ್ರದ ಬಹುದೊಡ್ಡ ಪ್ರತಿಭೆ ಶಕ್ತಿಕವಿ ರನ್ನ. ಬಸದಿಗಳ ನಿರ್ಮಾಣ, ಮುನಿಗಣಗಳ ಸಂಚಾರ ಚಾಳುಕ್ಯರ ಅವಧಿಯಲ್ಲಿ ಹಾವೇರಿ ಪರಿಸರದೊಳಗೆ ಸಾಂಗವಾಗಿತ್ತು. ಇವರ ತೇದಿ ಸಹಿತ ೧೮ ಅತೇದಿಯಾಗಿ ೨೦ ಒಟ್ಟು ೩೮ ಜೈನ ಶಾಸನಗಳು ಈ ಪರಿಸರದಲ್ಲಿ ದೊರೆತಿವೆ.

ಚಾಳುಕ್ಯ ಮನೆತನದ ಹಾವೇರಿ ಪರಿಸರದ ಪ್ರಥಮ ಶಾಸನ ರಾಣೇಬೆನ್ನೂರು ತಾಲ್ಲೂಕಿನ ಗುಡ್ಡದ ಬೇವಿನಹಳ್ಳಿಯದು.[೮೧] ಅತೇದಿ ಈ ಶಾಸನ ಚಾಳುಕ್ಯರ ಕಾಲಾವಧಿಯ ಪ್ರಾರಂಭಿಕ ಲಿಪಿಯನ್ನು ಹೊಂದಿದ್ದು, ಮೊದಲ ಪಾದನಿಸಿಧಿ ಎನಿಸಿದೆ. ನಾಗರಖಂಡ-೭೦ರ ನಾಳ್ಗಾವುಂಡಿಯಾದ ಜಕ್ಕಣಬ್ಬೆ (ಕ್ರಿ.ಶ. ೯೧೨-೯೧೮)ಯು ಗುರುಭಕ್ತಿಯಿಂದ ಈ ನಿಸಿಧಿ ಮಾಡಿಸಿದಳು. ಗುರು ಯಾರೆಂದು ಉಲ್ಲೇಖಗೊಂಡಿಲ್ಲ. 'ಪರಮಗುಣಯುಕ್ತರ್ ಅಮಳಿನ ಚರಿತರ್' ಎಂಬ ಗುಣಾವಳಿ ಮಾತ್ರ ಉಕ್ತಗೊಂಡಿವೆ. ಇದೇ ಶಾಸನದಲ್ಲಿ ಚಲ್ಲಪಯ್ಯ ದೇಗುಲವನ್ನು ಮಾಡಿದರು ಎಂದಿದೆ. ಯಾವ ಬಸದಿ ಎಂದು ಹೆಸರಿಸಿಲ್ಲ. ಇದೊಂದು ಚೌಕಾಕಾರದ ಸ್ವತಂತ್ರ ಶಿಲೆಯ ಪಾದ ನಿಸಿಧಿಯಾದ್ದರಿಂದ ಮೂಲಸ್ಥಳದಿಂದ ಪಲ್ಲಟಗೊಂಡಿದೆ.

ಹಾವೇರಿ ಪರಿಸರದ ಎರಡನೆಯ ಚಾಳುಕ್ಯ ಜೈನ ಶಾಸನ ಲಭ್ಯವಾಗುವುದು ಅರಟಾಳ (ಶಿತಾ)ದಲ್ಲಿ ತ್ರೈಲೋಕ್ಯಮಲ್ಲ ಮೊದಲನೆಯ ಸೋಮೇಶ್ವರನ ಆಡಳಿತಾವಧಿಯ ಈ ಶಾಸನ ಕ್ರಿ.ಶ. ೧೦೬೧ರಲ್ಲಿ ರಚನೆಯಾಗಿದೆ.[೮೨] ಈ ಸಂದರ್ಭದಲ್ಲಿ ಗಂಗವಾಡಿ ೯೬೦೦೦ ಮತ್ತು ಬನವಾಸಿ ೧೨೦೦೦ದ ಅಧೀನದಲ್ಲಿದ್ದು, ಹಾನಗಲ್ಲು-೫೦೦ನ್ನು ಮಹಾಮಂಡಲೇಶ್ವರನಾದ ಹರಿಕೇಸರಿದೇವ ಆಳ್ವಿಕೆ ಮಾಡುತ್ತಿದ್ದ. ಇವನು ಮತ್ತು ಹೆಂಡತಿಯಾದ ಲಚ್ಚಲದೇವಿ ಸೇರಿ ಅರಟಾಳದಲ್ಲಿ ಇದ್ದ 'ಹರಿಯಬ್ಬೆಯ ಬಸದಿ'ಯ ಜೀರ್ಣೋದ್ಧಾರಕ್ಕೆ ಎರಡು ಮತ್ತರು ಭೂಮಿಯನ್ನು ಕೊಟ್ಟುದುದಾಗಿ ಶಾಸನದಿಂದ ತಿಳಿದುಬರುತ್ತದೆ.

ಜಿನಮುನಿ ಪರಂಪರೆಯ ಸಂಘ, ಗಣ, ಗಚ್ಛಗಳನ್ನು ಪ್ರಸ್ತಾಪಿಸಿದ ಈ ಪರಿಸರದ ಮೊದಲ ಶಾಸನವಿದು. ಮೂಲಸಂಘ ಸೇನಗಣ ಚಂದ್ರ(ದ್ರಿ)ಕಾವಾಟ ಗಚ್ಛದ ಕನಕಸೇನ, ಅಜಿತಸೇನ, ನರೇಂದ್ರಸೇನ, ಸಮನ್ತಭದ್ರ, ಅಷ್ಟೋಪವಾಸಿ, ದೇವಸೇನ ಮುನಿ ಪರಂಪರೆಯ ಗುರ್ವಾವಳಿಯನ್ನು ಇಲ್ಲಿ ದರ್ಶಿಸಬಹುದು. ದಾನಕೊಟ್ಟ ಭೂಮಿಯ ಗಡಿ (ಮೇರೆ) ಗುರುತಿಸುವ ಕಲ್ಲಿಗೆ 'ಸವಣ್ಗಲ್ಲು' (ಸವಣ + ಕಲ್ಲು) ಎಂಬ ವಿಶೇಷ ಪದಪ್ರಯೋಗವಾಗಿರುವುದನ್ನು ಈ ಶಾಸನದಲ್ಲಿ ಗಮನಿಸಬಹುದು.

ಮೊದಲನೆಯ ಸೋಮೇಶ್ವರನ ಮತ್ತೊಂದು ಶಾಸನ ಮೋಟೆಬೆನ್ನೂರಿ (ಬ್ಯಾತಾ)ನಲ್ಲಿ ದೊರೆಯುತ್ತದೆ.[೮೩] ಕ್ರಿ.ಶ. ೧೦೬೬ರಲ್ಲಿ ರಚನೆಯಾದ ಈ ಕಲ್ಬರಹವು ಬನವಾಸಿ ೧೨೦೦೦ವನ್ನು ಮಹಾಮಣ್ಡಳೇಶ್ವರ ಲಕ್ಷ್ಮರಸನು, ಸತ್ತಳಿಗೆ ೭೦ನ್ನು ಗೋಯಿಮ್ಮರಸ ಆಳುತ್ತಿದ್ದರು ಎಂದು ತಿಳಿಸುತ್ತದೆ. ಬೆಣ್ಣೆವುರ (ಮೋಟೆಬೆನ್ನೂರು) ಪೆಳೆಯಗೆರೆಯಲ್ಲಿ ಆಯ್ಚಿಮಯ್ಯ ನಾಯಕ ಮಾಡಿಸಿದ ಶಾನ್ತಿನಾಥ ಜಿನೇಂದ್ರಭವನಕ್ಕೆ ಮಹಾಮಂಡಳೇಶ್ವರನಾದ ಲಕ್ಷ್ಮರಸನು ಚಂದ್ರಿಕಾವಾಟ ವಂಶದ ಮುನಿ ಶಾಸ್ತಿಣನ್ದಿಭಟ್ಟಾರಕರ ಕಾಲುತೊಳೆದು ಭೂಮಿಯನ್ನು ದಾನಕೊಟ್ಟಿದ್ದು ಶಾಸನದ ಮುಖ್ಯಸಾರ.

ತ್ರಿಭುವನಮಲ್ಲ ಬಿರುದಾಂಕಿತ ಆರನೆಯ ವಿಕ್ರಮಾದಿತ್ಯ (ಕ್ರಿ.ಶ. ೧೦೭೬–೧೧೨೭)ನ ಆಳ್ವಿಕೆಯ ಗುರುತಾಗಿ ಏಳು ಜೈನಶಾಸನಗಳು ಹಾವೇರಿ ಪರಿಸರದಲ್ಲಿ ಲಭ್ಯವಿವೆ. ಕ್ರಿ.ಶ. ೧೦೭೮ರ ಯಳವಟ್ಟಿ (ಹಾನತಾ) ನಿಸಿಧಿ ಶಾಸನ ಮೂಲಸಂಘ ದೇಸಿಯ ಗಣದ ಚಂದ್ರದೇವ ಮುನಿಯ ಪ್ರೀತಿಯ ಶಿಷ್ಯ ಸೇನಬೋವ ಕೇತಯ್ಯ ಸಮಾಧಿ ವಿಧಾನದಿಂದ ಮುಡಿಪಿದ್ದಾಗಿ ತಿಳಿಸುತ್ತದೆ.[೮೪] ಇದೇ ಕಾಲಘಟ್ಟದ ಇಲ್ಲೇ ಇರುವ ಇನ್ನೊಂದು ನಿಸಿಧಿಯು ಮೂಲಸಂಘ ದೇಸಿಗಣ ಪೊಸ್ತಕಗಚ್ಛ ಕೊಂಡಕುಂದಾನ್ವಯದ ದೇವಕೀರ್ತಿ ಭಟ್ಟಾರಕರ ಶಿಷ್ಯ ಸಿವಿರಶೆಟ್ಟಿ ಸಮಾಧಿ ವಿಧಾನದಿಂದ ಆನಂದ ಸಂವತ್ಸರದ ಆಷಾಢ ಶುದ್ಧ ಪಂಚಮಿ ಆದಿವಾರ ಪೂರ್ವಾಹ್ಣದಲ್ಲಿ ಸ್ವರ್ಗಸ್ತನಾದುದರ ಬಗ್ಗೆ ಉಲ್ಲೇಖಿಸುತ್ತದೆ.[೮೫] ದೇವಕೀರ್ತಿ ಭಟ್ಟಾರಕರ ಗುಡ್ಡನಾದ ಕಲ್ಲಇ ಎಂಬುವನು ಸಾಧಾರಣ ಸಂವತ್ಸರದ ಶ್ರಾವಣ ಬ ೯ ಆ(ದಿವಾರ) ಮೂರನೆಯ ಜಾವದಲು ಸಮಾಧಿ ವಿಧಿಯಿಂದ ಮಡಿದ ಇನ್ನೊಂದು ಅಪ್ರಕಟಿತ ನಿಸಿಧಿ ಈ ಊರಲ್ಲಿಯೇ ದೊರೆತಿದೆ.[೮೬] ಹಾವೇರಿ ಪರಿಸರದಲ್ಲಿಯೇ ವ್ರತಧಾರಿ ಸಮಾಧಿ ಹೋದ ವೇಳೆಯನ್ನು ಉಲ್ಲೇಖಿಸುವ ಪ್ರಥಮ ಶಾಸನಗಳಿವು. ನಾಲ್ಕನೆಯ ನಿಸಿಧಿ ಶಾಸನವು ತಿಳುವಳ್ಳಿ (ಹಾನತಾ)ಯಲ್ಲಿ ದೊರೆತಿದ್ದು. ಕ್ರಿ.ಶ. ೧೧೦೩ರಲ್ಲಿ ರಚನೆಯಾಗಿದೆ.[೮೭] ಪುನ್ನಾಗವ್ರಿಕ್ಷ ಕಾಣೂರುಗಣದ ತ್ರಿಪಾತ್ರದೇವ ಮುನಿಯ ಶಿಷ್ಯ ಚಿತ್ರಿಲಿ ನಾಗಯ್ಯನ ಮಗ ಬಂದಮ್ಮ ಪೂಜಾರಿ ದೇವಯ್ಯ ಸಮಾಧಿ ಮರಣ ಹೊಂದಿದ ವಿಷಯ ಶಾಸನದಲ್ಲಿ ಪ್ರಸ್ತಾಪಿತವಾಗಿದೆ. ಪುನ್ನಾಗವ್ರಿಕ್ಷ ಗಣವು 'ಯಾಪನೀಯ ಸಂಘ'ದ್ದಾಗಿದ್ದು, ಇದೊಂದು ಯಾಪನೀಯ ಸಂಘಕ್ಕೆ ಸೇರಿದ ಶಾಸನವಾಗಿದೆ.

ಕ್ರಿ.ಶ. ೧೧೨೨ರಲ್ಲಿ ಹಾನುಗಲ್ಲು ಕದಂಬರು ಚಾಳುಕ್ಯರ ಮಾಂಡಳಿಕರಾಗಿದ್ದರು ಎಂಬುದಕ್ಕೆ ಅರಟಾಳ (ಶಿತಾ) ಶಾಸನ ಪ್ರಮಾಣವಾಗಿ ನಿಲ್ಲುತ್ತದೆ. ಚಾಳುಕ್ಯಕುಲಕ್ಕೆ ಆಭರಣನೂ ಆದ ತ್ರಿಭುವನಮಲ್ಲ ರಾಜ್ಯವಾಳುತ್ತಿದ್ದ ಸಂದರ್ಭದಲ್ಲಿ ಬನವಾಸಿ ೧೨೦೦೦ ಮತ್ತು ಪಾನುಂಗಲ್ಲು ೫೦೦ನ್ನು ಹಾನುಗಲ್ಲ ಕದಂಬರ ತೈಲಪದೇವ ಮಂಡಳೇಶ್ವರ ವೃತ್ತಿಯಿಂದ ಆಳುತ್ತಿದ್ದ. ಹಾನಗಲ್ಲು ಕದಂಬರು ತಾವು 'ಬನವಾಸಿ ಕದಂಬ' ಮೂಲದವರು ಎಂದು ಶಾಸನದಲ್ಲಿ ಹೇಳಿಕೊಂಡಿದ್ದಾರೆ. ಪ್ರಮಾಣವಾಗಿ ಆದಿ ಕದಂಬರ ಮಯೂರ ವರ್ಮನ ಪ್ರಶಸ್ತಿಗಳನ್ನು ಬಳಸಿಕೊಳ್ಳಲಾಗಿದೆ. ಈ ಶಾಸನದ ಮುಖ್ಯಗ್ರಹಿತೆ ಕ್ರಿ.ಶ. ೧೧೨೨ರಲ್ಲಿ ಪಯಿಟ್ಟಣದ (ಅರಟಾಳ) ಬೆಟ್ಟಕೇರಿಯ ಗಂಗರ

ಬಮ್ಮಿಸೆಟ್ಟಿ ಮಾಡಿಸಿದ. ಬಸದಿಗೆ ಮೂರುಕೇರಿಯ ಪ್ರಭುಗಾಮುಂಡರುಗಳು ಅರವತ್ತೊಕ್ಕಲು, ಐನೂರ್ವರು ಸೇರಿ ಭೂದಾನ ಸುಂಕದಾನ ಬಿಟ್ಟರು.[೮೮] ದಾನ ಬಿಡುವ ಬಹುಕಾಲದ ಹಿಂದೆಯೇ ಬಮ್ಮಿಸೆಟ್ಟಿ 'ಪಾರ್ಶ್ವನಾಥ ಜಿನಾಲಯ'ವನ್ನು ನಿರ್ಮಿಸಿದ್ದ. ಕಾಲ ಅಲಭ್ಯ. ಮೂಲಸಂಘ ಕಾಣೂರ್ಗ್ಗಣದ ಮೇಷಪಾಷಾಣಗಚ್ಛದ ಕನಕಸಿದ್ಧಾಂತದೇವರ ಗುಣಾವಳಿಯ ಸುಂದರ ಚಿತ್ರಣ ಶಾಸನದಲ್ಲಿದೆ.

ಆರನೆಯ ವಿಕ್ರಮಾದಿತ್ಯನ ಆಳ್ವಿಕೆಯ ಇನ್ನೊಂದು ಶಾಸನ ಹೊನ್ನತ್ತಿ (ರಾತಾ)ಯದು.[೮೯] ತ್ರುಟಿತ ಮತ್ತು ಅಪೂರ್ಣವಾದ ಈ ಶಾಸನ ಬಸದಿಯ ನಿರ್ಮಾಣವನ್ನು ಪ್ರಸ್ತಾಪಿಸುತ್ತದೆ. ಗುಣಭದ್ರ ಮಲಧಾರಿ ದೇವನ ಶಿಷ್ಯನೊಬ್ಬ ಪೊಂನವರ್ತ್ತಿ (ಹೊನ್ನತ್ತಿ)ಯಲ್ಲಿ ಬಸದಿಯೊಂದನ್ನು ನಿರ್ಮಿಸಿ ದಾನಬಿಟ್ಟ ವಿಷಯಗಳು ಇಲ್ಲಿವೆ. ಸೇವುಣರ ಸಿಂಹಣದೇವ (ಸೇವುಣದೇವ ಕ್ರಿ.ಶ. ೧೧೨೩-೪೨) ವಿಕ್ರಮಾದಿತ್ಯನ ಮಾಂಡಳಿಕನಾಗಿದ್ದು ಸೇಗುಣದೇಶ ಪಳಿಯಣ್ಡ ನಾಲ್ಸಾಸಿರ, ಹೊನ್ನವರ್ತಿ ಅಗ್ರಹಾರಗಳನ್ನು ನೋಡಿಕೊಳ್ಳುತ್ತಿದ್ದ. ಸಿಂಹಣದೇವನ ಆಳ್ವಿಕೆಯ ಪ್ರಾರಂಭ ಕ್ರಿ.ಶ. ೧೧೨೩. ವಿಕ್ರಮಾದಿತ್ಯನ ಆಳ್ವಿಕೆಯ ಅಂತ್ಯ ಕ್ರಿ.ಶ. ೧೧೨೬. ಆದ್ದರಿಂದ ಶಾಸನ ರಚನೆಯ ಕಾಲ ಕ್ರಿ.ಶ. ೧೧೨೩-೨೬ರ ಮಧ್ಯದ ಅವಧಿಯಲ್ಲಾಗಿದೆ. ಸಿಂಹಣದೇವನನ್ನು ಪ್ರಸ್ತಾಪಿಸುವ ಬೆರಳೆಣಿಕೆಯ ಶಾಸನಗಳಲ್ಲಿ ಹೊನ್ನತ್ತಿಯ ಜೈನಶಾಸನವೂ ಒಂದು.

ಆರನೆಯ ವಿಕ್ರಮಾದಿತ್ಯನ ಮತ್ತೊಂದು ಮಹತ್ತರವಾದ ಶಾಸನ ಬೆಳ್ವಂತಿ (ಬೆಳವತ್ತಿ ಹಾನತಾ)ಯದು.[೯೦] ಸವಣೂರು ಬೊಮ್ಮಿಶೆಟ್ಟಿ ಎಂಬುವನು ಈ ಊರಲ್ಲಿ ಬ್ರಹ್ಮಜಿನಾಲಯವೊಂದನ್ನು ಕಟ್ಟಿಸಿದ್ದು, ದತ್ತಿ ಬಿಟ್ಟಿದ್ದು ಶಾಸನದ ಮುಖ್ಯಸಾರ. ಇದೇ ಬಸದಿಗೆ ಬೆಳ್ವಂತಿಯ ಮೂನ್ನೂರು ಮಹಾಜನರು ವಾಸುಪೂಜ್ಯರ ಶಿಷ್ಯ ಮಾಘಣನ್ದಿ ಪಣ್ಡಿತದೇವರ ಕಾಲಂಕರ್ಚ್ಚಿ ದೇವರ ಅಂಗ-ರಂಗಭೋಗ, ನೈವೇದ್ಯಕ್ಕೆ ಹೊಲ-ನೆಲವನ್ನು ದಾನವಾಗಿ ಬಿಟ್ಟರು.

ಕರ್ನಾಟಕದಲ್ಲಿ ದೊರೆಯುವ ಕೆಲವೇ ಕೆಲವು [(ಕುಪ್ಪಟೂರು-ಶಿಜಿ, ಗಬ್ಬೂರು-ರಾಜಿ, ಭಾಲ್ಕಿ-ಬೀಜಿ, ಬಾಗಳಿ-ಬಿಜಿ, ಸಾಲೂರು-ಶಿಜಿ) ಇತ್ಯಾದಿ)] ಬ್ರಹ್ಮಜಿನಾಲಯಗಳಲ್ಲಿ ಬೆಳವಂತಿಯದು ಒಂದು. ಜೈನಪುರಾಣಗಳಲ್ಲಿ ಪ್ರಥಮ ತೀರ್ಥಂಕರನಾದ ಆದಿನಾಥನಿಗೆ ಆದಿಬ್ರಹ್ಮ ಎಂಬ ವಿಶೇಷಣವಿದೆ. ಆದಿಬ್ರಹ್ಮನ ಜಿನಾಲಯವೇ ಬ್ರಹ್ಮಜಿನಾಲಯ. ಈ ಜಿನಾಲಯದ ಮೂಲನಾಯಕ ಮೂರ್ತಿವೃಷಭನಾಥರದ್ದು. ಈ "ಆದಿ ತೀರ್ಥಂಕರರ ಬಸದಿಗೆ (ಆದಿ) ಬ್ರಹ್ಮಜಿನಾಲಯ ಎಂಬ ಹೆಸರು ಮೊದಲಿಗೆ ಬಳಕೆಯಲ್ಲಿ ಇದ್ದದ್ದು ಕ್ರಮೇಣ ಇತರ ತೀರ್ಥಂಕರರ ಬಸದಿಗೂ ಅನ್ವಯವಾಗತೊಡಗಿದೆ. ಕುಪಟೂರಿನ ಬಸದಿ ಪಾರ್ಶ್ವನಾಥ ತೀರ್ಥಂಕರರದು, ಸೇಡಿಂಬದ ಬಸದಿ ಶಾಂತಿನಾಥ ಜಿನರದು. ಈ ಬಸದಿಗಳಿಗೂ ಬ್ರಹ್ಮಜಿನಾಲಯ ಎಂಬ ಹೆಸರು ಅನ್ವಯ ಆಗಿರುವುದು ಉಚಿತವಾಗಿದೆ. ಏಕೆಂದರೆ ಅತ್ಯಂತಿಕವಾಗಿ ತೀರ್ಥಂಕರರೇ ಆದಿಬ್ರಹ್ಮರು.[೯೧]

ಬ್ರಹ್ಮಜಿನಾಲಯವನ್ನು ಹೊಂದಿದ ಸ್ಥಳಗಳಲ್ಲಿ ಲಕ್ಕುಂಡಿಗೆ ಅಗ್ರಸ್ಥಾನ. ತದನಂತರ ನೆಗಳ್ತೆಯಲ್ಲಿ ಎರಡನೆಯ ಸ್ಥಾನ ಬೆಳ್ವಂತಿಗೆ ಸಲ್ಲುತ್ತದೆ. ಏಕೆಂದರೆ ಲಕ್ಕುಂಡಿಯಲ್ಲಿ ಇರುವಂತೆ ಬ್ರಹ್ಮಜಿನಾಲಯ ಮತ್ತು ಘಟಾಂತಿಕೆ ಬಸದಿಗಳು ಬೆಳವಂತಿಯಲ್ಲೂ ಇದ್ದವು. ಪಾರ್ಶ್ವನಾಥನ ಯಕ್ಷಿ ಪದ್ಮಾವತಿಗೆ ಘಟಾಂತಿಕೆ ಎಂಬ ಪರ್ಯಾಯ ನಾಮವಿದೆ. ಹಾವೇರಿ ಪರಿಸರದಲ್ಲಿ ೧೨ನೆಯ ಶತಮಾನದ ಹೊತ್ತಿಗೆ 'ಯಕ್ಷಿ ಆರಾಧನೆ' ಪ್ರಬಲವಾಗಿದ್ದು ಅದು ಸ್ವತಂತ್ರ ಬಸದಿಯನ್ನು ನಿರ್ಮಿಸುವಷ್ಟು ಗಟ್ಟಿಗೊಂಡಿದೆ. ಜೈನರು ಮಾತೃ ಆರಾಧನೆಯ ಪರಂಪರೆಯತ್ತ ವಾಲುತ್ತಿರುವ ಪ್ರಕ್ರಿಯೆ ಇದು. ಯಾಪನೀಯರ, ಸಮಕಾಲೀನ ಅನ್ಯಧರ್ಮಗಳ ಪ್ರಭಾವ ಪ್ರೇರಣೆ–ಅನುಕರಣೆಯ ಛಾಯೆ ಇಲ್ಲಿ ಪ್ರತಿಬಿಂಬಿಸಿದೆ. ಪ್ರಸ್ತುತ ಶಾಸನದಲ್ಲಿ ಬೆಳ್ವಂತಿಯ ಘಟಾಂತಿಕೆಯ ಬಸದಿಗೂ ದಾನ ಸಂದಿವೆ.

೨ನೆಯ ಜಗದೇಕಮಲ್ಲ (ಕ್ರಿ.ಶ. ೧೧೩೯–೧೧೪೯) ಚಾಳುಕ್ಯ ಸಾಮ್ರಾಜ್ಯದ ಚುಕ್ಕಾಣಿ ಹಿಡಿಯುವ ಹೊತ್ತಿಗೆ ದಕ್ಷಿಣ ಕರ್ನಾಟಕದಲ್ಲಿ ಹೊಯ್ಸಳರು ಪ್ರಬಲರಾಗಿದ್ದರು. 'ವೆಂಗಿ ಪ್ರದೇಶ'[೯೨] ವು ಜಗದೇಕಮಲ್ಲನ ಕೈತಪ್ಪಿತು. ಇವನಿಗೆ ರಾಜಕೀಯವಾಗಿ ಸೋಲು ಗೆಲವುಗಳಾದರೂ ಧಾರ್ಮಿಕ ಕೈಂಕರ್ಯಗಳಿಗೇನೂ ಅಡ್ಡಿಯಾಗಲಿಲ್ಲ. ಈ ರಾಜನ ಆಡಳಿತಾವಧಿಯಲ್ಲಿ ಹಾವೇರಿ ಪರಿಸರ ಜೈನ ಚಟುವಟಿಕೆಗಳಿಂದ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ತೇದಿಸಹಿತ ನಾಲ್ಕು ಬಸದಿಗಳ ನಿರ್ಮಾಣ, ಈ ಕಾಲಾವಧಿಯಲ್ಲಾದವು.

ಕ್ರಿ.ಶ. ೧೧೩೯ರಲ್ಲಿ ಚಾಳುಕ್ಯ ಸಿಂಹಾಸನದ ಅಧಿಪತಿಯಾದದ್ದು ೨ನೆಯ ಜಗದೇಕಮಲ್ಲ. ಇದೇ ವರ್ಷ ಆದಿಕದಂಬರ ಇನ್ನೊಂದು ರಾಜಧಾನಿಯಾಗಿದ್ದ ಪರಲೂರಲ್ಲಿ ಒಂದು ಬಸದಿ ನಿರ್ಮಾಣವಾಯ್ತು. ಜಗದೇಕಮಲ್ಲನ ಆಡಳಿತದ ಹೊತ್ತಿಗೆ ಪರಲೂರು > ದೇವಗಿರಿಯಾಗಿತ್ತು. ಕ್ರಿ.ಶ. ೧೧೩೯ರಲ್ಲಿ ಬಾಸಯೂರ –೧೪೦ನ್ನು ಅಳುತ್ತಿದ್ದ ಕಲಿಯಮರಸ ದೇವಗಿರಿಯಲ್ಲಿ ಒಂದು ಶಾನ್ತಿನಾಥ ಜಿನಾಲಯವನ್ನು ನಿರ್ಮಾಣ ಮಾಡಿದ.[೯೩] ಇವನು ಮತ್ತು ತಂತ್ರಪಾಳ ಬಾಚಣ್ಣ ಕಲೆತು ಇದೇ ಬಸದಿಗೆ ಬಾಳಚಂದ್ರ ಸಿದ್ಧಾಂತದೇವರ ಕಾಲಕರ್ಚ್ಚಿ ಭೂದಾನ ಮಾಡಿದರು. ಶಾಸನದಲ್ಲಿ 'ಪದ್ಮಾವತಿದೇವಿಲಬ್ಧವರಪ್ರಸಾದ' ಎಂಬ ಪ್ರಶಸ್ತಿಯಿಂದ ಕಲಿಯಮರಸ ಇವನು ಜೈನ ಅಧಿಕಾರಿಯಾಗಿದ್ದ ಎಂದು ಸ್ಪಷ್ಟವಾಗುತ್ತದೆ.

ಕುಂಟನಹೊಸಳ್ಳಿ (ಹಾನತಾ)ಯ ಬಸವಣ್ಣನ ಗುಡಿಯ ಹತ್ತಿರವಿರುವ ಜೈನ ಶಾಸನವು ೨ನೆಯ ಜಗದೇಕಮಲ್ಲನ ಆಳ್ವಿಕೆಯನ್ನು ಪ್ರಸ್ತಾಪಿಸುತ್ತಿದ್ದು, ಕ್ರಿ.ಶ. ೧೧೪೪–೪೫ ಸುಮಾರಿಗೆ ರಚನೆಯಾದಂತೆ ತೋರುತ್ತದೆ. ನಾಗಿಸೆಟ್ಟಿ ಮೊದಲಾದವರು ಬಸದಿಗೆ ದಾನ ಬಿಟ್ಟ ವಿವರಗಳು ಲಭ್ಯವಿವೆ.[೯೪] ಶಾಸನ ತ್ರುಟಿತವಾಗಿರುವುದರಿಂದ ಸ್ಪಷ್ಟವಾದ ಮಾಹಿತಿ ದೊರೆಯುವುದಿಲ್ಲ.

೨ನೆಯ ಜಗದೇಕಮಲ್ಲನ ಇನ್ನೊಂದು ಅಪರೂಪದ ಶಾಸನ ಕ್ರಿ.ಶ. ೧೧೪೬ರ ಬಾಳೇಹಳ್ಳಿ (ಹಾನತಾ) ಶಾಸನ. ತೈಲಪನಿಂದ ೨ನೆಯ ಜಗದೇಕಮಲ್ಲನವರೆಗಿನ ಚಾಳುಕ್ಯ ವಂಶಾವಳಿಯನ್ನು ಇಲ್ಲಿ ಕಾಣಬಹುದು. "ತೈಲಭೂಪಾಳನಾತ್ಮೋದ್ಭವಂ ಸತ್ಯಾಶ್ರಯಂ ತತ್ಸುತಂ ವಿಕ್ರಮಾದಿತ್ಯಂ ತದನುಜಯ್ಯಣಯ್ಯವಾತನ ತನೂಭವಂ ಜಯಸಿಂಹ ದೇವನಾನ್ರಿಪಾಟಿ ಸಮುದ್ಭವನಾಹವಮಲ್ಲ ಮಹಿಪಾಟಿತನೆಯ ಭುವನೈಕಮಲ್ಲನಾತನನುಜಾತಂ ಸಪ್ತಮೋ ವಿಷ್ಣುವರ್ದ್ಧನನೆಸಿದ ಶ್ರೀಮತ್ರಿಭುವನ ಮಲ್ಲನಾತನ ಪ್ರಿಯತನೂಭವಂ ಭೂಲೋಕಮಲ್ಲದೇವನಾತನ ಸುತಂ ಜಗದೇಕಮಲ್ಲ"[೫] ಚಾಳುಕ್ಯರ ಹತ್ತು ತಲೆಮಾರಿನ ವಂಶಾವಳಿಯನ್ನು ಇಲ್ಲಿ ದಾಖಲಿಸಲಾಗಿದೆ. ಪ್ರಸ್ತುತ ಶಾಸನದ ಆಧಾರದಿಂದ ಚಾಳುಕ್ಯರ ವಂಶಾವಳಿಯನ್ನು ಹೀಗೆ ತಯಾರಿಸಬಹುದು.

೨ನೆಯ ತೈಲಪ.
↓
ಸತ್ಯಾಶ್ರಯ (ಇರಿವಬೆಡಂಗ).
↓
ವಿಕ್ರಮಾದಿತ್ಯ. | ಅಯ್ಯಣಯ್ಯ.

ಅಯ್ಯಣಯ್ಯ.
↓
ಜಯಸಿಂಹ ೨ (ಜಗದೇಕಮಲ್ಲ).
↓
ಅಹವಮಲ್ಲ (೧ನೇ ಸೋಮೇಶ್ವರ).
↓
ಭುವನೈಕಮಲ್ಲ (೨ನೇ ಸೋಮೇಶ್ವರ). | ತ್ರಿಭುವನಮಲ್ಲ (೬ನೇ ವಿಕ್ರಮಾದಿತ್ಯ).

ತ್ರಿಭುವನಮಲ್ಲ (೬ನೇ ವಿಕ್ರಮಾದಿತ್ಯ).
↓
ಭೂಲೋಕ ಮಲ್ಲ (೩ನೇ ಸೋಮೇಶ್ವರ).
↓
ಜಗದೇಕಮಲ್ಲ ೨.

ಈಗಾಗಲೇ ವಿದ್ವಾಂಸರು ಸಿದ್ಧಮಾಡಿದ ಚಾಳುಕ್ಯರ ವಂಶಾವಳಿಗಿಂತ ಪ್ರಸ್ತುತ ವಂಶಾವಳಿ ವ್ಯತಿರಿಕ್ತವಾಗಿದೆ. ಪ್ರೊ ಬಿ ಸುರೇಂದ್ರರಾವ್ ಅವರು ತಯಾರಿಸಿರುವ ಚಾಳುಕ್ಯ ವಂಶಾವಳಿ ಬಹುಜನ ವಿದ್ವಾಂಸರು ಒಪ್ಪಿರುತ್ತಾರೆ.[೬] ಕೆಲವೊಂದು ರಾಜರನ್ನು ಸೇರಿಸಿರುವ ಪ್ರಕ್ರಿಯೆಗಳು ಸೀತಾರಾಮ್ ಜಾಗೀರ್‌ದಾರ್[೭] ಮತ್ತು ಡಾ.ಸೂರ್ಯನಾಥ ಕಾಮತ್[೮] ಅವರ ಬರಹಗಳಲ್ಲಿ ಕಾಣಬಹುದು. ಬಿ.ಸುರೇಂದ್ರರಾವ್ ಅವರು ನಿರೂಪಿಸಿರುವ ಚಾಳುಕ್ಯ ವಂಶಾವಳಿಯನ್ನು ಹೀಗೆ ನೋಡಬಹುದು.

ತೈಲ ೨.
(ಕ್ರಿ.ಶ. ೯೭೩-೯೯೭)

ಸತ್ಯಾಶ್ರಯ.
(ಕ್ರಿ.ಶ. ೯೯೭-೧೦೦೮)

ದಶವರ್ಮ.

ವಿಕ್ರಮಾದಿತ್ಯ ೫.
(ಕ್ರಿ.ಶ. ೧೦೦೮-೧೦೧೫)

ಅಯ್ಯಣ.
(ಕ್ರಿ.ಶ. ೧೦೧೫)

೨ನೇ ಜಯಸಿಂಹ.
(ಕ್ರಿ.ಶ. ೧೦೧೫-೧೦೪೪)

ಸೋಮೇಶ್ವರ ೧.
(ಕ್ರಿ.ಶ. ೧೦೪೪-೧೦೬೮)

ಜಯಸಿಂಹ ೩.

ಸೋಮೇಶ್ವರ ೨.
(ಕ್ರಿ.ಶ. ೧೦೬೮-೧೦೭೬)

ವಿಕ್ರಮಾದಿತ್ಯ ೬.
(ಕ್ರಿ.ಶ. ೧೦೭೬-೧೧೨೭)

ಜಯಸಿಂಹ ೪.

ಸೋಮೇಶ್ವರ ೩.
(ಕ್ರಿ.ಶ. ೧೧೨೭-೧೧೩೯)

ಜಗದೇಕಮಲ್ಲ ೨.
(ಕ್ರಿ.ಶ. ೧೧೩೮-೧೧೪೯)

ತೈಲಪ ೩.
(ಕ್ರಿ.ಶ. ೧೧೪೯-೧೧೬೨)

ಸೋಮೇಶ್ವರ ೪.
(ಕ್ರಿ.ಶ. ೧೧೪೮-೧೧೯೮)

ಭೂಲೋಕಮಲ್ಲ.

ಜಗದೇಕಮಲ್ಲ ೩.

ಬಾಳೇಹಳ್ಳಿಯ ಜೈನಶಾಸನದಲ್ಲಿ ಚಾಳುಕ್ಯ ವಂಶಾವಳಿಯಲ್ಲಿ ತೈಲಪನ ಎರಡನೆಯ ಮಗನಾದ ದಶವರ್ಮನನ್ನು ಕೈಬಿಡಲಾಗಿದೆ. ಆದರೆ ಇವನಿಂದಲೆ ಚಾಳುಕ್ಯ ವಂಶಾವಳಿ ಮುಂದುವರೆದಿದೆ ಎಂಬುದನ್ನು ಸುರೇಂದ್ರರಾವ್ ಅವರು ಕೊಟ್ಟ ವಂಶಾವಳಿಯಿಂದ ದಿಟವಾಗುತ್ತದೆ. ಸತ್ಯಾಶ್ರಯನ ಮಗ ವಿಕ್ರಮಾದಿತ್ಯ ಎಂದಿರುವುದು ಇನ್ನೊಂದು ಪ್ರಮಾದ. ಅಲ್ಲದೇ ಅಯ್ಯಣ (ಅಯ್ಯಣಯ್ಯ)ನ ತಮ್ಮ ಜಗದೇಕಮಲ್ಲ (೨ನೆಯ ಜಯಸಿಂಹ)ನನ್ನು ಅಯ್ಯಣನ ಮಗನಾಗಿ ಇಲ್ಲಿ ತೋರಿಸಲಾಗಿದೆ. ಇದು ಒಂದು ದೊಡ್ಡ ಪ್ರಮಾದವೇ ಆಗಿದೆ. ಬಹುಶಃ ಶಾಸನ ಕವಿಗೆ ಚಾಳುಕ್ಯ

ವಂಶದ ಸರಿಯಾದ ಮಾಹಿತಿ ದೊರಕದೆ ಈ ಗೊಂದಲಮಯವಾದ ವಂಶಾವಳಿ ಕೊಟ್ಟಿರುವುದು ಸಾಧಿತವಾಗುತ್ತದೆ.

ಪ್ರಸ್ತುತ ಶಾಸನವು ೨ನೆಯ ಜಗದೇಕಮಲ್ಲನ ಆಳ್ವಿಕೆಯನ್ನು ಸೂಚಿಸುತ್ತಿದ್ದು, ಈ ಸಂದರ್ಭದಲ್ಲಿ ಬನವಾಸಿ–೧೨೦೦೦ ಮತ್ತು ಕೊಂಡರಟ್ಟಿ–೭೦ ಜಗದೇಕಮಲ್ಲ ಬೊಪ್ಪದೇವರಸ ಆಳುತ್ತಿದ್ದ. ಅಂತೆಯೇ ದೇಸಿಪಟ್ಟಣವಾದ ಬಾಳೇಹಳ್ಳಿಯನ್ನು ಗಡಿಯಂಕ ಮಲ್ಲಸೆಟ್ಟಿ ಆಳ್ವಿಕೆ ಮಾಡುತ್ತಿದ್ದ. ಇವನ ಮಗನಾದ ಬಮ್ಮಿಸೆಟ್ಟಿ ಎಂಬುವನು ಕ್ರಿ.ಶ. ೧೧೪೬ರಲ್ಲಿ ಬಾಳೇಹಳ್ಳಿಯಲ್ಲಿ ಒಂದು ಪಾರ್ಶ್ವನಾಥ ಜಿನಾಲಯವನ್ನು ನಿರ್ಮಿಸಿ ಕೊಂಡಕುಂದಾನ್ವಯ ದೇಸಿಗಣ ಪುಸ್ತಕಗಚ್ಛದ ಕುಕ್ಕುಟೇಸ (ಶ) ಮಲಧಾರಿದೇವರ ಕಾಲಕರ್ಚ್ಚಿ ಬಿಟ್ಟ. ಅಲ್ಲದೇ ಬೆಳ್ವೊಲ, ಹುಲಿಗೇಱಿ, ಹಲಸಿಗೆ, ಹಾನುಂಗಲ್ಲು ಪ್ರದೇಶಗಳನ್ನು ಆಳುತ್ತಿದ್ದ ಕೇಸಿಮಯ್ಯನ ಅಧೀನ ಅಧಿಕಾರಿಗಳಾದ ನಾಗದೇವ ಮತ್ತು ಬರ್ಮದೇವ ಎಂಬುವರು ದೇವರ ಅಭಿಷೇಕಕ್ಕೆ, ಮುನಿಗಳ ಆಹಾರಕ್ಕೆ, ಬಸದಿಯ ಜೀರ್ಣೋದ್ಧಾರಕ್ಕೆ ಸುಂಕದಾನ ಬಿಟ್ಟರು.

ಕ್ರಿ.ಶ. ೧೧೪೮ ಕರಗುದರೆಯ ಜಿನಶಾಸನವು ಕಲಿಯಣ ಎಂಬುವನು ಕರಗುದರೆಯಲ್ಲಿ 'ವಿಜಯಪಾರ್ಶ್ವ ಜಿನಾಲಯವನ್ನು ಕಟ್ಟಿಸಿದ್ದಾಗಿ ತಿಳಿಸುತ್ತದೆ.[೯೯] ಬಸದಿಯ ಮೂಲ ನಾಯಕನ ಮೂರ್ತಿಯ ಅಂಗಭೋಗ, ರಿಸಿಯರ ಆಹಾರ ದಾನಕ್ಕೆ ಎಂದು ಇದೇ ಕಲಿಯಣನು ಶುಭಕೀರ್ತಿ ಮುನಿಗಳಿಗೆ ಭೂದಾನ ನೀಡಿದ. ಆಚಾರ್ಯ ಪೂಜ್ಯಪಾದರ ಶಿಷ್ಯಪರಂಪರೆಯನ್ನು ಇಲ್ಲಿ ಕೊಡಲಾಗಿದೆ. ಇದೊಂದು ೨ನೆಯ ಜಗದೇಕಮಲ್ಲನ ಆಳ್ವಿಕೆಯ ಅವಧಿಯ ಶಾಸನ. ಈ ಸಂದರ್ಭದಲ್ಲಿ ಹಾನುಂಗಲ್ಲು–೫೦೦ನ್ನು ಸೋವರಸ, ಹಾನುಂಗಲ್ಲನ್ನು ತೈಲಭೂಪ ಆಳುತ್ತಿದ್ದರು.

ಚಾಳುಕ್ಯ ರಾಜಸ್ವವನ್ನು ಹೊರತುಪಡಿಸಿ ಗ್ರಾಮ ಸಮುದಾಯದ ಅಧಿಪತಿಯ ಸಾಧನೆ ವ್ಯಕ್ತಿತ್ವವನ್ನು ವಿನೂತನವಾಗಿ ಪರಿಚಯಿಸಿದ ಕೀರ್ತಿ ನೇರಲಗಿಯ (ಹಾತಾ) ಜೈನ ಶಾಸನದ್ದು.[೧೦೦] ಹಾವೇರಿ ಪರಿಸರದ ಜೈನಶಾಸನಗಳಿಗೆ ಇದೊಂದು ಮುಕುಟವಿದ್ದಂತೆ. ನಾಳ್ಪ್ರಭುವಾದ ಮಲ್ಲಗಾವುಣ್ಡನು ನೇರಲಗೆಯಲ್ಲೊಂದು ಮಲ್ಲಿನಾಥ ಜಿನಾಶ್ರಯವನ್ನು ಕಟ್ಟಿ, ಅದರ ಅಂಗಭೋಗ, ರಂಗಭೋಗ, ನಿತ್ಯನೈವೇದ್ಯ, ಮಾಟಕೂಟ ಪ್ರಸಾದಕ್ಕೆ, ರಿಸಿಯರ ಆಹಾರದಾನಕ್ಕೆ ಭೂಮಿ, ಗದ್ದೆ, ಎಣ್ಣೆ ಇತ್ಯಾದಿಗಳನ್ನು ದಾನಬಿಟ್ಟಿದ್ದು ಶಾಸನದ ಮುಖ್ಯಸಾರ. ಇದರಾಚೆಗೆ ಈ ಕಲ್ಬರಹವು ಮಲ್ಲಗಾವುಂಡನ ಕುಟುಂಬದ ಪ್ರಶಸ್ತಿಯ ಪ್ರಶಂಸೆಯ ಕನ್ನಡಿಯಾಗುತ್ತದೆ. ಮಲ್ಲಗಾವುಂಡನ ವಂಶದ ಮೂಲ ಪುರುಷ ದಡಿಗ. ಇವನ ಹೆಸರನ್ನು ಇತಿಹಾಸ ಪುಟಗಳಲ್ಲಿ ಬರೆದಿಡುವಂತದ್ದು. ಯಾಕೆಂದರೆ ಚಾಳಕ್ಯಚಕ್ರಿ ಅಹವಮಲ್ಲ ಒಂದನೆಯ ಸೋಮೇಶ್ವರನಿಂದ ಸನ್ಮಾನಕ್ಕೆ ಭಾಜನನಾದವನು ದಡಿಗ. ಒಂದು ಪ್ರಭುತ್ವ ಗ್ರಾಮಮಟ್ಟದ ತನ್ನದೇ ಅಧಿಕಾರಿಯೊಬ್ಬನಿಗೆ ಗೌರವಾದರ ಕೊಡುತ್ತದೆ

ಎಂದರೆ ಆ ವ್ಯಕ್ತಿಯ ರಾಜನಿಷ್ಠೆ ಮತ್ತು ವ್ಯಕ್ತಿತ್ವ ಹೇಗಿತ್ತು ಎಂದು ಸಾರುತ್ತದೆ. ಹಾಗಾದರೆ ದಡಿಗನಿಗೆ ಸಂದ ಗೌರವಗಳೇನು ಎಂಬುದು ಶಾಸನ ಕವಿ ಹೀಗೆ ದಾಖಲಿಸುತ್ತಾನೆ.

ಬಲ್ಲಹನೆನೆ ನೆಗದ್ರ್ದಾಹವ
ಮಲ್ಲಂ ಕೊಡೆಯಡಪ ಮಂದಳಂ ಸೀಗುರಿಯೆಂ ।
ಬೆಲ್ಲಾ ಚಿಹ್ನಮನದಟರ
ಮಲ್ಲಂ ದಡಿಗಂಗೆ ಕೊಟ್ಟನನ್ಸಾದರದಿಂ.॥[೧೦೧]

"ಮಹಾಪ್ರಭು ದಡಿಗನಿಗೆ ಅಹವಮಲ್ಲ ತ್ರೈಲೋಕ್ಯಮಲ್ಲ ಚಕ್ರಿಯಿತ್ತ ರಾಜ ಮರ್ಯಾದೆಯ ರಾಜವಿಶ್ವಾಸದ ವಸ್ತುಗಳು ಕೊಡೆ, ಅಡಪ, ಮಂದಳ, ಸೀಗುರಿ, ಗಾಳಿ, ಮಳೆ ಬಿಸಿಲುಗಳಿಗೆ ಮರೆಯಾಗಿ ಹಿಡಿಯುವ ಸಾಧನ ಮಾತ್ರವಾಗದೆ ಕೊಡೆ ಮರ್ಯಾದೆಯನ್ನು ತೋರುವ ವಸ್ತುವೂ ಹೌದು"[೧೦೨] ಪ್ರಸ್ತುತ ಶಾಸನವೂ ೨ನೆಯ ಜಗದೇಕಮಲ್ಲ ಕಾಲಾವಧಿಯದ್ದಾಗಿದ್ದು, ಕ್ರಿ.ಶ. ೧೧೪೮ರಲ್ಲಿ ರಚನೆಯಾಗಿದೆ.

ತೇದಿರಹಿತ ೨ನೆಯ ಜಗದೇಕಮಲ್ಲನ ಜೈನ ಶಾಸನ ಹುಲಗೂರ (ಶಿತಾ)ಲ್ಲಿದೆ.[೧೦೩] ಜಗದೇಕಮಲ್ಲ ರಾಜ್ಯಭಾರ ಮಾಡುವ ಸಂದರ್ಭದಲ್ಲಿ ಬೆಳ್ವಲ-೩೦೦ ಮತ್ತು ಪುಲಿಗೆರೆ-೩೦೦ನ್ನು ದಂಡನಾಯಕನಾದ ವಾವಣರಸ ನೋಡಿಕೊಳ್ಳುತ್ತಿದ್ದ. ಈ ಸಮಯದಲ್ಲಿ ಇವನ ಸಾಮಂತನಾದ ಮಣಲೆಯರ ಜಯಕೇಶಿಯ ಹೆಂಡತಿಯಾದ ನೀಳಿಕಬ್ಬೆ ಎಂಬುವಳು ಹುಲ್ಲಂಗೂರಲ್ಲಿ ಬಸದಿಯೊಂದನ್ನು ಮಾಡಿಸಿದ್ದಾಗಿ ಶಾಸನ ತಿಳಿಸುತ್ತದೆ.[೧೦೪]

೧೨ನೆಯ ಶತಮಾನದಲ್ಲಿ ರಚಿತವಾದ ಚಾಳುಕ್ಯರ ಜೈನಶಾಸನವೊಂದು ಕಾಗಿನೆಲೆ (ಬ್ಯಾತಾ)ಯಲ್ಲಿದೆ.[೧೦೫] ಇದೊಂದು ಸಚಿತ್ರ ಚಿತ್ರಶಾಸನ. ಊರ ಪ್ರಭುಗಾವುಂಡನಾದ ಆದಿತ್ಯವರ್ಮನು ಕಾಗಿನೆಯಲ್ಲಿ 'ಮೇಷಪಾಷಾಣಗಚ್ಛದ ಬಸದಿ'ಯೊಂದನ್ನು ಮಾಡಿಸಿದ. ಈ ಸ್ಮರಣಿಕೆಯಾಗಿ ಬಳ್ವಲೆಂಕ (ನೆಚ್ಚಿನ ಅಥವಾ ವೀರಸೈನಿಕ) ಮಸಣ ಎಂಬುವನು ಈ ಶಾಸನಗಂಭಗಳನ್ನು ನಿಲ್ಲಿಸಿದ. ಇಲ್ಲಿನ ಶಾಸನ ಮೂರು ಕಂಭಗಳಲ್ಲಿ ರಚನೆಯಾಗಿದೆ. ಶಾಸನಗಳ ನಿರೂಪಿತವಾಗಿರುವ ಆದಿತ್ಯವರ್ಮನ ಗುಣಾವಳಿಯನ್ನು ಶಿಲ್ಪದಲ್ಲಿ ಮೂಡಿಸಿದ್ದು ಒಂದು ಹೆಗ್ಗಳಿಕೆ.

ಮೊದಮೊದಲು ಕಲ್ಬರೆಹವನ್ನು ಹಾಕಿಸುವ ಪ್ರಕ್ರಿಯೆ ಪ್ರಭುತ್ವಶಾಹಿಗೆ ಮಾತ್ರವಿತ್ತು. ಈ ನಿಯಮ ಸಡಿಲುಗೊಳಿಸಿದವರು ಕಲ್ಯಾಣ ಚಾಳುಕ್ಯರು. ತತ್ಪರಿಣಾಮವಗಿ ಕೆಳಹಂತದ ಅಧಿಕಾರಿಗಳಾದ ದಂಡನಾಯಕರು, ನಾಳ್ಗಾವುಂಡರು, ಗಾವುಂಡರು, ಶ್ರೀಸಾಮಾನ್ಯರು ತಾವು ಕೈಗೊಂಡ ಧಾರ್ಮಿಕ ಕಾರ್ಯದ ಕುರಿತಾದ ಕಲ್ಬರೆಹಗಳು ಹಾಕಿಸತೊಡಗಿದರು. ನಾಡಿನ ಮೂಲೆ

ಮೂಲೆಗಳಲ್ಲಿ ಈ ಕುರುಹುಗಳು ಈಗಲೂ ಜತನಗೊಂಡಿವೆ. ಚಾಳುಕ್ಯರ ಧರ್ಮಪರ ನಿಲುವು ಪ್ರಭುತ್ವದ ಮೂಲ ಘಟಕಗಳಾದ ಗ್ರಾಮಗಳಲ್ಲಿಯೂ ಜೈನಧರ್ಮ ಹರಡಲು ಕಾರಣೀಭೂತವಾಯ್ತು. ಅನೇಕ ಗ್ರಾಮಗಳಲ್ಲಿ ಸಾಕಷ್ಟು ಬಸದಿಗಳೆದ್ದವು. ದಾನದತ್ತಿಗಳು ಸಂದವು. ಹಾವೇರಿ ಪರಿಸರ ಈ ಕ್ರಿಯೆಗೆ ಸ್ಪಷ್ಟ ಉದಾಹರಣೆ.

## ೦೬. ಗುತ್ತವೊಳಲಿನ ಗುತ್ತರು (೧೨ನೆಯ ಶತಮಾನ).

ಹಾವೇರಿ ಪರಿಸರದಲ್ಲಿ ಆಳ್ವಿಕೆ ನಡೆಸಿದ ಒಂದು ಸಾಮಂತ ಮತ್ತು ಕೆಲವು ಕಾಲ ಸ್ವತಂತ್ರವಾಗಿದ್ದ ಅರಸುಮನೆತನ ಗುತ್ತರದ್ದು. ಇಂದಿನ ರಾಣೆಬೆನ್ನೂರು ತಾಲ್ಲೂಕಿನ ಗುತ್ತಲ (ಗುತ್ತವೊಳಲು) ಇವರ ರಾಜಧಾನಿ. "ಗುತ್ತು ಎನ್ನುವ ಪದ ಗುಪ್ತ ಎಂಬ ಸಂಸ್ಕೃತ ಪದದಿಂದ ಬಂದಿರಬೇಕೆಂದು ಅನೇಕ ಚರಿತ್ರಾಕಾರರು ಅಭಿಪ್ರಾಯಪಟ್ಟಿದ್ದಾರೆ"[೧೦೬] ಗುತ್ತರು ತಮ್ಮನ್ನು ಶಾಸನಗಳಲ್ಲಿ "ಉಜ್ಜೇನಿಪುರವರಾಧೀಶ್ವರ ಚಂದ್ರಗುಪ್ತಾನ್ವಯ"[೧೦೭] ರೆಂದು ಕರೆದುಕೊಂಡಿದ್ದಾರೆ. ಈ ಆಧಾರದಿಂದ ಇವರು ಚಂದ್ರಗುಪ್ತ ಮೌರ್ಯನ ವಂಶಜರೆಂದು, ಮೊದಲು ಉಜ್ಜಯಿನಿಯಲ್ಲಿ ಆಡಳಿತ ನಡೆಸುತ್ತಿದ್ದರೆಂದು ಹೇಳಿಕೆಗಳಿವೆ. ಕೆಲವು ವಿದ್ವಾಂಸರು "ಗುತ್ತರು ಕರ್ನಾಟಕದಲ್ಲಿಯೇ ಬೆಳಕಿಗೆ ಬಂದ ಸಾಮಂತ ಮನೆತನವೆಂದು, ಇವರು ಕರ್ನಾಟಕದವರೆ ಎಂದು ಅಭಿಪ್ರಾಯಪಡುತ್ತಾರೆ. ಈ ವಾದದಲ್ಲಿಯೇ ಹೆಚ್ಚು ತಿರುಳಿರುವಂತೆ ತೋರುತ್ತದೆ.[೧೦೮]

ಮಾಗುತ್ತ ಅಥವಾ ಮಹಾಗುತ್ತ ಗುತ್ತರ ಮೂಲ ಪುರುಷ. ನಂತರ ಇವನ ಮಗ "೧ನೆಯ ಗುತ್ತ ರಾಜನಾದ. ಇವನು ಹಾನಗಲ್ ಕದಂಬರ ಮೇಲೆ ಯುದ್ಧಮಾಡಿ ಅವರನ್ನು ಸೋಲಿಸಿ ರಾಜ್ಯವನ್ನು ವಿಸ್ತರಿಸಿದ. ಇವನಾದ ಅನಂತರ ಇವನ ಮಗನಾದ ಮಲ್ಲಿದೇವ ರಾಜನಾದ. ಇವನೊಬ್ಬ ಪ್ರಸಿದ್ಧರಾಜ. ಇವನು ಬನವಾಸಿಯ ರಾಜ್ಯಪಾಲ ಗೋವಿಂದರಸನ ಆಶ್ರಯದಲ್ಲಿ ಗುತ್ತವೊಳಲಿನಲ್ಲಿ ಆಳುತ್ತಿದ್ದ. ಮಲ್ಲಿದೇವ ಸಾಮಂತನಾಗಿಯೇ ಇದ್ದ. ಇವನ ಸಮಕಾಲೀನ ಹೊಯ್ಸಳ ದೊರೆ ವಿಷ್ಣುವರ್ಧನ ಇವನನ್ನು ಜಯಿಸಿದಂತೆ ಕಾಣಬರುವುದಿಲ್ಲ. ೧೧೪೯ರಲ್ಲಿ ಇವನು ಮರಣಹೊಂದಲು ಇವನ ಮಗನಾದ ಒಂದನೆಯ ವಿಕ್ರಮಾದಿತ್ಯ ರಾಜನಾದ. ಈ ವೇಳೆಗೆ ಕರ್ನಾಟಕದಲ್ಲಿ ಅನೇಕ ರಾಜಕೀಯ ಬದಲಾವಣೆಗಳುಂಟಾಗಿದ್ದವು. ಚಾಳುಕ್ಯ ಪ್ರಾಬಲ್ಯ ಕಡಿಮೆಯಾಗಿ, ಕಲ್ಯಾಣದ ಕಳಚೂರಿಗಳು ತಲೆ ಎತ್ತುತ್ತಿದ್ದರು. ಬಹುಶ: ವಿಕ್ರಮಾದಿತ್ಯ, ಇತರ ಸಾಮಂತ ರಾಜರಂತೆ ಚಾಳುಕ್ಯರನ್ನು ಕಡೆಗಣಿಸಿ ಕಳಚೂರಿಗಳ ಸಾಮಂತನಾಗಿರಬೇಕು.[೧೦೯] ಇವನ ನಂತರ ೧ನೆಯ ಜೋಯಿದೇವ (ಕ್ರಿ.ಶ. ೧೧೭೦-೮೫) ಮತ್ತೇ ಚಾಳುಕ್ಯರ ಸಾಮಂತನಾದ. ಎರಡನೆಯ ವಿಕ್ರಮಾದಿತ್ಯ ಕೆಲವು ಕಾಲ ಸ್ವತಂತ್ರ ರಾಜ್ಯಭಾರ ಮಾಡಿದಂತೆ ತೋರುತ್ತದೆ. ಇವನ ಗುತ್ತಲ ಶಾಸನಗಳಿಂದ ಈ ವಿಚಾರ ದಿಟವಾಗುತ್ತದೆ. ಇವನ ನಂತರ ಬರುವ ಎರಡನೆಯ ಜೋಯಿದೇವ, ಮೂರನೆಯ ವಿಕ್ರಮಾದಿತ್ಯ, ಮೂರನೆಯ ಗುತ್ತ, ಮೂರನೆಯ ಜೋಯಿದೇವ,

ಕೊನೆಯದಾಗಿ ನಾಲ್ಕನೆಯ ವಿಕ್ರಮಾದಿತ್ಯ (ಕ್ರಿ.ಶ. ೧೨೮೩-೧೩೦೬) ಸೇವುಣರ ಸಾಮಂತರಾಗಿ ಆಳ್ವಿಕೆ ನಡೆಸಿದರು.

ಗುತ್ತರು ಜೈನೇತರರಾದರೂ ಇತರ ಧರ್ಮಗಳಿಗೆ ಪ್ರೋತ್ಸಾಹವಿತ್ತಂತೆ ಜೈನಧರ್ಮಕ್ಕೂ ಪ್ರೋತ್ಸಾಹವಿತ್ತರು. ಇವರ ಕಾಲವಧಿಯಲ್ಲಿ ರಾಜಧಾನಿಯಾದ ಗುತ್ತಲದಲ್ಲೊಂದು ಜಿನಾಲಯ ನಿರ್ಮಾಣವಾಯ್ತು. ಒಂದನೆಯ ವಿಕ್ರಮಾದಿತ್ಯ ಪೊನ್ನವತ್ತಿ-೧೨, ಬೆಳಹುಗೆ-೭೦, ಬೆಣ್ಣೆಯೂರು-೧೨ ಆಡಳಿತ ವಿಭಾಗಗಳಿಗೆ ಅಧಿಪತಿಯಾಗಿದ್ದ ಕಾಲದಲ್ಲಿ, ಕ್ರಿ.ಶ. ೧೧೬೨ ವಡ್ಡಬ್ಯವಹಾರಿ ಕೇತಿಸೆಟ್ಟಿ ಎಂಬುವನು ಗುತ್ತಲದಲ್ಲೊಂದ ಪಾರ್ಶ್ವನಾಥ ಜಿನಾಲಯವನ್ನು ಕಟ್ಟಿಸಿದ.[೧೧೦] ಅಲ್ಲದೇ ಅಪಾರ ಪ್ರಮಾಣದ ದಾನ-ದತ್ತಿಗಳನ್ನು ಬಸದಿಗಿತ್ತ.

ಪುಸ್ತಕಗಚ್ಛದ ಮಲಧಾರಿ ದೇವರ ಶಿಷ್ಯನಾದ ಕೇತಿಸೆಟ್ಟಿಯು ಜೈನರ ಒಳಪಂಗಡಗಳಲ್ಲಿ ಒಂದಾದ ಸೊಂದೆ (ಸಾದ, ಸಾದು) ಕುಲಕ್ಕೆ ಸೇರಿದವನಾಗಿದ್ದ. ಇಡೀ ಕರ್ನಾಟಕದಲ್ಲಿಯೇ ಸಾದ ಕುಲದ ಬಗ್ಗೆ ಮೊದಲ ಉಲ್ಲೇಖ ಪ್ರಸ್ತುತ ಶಾಸನದಲ್ಲಿ ದೊರೆಯುತ್ತದೆ. ಶಾಸನ ತ್ರುಟಿತವಾಗಿರುವುದರಿಂದ ಹೆಚ್ಚಿನ ಮಾಹಿತಿಗಳು ಅಲಭ್ಯ. ಜೈನ ಧರ್ಮಕ್ಕೆ ಸಂಬಂಧಿಸಿದಂತೆ ಸದ್ಯ ಇದೊಂದೆ ಶಾಸನ ಗುತ್ತರ ಆಡಳಿತಾವಧಿಯಲ್ಲಿ ದೊರೆತಿದೆ.

## ೦೭. ಕಳಚೂರ್ಯರು ( ಕ್ರಿ.ಶ. ೧೧೬೨-೧೧೬೮).

ಕಲ್ಯಾಣ ಚಾಳುಕ್ಯ ರಾಜಸತ್ತೆಯ ಭಾಗವಾಗಿದ್ದ ಕಳಚೂರ್ಯರು; ಚಾಳುಕ್ಯ ಪ್ರಭುತ್ವವನ್ನೇ ಕಿತ್ತೊಗೆದು ತಮ್ಮ ಅಧಿಪತ್ಯವನ್ನು ಕ್ರಿ.ಶ. ೧೧೫೦ರ ದಶಕದಲ್ಲಿ ಸ್ಥಾಪಿಸಿದರು. ೧೧೫೦ರ ದಶಕದಲ್ಲಿ ಕಳಚೂರ್ಯರು ತಾವು ಚಾಳುಕ್ಯರ ಅಧೀನ ಅರಸರಲ್ಲ ಎಂಬ ನಡಾವಳಿಯನ್ನು ಚಾಳುಕ್ಯರು ಗಮನಿಸದಾದರು. ಚಾಳುಕ್ಯ ಅರಸ ಎರಡನೆಯ ತೈಲನ ಮರಣಾನಂತರ ವೀರ ಬಿಜ್ಜಣದೇವ ಚಾಳುಕ್ಯ-ಅರಸೊತ್ತಿಗೆಯನ್ನು ಸಂಪೂರ್ಣ ವಶಪಡಿಸಿಕೊಂಡು ಕ್ರಿ.ಶ. ೧೧೬೨ರಲ್ಲಿ ಚಕ್ರವರ್ತಿತ್ವವನ್ನು ಪಡೆಯುವಲ್ಲಿ ಯಶಸ್ಸು ಕಂಡುಕೊಂಡ. ಶೈವನಾಗಿದ್ದ ಬಿಜ್ಜಣ (ಬಿಜ್ಜಳ) ದೇವನನ್ನು ಅಧಿಕಾರಕ್ಕೆ ತರುವಲ್ಲಿ ಸಾಕಷ್ಟು ರಾಜತಂತ್ರದ ಕೈಗಳಿದ್ದುವು ಎಂಬ ವಿಚಾರವನ್ನು ಅಲ್ಲಗಳೆಯುವಂತಿಲ್ಲ. ಇವರಲ್ಲಿ ಜೈನನಾದ 'ರೇಚಣ ದಂಡನಾಯಕ'ನೂ ಒಬ್ಬ. "ರೇಚಣನು ಬಿಜ್ಜಳನನ್ನು ಕಲಚುರಿ ವಂಶದ ಚಕ್ರವರ್ತಿಯೆನಿಸಿ ಸಿಂಹಾಸನದಲ್ಲಿ ಕೂಡಿಸಿದನು; ದಲ್ಲಪನು ತೈಲನನ್ನು ಕುಳ್ಳಿರಿಸಿದಂತೆ. ಚಾಳುಕ್ಯರ ರಾಜಧಾನಿಯಾದ ಕಲ್ಯಾಣವನ್ನೇ ತಮ್ಮ ರಾಜಧಾನಿಯಾಗಿ ಮುಂದುವರೆಸಲು ಬಿಜ್ಜಳನಿಗೆ ರೇಚಣನು ಸೂಚಿಸಿದನು."[೧೧೧] ಈ ರೇಚಣ ಕಳಚೂರ್ಯರಿಗೆ ಎಷ್ಟು ಆಪ್ತನಾಗಿದ್ದನೆಂದರೆ ವೀರ ಬಿಜ್ಜಣದೇವನ ಕಾಲದಿಂದ ಈ ಮನೆತನದ ಕೊನೆಯ ಅರಸನಾದ ಸಿಂಘಣ (ಕ್ರಿ.ಶ. ೧೧೮೩-೮೪)ನ ಆಡಳಿತಾವಧಿಯಲ್ಲೂ ಸೇನಾಧಿಪತಿಯಾಗಿ ಕಾರ್ಯನಿರ್ವಹಿಸಿದ.

ಕಳಚೂರ್ಯರ ರಾಜ್ಯಾಡಳಿತದ ಅವಧಿಯಲ್ಲಿ ಜೈನಧರ್ಮ ಪ್ರಬಲಗೊಂಡಿದ್ದಕ್ಕಿಂತ; ತನ್ನ ಜನಬಾಹುಳ್ಯತೆಯಲ್ಲಿ ಕ್ಷೀಣತೆ ಕಂಡಿದ್ದೇ ಹೆಚ್ಚು. ಭಕ್ತಿಭಂಡಾರಿ ಬಸವಣ್ಣನಿಂದ ಪುನುರುತ್ಥಾನಗೊಂಡ ವೀರಶೈವ (ಲಿಂಗಾಯತ) ಧರ್ಮದ ಜನಪ್ರಿಯತೆ ಒಂದು ಕಡೆಯಾದರೆ; ಇನ್ನೊಂದು ಪಕ್ಕ ವೀರಗೊಗ್ಗಿದೇವ, ಏಕಾಂತರಾಮಯ್ಯರಂತ ಉಗ್ರ ಶಿವಭಕ್ತರ ದಾಳಿಗಳಿಂದ ಜೈನಧರ್ಮ ತತ್ತರಿಸಿಹೋಯ್ತು. ವೀರಗೊಗ್ಗಿದೇವನ ಜೈನಸಂಬಂಧಿ ದಾಳಿಗಳ ಬಗ್ಗೆ ಅಣ್ಣಿಗೆರೆ ಶಾಸನ ಕೊಂಡಾಡಿದರೆ, ಏಕಾಂತರಾಮಯ್ಯ ಜೈನರ ಮೇಲೆ ನಡೆಸಿದ ಪವಾಡವನ್ನು ಕುರಿತು ಅಬ್ಬಲೂರು ಶಾಸನ ವರ್ಣಿಸುತ್ತದೆ.[೧೧೨] ಇಂಥಹ ಹಲವಾರು ಧಾರ್ಮಿಕ ದಾಳಿಗಳು, ಶೀತಲ ಸಮರಗಳಿಂದ ಕರ್ನಾಟಕದ ಜೈನಧರ್ಮ ಕಂಪನಗೊಂಡಿದ್ದು ದಿಟ. ಕರ್ನಾಟಕದಲ್ಲಿ ಎದ್ದ ಧಾರ್ಮಿಕ ಇಚ್ಛಾಶಕ್ತಿಯ ಅನಲದ ಜ್ವಾಲೆ ಹಾವೇರಿ ಪರಿಸರಕ್ಕೆ ತಟ್ಟದೇ ಇರಲಿಲ್ಲ. ಈ ಪರಿಸರದ ಅಬಲೂರಿನ ಜೈನರು ತಮಗಾದ ಅನ್ಯಾಯವನ್ನು ಪ್ರಭುತ್ವದ ಮುಂದೆ ಬಿನ್ನವಿಸಿಕೊಂಡಾಗ. ಬಿಜ್ಜಣದೇವ ಏಕಾಂತರಾಮಯ್ಯನಿಗೆ ಜಯಪತ್ರವನ್ನು ಕೊಟ್ಟು ಜೈನರಿಗೆ 'ನೀವಿನುಸಿರದೇ ಪೋಗಿ' ಎನ್ನುವಲ್ಲಿ ಒಂದು ಧರ್ಮದ ಓಲೈಕೆ ಕಂಡುಬರುತ್ತದೆ. ಏಕಾಂತರಾಮಯ್ಯನಿಗೆ ಪ್ರಭುತ್ವವೇ ಪರವಾಗಿ ನಿಂತಾಗ ಅವನಿಗೆ ಆನೆಬಲ ಬಂದಂತಾಯಿತು. ತತ್ಪರಿಣಾಮ ಅಬಲೂರಿನ ಸುತ್ತಮುತ್ತಲಿದ್ದ ಜೈನಕೇಂದ್ರಗಳು ಅವನತಿಯತ್ತ ಮುಖಮಾಡಿದವು. ಬಿಜ್ಜಣದೇವನ ಅಧಿಕಾರಾವಧಿಯಲ್ಲಿ ಜೈನಧರ್ಮ ಬಲಹೀನತೆಯತ್ತ ಸಾಗಿದರೂ, ಅಲ್ಲಲ್ಲಿ ಬಸದಿ ನಿರ್ಮಾಣ, ದಾನದತ್ತಿ ಮೂಲಕ ಕೊಂಚ ಜೀವದ್ರವ್ಯ ಲಭಿಸಿದಂತಾಯ್ತು.

ಕಳಚೂರ್ಯ ಪ್ರತಾಪ ಚಕ್ರವರ್ತಿಯಾದ ವೀರಬಿಜ್ಜಣದೇವ ಕಲ್ಯಾಣದ ನೆಲವಿಡಿನಲ್ಲಿ ಆಳುವಾಗ, ರಟ್ಟಿಹಳ್ಳಿ ನೂಱುಂಬಾಡ ಅವನ ಅಂಕೆಯಲ್ಲಿತ್ತು. ಈ ಕಂಪಣವನ್ನು ಪಾಂಡ್ಯದೇವ ಆಳುತ್ತಿದ್ದ. ಇವನ ಆಳ್ವಿಕೆಗೆ ಒಳಪಡುವ ಒಂದು ಗ್ರಾಮ ಗೊಟ್ಟಗಡಿ (ನದಿಹರಳಹಳ್ಳಿ, ರಾತಾ) ಈ ಊರ ಗಾವುಂಡನಾದ ನಾಗಗಾವುಂಡನು ಕ್ರಿ.ಶ. ೧೧೬೮ರಲ್ಲಿ ಗೊಟ್ಟಗಡಿಯಲ್ಲೊಂದು 'ವೃಷಭಜಿನೇಂದ್ರ ಭವನ'ವನ್ನು ನಿರ್ಮಿಸಿದ.[೧೧೩] ಅಂತೆಯೇ ಅವನು ತನ್ನ ಅರ್ಧಾಂಗಿ ಅರಸಿಗಾವುಂಡಿಯ ಜೊತೆಗೂಡಿ ಬಸದಿಯ ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ, ರಿಸಿಯರ, ಅಜ್ಜಿಯರ ಆಹಾರಕ್ಕೆ ತೋಂಟ, ಗದ್ದೆಗಳನ್ನು ದಾನಮಾಡಿದ. ಈ ಸಂದರ್ಭದಲ್ಲಿ ಮೂಲಸಂಘ ಸೂರಸ್ಥಗಣ ಚಿತ್ರಕೂಟಾನ್ವಯದ ವಾಸುಪೂಜ್ಯರ ಶಿಷ್ಯರಾದ ರಾವಣಂದಿಮುನಿ ಇದ್ದರು. ರಟ್ಟಿಹಳ್ಳಿ ಅಧಿಪತಿಗಳ, ನಾಗಗಾವುಂಡನ ವಂಶ, ಬನವಾಸಿ, ರಟ್ಟಿಹಳ್ಳಿ, ಗೊಟ್ಟಗಡಿಗಳ ವಾಂಶಿಕ ಮತ್ತು ಪ್ರಾಕೃತಿಕ ವರ್ಣನೆಗಳಿಂದ ಆವೃತವಾದ ಶಾಸನ ಪುಟ್ಟ ಚಂಪೂ ಕಾವ್ಯದಂತಿದೆ. ಶಾಪಾಶಯದ ಕೊನೆಗೆ ಜೈನರ ನಿತ್ಯ ಪಠಣ ಮಂತ್ರವಾದ "ಣಮೋಕಾರ' ಮಹಾಮಂತ್ರದ ಮೊದಲಸಾಲು 'ಣಮೋ ಅರಹನ್ತಾಣಂ' ಬರೆಯಲ್ಪಟ್ಟಿದೆ. ಈ ಭಾಗದ ಜೈನ ಶಾಸನಗಳಲ್ಲಿ ಣಮೋಕಾರ ಮಂತ್ರದ ವಾಕ್ಯವಿರುವ ಮೊದಲ ಶಾಸನವೆಂಬ ಕೀರ್ತಿ ನದಿಹರಳಹಳ್ಳಿ ಜಿನಶಾಸನಕ್ಕೆ ಲಭ್ಯವಾಗುತ್ತದೆ.

ಬಿಜ್ಜಣದೇವನ ರಾಜಸತ್ತೆಯನ್ನು ಉಲ್ಲೇಖಿಸದ ಹಿರೇಕಣಗಿ (ಹಾನತಾ)ಯ ಒಂದು ನಿಸಿಧಿ ಶಾಸನ ಕ್ರಿ.ಶ. ೧೧೬೦ರಲ್ಲಿ ರಚಿತವಾಗಿದೆ.[೧೧೪] ಆದರೇ ಅಧೀನ ಅರಸನಾದ ಹಾನಗಲ್ಲು ಕದಂಬರ ಮಲ್ಲದೇವನನ್ನು ಉಲ್ಲೇಖಿಸಿದೆ. ಬಹುಶ: ಕಲ್ಯಾಣದಲ್ಲಿ ಭುಗಿಲೆದ್ದಿದ್ದ ಧಾರ್ಮಿಕ-ಸಾಮಾಜಿಕ ವ್ಯವಸ್ಥೆಯ ಹೊಸತು-ಹಳತುಗಳ ತಿಕ್ಕಾಟದಲ್ಲಿ ಜನ ಕಳಚೂರ್ಯರ ಅಸ್ತಿತ್ವವನ್ನೇ ಮರೆತು ಹೋದಂತೆ ಕಾಣುತ್ತದೆ. ಬಿಜ್ಜಣದೇವನ ನೇರ ಆಳ್ವಿಕೆಯು ಇರದಿದ್ದರೂ ಇದೊಂದು ಕಳಚೂರ್ಯರ ಕಾಲಾವಧಿಯ ಶಾಸನವೆಂದು ಗುರುತಿಸಬಹುದು. ಈ ಸಂದರ್ಭದಲ್ಲಿ ಬಿಜ್ಜಣದೇವ ಇನ್ನೂ ಅಧಿಕಾರದಲ್ಲಿದ್ದ. "ಭವಸೇನ ದೇವನ ಗುಡ್ಡಿಯಾದ ಕಾಳಿಗಾವುಣ್ಡಿ ಎಂಬುವಳು ಸಮಾಧಿ ವಿಧಾನದಿಂದ ಮುಡಿಪಿದ್ದು ಶಾಸನದ ಮುಖ್ಯಸಾರ.

ವೀರಬಿಜ್ಜಣದೇವನ ಇನ್ನೊಂದು ಅತೇದಿ ಶಾಸನವು ಮಂತಗಿ (ಹಾನತಾ)ಯಲ್ಲಿದೆ.[೧೧೫] ಊರ ಧರ್ಮಾನದಿಯ ದಂಡೆಯ ಮೇಲೆ ಇದ್ದ (ಈಗ ನಾಪತ್ತೆಯಗಿದೆ) ಈ ಜೈನ ಶಾಸನವು ಕಳಚೂರ್ಯ್ಯ ಬಿಜ್ಜಣದೇವನ ಆಳ್ವಿಕೆಯನ್ನು ಉಲ್ಲೇಖಿಸುತ್ತದೆ. ಹಾನಗಲ್ಲಿನ ಕಲಿದೇವಸೆಟ್ಟಿ ಎಂಬುವನು ಮಂತಗೆಯಲ್ಲಿ ಒಂದು ಚತುರ್ವಿಂಶತಿ ತೀರ್ಥಂಕರರನ್ನು ಸ್ಥಾಪಿಸಿ; ನಾಗಚಂದ್ರ ಭಟ್ಟಾರಕರಿಗೆ ದಾನನೀಡಿದ್ದು ಶಾಸನದ ಮುಖ್ಯ ತಿರುಳು.

ಕನ್ನಡ ಸಂಶೋಧನ ಸಂಸ್ಥೆ ಧಾರವಾಡದ ವಸ್ತು ಸಂಗ್ರಹಾಲಯದಲ್ಲಿ ವೀರ ಬಿಜ್ಜಣದೇವನ ಕಾಲಾವಧಿಯ ಸ್ತ್ರೀಯ ನಿಸಿಧಿಯೊಂದಿದ್ದು, ಹಾನಗಲ್ಲು ತಾಲ್ಲೂಕಿನ ಬಾಳೂರಿಗೆ ಸಂಬಂಧಿಸಿದ್ದಾಗಿದೆ. ಶಾಸನ ತ್ರುಟಿತಗೊಂಡಿದ್ದು ೧೦೮೬ನೆಯ ಶಕವರ್ಷವನ್ನು ಮತ್ತು ಧಾರಣ ಸಂವತ್ಸರ ಪುಷ್ಯ ಮಾಸ, ಗುರುವಾರಗಳನ್ನು ಹೆಸರಿಸುತ್ತದೆ. ಮೇಲೆ ಹೇಳಿದ ತೇದಿಯೆಂದು ಸ್ತ್ರೀಯೊಬ್ಬಳು ಸಮಾಧಿ ಮರಣ ಹೋದ ಉಲ್ಲೇಖ ಇದಾಗಿದೆ.

ಬಿಜ್ಜಣದೇವನ ನಂತರ ಇವನ ಮಗನಾದ ರಾಯಮುರಾರಿ ಸೋವಿದೇವ ಕಳಚೂರ್ಯ್ಯ ಸಿಂಹಾಸನವನ್ನು ಅಲಂಕರಿಸಿದ. ಇವನ ಆಳ್ವಿಕೆಯನ್ನು ಸೂಚಿಸುವ ಗೊಟ್ಟಗಡಿ (ನದಿಹರಳಹಳ್ಳಿ, ರಾತಾ)ಯ ಜೈನ ಶಾಸನವು ಕ್ರಿ.ಶ. ೧೧೭೭ರಲ್ಲಿ ರಚನೆಯಾಗಿದೆ.[೧೧೬] ಈ ಸಂದರ್ಭದಲ್ಲಿ ಬನವಾಸಿ-೧೨೦೦೦ವನ್ನು ಮಹಾಪ್ರಧಾನ ಕೇಸಿಮಯ್ಯ ದಂಡನಾಯಕ ಆಳುತ್ತಿದ್ದ. ಇವನ ಅಧೀನ ಬನವಾಸೆನಾಡ ಹೆಜ್ಜುಂಕ ವಡ್ಡರಾವುಳದ ದಂಡನಾಯಕನಾಗಿ ಮಹೇಶ್ವರದೇವನಿದ್ದ. ಈ ಕಾಲದಲ್ಲಿ ಅಧೀನ ಸುಂಕಾಧಿಕಾರಿಗಳಾದ ದಾವರಸ ಮತ್ತು ಬಂಮದೇವ ಎಂಬುವರು ಗೊಟ್ಟಗಡಿಯಲ್ಲಿ ನಾಗಗಾವುಂಡ ಕಟ್ಟಿಸಿದ ಬಸದಿಯ ನಂದಾದೀವಿಗೆಗೆ ವಿವಿಧ ಸುಂಕದಾನಗಳನ್ನು ಬಿಟ್ಟರು. ನಾಗಗಾವುಂಡನ ಶಾಸನದ ಕೊನೆಯಿಂದ ಈ ಶಾಸನ ಆರಂಭವಾಗಿರುವುದು ವಿಶೇಷ.

ಕಳಚೂರ್ಯ್ಯ ರಾಜಸ್ವದ ಕಾಲಾವಧಿಯ ಧಾರ್ಮಿಕ-ಸಾಮಾಜಿಕ ಸ್ಥಿತ್ಯಂತರಗಳ ಸಂಧಿಗ್ಧಕಾಲ. ಸಾಂಸ್ಕೃತಿಕ ಮುಖಾಮುಖಿಗಳ ಪಲ್ಲಟದ ಜ್ವಾಲೆ ಇವರಿಗೆ ತಟ್ಟದೇ ಇರಲಿಲ್ಲ. ಪರಿಸ್ಥಿತಿಯ ಕೈಗೆಂಬೆಗಳಾಗಿದ್ದ ಕಳಚೂರ್ಯ್ಯ ಅಧಿಪತಿಗಳು ಸಮಕಾಲೀನ ಕ್ರಾಂತಿಗೆ ಬೆಂಬಲ ಕೊಡಲೇಬೇಕಾದ ಅವಶ್ಯಕತೆ ಇತ್ತು. ಜೊತೆಗೆ ತಮ್ಮ ಮತ್ತು ರಾಜ್ಯದ ಹಿತಾಸಕ್ತಿ ಕಾಳಜಿ ಹೊರೆ ಇವರ ಮೇಲಿತ್ತು. ಒಂದು ಧರ್ಮ ಅರಳಬೇಕಾದರೆ ಇನ್ನೊಂದು ನರಳಬೇಕಾಗುತ್ತದೆ. ಕಳಚೂರ್ಯ್ಯರ ಆಡಳಿತದಲ್ಲಿ ಜೈನಧರ್ಮದ ಪರಿಸ್ಥಿತಿ ಎರಡನೆಯದ್ದಾಗಿತ್ತು.

## ೦೮. ಅತೇದಿ ಶಾಸನಗಳು (೧೨ನೆಯ ಶತಮಾನ).

ಕರ್ನಾಟಕದ ಮಟ್ಟಿಗೆ ೧೨ನೆಯ ಶತಮಾನ ಒಂದು ವಿಪ್ಲವದ ಕಾಲಾವಧಿ ವಿವಿಧ ಧರ್ಮ-ಪಂಥಗಳ ಬಲಸಂವರ್ಧನೆಯ ತಿಕ್ಕಾಟ, ಸಾಮಾಜಿಕ-ಧಾರ್ಮಿಕ-ಸಾಂಸ್ಕೃತಿಕ ಶೀತಲೀಕರಣ; ಏಳು ಬೀಳುಗಳು, ಅರಸು ಮನೆತನಗಳ ಹಕ್ಕುಸ್ಥಾಪನೆ ಹೀಗೆ ಬಹುಮುಖಿ ಆಯಾಮಗಳ ಸಂಘರ್ಷಗಳು ಈ ಶತಮಾನದಲ್ಲಿ ಅನಾವರಣಗೊಂಡವು. ೧೨ನೆಯ ಶತಮಾನದ ಉತ್ತರಾರ್ಧದ ಕೊನೆಯ ಘಟ್ಟವಂತೂ ಹಾವೇರಿ ಪರಿಸರ ಮತ್ತು ಇದಕ್ಕೆ ಅಂಟಿಕೊಂಡಿರುವ ಬೆಳ್ವಲ-೩೦೦, ಪುಲಿಗೆರೆ-೩೦೦ರ ಪರಿಸರಗಳ ಕದನಗಳ ದರ್ಶನಮಾಡಿಸಿತು. ಚಾಳುಕ್ಯರು, ಹೊಯ್ಸಳರು, ಸೇವುಣರು ತಮ್ಮ ರಾಜಸ್ವಗಳ ಹಕ್ಕು ಸ್ಥಾಪನೆಗೋಸ್ಕರ ಒಬ್ಬರೊಬ್ಬರು ಬಡಿದಾಡಿಕೊಂಡರು, ಗೆದ್ದರು, ಸೋತರು. ಒಂದು ರಾಜಸ್ವವನ್ನು ಮುರಿದು ಇನ್ನೊಂದು ರಾಜಸ್ವದ ಸಂಸ್ಕೃತಿಯನ್ನು ಕಟ್ಟುವುದು ಈ ಕಾಲಾವಧಿಯಲ್ಲಿ ಸರ್ವೆ ಸಾಮಾನ್ಯವಾಗಿತ್ತು. ಈ ಕಲಹಗಳಿಂದ ಹಾವೇರಿ ಪರಿಸರದ ಪ್ರಜೆಗಳು ತತ್ತರಿಸಿಹೋಗಿದ್ದರು. ರಾಜಸ್ವಗಳ ಯುದ್ಧಗಳಲ್ಲಿ ಯಾರಿಗೆ ಜಯವಾಯಿತು ಅರಿಯದಾದರು. ನಿರಂತರವಾಗಿ ನಡೆಯುತ್ತಿದ್ದ ಯುದ್ಧಗಳು ಈ ದ್ವಂದ್ವವನ್ನು ಉಂಟುಮಾಡಿದಂತೆ ತೋರುತ್ತವೆ. ಆದ್ದರಿಂದ ಈ ಕಾಲಾವಧಿಯಲ್ಲಿ ರಚನೆಯಾದ ಸಾಕಷ್ಟು ಶಾಸನಗಳಲ್ಲಿ ಯಾವ ರಾಜರ ಉಲ್ಲೇಖಗಳು ಲಭ್ಯವಾಗುವುದಿಲ್ಲ.

೧೨ನೆಯ ಶತಮಾನಕ್ಕೆ ಸಂಬಂಧಿಸಿದ ೨೦ ಅತೇದಿ ಜೈನಶಾಸನಗಳು ಹಾವೇರಿ ಪರಿಸರದಲ್ಲಿ ಲಭ್ಯವಿವೆ. ಇವುಗಳಲ್ಲಿ ಪಾದಪೀಠ ಶಾಸನಗಳು ದಾನಶಾಸನಗಳು ನಿಸಿಧಿ ಶಾಸನಗಳು ಸೇರಿಕೊಂಡಿವೆ.

ಅರಟಾಳ (ಶಿತಾ) ೧೧ನೆಯ ಶತಮಾನದ ಹೊತ್ತಿಗಾಗಲೆ ಒಂದು ಜೈನಕೇಂದ್ರವಾಗಿತ್ತು. ಇಲ್ಲಿನ ಪಾರ್ಶ್ವನಾಥ ಬಸದಿಗೆ ವಿವಿಧ ದಾನದತ್ತಿಗಳ ಬಳುವಳಿಕೆಗಳು ನಿರಂತರವಾಗಿ ಸಲ್ಲುತ್ತಿದ್ದವು. ಇವುಗಳ ವ್ಯಾಪ್ತಿಗೆ ಜಿನಬಿಂಬದಾನವೂ ಸೇರಿಕೊಂಡಂತಿದೆ. ಹರಕೆ, ನೋಂಪಿಯ ನಿಮಿತ್ತವಾಗಿ ಬಸದಿಗೆ ತೀರ್ಥಂಕರರ ಬಿಂಬಗಳನ್ನು ಮಾಡಿಸಿಕೊಡುವ ಒಂದು ಸಂಪ್ರದಾಯ ಹಾವೇರಿ ಪರಿಸರದಲ್ಲಿ ಹನ್ನೆರಡನೆಯ ಶತಮಾನದಲ್ಲಿ ಹುಟ್ಟಿದಂತೆ ತೋರುತ್ತದೆ. ಹರಿತಾಣ (ಅರಟಾಳ)ದ

ಬಸದಿಗೆ ಹುಲ್ಲಂಗೂರು (ಹುಲಗೂರು) ಕೇತಿಸೆಟ್ಟಿಯ ಮಗ ಪಾರಿಸಯ್ಯ[೧೧೭] ಎಂಬುವನು ಶಾನ್ತಿನಾಥದೇವನ ಪ್ರತಿಮೆಯನ್ನು ಮಾಡಿಸಿಕೊಡುವುದರ ಮೂಲಕ ಮೂರ್ತಿದಾನ ಪ್ರಕ್ರಿಯೆಗೆ ಚಾಲನೆ ನೀಡಿದ್ದಾನೆ. ಇದೇ ಬಸದಿಯ ಮೂಲನಾಯಕ ಪಾರ್ಶ್ವನಾಥ ತೀರ್ಥಂಕರ ಮೂರ್ತಿಯ ಪಾದಪೀಠದ ಮೇಲೆ ಮೂಲಸಂಘ ಸೂರಸ್ಥಗಣದ ಶ್ರಾವಕನೊಬ್ಬ ಧರ್ಮಕೀರ್ತಿಯನ್ನು ಪಡೆಯಲು ಬಿಂಬವನ್ನು ಮಾಡಿಸಿದ ಬರೆಹವಿದೆ. ಬಹುಶ: ಇವನು ಬಸದಿಯನ್ನು ಕಟ್ಟಿಸಿದ ಗಂಗರ ಬಮ್ಮಿಸೆಟ್ಟಿಯೇ ಇರಬಹುದು[೧೧೮] ಅಥವಾ ಮೂಲ ಮೂರ್ತಿಯು ಮುಕ್ಕಾದಾಗ ಭಕ್ತನೊಬ್ಬ ಮಾಡಿಸಿಕೊಟ್ಟಂತೆ ತೋರುತ್ತದೆ.

ಧಾರವಾಡದ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಯಲ್ಲಿ ಇರುವ ಸಿಟ್ಟಸಿಂಗಿ (ನಿಡಸಿಂಗಿ, ಶಿತಾ) ಬಸದಿಯ ಆದಿನಾಥ ಪ್ರಧಾನ ಚೌವ್ವೀಸ ತೀರ್ಥಂಕರ ಮೂರ್ತಿಯೊಂದಿದೆ. ಇದರ ಪಾದಪೀಠದಲ್ಲಿರುವ ೧೨ನೆಯ ಶತಮಾನದ ಶಾಸನ ಮೂಲಸಂಘ ಸೂರಸ್ತಗಣದ ಬಾಳಚಂದ್ರದೇವರ ಪ್ರೇಮದ ಗುಡ್ಡ ಜಿಂಜಿಯ ಬೋಮಯನ ಮಗ ಲಖಯನು ನಿಟ್ಟಸಿಂಗಿಯ ಬಸದಿಗೆ ಮೂರ್ತಿ ಮಾಡಿಸಿಕೊಟ್ಟಿದ್ದಾಗಿ ತಿಳಿಸುತ್ತದೆ. ಇದೇ ಪ್ರದೇಶದ ಬಾಡ (ಶಿತಾ) ಗ್ರಾಮದಲ್ಲಿರುವ ನಾಲ್ಮೋಗದ ಶಾಂತಿನಾಥ ತೀರ್ಥಂಕರ ಪ್ರತಿಮೆಯನ್ನು ದೇಸಿಗಣದ ಚಂದ್ರಕೀರ್ತಿ ಮುನಿಯ ಪ್ರತಿಬದ್ಧ ಕಲ್ಲಣ (ಇಂದಿನ ಕಲ್ಯಾಣ ಹಾನತಾ) ಬಸದಿಗೆ ಚಾಮುಂಡಿ ಸೆಟ್ಟಿ ಎಂಬುವನು ಮಾಡಿಸಿಕೊಟ್ಟುದ್ದಾಗೆ ಪಾದಪೀಠದಲ್ಲಿರುವ ಬರೆಹ ತಿಳಿಸುತ್ತದೆ.[೧೧೯] ಶಿಗ್ಗಾವಿ ತಾಲ್ಲೂಕಿನ ಶೀಲವಂತ ಸೋಮಾಪುರದ ಶಾಸನವೊಂದು ಮೂಲಸಂಘ ಕಾಣೂರುಗಣದ ಮಾಧವಚಂದ್ರ ಭಟ್ಟಾರಕರ ಶಿಷ್ಯೆ ಸಿರಿಯಲಾದೇವಿ ಮತ್ತು ಕೆರೆಯ ಕಾಳವ್ವೆ ಮುಖ್ಯವಾಗಿ ದೇವರ ನೈವೇದ್ಯಕ್ಕಾಗಿ ದಾನ ಮಾಡಿಸಿದ ವಿಷಯವನ್ನು ಉಲ್ಲೇಖಿಸುತ್ತದೆ.[೧೨೦] ಮೂರ್ತಿಯ ಸುತ್ತ ಇರುವ ಶಾಸನ ಈ ಚೌವ್ವೀಸ ತೀರ್ಥಂಕರ ಬಿಂಬವನ್ನು ಇವರೇ ಮಾಡಿದುದಾಗಿ ತಿಳಿಸುತ್ತದೆ. ದೇವಚಂದ್ರಸೂರಿಯ ಆದೇಶದಂತೆ ಕಲ್ಲಪ್ಪ ಶ್ರೇಷ್ಠಿಯ ಮಗ ಓಜಣ ಒಂದು ನೇಮಿನಾಥ ವಿಗ್ರಹವನ್ನು ಮಾಡಿಸಿದ್ದುದಾಗಿ. ಹಾವೇರಿಯಲ್ಲಿ ದೊರೆತ ಶಾಸನ ಹೇಳುತ್ತದೆ. ನೇಮಿನಾಥ ತೀರ್ಥಂಕರರ ಪಾದಪೀಠ ಶಾಸನ ಇದಾಗಿದ್ದು, ಈ ಮೂರ್ತಿಯನ್ನು ಗೇರುಸೊಪ್ಪೆಯಿಂದ ತರಲಾಗಿದೆ.[೧೨೧] ಗೇರುಸೊಪ್ಪೆಗೂ ಹಾವೇರಿಗೂ ವ್ಯಾಪಾರ ವಹಿವಾಟು ಇತ್ತೆಂಬುದು ಈ ಶಾಸನ ಸಾರುತ್ತದೆ. ಯಾಕೆಂದರೆ ಗೇರುಸೊಪ್ಪೆ ಮೊದಲಿನಿಂದಲೂ ಸಾಂಬಾರು ಪದಾರ್ಥಗಳ ಮಾರಾಟದ ವಾಣಿಜ್ಯ ಕೇಂದ್ರ. ಅಂತೆಯೇ ಅಲ್ಲಿಂದ ತರಲಾದ ಯಾಲಕ್ಕಿಯನ್ನು ಹಾವೇರಿಯಲ್ಲಿ ಮಾರಾಟ ಮಾಡಲಾಗುತ್ತಿತ್ತು. ಈಗಲೂ ಹಾವೇರಿಯನ್ನು 'ಯಾಲಕ್ಕಿ ನಗರ' ಎಂದು ಕರೆಯಲಾಗುತ್ತದೆ. ಗೇರುಸೊಪ್ಪೆಯಿಂದ ಯಾಲಕ್ಕಿ ಪದಾರ್ಥಗಳನ್ನು ತಂದು ಮಾರುವವರು ಜೈನ ವ್ಯಾಪಾರಿಗಳು ಅಲ್ಲಿಂದ ನೇಮಿನಾಥ ಮೂರ್ತಿಯನ್ನು ತಂದು ಹಾವೇರಿಯಲ್ಲಿ ಪ್ರತಿಷ್ಠಾಪಿಸಿದ್ದಾರೆ. ಸದ್ಯ ಜೈನ ವರ್ತಕರು ಬಸದಿ ಇರುವ ಪ್ರದೇಶಕ್ಕೆ 'ಯಾಲಕ್ಕಿ ಓಣಿ' ಎಂದು ಕರೆಯಲಾಗುತ್ತದೆ. ಮೂರ್ತಿ ೧೨ನೆಯ ಶತಮಾನಕ್ಕೆ ಸಂಬಂಧಿಸಿದ್ದಾಗಿದ್ದು ಅದನ್ನು ಗೇರುಸೊಪ್ಪೆಯಿಂದ ಹಾವೇರಿಗೆ ೧೬–೧೭ನೆಯ ಶತಮಾನದಲ್ಲಿ ತಂದಂತೆ ಕಾಣುತ್ತದೆ.

ಅಕ್ಕೂರು (ಹಾತಾ) ವೀರಭದ್ರದೇವಾಲಯದಲ್ಲಿ ಕಾಪಿಟ್ಟಿರುವ ತೀರ್ಥಂಕರ ಪಾದಪೀಠದಲ್ಲಿ ಸಾತೋಜ ರಾಮೋಜರು ಮಾಡಿಸಿದ ಬಸದಿಯ ಉಲ್ಲೇಖವಿದೆ.[೧೨೨] ದೇವಗಣದ ಸೋಮದೇವಕುಮಾರ ಮತ್ತು ಸುಧಾರಕದೇವರ ಪ್ರಶಸ್ತಿ ಭಾಗವನ್ನು ಬರೆಹದಲ್ಲಿ ಉಧೃತಗೊಳಿಸಲಾಗಿದೆ. ಕ್ಷೇತ್ರಕಾರ್ಯದಲ್ಲಿ ಕಂಡುಬಂದು ಇನ್ನೊಮ್ಮೆ ಹೋದಾಗ ನಾಪತ್ತೆಯದ ಎರಡು ಪಾದಪೀಠ ಶಾಸನಗಳು ಕುಂಚೂರು (ಹಿತಾ)ನಲ್ಲಿದ್ದವು. ಇವುಗಳಲ್ಲಿ ಒಂದು ಶ್ರೀಮೂಲಸಂಘ ಕುಂದಕುಂದಾನ್ವಯ ದೇಸಿಗಣದ ಅನುಯಾಯಿಯಾದ ಜೋಗಿಸೆಟ್ಟಿಯ ಮಗ ಬೋಮಯ ಪಾರ್ಶ್ವನಾಥ ಪ್ರತಿಮೆ ಮಾಡಿಸಿದ್ದಾಗಿ, ಇನ್ನೊಂದರಲ್ಲಿ ಮೂಲಸಂಘ ಸೂರಸ್ಥಗಣದ ಅನುಯಾಯಿ ಚಾಮುಂಡನ ಪುತ್ರ ಕಾಳಿಯಣ್ಣ ಜಿನೇಂದ್ರಪತಿಯನ್ನು ಸ್ಥಾಪಿಸಿದ್ದಾಗಿ ಪ್ರಸ್ತಾಪವಿದೆ.[೧೨೩] ಸಮ್ಮಸಗಿಯಲ್ಲಿ ಐದು ವರ್ಷಗಳ ಹಿಂದೆ ದೊರೆತ ಸುಂದರ ಪಾರ್ಶ್ವನಾಥ ಮೂರ್ತಿಯನ್ನು ಮಸಣಸೆಟ್ಟಿ ಅವನ ಮಗ ಮಾದಿಸೆಟ್ಟಿ, ಭೋಗಿಸೆಟ್ಟಿಯರು ನಿರ್ಮಿಸಿದರು.[೧೨೪]

೧೨ನೆಯ ಶತಮಾನದ ಅಂತ್ಯದಲ್ಲಿ ಸಾವನ್ನು ಆಹ್ವಾನಿಸುವ ಜೈನ ಸಂಸ್ಕೃತಿ ಪ್ರಾರಂಭವಾಗಿ ವಿಜಯನಗರ ಅರಸರ ಕಾಲಾವಧಿಯವರೆಗೂ ಹಾವೇರಿ ಪರಿಸರದೊಳಗೆ ಮುಂದುವರೆಯುತ್ತದೆ. ಈ ಕಾಲಾವಧಿಯಲ್ಲಿ ಸಾಕಷ್ಟು ನಿಸಿಧಿ ಸ್ಮಾರಕಗಳು ದೊರೆಯುತ್ತಿದ್ದು, ೧೨ನೆಯ ಶತಮಾನದ ಶಾಸನಯುಕ್ತ ನಿಸಿಧಿಗಳ ಉಲ್ಲೇಖಗಳನ್ನು ಮಾತ್ರ ದಾಖಲಿಸಲಾಗಿದೆ. ಆರಂಭದ ನಿಸಿಧಿಯು ಮಲಧಾರಿ ನರೇಂದ್ರ ಮುನಿಯದ್ದಾಗಿದ್ದು ಸವಣೂರು (ಶಿತಾ)ಲ್ಲಿ ದೊರೆಯುತ್ತದೆ.[೧೨೫] ಈ ಮುನಿಯು ಸನ್ಯಸನ ವಿಧಾನದಿಂದ ಸಾವನ್ನು ಆಹ್ವಾನಿಸಿದ. ಶಿಗ್ಗಾವಿ (ಶಿತಾ)ಯ ನಿಸಿಧಿಯು ದೇಸಿಗಣದ ಬಾಳಚಂದ್ರ ತ್ರೈವಿದ್ಯಾದೇವನ ಗುಡ್ಡನೊಬ್ಬ ಸಲ್ಲೇಖನದಿಂದ ಸಾವನ್ನು ಅಪ್ಪಿಕೊಂಡರೆ,[೧೨೬] ಬಾಳೇಹಳ್ಳಿ (ಹಾನತಾ)ಯ ಚಾಮೋಜ ಶ್ರುತಕೀರ್ತಿ ದೇವರ ಅಣತಿಯಂತೆ ಮರಣವನ್ನು ಸ್ವಾಗತಿಸಿದ.[೧೨೭] ಇನ್ನು ಯಳವಟ್ಟಿ (ಹಾನತಾ)ಯ ಸೋಮಿಯಕ್ಕ,[೧೨೮] ಹೇರೂರು (ಹಾನತಾ) ಅನಾಮಧೇಯ ಶ್ರಾವಕ,[೧೨೯] ಹಾವೇರಿ (ಹಾನತಾ)ಯ ಹೊಲ್ಲನ ಮಗನಾದ ಶಂಕದೇವ,[೧೩೦] ಕುಂಚೂರ (ಹಿತಾ) ಅನಾಮಧೇಯ ವ್ಯಕ್ತಿ,[೧೩೧] ಹಿರೇಕೋಣತಿಯ (ಹಿತಾ) ಅನಾಮಧೇಯ ಶ್ರಾವಕ,[೧೩೨] ಚಿನ್ನಮುಳಗುಂದ (ಹಿತಾ)ದಲ್ಲಿ ದೇವಗಣದ ಭವಸೇನ ದೇವರ ಗುಡ್ಡಿ ಬೆಳ್ಳಿಸೆಟ್ಟಿಯರ ಸೋಮವ್ವೆ,[೧೩೩] ಕೂಲಿ (ರಾತಾ)ಯಲ್ಲಿ ಸೇನಗಣದ ರಾಜಗುರು ಸೇನದೇವರ ಗುಡ್ಡನಾದ ಸೋವಿಸೆಟ್ಟಿ[೧೩೪] ಸಲ್ಲೇಖನ ವ್ರತವನ್ನಾಚರಿಸಿ ಜೀವತ್ಯಾಗ ಮಾಡಿದ ಚರಿತ್ರಾರ್ಹ ವ್ಯಕ್ತಿಗಳು.

ಕ್ಷೇತ್ರಕಾರ್ಯದಲ್ಲಿ ಹೊಸದಾಗಿ ಬಾಳೂರು ಕೆರೆಯೊಳಗೆ ದೊರೆತ ಬಾಳೂರು ಚಾಕ್ಕಿಗೌಡಿಯ ನಿಸಿಧಿ ಅಪರೂಪಗಳಲ್ಲಿಯೇ ಅಪರೂಪ. ೧೨ನೆಯ ಶತಮಾನದ ಅಂತ್ಯಕ್ಕೆ ರಚನೆಯಾದ ಈ ನಿಸಿಧಿ ಶಾಸನ ಕರ್ನಾಟಕಕ್ಕಷ್ಟೇ ಅಲ್ಲ; ಇಡೀ ಭಾರತೀಯ ಜೈನಶಾಸನಗಳಲ್ಲಿಯೇ ಐತಿಹಾಸಿಕ ಮಹತ್ವ ಪಡೆದಿದೆ. ಇಲ್ಲಿ ಜೈನರ ನಿತ್ಯಪಠಣ ಪವಿತ್ರ 'ಪಂಚ ಣಮೋಕಾರ' ಮಂತ್ರ ದಾಖಲಾಗಿರುವುದೇ ಈ ಕೀರ್ತಿಗೆ ಪಾತ್ರವಾಗಿದೆ.

ಪ್ರಾಕೃತದಲ್ಲಿ ರಚನೆಯಾದ 'ಣಮೋಕಾರ' ಮಂತ್ರಕ್ಕೆ ಪಂಚಪದ, ಪಂಚನಮಸ್ಕಾರ, ಎಂಬ ಸಮಾನಾರ್ಥನಾಮಗಳಿವೆ. ಪಂಚಪರಮೇಷ್ಠಿಗಳಾದ ಅರಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸರ್ವಸಾಧುಗಳನ್ನು ನಿತ್ಯ ಸ್ಮರಿಸುವುದೇ ಈ ಶ್ಲೋಕದ ಮೂಲ ಉದ್ದೇಶ. ಇದನ್ನು ಆಚಾರ್ಯ ಪುಷ್ಪದಂತರು ರಚಿಸಿದರು ಎಂಬುದು ಮಿರ್ಜಿ ಅಣ್ಣಾರಾಯರ ಅಭಿಮತ.[೧೩೫] ಜೈನ ದಿಗಂಬರ, ಶ್ವೇತಾಂಬರ, ಸ್ಥಾನಿಕವಾಸಿಗಳು ಈ ಮಂತ್ರವನ್ನು ಒಮ್ಮತದಿಂದ ಒಪ್ಪಿಕೊಂಡು ಈಗಲೂ ಪಠಿಸುತ್ತಾರೆ. 'ಣಮೋಕಾರ ಮಂತ್ರದ ಆರಂಭದ ಸ್ವಲ್ಪ ಭಾಗವು "ಣಮೋ ಅರಹಂತಾಣಂ ಣಮೋ ಸವ ನಿಧಾಣಂ' ಎಂಬ ರೂಪದಲ್ಲಿ ಓಡಿಸಾ ಪ್ರಾಂತದ ಆನೆಗುಹೆ (ಹಾಥಿಗುಂಪಾ)ಯಲ್ಲಿ ದೊರೆತ ಕಲಿಂಗದ ಅರಸನಾದ ಖಾರವೇಲನ ಶಿಲಾಲೇಖದಲ್ಲಿ ನಮಗೆ ಮೊದಲು ನೋಡಲಿಕ್ಕೆ ದೊರೆಯುವುದು."[೧೩೬] ಇದಾದ ನಂತರ ಕರ್ನಾಟಕದಲ್ಲಿ ಕದಂಬರ ಹಲಸಿ (ಬೆಳಗಾವಿ ಜಿ) ಮತ್ತು ದೇವಗಿರಿ (ಹಾಜಿ) ತಾಮ್ರಶಾಸನಗಳು ಸಿದ್ಧರಿಗೆ ನಮಸ್ಕಾರ ಎಂಬುವಂತೆ 'ಸಿದ್ಧಮ್' ಎಂಬ ಸ್ತುತಿಯೊಂದಿಗೆ ಪ್ರಾರಂಭಗೊಳ್ಳುತ್ತವೆ.[೧೩೭] 'ಓಂ ನಮ: ಸಿದ್ಧೇಭ್ಯ' ಎಂಬ ರೂಪ ಕ್ರಿ.ಶ. ೯೫೦ರಲ್ಲಿ ರಚಿತವಾದ ಪಂಪನ ತಮ್ಮ ಜಿನವಲ್ಲಭನ ಆಂಧ್ರಪ್ರದೇಶದ ಕುರ್ಕ್ಯಾಲ ಶಾಸನದಲ್ಲಿ ಲಭ್ಯವಿದೆ.[೧೩೮] ಕ್ರಿ.ಶ. ೧೧೬೮ರಲ್ಲಿ ರಚಿತವಾದ ನದಿಹರಳಹಳ್ಳಿ (ರಾತಾ)ಯ ಜೈನಶಾಸನದಲ್ಲಿ ಶಾಪಾಶಯ ಕೊನೆಗೆ ಪ್ರಾಕೃತ ಶ್ರವಣರೂಪ ಮತ್ತು ಕನ್ನಡ ಲಿಪಿಯಲ್ಲಿ 'ಣಮೋ ಅರಹನ್ತಾಣಂ' ಎಂಬ ಶ್ಲೋಕದ ಮೊದಲ ಸಾಲು ಕಂಡುಬರುತ್ತದೆ.[೧೩೯] ಕ್ರಿ.ಶ. ೧೨೭೫ರ ಕೋಗಳಿ (ಬಳ್ಳಾರಿ ಜಿ) ಶಾಸನದಲ್ಲಿ 'ನಮಃ ಸಿದ್ಧೇಭ್ಯಃ' ಎಂಬ ರೂಪವನ್ನು ಕಾಣಬಹುದು.[೧೪೦] ಆದರೆ ಈ ಎಲ್ಲಾ ಶಾಸನಗಳೂ ಪೂರ್ಣಪ್ರಮಾಣದ 'ಣಮೋಕಾರ' ಮಹಾಮಂತ್ರದ ಶ್ಲೋಕವನ್ನು ಒಳಗೊಂಡಿಲ್ಲ. ಅದು ೧೨ನೆಯ ಶತಮಾನದ ಬಾಳೂರು ಚಾಕಿಗೌಡಿಯ ನಿಸಿಧಿಯಲ್ಲಿ ಪೂರ್ಣಗೊಂಡಿದೆ.



ಪ್ರಸ್ತುತ ಶಾಸನದಲ್ಲಿ ". . . ಅರಹಂತಾಣಂ . . . . . . . . . ರಿಯಾಣಂ ಣಮೋಮೋವಝ್ಝಾಣಂ ನಮೋ ಳೊವ್ವೆಸಾಹೂಣಂ", "ಅರಹಂತಾಣಂ ತಮೋಮ ಸಿದ್ಧಾಣಂ ಆಇರ್ಯ್ಯಾಣಂ ವಝ್ಝಾಯಾಣಂ ಳೋಯಮ್ಮಿಯ ಸಾಹೂಣಂ" ಎಂಬ ಣಮೋಕಾರ ಮಂತ್ರವು ಎರಡು ಬಾರಿ ಪುನರಾವರ್ತಿತವಾಗಿದೆ. ವ್ಯಾಕರಣ ದೋಷವನ್ನು ಹೊರತುಪಡಿಸಿದರೆ ಮಂತ್ರದ ಮೂಲ ಪದಗಳ ಅರ್ಥಕ್ಕೆ ಚ್ಯುತಿಯಾಗಿಲ್ಲ. ಇದೇ ಶಾಸನದಲ್ಲಿ "ಮೋಕ್ಷ ಮಾರ್ಗೋಪದೇಶ ಮೋಪ ಪಂಚ (ಪದ) ಪಾಪಕರ್ಮ ವಿನಾಶನ ಮಂಗಳಾನಾಂಚ [ಸಬೇಷಿ] ಎಂದಿರುವುದು ಈ ಮಂತ್ರಕ್ಕಿರುವ ಮಹತ್ವ ಮತ್ತು ಪಂಚಪರಮೇಷ್ಠಿಗಳ ತ್ಯಾಗ, ಸಾಧನಾ, ಕರ್ಮಕ್ಷಯ ತತ್ವವನ್ನು ಸಾರುತ್ತದೆ. ಆದ್ದರಿಂದಲೆ ಚಾಕ್ಕಿಗೌಡಿ ಪಂಚಪದವನ್ನು ಪಠಿಸುತ್ತಲೇ ಜೀವತ್ಯಾಗ ಮಾಡಿದಳು. ಸಾವನ್ನು ಆಹ್ವಾನಿಸುವ ಪ್ರಕ್ರಿಯೆಯಲ್ಲಿ 'ಪಂಚಪದ ಪಠಣ'ದ ವಿಧಾನವು ಒಂದು. ಒಟ್ಟಿನಲ್ಲಿ ಪ್ರಾಕೃತ ಭಾಷೆಯ ಣಮೋಕಾರವನ್ನು ಕನ್ನಡ ಬರೆಹದಲ್ಲಿ ಕೆತ್ತಿದ ಕೀರ್ತಿ ನಿಸಿಧಿಗೆ ಸಲ್ಲುತ್ತದೆ. ಸಾವನ್ನು ಆಹ್ವಾನಿಸುವ ಪ್ರಕ್ರಿಯೆಯಲ್ಲಿ 'ಪಂಚಪದಪಠಣ'ದ ವಿಧಾನವು ಒಂದು. ೧೨ನೆಯ ಶತಮಾನದ ಹಾವೇರಿ ಪರಿಸರದ ಜೈನ ಶಾಸನಗಳು ಅಲ್ಪವಾದರೂ ಕಲ್ಪವನ್ನು ಸೃಷ್ಟಿಸಿವೆ.

## ೧೯. ಹೊಯ್ಸಳರು (ಕ್ರಿ.ಶ. ೧೦೦೦-೧೩೪೬).

ಸುಮಾರು ಮೂರು ಶತಮಾನಗಳಷ್ಟು ಕರ್ನಾಟಕದ ಕೆಲಭಾಗಗಳನ್ನು ಆಳಿದ ಹೊಯ್ಸಳರು, ಕರ್ನಾಟಕದ ಅಗ್ರಪಂಕ್ತಿಯ ರಾಜಸ್ವ ಮನೆತನಗಳಲ್ಲಿ ಒಬ್ಬರಾಗಿದ್ದಾರೆ. ಈ ರಾಜವಂಶದಲ್ಲಿ ವಿಷ್ಣುವರ್ಧನ (ಕ್ರಿ.ಶ. ೧೧೦೮-೪೧), ಎರಡನೆಯ ಬಲ್ಲಾಳ (ಕ್ರಿ.ಶ. ೧೧೭೩-೧೨೨೦) ಎಂಬ ಪ್ರಖ್ಯಾತ ದೊರೆಗಳು ಆಗಿಹೋಗಿದ್ದಾರೆ. ದ್ವಾರಸಮುದ್ರವನ್ನು ರಾಜಧಾನಿಯನ್ನಾಗಿಸಿಕೊಂಡು ಆಳ್ವಿಕೆ ಪ್ರಾರಂಭಿಸಿದ ವಿಷ್ಣುವರ್ಧನ ಹೊಯ್ಸಳರ ಮಹತ್ವಾಕಾಂಕ್ಷಿ ದೊರೆ. ಚೋಳ, ಚಂಗಾಳ್ವ, ಕೊಂಗಾಳ್ವರನ್ನು ಸೋಲಿದ್ದು ಇವನ ಮಹತ್ತರ ಸಾಧನೆ. ಅನೇಕ ದಿಗ್ವಿಜಯಗಳ ಸರದಾರನಾದ ವಿಷ್ಣುವರ್ಧನ ಕ್ರಿ.ಶ. ೧೧೧೮ರಲ್ಲಿ ತಂಗಭದ್ರಯಾಚೆಗೂ ಸಾಗಿ ಚಾಳುಕ್ಯರಿಂದ ಹಾನಗಲ್ಲನ್ನು ವಶಪಡಿಸಿಕೊಂಡಿದ್ದು ಒಂದು ಸಾಹಸ. ಹೀಗೆ ಉತ್ತರೋತ್ತರವಾಗಿ ಜಯದ ಹಾದಿಯಲ್ಲಿ ಸಾಗುತ್ತಿದ್ದ ವಿಷ್ಣುವರ್ಧನನ ವೇಗಕ್ಕೆ ಕಡಿವಾಣ ಹಾಕಿದ್ದು. "ಎರಂಬರಗೆ (ಯಲಬುರ್ಗಾ) ಸಿಂದವಂಶದ ಪೆರ್ಮ ಕ್ರಿ.ಶ. ೧೧೨೨ರಲ್ಲಿ ಇವನು ವಿಷ್ಣುವರ್ಧನನನ್ನು ಸೋಲಿಸಿದ. ಚಾಳುಕ್ಯರಿಗೆ ಮತ್ತೆ ತಲೆಬಾಗುವಂತೆ ಮಾಡಿದ."[೪೧]

ವಿಷ್ಣುವರ್ಧನನ ನಂತರ ಹೊಯ್ಸಳ ಸಾಮ್ರಾಜ್ಯವನ್ನು ವಿಸ್ತರಿಸಿದ ಮತ್ತೊಬ್ಬ ಪ್ರಸಿದ್ಧ ದೊರೆ ಎರಡನೆಯ ಬಲ್ಲಾಳ (ಕ್ರಿ.ಶ. ೧೧೭೩-೧೨೨೦). ಇವನು ಅಧಿಕಾರಕ್ಕೆ ಬಂದ ನಂತರ "ಕ್ರಿ.ಶ. ೧೧೭೭ರಲ್ಲಿ ಪಾಂಡ್ಯ ಕಾಮದೇವನನ್ನು ಸೋಲಿಸಿ ಉಚ್ಚಂಗಿದುರ್ಗವನ್ನು ಗೆದ್ದ. ತದನಂತರ ಕ್ರಿ.ಶ. ೧೧೭೮ರಲ್ಲಿ ಹಾನಗಲ್ಲನ್ನು ಗೆದ್ದು ಬೆಳ್ವಲವನ್ನು ವಶಪಡಿಸಿಕೊಳ್ಳಲು ಯತ್ನಿಸಿದಾಗ ಕಲಚೂರಿಗಳ ತೀವ್ರ ಪ್ರತಿಭಟನೆಯನ್ನು ಅವನು ಎದುರಿಸಬೇಕಾಯಿತು. ಮರುವರ್ಷವೇ ಅವನು ಹಾನಗಲ್ಲನ್ನು ಕಳೆದುಕೊಂಡನಲ್ಲದೆ ಕೆಲಕಾಲ ಕಲಚೂರಿಗಳ ಅಧಿರಾಜತ್ವವನ್ನೂ ಸ್ವೀಕರಿಸಬೇಕಾದ ಸ್ಥಿತಿ ಬಂತು. ಆದರೆ ಶೀಘ್ರವೇ ಕಲಚೂರಿಗಳನ್ನು ಸೋಲಿಸಿ ಚಾಳುಕ್ಯರು ಮತ್ತೆ ಅಧಿಕಾರ ಗಳಿಸಿದ್ದರಲ್ಲದೆ, ಮುಂದೆ ಚಾಳುಕ್ಯರ ಪತನವಾಯಿತು. ಆದರೆ ಇದಕ್ಕೆ ಮೊದಲೇ ಬಲ್ಲಾಳನು ಕಲಚೂರಿಗಳನ್ನು ಸೋಲಿಸಿದ್ದು ಸಾಮ್ರಾಟ್ ಸಂಕಮನ ಆನೆಯನ್ನೇ ಈತನು ಕೊಂದುದಾಗಿ ಶಾಸನವೊಂದು ಹೇಳಿದೆ. ಕಲಚೂರಿಗಳ ಅನೇಕ ಅಧಿಕಾರಿಗಳು ಮುಂದೆ ಬಲ್ಲಾಳನ ಬಳಿ ಊಳಿಗಕ್ಕೆ ಬಂದು ನಿಂತರು"[೪೨] ಹೀಗೆ ಚಾಳುಕ್ಯ, ಕಳಚೂರ್ಯ, ಸೇವುಣರಿಗೆ ಸಿಂಹಸ್ವಪ್ನದಂತಾಗಿದ್ದ ಎರಡನೆಯ ವೀರಬಲ್ಲಾಳ ಸಾಕಷ್ಟು ದಿಗ್ವಿಜಯಗಳ ನಂತರ ಕ್ರಿ.ಶ. ೧೨೨೦ರಲ್ಲಿ ಅಸುನೀಗಿದ. ಇವನ ನಂತರ ಬಂದ ಮೂರನೆಯ ಬಲ್ಲಾಳ (ಕ್ರಿ.ಶ. ೧೨೯೨-೧೩೪೩)ನೆಂಬ ಅಪ್ರತಿಮ ದೊರೆಯೊಂದಿಗೆ ಹೊಯ್ಸಳ ರಾಜ್ಯ ಅಸ್ತಂಗತಗೊಂಡಿತು. ಕ್ರಿ.ಶ. ೧೩೪೬ರವರೆಗೂ ವೀರ ವಿರುಪಾಕ್ಷ ಬಲ್ಲಾಳ ಹೊಯ್ಸಳ ರಾಜ್ಯವನ್ನಾಳಿದರೂ ನಾಮಕಾವಸ್ಥೆಯಾಗಿ ಮಾತ್ರ.

ವಿಶಾಲ ಸಾಮ್ರಾಜ್ಯ ಸ್ಥಾಪಿಸಿದ್ದ ಹೊಯ್ಸಳರು ಹಾವೇರಿ ಪರಿಸರದಲ್ಲಿಯೂ ಜೈನ ಚಟುವಟಿಕೆಗಳನ್ನು ಕೈಗೊಂಡಿದ್ದರು ಎಂಬುದಕ್ಕೆ ನೇರವಾದ ದಾಖಲೆಗಳು ಲಭ್ಯವಿಲ್ಲ ಆದರೆ

ಎರಡನೆಯ ವೀರಬಲ್ಲಾಳನನ್ನು ಹೆಸರಿಸುವ ಒಂದೇ ಒಂದು ನಿಸಿಧಿ ಶಾಸನವು ಬಾಳೂರಿನಲ್ಲಿ ಕಾಣಸಿಗುತ್ತದೆ.

ಕ್ರಿ.ಶ. ೧೧೮೭ ರಿಂದಲೇ ವೀರಬಲ್ಲಾಳನ ಶೈವ ಶಾಸನಗಳು ಲಭ್ಯವಿದ್ದರೂ, ಜೈನ ಶಾಸನಗಳ ಸಂಖ್ಯೆ ವಿರಳ. ಬಹುಶ: ದಕ್ಷಿಣ ಕರ್ನಾಟಕದಲ್ಲಿ ಜೈನಧರ್ಮಕ್ಕೆ ದೊರೆತ ಪ್ರೋತ್ಸಾಹ ಉತ್ತರ ಕರ್ನಾಟಕದಲ್ಲಿ ಹೊಯ್ಸಳರಿಂದ ದೊರೆಯಲಿಲ್ಲ. ನಿರಂತರ ಕಲಹಗಳು ಹೊಯ್ಸಳರನ್ನು ಕೈಕಟ್ಟಿ ಹಾಕಿ ಈ ಭಾಗದಲ್ಲಿ ಧಾರ್ಮಿಕ ಚಟುವಟಿಕೆಗಳಿಂದ ಅವರನ್ನು ವಿಮುಖವಾಗಿಸಿದಂತೆ ಕಾಣಿಸುತ್ತದೆ.

ಹಾನಗಲ್ಲು ತಾಲ್ಲೂಕಿನ ಬಾಳೂರು ಹನ್ನೆರಡನೆಯ ಶತಮಾನ ಅಂತ್ಯ; ಹದಿಮೂರನೆಯ ಶತಮಾನದವರೆಗೂ ಜೈನಕೇಂದ್ರವಾಗಿ ಬೆಳೆದಿತ್ತು. ಅಂತೆಯೇ ಇಲ್ಲಿ ಬಂದು ಸಲ್ಲೇಖನ ತೆಗೆದುಕೊಂಡವರ ಸಂಖ್ಯೆ ಹತ್ತಕ್ಕೂ ಹೆಚ್ಚು. ಇಂಥಹ ವ್ಯಕ್ತಿಗಳಲ್ಲಿ ನಾಳ್ಪ್ರಭು ಕಸಪಗಾವುಂಡನು ಒಬ್ಬ. ಎರಡನೆಯ ವೀರಬಲ್ಲಾಳನ ಆಡಳಿತಾವಧಿಯಲ್ಲಿ ನಾಳ್ಪ್ರಭು ವೃತ್ತಿಯನ್ನು ಮಾಡುತ್ತಿದ್ದ ಕಸಪಗಾವುಂಡನು ಕ್ರಿ.ಶ. ೧೨೦೫ರಲ್ಲಿ ಧಾರ್ಮಿಕ ವಿಧಿವಿಧಾನಗಳ ಮೂಲಕ ಸಾವನ್ನು ಅಪ್ಪಿಕೊಂಡ[೧೪೩] ಇವನು ಮನ್ಮಹಾಮಂಡಳಾಚಾರ್ಯ್ಯನಾದ ಮೇಘಚಂದ್ರ ಭಟ್ಟಾರಕ ದೇವರ ಗುಡ್ಡನಾಗಿದ್ದ. ಕಸಪಗಾವುಂಡನ ಧಾರ್ಮಿಕ ಸಾಧನೆಯ ಪ್ರಶಸ್ತಿಭಾಗಗಳು ಈ ನಿಸಿಧಿ ಶಾಸನದಲ್ಲಿವೆ.

ಚಾಳುಕ್ಯ (ಕೊನೆಯ ಘಟ್ಟ), ಕಳಚೂರ್ಯ್ಯರ ಕಾಲಾವಧಿಯಲ್ಲಿ ಉಗ್ರಶಿವಭಕ್ತರಿಂದ ಜೈನಧರ್ಮಕ್ಕೆ ಉತ್ತರ ಕರ್ನಾಟಕದಲ್ಲಿ ಕೊಡಲಿಪೆಟ್ಟು ಬಿತ್ತು. ಅಂತೆಯೇ ಜೈನಧರ್ಮದ ಯಶಸ್ಸಿನ ನಾಗಾಲೋಟಕ್ಕೆ ಈ ಹಿಂದೆಯೇ ತಡೆಹಾಕುವ ಪ್ರಕ್ರಿಯೆಗಳು ದಾಕ್ಷಿಣಾತ್ಯ ಕರ್ನಾಟಕ ಭಾಗದಲ್ಲಿ ನಡೆದಿದ್ದವು. ವಾಸಂತಿಕಾದೇವಿ (ಪದ್ಮಾವತಿ ಯಕ್ಷಿ)ಯ ಆರಾಧಕನಾದ 'ಸಳ' ಎಂಬುವನು ಹೊಯ್ಸಳರ ಮೂಲಪುರುಷ ಇವನ ಗುರುಗಳು ವರ್ಧಮಾನ ಸುದತ್ತ. ಇವರ ಅಣತಿಯಂತೆ ಆಗಂತುಕ ಹುಲಿಯನ್ನು ಸಳನು ಕೊಂದ. ವರ್ಧಮಾನ ಸುದತ್ತರು ಅಂದ 'ಪೊಯ್‌ಸಳ'ವೇ ಮುಂದೆ ಹೊಯ್ಸಳವಾಯ್ತು.[೧೪೪] 'ಪೊಯ್' ಎಂದರೆ ಹೊಡೆ ಎಂದರ್ಥ. 'ಪ' ಕಾರ 'ಹ' ಕಾರವಾಗುದು ಕನ್ನಡದ ಸಹಜ ಕ್ರಿಯೆ. ಮುಂದೆ ಸಳ ಹೊಯ್ಸಳ ಮನೆತನ ಉದಯಕ್ಕೆ ನಾಂದಿಯಾದ ಈ ಸಚಿತ್ರ ಮಾಹಿತಿ ಹೊಯ್ಸಳರು ಆರಂಭಿಕವಾಗಿ ಜೈನರೆಂದೆ ಹೇಳುತ್ತದೆ. ಇವರು ವೈದಿಕ ವೈಷ್ಣವರಾದದ್ದು ಹನ್ನೆರಡನೆಯ ಶತಮಾನದಲ್ಲಿ. ಹೊಯ್ಸಳ ಬಿಟ್ಟಿದೇವ ಈ ಮನ್ವಂತರದ ದಾಳವಾದ.

ಜೈನನಾದ ಬಿಟ್ಟಿದೇವನನ್ನು ರಾಮಾನುಜಾಚಾರ್ಯರು ವಿಷ್ಣುವರ್ಧನನನ್ನಾಗಿ ವೈದಿಕ ವೈಷ್ಣವ ಧರ್ಮಕ್ಕೆ ಮತಾಂತರಗೊಳಿಸಿದರು. ಈ ಕ್ರಿಯೆ ಕ್ರಿ.ಶ. ೧೧೧೪-೧೬ರ ಮಧ್ಯಾವಧಿಯಲ್ಲಿ ನಡೆದಂತೆ ತೋರುತ್ತದೆ. ಏಕೆಂದರೆ ಕೋಲಾರ ತಲಕಾಡುಗಳನ್ನು ಗೆದ್ದುಕೊಂಡ ವಿಷ್ಣುವರ್ಧನ "ತಲಕಾಡು

ಗೊಂಡ ಎಂಬ ಬಿರುದು ತಳೆದು ತನ್ನ ವಿಜಯದ ಸ್ಮಾರಕವಾಗಿ ತಲಕಾಡು ಕೀರ್ತಿನಾರಾಯಣ, ಬೇಲೂರು ವಿಜಯನಾರಾಯಣ (ಚೆನ್ನಕೇಶವ) ಮಂದಿರಗಳನ್ನು ಕಟ್ಟಿಸಿದ"[೧೪೫] ಈ ಮಂದಿರಗಳು ವೈದಿಕ ಸಂಪ್ರದಾಯದವುಗಳು ಎಂದು ಬೇರೆ ಹೇಳಬೇಕಿಲ್ಲ. ವಿಷ್ಣುವರ್ಧನ ಮತಾಂತರವಾದರೂ ತನ್ನ ಪಟ್ಟದರಾಣಿ ಶಾಂತಲೆಯನ್ನು ಜೈನಧರ್ಮದಲ್ಲೇ ಇರಲು ಬಿಟ್ಟಿದ್ದು ದೊಡ್ಡಗುಣ. ಇವಳು ಶ್ರವಣಬೆಳಗೊಳದ ಚಂದ್ರಗಿರಿಯಲ್ಲಿರುವ 'ಸವತಿಗಂಧವಾರಣ' ಬಸದಿಯನ್ನು ಕ್ರಿ.ಶ. ೧೧೨೩ರಲ್ಲಿ ಕಟ್ಟಿಸಿದಳು.[೧೪೬] ಪರಮಜಿನಭಕ್ತೆಯಾದ ಈಕೆ ಕ್ರಿ.ಶ. ೧೧೩೧ರ ಸುಮಾರಿಗೆ ನೆಲಮಂಗಲ ತಾಲ್ಲೂಕಿಗೆ ಸೇರಿದ ಅಂದಿನ ಸಿವಗಂಗೆಯಲ್ಲಿ ಸಲ್ಲೇಖನ ವಿಧಿಯಿಂದ ಮುಡಿಪಿದಳು.[೧೪೭]

ಹೊಯ್ಸಳರು ವೈಷ್ಣವ ಮತಕ್ಕೆ ಬದಲಾದರೂ ಅವರ ಆಡಳಿತ ವಿಭಾಗಗಳಲ್ಲಿ ಜೈನರ ಸಂಖ್ಯೆಯೇನು ಕಡಿಮೆ ಇರಲಿಲ್ಲ. ಗಂಗರಾಜ, ಬೊಪ್ಪ, ಪುರಿಸಮರಿಯಾನೆ, ಭರತೀಮಯ್ಯ, ರೇಚಣ, ಹುಳ್ಳ, ಹೀಗೆ ಒಂದು ದೊಡ್ಡ ದಂಡೆ ಹೊಯ್ಸಳರ ನೆಚ್ಚಿನ ಸೇನಾವಲಯದಲ್ಲಿದ್ದರು. ಇವರ ಅವಧಿಯಲ್ಲಿ ಸಾಕಷ್ಟು ಸಂಖ್ಯೆಯ ಜಿನಾಲಯಗಳೆದ್ದರೂ ಬಿಟ್ಟಿದೇವನ ಮತಾಂತರ ಮಾತ್ರ ಜೈನಧರ್ಮಕ್ಕೆ ನುಂಗಲಾರದ ತುತ್ತು. ರಾಜನೇ ಒಂದು ಧರ್ಮದಿಂದ ಇನ್ನೊಂದು ಧರ್ಮಕ್ಕೆ ವಲಸೆ ಹೋದರೆ ಪ್ರಜೆಗಳು ಸುಮ್ಮನಿರುತ್ತಾರೆಯೇ?. ಒಟ್ಟಿನಲ್ಲಿ ಹೊಯ್ಸಳರ ಕೊನೆಯ ಕಾಲಘಟ್ಟದಲ್ಲಿ ಹಾವೇರಿ ಪರಿಸರದ ವಲಯದಲ್ಲಿ ಜೈನಧರ್ಮ ಬೆಳೆಯಲಿಲ್ಲ.

## ೧೦. ಸೇವುಣರು (ಕ್ರಿ.ಶ. ೧೦೦೦–೧೩೧೨).

ಕನ್ನಡನಾಡಿನ ಉತ್ತರ ಭಾಗವನ್ನಾಳಿದ ರಾಜಮನೆತನಗಳಲ್ಲಿ ಯಾದವ ಕುಲದ ದೇವಗಿರಿ (ಮಹಾರಾಷ್ಟ್ರ) ಸೇವುಣರು ಒಬ್ಬರು. ದೇವಗಿರಿ ಯಾದವರೆಂದೇ ಪ್ರಸಿದ್ಧರಾದ ಸೇವುಣರು ಇತರೆ ಅರಸೊತ್ತಿಗೆಗಳಂತೆ ಜೈನಧರ್ಮವನ್ನು ಪೋಷಿಸಿದರು. ಆರಂಭದಲ್ಲಿ ಇವರು ಜೈನರಾಗಿದ್ದಂತೆ ತೋರುತ್ತದೆ. "ನಾಸಿಕ ಕಲ್ಪವೆಂಬ ಗ್ರಂಥದ ಪ್ರಕಾರ ದೃಢಪ್ರಹಾರನು ಜೈನಗುರು ಚಂದ್ರಪ್ರಭ ಸ್ವಾಮಿಗಳ ಆಶ್ರಯದಲ್ಲಿ ಬೆಳೆದವನು"[೧೪೮] ಸೇವುಣಚಂದ್ರ (ಕ್ರಿ.ಶ. ೧೦೬೯–೧೦೯೮) ಸ್ವತಃ ಜೈನನಾಗಿದ್ದ.[೧೪೯] ಸಿಂಹಣದೇವ (ಕ್ರಿ.ಶ. ೧೧೨೩–೧೧೪೨) ಚಾಳುಕ್ಯ ಚಕ್ರಿ ಆರನೆಯ ವಿಕ್ರಮಾದಿತ್ಯನ ಮಾಂಡಳಿಕನಾಗಿದ್ದಾಗ ಹೊನ್ನತ್ತಿಯಲ್ಲೊಂದು ಜಿನಾಲಯ ಕಟ್ಟಲು ಪ್ರೋತ್ಸಾಹವಿತ್ತ.[೧೫೦] ೨ನೆಯ ಸಿಂಹಣನ ಮಂತ್ರಿಯಾಗಿದ್ದ ಬೀಚಿಸೆಟ್ಟಿ ಮತ್ತು ಅವನ ಮಗ ಪಾಯಿಸೆಟ್ಟಿ ೧೨೪೪ರಲ್ಲಿ ಕಲ್ಕೇರಿಯಲ್ಲೊಂದು ನೋಂಪಿ ನಿಮಿತ್ತವಾಗಿ ಅನಂತನಾಥ (ಅನಂತ ತೀರ್ಥ) ಬಸದಿಯನ್ನೆತ್ತಿಸಿದರು.[೧೫೧] ಇದೇ ಬೀಚಿಸೆಟ್ಟಿಯ ಮಗಳು ರಾಜಲದೇವಿಯು ಲಕ್ಷೇಶ್ವರದ ಶ್ರೀವಿಜಯ ಜಿನಾಲಯವನ್ನು ಜೀರ್ಣೋದ್ಧಾರಗೊಳಿಸಿ ದಾನ–ದತ್ತಿಗಳನ್ನು ಬಿಟ್ಟಳು.[೧೫೨] ಸೇವುಣ ಅರಸ ರಾಮಚಂದ್ರನ ಕಾಲದಲ್ಲಿ ಕ್ರಿ.ಶ. ೧೨೯೫ರಲ್ಲಿ ಲಕ್ಷ್ಮೇಶ್ವರದ ಚತುರ್ಮುಖ ಶಾಂತಿನಾಥ ತೀರ್ಥಂಕರ ಜಿನಾಲಯದ ಅಂಗಭೋಗ, ರಂಗಭೋಗ, ಪೂಜಾನಿಮಿತ್ತವಾಗಿ ವಿವಿಧ ವ್ಯಕ್ತಿಗಳಿಂದ ದಾನದತ್ತಿಗಳು ಸಂದವು.[೧೫೩] ಸೇವುಣರು ಜೈನ ಕವಿಗಳಿಗೆ ತಮ್ಮ ಆಸ್ಥಾನದಲ್ಲಿ ಆಶ್ರಯ ಕೊಟ್ಟಿದ್ದರು.

ಕಮಲಭವ ಕವಿಯ 'ಶಾಂತೀಶ್ವರ ಪುರಾಣ', ಅಚಣ್ಣನ 'ವರ್ಧಮಾನ ಪುರಾಣ' ಇವರ ಕಾಲದ ಜೈನ ಹೆಗ್ಗಳಿಕೆಯ ಕೃತಿಗಳು. ಸೇವುಣರು ದೃಢಪ್ರಹಾರನ ನಂತರ ಜೈನೇತರರಾದರೂ ಜೈನತ್ವ ಅವರನ್ನು ಬಿಟ್ಟುಹೋಗಲಿಲ್ಲ. ಅಂತೆಯೇ ವಿವಿಧ ಕಾಲಾವಧಿಯಲ್ಲಿ ಮಲ್ಲ, ಬೀಚಿಸೆಟ್ಟಿ, ಪಾಯಿಸೆಟ್ಟಿ, ಕೂಚರಾಜ ಎಂಬ ಜೈನ ಅಪ್ರತಿಮ ವ್ಯಕ್ತಿಗಳನ್ನು ಮಂತ್ರಿಗಳನ್ನಾಗಿಸಿಕೊಂಡಿದ್ದರು.

ದೃಢಪ್ರಹಾರ (ಕ್ರಿ.ಶ. ೮೨೫-೮೫೦)ನಿಂದ ಆರಂಭವಾಗುವ ಸೇವುಣರ ವಂಶವೃಕ್ಷ ೨ನೆಯ ಮಲ್ಲುಗಿ (ಕ್ರಿ.ಶ. ೧೩೩೩-೩೪)ರವರೆಗೆ ೩೧ ತಲೆಮಾರುಗಳನ್ನು ಕಂಡಿದೆ. ಚಾಳುಕ್ಯ ಸಾಮಂತರಾಗಿದ್ದ ಸೇವುಣರು ಸ್ವತಂತ್ರ ರಾಜ್ಯವನ್ನು ಕಟ್ಟಿದ್ದು ಐದನೆಯ ಬಿಲ್ಲಮ (ಕ್ರಿ.ಶ. ೧೧೭೩-೧೧೯೨)ನ ಕಾಲದಲ್ಲಿ. ಬಿಲ್ಲಮನು "ಸೇವುಣ ವಂಶದ ಪ್ರಾಬಲ್ಯವನ್ನೂ ಮತ್ತು ಘನತೆಯನ್ನೂ ತನ್ನ ಶಕ್ತಿ ಸಾಮರ್ಥ್ಯಗಳಿಂದಲೇ ಹೆಚ್ಚಿಸಿದನು. ಒಂದು ದೃಷ್ಟಿಯಲ್ಲಿ ನೋಡುವುದಾದರೆ ಐದನೆಯ ಬಿಲ್ಲಮನೇ ಸೇವುಣ ವಂಶದ ನಿಜವಾದ ಸ್ಥಾಪಕನೆನ್ನಬಹುದು"[೧೫೪] ದೇವಗಿರಿಯನ್ನು ರಾಜಧಾನಿ ಮಾಡಿದ ಕೀರ್ತಿ ಇವನಿಗೆ ಸಲ್ಲುತ್ತದೆ. "ಉತ್ತರದಲ್ಲಿ ನರ್ಮದೆ, ದಕ್ಷಿಣದಲ್ಲಿ ಮಲಪ್ರಭಾ ಅವನ ರಾಜ್ಯದ ಗಡಿಗಳಾಗಿದ್ದವು."[೧೫೫] ಐದನೆಯ ಬಿಲ್ಲಮನ ನಂತರ ಈ ಮನೆತನದ ಪ್ರಸಿದ್ಧ ದೊರೆ ಇವನ ಮೊಮ್ಮಗ ೨ನೆಯ ಸಿಂಘಣ (ಕ್ರಿ.ಶ. ೧೨೦೦-೧೨೪೭).

ಚಾಳುಕ್ಯ, ಕಳಚೂರ್ಯ್ಯ, ಹೊಯ್ಸಳ ಅರಸೊತ್ತಿಗೆಗಳ ಜೊತೆಗೆ ನಿರಂತರವಾಗಿ ಕಾದಾಡುತ್ತಿದ್ದ ಸೇವುಣರು ೨ನೆಯ ಸಿಂಘಣನ ಕಾಲಕ್ಕೆ ಮತ್ತಷ್ಟು ಪ್ರವರ್ಧಗೊಂಡರು. ಗೋವೆಯ ಕದಂಬರು, ಕೊಲ್ಲಾಪುರದ ಶಿಲಾಹಾರರು, ರಟ್ಟರು, ಹಾನಗಲ್ಲು ಕದಂಬರು, ಬೆಳಗುತ್ತಿ ಸಿಂದರು, ಗುತ್ತಲದ ಗುತ್ತರು ಸಿಂಘಣನ ಚಕ್ರಾಧಿಪತ್ಯದ ಅಡಿಗೆ ಬಂದರು. "ಗುಜರಾತಿನಿಂದ ಗೋವೆಯ ವರೆಗಿನ ಪಶ್ಚಿಮ ಕರಾವಳಿಯೂ, ಉತ್ತರದಲ್ಲಿ ನರ್ಮದೆಯೂ, ಪೂರ್ವದಲ್ಲಿ ಮಹಾರಾಷ್ಟ್ರದ ಚಾಂದಾದಿಂದ ದಕ್ಷಿಣಕ್ಕೆ ಕರ್ನೂಲು, ಕಡಪಾಗಳವರೆಗಿನ ಪ್ರದೇಶವೂ, ದಕ್ಷಿಣದಲ್ಲಿ ಶಿವಮೊಗ್ಗ ಜಿಲ್ಲೆಯ ಕೆಲಭಾಗಗಳು, ಹೀಗೆ ವ್ಯಾಪಕ ಸಾಮ್ರಾಜ್ಯವನ್ನು ಸಿಂಘಣ ಸ್ಥಾಪಿಸಿದ"[೧೫೬] ಈ ಸಾಮ್ರಾಜ್ಯದಲ್ಲಿ ಹಾವೇರಿ ಪರಿಸರವೂ ಸೇರಿತ್ತು. ೨ನೆಯ ಸಿಂಘಣನ ಒಟ್ಟು ಹತ್ತು ಶಾಸನಗಳು ಈ ಪರಿಸರದ ವಿವಿಧ ಭಾಗಗಳಲ್ಲಿ ಲಭ್ಯವಿವೆ. ಇವೆಲ್ಲವೂ ನಿಸಿಧಿ ಶಾಸನಗಳೇ ಎಂಬುದು ವಿಶೇಷ.

೨ನೆಯ ಸಿಂಹಣದೇವನು ರಾಜ್ಯಾಧಿಕಾರವನ್ನು ವಹಿಸಿಕೊಂಡ ಕಾಲದ ಬಗ್ಗೆ ಸಾಕಷ್ಟು ಭಿನ್ನಾಭಿಪ್ರಾಯಗಳು ಮತ್ತು ದ್ವಂದ್ವಗಳಿವೆ. ಡಾ.ಸೂರ್ಯನಾಥ ಕಾಮತ್, ಡಾ.ಎ.ವಿ. ನರಸಿಂಹಮೂರ್ತಿಯವರು ಸಿಂಹಣನ ಆಳ್ವಿಕೆಯ ಪ್ರಾರಂಭದ ಕಾಲವನ್ನು ಕ್ರಿ.ಶ. ೧೨೦೦[೧೫೭] ಎಂದು ಗುರುತಿಸಿದರೆ, ಡಾ.ಎಂ.ಜಿ. ಮಂಜುನಾಥ, ಜಿ.ಕೆ. ದೇವರಾಜಸ್ವಾಮಿಯವರು ಕ್ರಿ.ಶ. ೧೨೧೦ ಎಂದು ಉಲ್ಲೇಖಿಸಿದ್ದಾರೆ.[೧೫೮] ಸಿಂಹಣದೇವನ ಶಾಸನಗಳು 'ಸಿಂಹಣದೇವ ವರ್ಷ' ಎಂಬ ಹೊಸ ಶಕೆಯನ್ನು ದಾಖಲಿಸಿರುವುದೇ ಅವನ ಕಾಲದ ಬಗ್ಗೆ ವ್ಯತ್ಯಾಸಗಳಾಗುತ್ತಿವೆ. ಅಧಿಕಾರದ ವರ್ಷ

ಒಂದೇ ಇದ್ದರೆ ಕಾಲದ ಬಗ್ಗೆ ಸಮಸ್ಯೆ ಉದ್ಭವಿಸುತ್ತಿರಲಿಲ್ಲ ಜೊತೆಗೆ ಸಂವತ್ಸರವನ್ನು ಕೊಟ್ಟಿರುವುದೇ ದೊಡ್ಡ ಪ್ರಮಾದಕ್ಕೆ ಎಡೆಮಾಡಿಕೊಟ್ಟಿದೆ. ಉದಾ: "ಸ್ವಸ್ತಿ ಶ್ರೀಮತು ಯಾದವನಾರಾಯಣಂ ಭುಜಬಳಪ್ರತಾಪ ಚಕ್ರವರ್ತ್ತಿ ಶ್ರೀ ಸಿಂಹಣದೇವ ವರುಶದ ೧೯ತನೆಯ ಸರ್ವ್ವಜಿತು ಸಂವತ್ಸರ"[೧೫೯] ಸದ್ಯದ ಉಧೃತ ಭಾಗದಲ್ಲಿ ಆಳ್ವಿಕೆ ವರ್ಷ ೧೯ ಎಂದು ನಮೂದಾಗಿದ್ದು, ೨ನೆಯ ಸಿಂಹಣದೇವನ ಪಟ್ಟಾಧಿಕಾರದ ವರ್ಷವನ್ನು ಕ್ರಿ.ಶ. ೧೨೦೦ ಎಂದಿಟ್ಟುಕೊಂಡರೆ ಕ್ರಿ.ಶ. ೧೨೧೯ ಎಂದು ಸಾಧಿತವಾಗುತ್ತದೆ. ಆದರೆ ಇಲ್ಲಿ ಸರ್ವಜಿತು ಸಂವತ್ಸರದ ಉಲ್ಲೇಖ ಕ್ರಿ.ಶ. ೧೨೨೮ರಲ್ಲಿ ಬರುವುದರಿಂದ ಈ ಕಾಲವನ್ನೂ ಪರಿಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಸಿಂಹಣದೇವನ ಆಳ್ವಿಕೆ ವರ್ಷ ಮತ್ತು ಸಂವತ್ಸರ ಎರಡನ್ನೂ ಹೊಂದಿಸಿಕೊಂಡು ಶಾಸನದ ಕಾಲವನ್ನು ನಿರ್ಧರಿಸಹೊರಟರೆ ಸಿಂಹಣದೇವನ ಆಳ್ವಿಕೆಯ ಪ್ರಾರಂಭದ ಕಾಲವನ್ನು ಕೆಲವು ಶಾಸನಗಳ ಪ್ರಕಾರ ಕ್ರಿ.ಶ. ೧೨೦೮ ಎಂದು, ಮತ್ತು ಕ್ರಿ.ಶ. ೧೨೧೦ ಎಂದು ಗುರುತಿಸಬೇಕಾಗುತ್ತದೆ.[೧೬೦] ಸದ್ಯ ೨ನೆಯ ಸಿಂಹಣನ ಪಟ್ಟಾಧಿಕಾರ ಕ್ರಿ.ಶ. ೧೨೦೦ ಎಂಬುದು ಒಪ್ಪಿತ ತೇದಿ. ಆದರೆ ಇವನ ಶಾಸನಗಳ ಕಾಲಗಳನ್ನು ಗುರುತಿಸುವಾಗ 'ಸಿಂಹಣದೇವ ವರ್ಷ'ವನ್ನು ಪರಿಗಣನೆಗೆ ತೆಗೆದುಕೊಳ್ಳದೇ ಸಂವತ್ಸರದ ಆಧಾರದಲ್ಲಿ ಕಾಲವನ್ನು ನಿರ್ಧರಿಸುವುದು ಹೆಚ್ಚು ಸೂಕ್ತ.

ಹಾವೇರಿ ಪರಿಸರದಲ್ಲಿ ದೊರೆಯುವ ಸೇವುಣರ ಕಾಲಾವಧಿಯ ಮೊದಲ ಜೈನ ಶಾಸನ ೨ನೆಯ ಸಿಂಹಣದೇವನ ಕಾಲಾವಧಿಯದ್ದು. ಇವನ ಕಾಲದಲ್ಲಿ ಒಟ್ಟು ೦೯ ಶಾಸನಗಳು ಈ ಪರಿಸರದಲ್ಲಿ ರಚಿತವಾಗಿವೆ. ಎಲ್ಲವೂ ನಿಸಿಧಿ ಶಾಸನಗಳೆಂಬುದು ಗಮನಾರ್ಹ. ಧಾರ್ಮಿಕ ಪ್ರಕ್ರಿಯೆಯಂತೆ ಸಾವನ್ನು ಬರಮಾಡಿಕೊಂಡವರ ಸ್ಮರಣಿಕೆಗಳೆ ಈ ನಿಸಿಧಿಗಳು. ಕ್ರಿ.ಶ. ೧೨೨೬ರಲ್ಲಿ[೧೬೧] ಬಿದಿರೆ (ಸುಣಕಲ್ಲುಬಿದಿರೆ-ರಾತಾ)ಯ ಬೊಪ್ಪಿಸೆಟ್ಟಿ ಎಂಬುವನು ಪಂಚಪದವನ್ನು ಓದುತ್ತ, ನೆನೆಯುತ್ತ ಸಮಾಧಿ ಮರಣವನ್ನು ಆಹ್ವಾನಿಸಿದ ಸಿಂಹಣದೇವನ ಆಳ್ವಿಕೆಯ ಕಾಲಾವಧಿಯ ಮೊದಲ ಶ್ರಾವಕ. ತದನಂತರ ಕ್ರಿ.ಶ. ೧೨೩೧ರಲ್ಲಿ ಕಡಕೋಳ (ಸತಾ)ದ ಚಂದಯ, ಕ್ರಿ.ಶ. ೧೨೪೧ರಲ್ಲಿ ಕಡಕೋಳ (ಸತಾ)ದ ಹೆರ್ಗ್ಗಡೆ ಸೋಮಯ್ಯ,[೧೬೨] ಕ್ರಿ.ಶ. ೧೨೪೨ರಲ್ಲಿ ಬಾಳೂರು (ಹಾನತಾ)ವಿನ ಕಸವಗೌಡನ ಪುತ್ರ ಭರತಗಾಮುಂಡ,[೧೬೩] ಕ್ರಿ.ಶ. ೧೨೪೫ರಲ್ಲಿ ಹಿರೇ ಅಣಜಿ (ಬ್ಯಾತಾ) ಸೊಯಸೆಟ್ಟಿಯ ಹೆಂಡತಿ ಇದೇ ವರ್ಷ ಹಿರೇಕೋಣತಿ (ಹಿತಾ) ಬಮ್ಮಯ್ಯ,[೧೬೪] ಮತ್ತು ಕಡಕೋಳ (ಸತಾ)ದ ಮೂಲ ಸಂಘ ಸೂರಸ್ತಗಣದ ನಂನ್ದಿಭಟ್ಟಾರಕದೇವರ ಗುಡ್ಡಿ ಕನಕವ್ವೆ,[೧೬೫] ಕ್ರಿ.ಶ. ೧೨೪೭ರಲ್ಲಿ ಅಡೂರು (ಹಾತಾ)ವಿನಲ್ಲಿ ಬಂಕಾಪುರದ ಹಡವಳ (ಪಡವಳ) ಚಟ್ಟಯ್ಯನ ಹೆಂಡತಿ ಭಾಗವೆ[೧೬೬] ಸಮಾಧಿ ವಿಧಾನದಿಂದ ಪ್ರಾಣ ತ್ಯಾಗ ಮಾಡಿದವರಾಗಿದ್ದಾರೆ. ಇದರಲ್ಲಿ ಕಡಕೋಳದ ಕನಕವ್ವೆಯ ನಿಸಿಧಿ ಶಾಸನದಲ್ಲಿ ಕನಕವ್ವೆ ಸಾವನ್ನು ಆಹ್ವಾನಿಸುವ ಪ್ರಕ್ರಿಯೆ ಸಂದರ್ಭದಲ್ಲಿ ಬಂಧು-ಬಳಗದ ದು:ಖ, ಕನಕವ್ವೆಯ ದಿಟ್ಟತನವನ್ನು ಮನೋಜ್ಞವಾಗಿ ಚಿತ್ರಿಸಲಾಗಿದ್ದು, ಸಿಂಹಣದೇವನ ಕಾಲದ ಅಪರೂಪ ನಿಸಿಧಿ ಎನಿಸಿಕೊಳ್ಳುತ್ತದೆ. ಇವನ ಆಳ್ವಿಕೆಯ ಕೊನೆಯ ವರ್ಷದ ಶಾಸನ ಕ್ರಿ.ಶ. ೧೨೪೭ರ ಶಿಗ್ಗಾವಿ ನಿಸಿಧಿ ಶಾಸನ.[೧೬೭] ಸೋರೆಗಾವುಂಡ ಮತ್ತು

ಪದ್ಮಾವತಿ ಪುತ್ರನಾದ ಬಮ್ಮ ಸಮಾಧಿಮರಣಹೊಂದಿದ್ದು ಶಾಸನ ಸಾರ. ಯಕ್ಷಿ ಪದ್ಮಾವತಿಯ ಹೆಸರು ಪ್ರಪ್ರಥಮ ಬಾರಿಗೆ ಈ ಪರಿಸರದಲ್ಲಿ ವ್ಯಕ್ತಿನಾಮವಾಗಿ ಬಳಕೆಯಾಗಿದೆ. ಸೇವುಣರ ಕಾಲಾವಧಿಯಲ್ಲಿ ಯಕ್ಷಿಯ ಆರಾಧನೆ ಚಾಲ್ತಿಯಲ್ಲಿತ್ತು ಎಂಬುದಕ್ಕೆ ಈ ಶಾಸನ ಪ್ರಮಾಣವಾಗಿ ನಿಲ್ಲುತ್ತವೆ.

೨ನೆಯ ಸಿಂಹಣದೇವನ ತರುವಾಯ ಮೊಮ್ಮಗನಾದ ಕೃಷ್ಣನು ಕ್ರಿ.ಶ. ೧೨೪೭ರಲ್ಲಿ ಯಾದವ ಸಾಮ್ರಾಜ್ಯದ ಅಧಿಪತಿಯಾದ. ಇವನ ಅಪ್ಪ ಜೈತುಗಿ, ಅಜ್ಜನಾದ ಸಿಂಹಣದೇವ ಅಧಿಕಾರದಲ್ಲಿದ್ದಾಗಲೇ ಮರಣಹೊಂದಿದ ಪರಿಣಾಮವಾಗಿ ಅಧಿಕಾರ ಕೃಷ್ಣನಿಗೆ ಲಭಿಸಿತು. ಕನ್ನರ, ಕಂಧಾರದೇವ, ಇತ್ಯಾದಿ ಹೆಸರುಗಳಿಂದ ಕೃಷ್ಣನನ್ನು ಸಂಬೋಧಿಸಲಾಗಿದೆ. ಕ್ರಿ.ಶ. ೧೨೪೭ ರಿಂದ ೧೨೬೧ರವರೆಗೆ ಇವನು ಅಧಿಕಾರ ನಡೆಸಿದ. ಈ ಅವಧಿಯಲ್ಲಿ ಐದು ಜೈನಶಾಸನಗಳು ಹಾವೇರಿ ಪ್ರದೇಶಗೊಳಗೆ ಲಭ್ಯ. ಕ್ರಿ.ಶ. ೧೨೫೧ರಲ್ಲಿ ರಚಿತವಾದ ಕರ್ಜಗಿ (ಹಾತಾ)ಯ ಪಾದಪೀಠ ಶಾಸನ ಕೃಷ್ಣನ ಕಾಲಾವಧಿಯ ಮೊದಲ ಜೈನಶಾಸನ (ಹಾವೇರಿ ಪರಿಸರ)[೧೬೮] ಇದರಲ್ಲಿ ಕನ್ನರನ ಉಲ್ಲೇಖವಿರದಿದ್ದರು ಈ ಅವಧಿಯ ಹಾವೇರಿ ಪರಿಸರದಲ್ಲಿ ಅವನ ಆಳ್ವಿಕೆಯೇ ಇತ್ತು. ನಾಗರೀ ಲಿಪಿಯ ಸಂಸ್ಕೃತ ಶಾಸನವಿದು. ನೇಮಿನಾಥ ತೀರ್ಥಂಕರ ಯಕ್ಷಿ ಅಂಬಿಕಾದೇವಿ (ಕೂಷ್ಮಾಂಡಿನಿ)ಯ ಸ್ವತಂತ್ರ ವಿಗ್ರಹವನ್ನು ಮಾಡಿಸಿದ ನಿಮಿತ್ತ ಶಾಸನವನ್ನು ಕೆತ್ತಲಾಗಿದೆ. ಸಲಖಣವಾಯಿಯ ಮಗಳು ಚೈತ್ರಾವಾ(ಬಾ)ಯಿ ಈ ಮೂರ್ತಿಯನ್ನು ಮಾಡಿಸಿದ್ದಾಳೆ. ಸೇವುಣರ ಕಾಲದಲ್ಲಿ ಯಕ್ಷಿಯರು ಸ್ವತಂತ್ರ ಆರಾಧನೆಗೆ ಭಾಜನವಾಗಿದ್ದರೆಂಬುದಕ್ಕೆ ಇದೊಂದು ಸ್ಪಷ್ಟ ಉದಾಹರಣೆ.

ಕನ್ನರದೇವ ಕ್ರಿ.ಶ. ೧೨೫೧ರಲ್ಲಿ ರಾಜ್ಯವಾಳುತ್ತಿದ್ದಾಗ ನೆಗಳೂರು (ಹಾತಾ)ವಿನಲ್ಲಿ ಸನ್ಯಸನ ವಿಧಾನದಿಂದ 'ಸಕಳಚಂದ್ರದೇವ' ಮುನಿಯೊಬ್ಬರು ಮರಣವನ್ನು ಅಪ್ಪುತ್ತಾರೆ.[೧೬೯] ಇದೊಂದು ಮುನಿನಿಸಿಧಿ. ಬಾಳೂರು (ಹಾನತಾ)ವಿನ ಒಂದು ನಿಸಿಧಿ ಕ್ರಿ.ಶ. ೧೨೫೭ರಲ್ಲಿ ರಚಿತವಾಗಿದ್ದು ಕಾಣೂರುಗಣದ ಲೋಕಕೀರ್ತಿದೇವರ ಗುಡ್ಡ ಬಸದಿಯ ಬಲ್ಲಯ ಮುಡಿಪಿದ್ದಾಗಿ ತಿಳಿಸುತ್ತದೆ.[೧೭೦] ಇದೇ ರಾಜನ ನಾಮೋಲ್ಲಿಖಿತ ಇನ್ನೊಂದು ಶಾಸನ ಹೇರೂರು (ಹಾತಾ)ವಿನದು.[೧೭೧] ಕ್ರಿ.ಶ. ೧೨೫೬ರ ಈ ನಿಸಿಧಿ ಶಾಸನ ಕಡಕುಳ (ಸತಾ)ದ ದೇವಗಾವುಂಡ ಮತ್ತು ಗೌರಿಗೌಡಿಯರ ಮಗಳು, ಮಣಿಗವತ್ತಿಯ ಹೆಗ್ಗಡೆ ಮಲ್ಲಯ್ಯನ ಹೆಂಡತಿಯೂ ಆದ ನಾಗವ್ವೆ ಸಮಾಧಿ ವಿಧಾನದಿಂದ ಮುಡಿಪಿದ್ದಾಗಿ ತಿಳಿಸುತ್ತದೆ. ಕನ್ನರದೇವನ ಕಾಲದ ಅತೇದಿ ದಾನಶಾಸನ ಹೂವ್ವಿನ ಶಿಗ್ಗಲಿ (ಸತಾ)ಯಲ್ಲಿ ಇದೆ. ನಿರ್ಮ್ಮಳ ಗುಣವತಿ, ವಿಶಾಳಮತಿ ಎಂಬ ವಿಶೇಷಣಯುಕ್ತ ಸ್ತ್ರೀಯೊಬ್ಬಳು ಸಿಗ್ಗಲಿಯಲ್ಲಿ ಶಾಂತಿನಾಥ ಚೈತ್ಯಾಲಯವನ್ನು ನಿರ್ಮಿಸುತ್ತಾಳೆ. ಇದಕ್ಕೆ ಮಹಾಪ್ರಧಾನ ಮನ್ನೆಯಕಾರರು, ಎಂಟು ಹಿಟ್ಟುಗಳು, ದತ್ತಿ ಬಿಡುತ್ತಾರೆ.[೧೭೨] ಒಟ್ಟು ಐದು ಶಾಸನಗಳು ಕನ್ನರದೇವನ ಕಾಲದಲ್ಲಿ ರಚಿತವಾಗಿವೆ. ಕೃಷ್ಣನ ಮರಣಾನಂತರ ಮಹಾದೇವ (ಕ್ರಿ.ಶ. ೧೨೬೧-೧೨೭೧)

ಸೇವುಣ ರಾಜ್ಯದ ಪಟ್ಟಾಧಿಕಾರವನ್ನು ವಹಿಸಿಕೊಂಡ. ಇವನು ಕೃಷ್ಣನ ತಮ್ಮ. "ಕೃಷ್ಣನ ಮಗನಾದ ರಾಮಚಂದ್ರ ಪಟ್ಟಕ್ಕೆ ಬರದೆ, ಮಹಾದೇವ ಪಟ್ಟಕ್ಕೆ ಬರಲು ಕಾರಣಗಳೇನು ಎಂಬುದು ಗೊತ್ತಿಲ್ಲ. ಬಹುಶ: ರಾಮಚಂದ್ರನು ಇನ್ನೂ ಪ್ರಾಪ್ತವಯಸ್ಕನಾಗದೆ ಇದ್ದುದರಿಂದ ಅವನ ಚಿಕ್ಕಪ್ಪನಾದ ಮಹಾದೇವನು ಪಟ್ಟಕ್ಕೆ ಬಂದಿರಬಹುದು"[೧೭೩]

ಮಹಾದೇವ ಪಟ್ಟಾಧಿಕಾರ ವಹಿಸಿಕೊಂಡಾಗಲೂ ಹಾವೇರಿ ಪರಿಸರವು ಸೇವುಣರ ರಾಜ್ಯದಲ್ಲಿ ಸೇರಿತ್ತು. ಗುತ್ತವೊಳಲಿನ ಗುತ್ತರು ಇವನ ಸಾಮಂತರಾಗಿದ್ದರು ಎಂಬುದು ಚೌಡದಾನಪುರದ ಶಾಸನಗಳಿಂದ ದಿಟವಾಗುತ್ತದೆ. ಮಹಾದೇವನ ಆಡಳಿತಾವಧಿಯಲ್ಲಿ ಹಾವೇರಿ ಪರಿಸರದಲ್ಲಿ ಒಟ್ಟು ೧೨ ಜೈನ ಶಾಸನಗಳ ರಚನೆಯಾಗಿವೆ. ಆರರಲ್ಲಿ ಮಹಾದೇವನ ಉಲ್ಲೇಖವಿದ್ದರೆ, ಉಳಿದಾರು ಶಾಸನಗಳು ಇವನ ಆಡಳಿತದ ಸಮಯದಲ್ಲಿ ರಚನೆಯಾಗಿವೆ. ಇವೆಲ್ಲವೂ ನಿಸಿಧಿ ಶಾಸನಗಳೆಂಬುದು ಗಮನಾರ್ಹ. ಶಾಸನಗಳಲ್ಲಿ ಮಹಾದೇವನಿಗೆ "ಯಾದವನಾರಾಯಣ ಭುಜಬಳ ಪ್ರವುಡ ಪ್ರತಾಪ ಚಕ್ರವರ್ತಿ" ಎಂದು ಸಂಭೋಧಿಸಲಾಗಿದೆ.

ಮಹಾದೇವನ ಆಡಳಿತಾವಧಿಯ ಹಾವೇರಿ ಪರಿಸರದ ಮೊದಲ ಜೈನಶಾಸನ ಹಾನಗಲ್ಲು ತಾಲ್ಲೂಕಿನ ಬಾಳೂರಿನದು.[೧೭೪] ಇದು ಕ್ರಿ.ಶ. ೧೨೬೨ರಲ್ಲಿ ರಚನೆಯಾಗಿದ್ದು, ಸರ್ವಾಧಿಕಾರಿ ಕಾವಯನ ತಾಯಿ ಚಿಕ್ಕಣಂದಿದೇವರ ಗುಡ್ಡಿ ಮಲ್ಲವೆ ಸಮಾಧಿಯಾದ ಬಗ್ಗೆ ತಿಳಿಸುತ್ತದೆ. ಇದೇ ತಾಲ್ಲೂಕು ಆಡೂರಿನ ೧೨೬೨-೬೩ರ ಶಾಸನ ಮೂಲಸಂಘ ಸೇನಗಣದ ಕುಮಾರಸೇನ ದೇವರಗುಡ್ಡಿ ಹಾಡಿಯೂರ (ಆಡೂರು) ನಾಳ್ಪ್ರಭು ಹರಿಯಮಗಾಮುಂಡನ ಹೆಂಡತಿ ಕನಕಿಗಾವುಂಡಿ ಸಮಾಧಿ ವಿಧಾನದಿಂದ ಮುಡಿಸಿದ್ದಾಗಿ ಉಲ್ಲೇಖಿಸುತ್ತದೆ.[೧೭೫] ಹಿರೇಕೋಣತಿ (ಹಿತಾ) ಇನ್ನೊಂದು ನಿಸಿಧಿ ಕ್ರಿ.ಶ. ೧೨೬೩ರಲ್ಲಿ ರಚನೆಯಾಗಿದ್ದು, ಕಲ್ಯಾಣಕೀರ್ತಿ ಭಟ್ಟಾರರ ಶಿಷ್ಯನೊಬ್ಬನ ಮರಣವನ್ನು ದಾಖಲಿಸುತ್ತದೆ.[೧೭೬]

ಮಹಾದೇವನ ಹೆಸರನ್ನು ಉಲ್ಲೇಖಿಸುವ ಈ ಪರಿಸರದ ಮೊದಲ ಜೈನಶಾಸನ ಹಾನಗಲ್ಲು ತಾಲ್ಲೂಕಿನ ಬಾಳಂಬೀಡದ್ದು. ಕ್ರಿ.ಶ. ೧೨೬೪ರಲ್ಲಿ ರಚನೆಯಾದ ಈ ಶಾಸನ ಸೂರಸ್ತಗಣದ ಮಾಧವಚಂದ್ರ ಭಟ್ಟಾರಕದೇವರ ಶಿಷತಿ ಗುಣಮತೌವ್ವೆ ಉದಯ ಜಾವದಲ್ಲಿ ಸಮಾಧಿ ವಿಧಾನದಿಂದ ಮುಡಿಪಿದ ವಿಚಾರವನ್ನು ಪ್ರಸ್ತಾಪಿಸುತ್ತದೆ.[೧೭೭] ಇನ್ನು ಕ್ರಿ.ಶ. ೧೨೬೬ರಲ್ಲಿ ಹತ್ತಿಮತ್ತೂರ (ಸತಾ) ಜಕ್ಕಯನ ಹೆಂಡತಿ ಮಾದವೆ,[೧೭೮] ಕ್ರಿ.ಶ. ೧೨೬೭ರಲ್ಲಿ ಆಲದಗೆರೆ (ಹಿತಾ)ಯಲ್ಲಿ ಬಾಳಚಂದ್ರ ತ್ರೈವಿದ್ಯಾದೇವರ ಗುಡ್ಡ ಮಲ್ಲಯ್ಯ[೧೭೯] ಕ್ರಿ.ಶ. ೧೨೬೮ರಲ್ಲಿ ಸೆಡಗುಪ್ಪೆ (ಹಾನತಾ) ಸೋಮಗಾಮುಂಡನ ಅರ್ಧಾಂಗಲಕ್ಷ್ಮಿ ಯಚವೆ,[೧೮೦] ಕ್ರಿ.ಶ. ೧೨೬೮ರಲ್ಲಿ ಕಡಕೋಳ (ಸತಾ)ದ ಸಾವಂತ ದೇವಗಾವುಂಡನ ಮಗ ಮಾರಗಾವುಂಡ,[೧೮೧] ಕ್ರಿ.ಶ. ೧೨೬೮-೬೯ರಲ್ಲಿ ಸಂಗೂರು (ಹಾತಾ) ನಾಳ್ಪ್ರಭು ಗಂಗರ ಸಾವಂತಸೋವ,[೧೮೨] ಇದೇ ವರ್ಷ ಹತ್ತಿಮತ್ತೂರ (ಸತಾ)ಲ್ಲಿ

ನಂದಿಭಟ್ಟಾರರ ಅನುಯಾಯಿ,[೧೮೩] ಕ್ರಿ.ಶ. ೧೨೬೯ರಲ್ಲಿ ಹೇರೂರು (ಹಾನತಾ) ಕೇಸಿಗಮುಂಡ,[೧೮೪] ಕ್ರಿ.ಶ. ೧೨೭೧ರಲ್ಲಿ ಹಿರೇಕೋಣತಿ (ಹಿತಾ)ಯಲ್ಲಿ ಅನಂತಕೀರ್ತಿ ಭಟ್ಟಾರಕರ ಗುಡ್ಡಿ ವಡ್ಡಬೆವಹಾರಿ ಸಂಕರಸೆಟ್ಟಿಯರ ಸಾತಿಸೆಟ್ಟಿಯರ ಕಾಮವೆ ಸಾವನ್ನು ಆಹ್ವಾನಿಸಿದರು.[೧೮೫] ಶಾಸನಗಳಲ್ಲಿ ಆಲದಗೆರೆಯ ಶಾಸನ ವಿಶೇಷವಾದುದು. ಮುನಿ ಮತ್ತು ಶಿಷ್ಯರು ಸಲ್ಲೇಖನ ತೆಗೆದುಕೊಂಡ ಪ್ರಸ್ತಾಪ ಇಲ್ಲಿದೆ. ಮಾಣಿಕದೇವ ಮುನಿಯಾದರೆ ಮಲ್ಲಯ ಒಬ್ಬ ಶ್ರಾವಕ ಶಿಷ್ಯ.

ಸೇವುಣರ ಕಟ್ಟಕಡೆಯ ಪ್ರಭಾವಿ ಅರಸ ರಾಮಚಂದ್ರ (ಕ್ರಿ.ಶ. ೧೨೭೧-೧೩೧೨) ಶಾಸನಗಳಲ್ಲಿ ಇವನನ್ನು ರಾಮದೇವ ಎಂಥಲೂ ಕರೆಯಲಾಗಿದೆ. ಜೊತೆಗೆ 'ಯಾದವ ನಾರಾಯಣ ಭುಜಬಳಪ್ರೌಢಪ್ರತಾಪ ಚಕ್ರವರ್ತಿ' ಎಂಬ ಪ್ರಶಸ್ತಿಗಳು ಇವನಿಗೆ ಸಂದಿವೆ. ಸಾಳುವ ತಿಕ್ಕಮ ರಾಮಚಂದ್ರನ ಅಪ್ರತಿಮ ಸೇನಾನಿ. ಇವನು ಹೊಯ್ಸಳರನ್ನು ಸದೆಬಡಿದು ಬನವಾಸಿ ೧೨೦೦೦ ಬಹುಭಾಗಗಳನ್ನು ಗೆದ್ದುಕೊಂಡ. ಹೊಯ್ಸಳರು ಕದಂಬ ಕಾಮದೇವನ ಮೇಲೆ ಯುದ್ಧಕ್ಕೆ ಬಂದಾಗ ರಾಮಚಂದ್ರ ಅವರನ್ನು ಸೋಲಿಸಿ 'ಕದಂಬ ಸ್ಥಾಪನಾಚಾರ್ಯ' ಎಂಬ ಕೀರ್ತಿಗೆ ಭಾಜನನಾದ ಹಾವೇರಿ ಪರಿಸರದಲ್ಲಿ 'ರಾಮದೇವ', 'ರಾಮಚಂದ್ರ' ನಾಮಾಂಕಿತ ೨೦ ಜೈನ ಶಾಸನಗಳು ಲಭ್ಯವಿವೆ. ಕ್ರಿ.ಶ. ೧೨೭೩ ರಿಂದ ಕ್ರಿ.ಶ. ೧೨೯೩ ಮಧ್ಯಾವಧಿಯಲ್ಲಿ ಇವು ರಚನೆಯಾಗಿವೆ. ಇವುಗಳಲ್ಲಿ ೦೨ ದಾನಶಾಸನಗಳಾದರೆ ೧೮ ನಿಸಿಧಿ ಶಾಸನಗಳು. ಹಾವೇರಿ ಪರಿಸರದಲ್ಲಿ ಅತೀ ಹೆಚ್ಚು ಜೈನ ಶಾಸನಗಳು ರಾಮಚಂದ್ರನ ಕಾಲದಲ್ಲಿ ನಿರ್ಮಾಣವಾಗಿವೆ. ೧೩ನೆಯ ಶತಮಾನ ಅಂತ್ಯದಲ್ಲಿ ರಚನೆಯಾಗಿರುವ ೨೪ ಜೈನ ಶಾಸನಗಳು ರಾಮಚಂದ್ರನ ಕಾಲದಲ್ಲಿಯೇ ರಚನೆಯಾಗಿವೆ. ಇವನ ಅವಧಿಯಲ್ಲಿ ಒಟ್ಟು ೪೪ ಜೈನಶಾಸನಗಳು ನಿರ್ಮಾಣವಾದವು ಎಂಬುದೊಂದು ಹೆಗ್ಗಳಿಗೆ.

ಯಾದವ ರಾಮಚಂದ್ರ ಅಧಿಕಾರಕ್ಕೆ ಬಂದ ೨ನೆಯ ವರ್ಷದಲ್ಲಿ (ಕ್ರಿ.ಶ. ೧೨೭೩) ಹಿರೇಅಣಜಿ (ಬ್ಯಾತಾ)ಯಲ್ಲಿ ಒಂದು ಜೈನಶಾಸನ ರಚನೆಯಾಗುತ್ತದೆ.[೧೮೬] ಇದೊಂದು ನಿಸಿಧಿ ಶಾಸನವಾಗಿದ್ದು, ಪದುಮಸೇನ ಭಟ್ಟಾರಕರ ಗುಡ್ಡಿಯಾದ ಲಖವೆ ಮುಡಿಪಿದ ವಿಷಯ ಅರಹುತ್ತದೆ. ತದನಂತರ ಕ್ರಿ.ಶ. ೧೨೭೫ರಲ್ಲಿ ಸಮಯಾಚರಣ ಮುನಿಯ ಶಿಷ್ಯ,[೧೮೭] ಕ್ರಿ.ಶ. ೧೨೭೫ರಲ್ಲಿ ಇಚ್ಚಂಗಿ (ಹಾತಾ) ವ್ಯಕ್ತಿಯೊಬ್ಬ[೧೮೮], ಕ್ರಿ.ಶ. ೧೨೭೭ರಲ್ಲಿ ಕರಗುದರೆ (ಹಾನತಾ)ಯಲ್ಲಿ ದೇಸಿಗಣದ ಸಮಯಾಚರಣ ಮುನಿಯ ಶಿಷ್ಯ ಬಮ್ಮಯ್ಯ,[೧೮೯] ಕ್ರಿ.ಶ. ೧೨೭೮ರಲ್ಲಿ ಹಿರೇಕೋಣತಿ (ಹಿತಾ) ಸೇನಭಟ್ಟಾರಕರ ಗುಡ್ಡ,[೧೯೦] ಕ್ರಿ.ಶ. ೧೨೭೯ರಲ್ಲಿ ಕಡಕೋಳ (ಸತಾ)ದಲ್ಲಿ ಸೇನಾಭಟ್ಟಾರಕರ ಗುಡ್ಡಿ ಸಾವಂತ ಸಿರಿಯಮಗೌಡನ ಹೆಂಡತಿಯಾದ ಚಂದಿಗೌಡಿ,[೧೯೧] ಕ್ರಿ.ಶ. ೧೨೮೧ರಲ್ಲಿ ಕದರಮಂಡಲಗಿ ಶಾಂತಿಭಟ್ಟಾರಕರ ಶಿಷ್ಯ ಸುರಗೌಡ,[೧೯೨] ಕ್ರಿ.ಶ. ೧೨೮೩ರಲ್ಲಿ ಸುತಕೋಟೆ (ಹಿತಾ)ಯಲ್ಲಿ ಬಯಲಬಳ್ಳಿಗಾವೆಯ ದೇವಿಸೆಟ್ಟಿ,[೧೯೩] ಕ್ರಿ.ಶ. ೧೨೮೩ರಲ್ಲಿ ಹಿರೇಕೋಣತಿ (ಹಿತಾ)ಯ ಸ್ತ್ರೀಯೊಬ್ಬಳು,[೧೯೪] ಕ್ರಿ.ಶ. ೧೨೮೯ರಲ್ಲಿ ಕಲಕೇರಿ (ಹಾನತಾ)ಯಲ್ಲಿ ಮೂಲಸಂಗ ಸಗರಗಣದ

ಸಮಂತಭದ್ರದೇವರ ಗುಡ್ಡ ಮಾದೈಯ[೧೯೫] ಕ್ರಿ.ಶ. ೧೨೯೨ರಲ್ಲಿ ಸಾತೇನಹಳ್ಳಿ (ಹಿತಾ)ಯ ಪುಷ್ಪಸೇನರ ಗುಡ್ಡ ಗಳಗಯ,[೧೯೬] ಇದೇ ವರ್ಷ ಆಡೂರಲ್ಲಿ (ಹಾನತಾ) ದೇವೇಂದ್ರದೇವನ ಗುಡ್ಡಿ ಮಾದವ್ವೆ,[೧೯೭] ಮತ್ತು ನಾಳ್ಪ್ರಭು ಹರಿಯಮ ಗಾಮುಂಡನ ಮಾನಿಸ (ಸೇವಕ) ಗಾಮಯ್ಯ ಸಸ್ತ್ರ (ಶಸ್ತ್ರ) ಹತನಾಗಿ (ವೀರ ನಿಸಿಧಿ)[೧೯೮] ರಾಮಚಂದ್ರನ ಕಾಲದಲ್ಲಿ ಸಾವನ್ನು ಆಹ್ವಾನಿಸಿದರು. ಆಡೂರಿನ ಗಾಮಯ್ಯನ ನಿಸಿಧಿಯು ಕೇವಲ ನಿಸಿಧಿಯಷ್ಟೇ ಆಗಿರದೆ ಅದೊಂದು ವೀರನಿಸಿಧಿಗಲ್ಲು ಎಂದೇ ಅರ್ಥೈಯಿಸಿಕೊಳ್ಳಬೇಕು. ಶಾಸನದಲ್ಲಿ 'ಶಸ್ತ್ರ ಹತನಾಗಿ' ಎಂಬ ಒಕ್ಕಣಿಯಿಂದ ಅವನೊಬ್ಬ ವೀರನಾಗಿದ್ದು ಸಾಯುವ ಸಂದರ್ಭದಲ್ಲಿ ಸಲ್ಲೇಖನ ತೆಗೆದುಕೊಂಡ. ಅಂತೆಯೇ ಅವನಿಗೆ ನಿಸಿಧಿಗಲ್ಲನ್ನು ನೆಡಲಾಗಿದೆ.

ಸೇವುಣ ರಾಮಚಂದ್ರನ ಆಳ್ವಿಕೆ ದಾನಶಾಸನಗಳು ಹಿರೇಅಣಜಿ (ಬ್ಯಾತಾ)ಯಲ್ಲಿ ದೊರೆತಿದ್ದು ಕ್ರಿ.ಶ. ೧೨೯೩ರಲ್ಲಿ ರಚನೆಯಾಗಿವೆ. ಇವು ಸದ್ಯ ದೊರೆತಿರುವ ರಾಮಚಂದ್ರನ ಕಾಲದ ಹಾವೇರಿ ಪರಿಸರದ ಕೊನೆಯ ಜೈನಶಾಸನಗಳು. ಹಿರೇ ಅಣಜಿಯ ನೇಮಿನಾಥ ಬಸದಿಗೆ ದಾನ ಬಿಟ್ಟ ವಿಚಾರವಾಗಿ ಎರಡೂ ಶಾಸನಗಳಲ್ಲಿ ಪ್ರಸ್ತಾಪಿಸಲಾಗಿದೆ.[೧೯೯] ಪ್ರಸ್ತುತ ಈ ಎರಡೂ ಶಾಸನಗಳನ್ನು ಊರಿನ ವೀರಭದ್ರದೇವಾಲಯ (ಬಸದಿ)ದ ಪಕ್ಕದ ಗುಂಡಿಯಲ್ಲಿ ಮಣ್ಣು ಹಾಕಿ ಮುಚ್ಚಲಾಗಿದೆ.[೨೦೦] ಇವಿಷ್ಟು ರಾಮಚಂದ್ರನ ಅಂಕಿತ ಮತ್ತು ಸ್ಪಷ್ಟತೇದಿಯಿರುವ ಜೈನಶಾಸನಗಳು.

### ೧೧. ಅತೇದಿ ಶಾಸನಗಳು (೧೩ನೆಯ ಶತಮಾನ).

ಹಾವೇರಿ ಪರಿಸರದಲ್ಲಿ ರಾಮಚಂದ್ರನ ಕಾಲದ ಅತೇದಿ ಶಾಸನಗಳಿಗೇನು ಕೊರತೆಯಿಲ್ಲ. ಕೆಲವೊಂದು ಶಾಸನಗಳಲ್ಲಿ ಇವನ ಪ್ರಶಸ್ತಿ ಇದ್ದರೆ; ಉಳಿದವುಗಳು ಲಿಪಿ ಸಾದೃಶ್ಯದಿಂದ ಸೇವುಣ ಆಡಳಿತದ ಕೊನೆಯ ಘಟ್ಟದ ರಚನೆಗಳಾಗಿವೆ. ರಾಮಚಂದ್ರನ ನಂತರ ಬೇರಾವುದೇ ಸೇವುಣ ದೊರೆಯ ಜೈನಶಾಸನಗಳು ಈ ಭಾಗದಲ್ಲಿ ರಚನೆಯಾದದ್ದು ಕಂಡುಬರದಿರುವುದರಿಂದ ೧೩ನೆಯ ಶತಮಾನದ ಅತೇದಿ ಶಾಸನಗಳೆಲ್ಲವೂ ರಾಮಚಂದ್ರನ ಆಡಳಿತಾವಧಿಯಲ್ಲಿಯೇ ಪ್ರತಿಷ್ಠೆಯಾದವುಗಳು ಎಂಬ ನಿರ್ಧಾರಕ್ಕೆ ಬರಲಾಗಿದೆ. ಈ ಅವಧಿಯಲ್ಲಿ ೦೪ ಪಾದಪೀಠ ಶಾಸನಗಳು, ೨೫ ನಿಸಿಧಿ ಶಾಸನಗಳು ಹಾಗೂ ೦೧ ಶಾಸನಗಳು ಒಟ್ಟು ೩೦ ಜೈನಶಾಸನಗಳನ್ನು ಕಾಣಬಹುದು.

ಮೂಲಸಂಘ ಬಳೆಗಾಱಗಣವನ್ನು ಉಲ್ಲೇಖಿಸುವ ಅರಟಾಳದ (ಶಿತಾ)ದ ಪಾದಪೀಠ ಶಾಸನ ಮಹತ್ವದ್ದು.[೨೦೧] ಹಾವೇರಿ ಪರಿಸರದ ಬಳೆಗಾಱರ ಗಣದ ಪ್ರಥಮ ಉಲ್ಲೇಖ ಇಲ್ಲಿದೆ. ಹತ್ತಿರದ ಬಂಕಾಪುರದಲ್ಲಿ ವಿದ್ಯಾಭ್ಯಾಸ ಮಾಡಿದ ರನ್ನ ಬಳೆಗಾರ ಕುಲದವನು ಎನ್ನುವುದನ್ನು ನೆನಪಿಸಿಕೊಳ್ಳಬೇಕು. ಬಳೆಗಾಱಗಣದ ರಾಮಚಂದ್ರ ಭಟ್ಟಾರಕರ ದೇವರ ಗುಡ್ಡಿಯಾದ ಹವಳೌವ್ವೆ ಎನ್ನುವವಳು ಅರಟಾಳದ ಬಸದಿಗೆ ಚೌವ್ವೀಸ್ ತೀರ್ಥಂಕರರ ಬಿಂಬವನ್ನು ಮಾಡಿಸಿಕೊಟ್ಟಿದ್ದು

ಶಾಸನ ಸಾರ. ಶಿಗ್ಗಾವಿ ತಾಲ್ಲೂಕಿನ ಶೀಲವಂತ ಸೋಮಾಪುರದಲ್ಲಿ ಚೌವ್ವೀಸ ತೀರ್ಥಂಕರರ ಬಿಂಬದ ಮೇಲೆ 'ದ್ರವಿಲ ಸಂಘ ಸೂರಸ್ತಗಣ' ಎಂಬ ಪಾದಪೀಠ ಶಾಸನವಿದೆ[೨೦೨] ಇದೂ ಸಹ ಹಾವೇರಿ ಪರಿಸರದ ದ್ರವಿಲ ಸಂಘದ ಪ್ರಥಮೋಲ್ಲಿಖಿತ ಶಾಸನ. ಮೂಲಸಂಘ, ನಂದಿಸಂಘ, ಯಾಪನೀಯಸಂಘದಂತೆ ದ್ರಾವಿಡ ಸಂಘವೂ ಒಂದು ಜಿನಮುನಿಗಳ ದೊಡ್ಡ ಶಾಖೆ. ಈ ಸಂಘದ ಉಲ್ಲೇಖಗಳು ಮಂಡ್ಯ, ಮೈಸೂರು ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ತಮಿಳುನಾಡಿನ ಮದುರೈನಲ್ಲಿ ವಜ್ರನಂದಿಯಿಂದ ಈ ಸಂಘ ಸ್ಥಾಪನೆಯಾಯ್ತು. ಇದೇ ಶತಮಾನದಲ್ಲಿ ಸಂಗೂರು (ಹಾತಾ) ಬಸ್ತಿಮಟ್ಟಿಯಲ್ಲಿ ಸಂಸ್ಕೃತ ಭಾಷೆ ಕನ್ನಡ ಲಿಪಿಯ ಪಾದಪೀಠ ಶಾಸನ ದೊರೆತಿದ್ದು, ಮೂಲಸಂಘ ಸೇನಗಣದ ನರೇಂದ್ರಮುನಿಗಳ ಶಿಷ್ಯ ರಾಜಶ್ರೇಷ್ಠಿ ಸೋಮ ಎಂಬುವನು ಅನಂತನಾಥ ಪ್ರತಿಮೆ ಮಾಡಿಸಿದ್ದಾಗಿ ತಿಳಿಸುತ್ತದೆ.[೨೦೩]

ಹಾನಗಲ್ಲು ಕೋಟೆಯ ಆವರಣದಲ್ಲಿ ದೊರೆತ ೧೩ನೆಯ ಶತಮಾನದ ಚೌವ್ವೀಸ ತೀರ್ಥಂಕರ ಬಿಂಬವೊಂದು ಅನಾಮಿಕ ವ್ಯಕ್ತಿಯ ಮೂಲಕ ಹಾವೇರಿಯ ನೇಮಿನಾಥ ಬಸದಿ ಸೇರಿದ್ದು ಪಾದಪೀಠ ಶಾಸನವನ್ನು ಹೊಂದಿದೆ.[೨೦೪] ಮಾಧವಚಂದ್ರ ಭಟ್ಟಾರಕರ ಗುಡ್ಡಿಯಾದ ಲಖ್ಖವೆ ಎಂಬ ಶ್ರಾವಕಿ 'ಅಣತಿ ನೋಂಪಿ'ಯ ಉದ್ಯಾಪನ (ವಿಸರ್ಜನೆ) ನಿಮಿತ್ತ ಆದಿನಾಥ ಪ್ರಧಾನ ಈ ಚೌವ್ವೀಸ (೨೪) ತೀರ್ಥಂಕರರ ಬಿಂಬವನ್ನು ಮಾಡಿಸಿಕೊಟ್ಟಿದ್ದಾಳೆ. ಸದ್ಯ ಹಾನಗಲ್ಲು ಕೋಟೆಯೊಳಗಿರುವ ಬಸದಿಗೆ ಈ ಬಿಂಬ ಅರ್ಪಿತವಾಗಿರುವುದು ಗಮನಾರ್ಹ. ಈ ಬಸದಿ ವೀರಭದ್ರೇಶ್ವರ ದೇವಾಲಯವಾಗಿ ಪರಿವರ್ತಿತವಾಗಿದೆ.

೧೩ನೆಯ ಶತಮಾನದಲ್ಲೂ ಹಾವೇರಿ ಪರಿಸರದೊಳಗೆ ಮರಣವನ್ನು ಆಹ್ವಾನಿಸುವ ಪ್ರಕ್ರಿಯೆ ಮುಂದುವರೆದಿದ್ದು ಒಟ್ಟು ೨೫ ವ್ಯಕ್ತಿಗಳು ಜಿನಧರ್ಮದ ವಿಧಿ-ವಿಧಾನಗಳ ಮೂಲಕ ಸಾವನ್ನು ಅಪ್ಪಿದ್ದಾರೆ. ಮೋಟೆಬೆನ್ನೂರು (ಬ್ಯಾತಾ)ವಿನಲ್ಲಿ ಜಿನಚಂದ್ರದೇವನ ಗುಡ್ಡ ಬಾಚಿಸೆಟ್ಟಿ,[೨೦೫] ಮಾಕನೂರಲ್ಲಿ (ರಾತಾ) ನನ್ದಿಭಟ್ಟಾರಕರ ಗುಡ್ಡ ಮಾಕನೂರು ಬೊಪ್ಪಗೌಡ,[೨೦೬] ಹಿರೇಅಣಜಿ (ಬ್ಯಾತಾ)ಯಲ್ಲಿ ಸವಣರ ಮಾದಯ, ಸಾತಿಸೆಟ್ಟಿ, ಕನಕಿಸೆಟ್ಟಿ, ಅನಾಮಿಕ ಸ್ತ್ರೀ ಮತ್ತು ಒಬ್ಬ ಪರುಷ ಒಟ್ಟು ಐದುಜನ,[೨೦೭] ಹೊನ್ನತ್ತಿ (ರಾತಾ)ಯಲ್ಲಿ ಸುಭದ್ರಸ್ವಾಮಿಯ ಶಿಷ್ಯೆ,[೨೦೮] ಆಡೂರು (ಹಾನತಾ)ವಿನಲ್ಲಿ ಮಾಧವಚಂದ್ರದೇವರ ಗುಡ್ಡ ಬಲ್ಲಗವುಡ ಮತ್ತು ಆತನ ಮೊಮ್ಮ (ಮೊಮ್ಮಗ) ನಾಳ್ಪ್ರಭು ಹರಿಯಪಗವುಡನ ಮಗ ವಿಕ್ರಮಗೌಡ, ಮತ್ತು ಇದೇ ಹರಿಯಪ ಗಾಮುಂಡನ ಇನ್ನೊಬ್ಬ ಪುತ್ರ ಕೇಸವ ಗಾಮುಂಡ, ಮತ್ತು ಹರಿಯಪಗಾಮುಂಡನ ಹೆಂಡತಿ ಗೋಂದವೆ,[೨೦೯] ಕೆರಿಕ್ಯಾತನಹಳ್ಳಿ (ಹಾನತಾ)ಯಲ್ಲಿ ಬೋಗಾಜಿ ಬೊಮ್ಮಿಸೆಟ್ಟಿ,[೨೧೦] ಬಾದಾಮಗಟ್ಟಿ (ಹಾನತಾ)ಯಲ್ಲಿ ಬೊಮ್ಮಿಸೆಟ್ಟಿ,[೨೧೧] ಬಾಳೇಹಳ್ಳಿ (ಹಾನತಾ)ಯಲ್ಲಿ ಸಾಯಿಗೌಡಿ,[೨೧೨] ಮಂತಗಿ (ಹಾನತಾ)ಯಲ್ಲಿ ಮಹಾಪ್ರಭು ವಿಠಗೌಡ,[೨೧೩] ಯಳವಟ್ಟಿ (ಹಾನತಾ)ಯಲ್ಲಿ ಕೇಮಿಯಕ್ಕ,[೨೧೪] ಆಲದಗೆರೆ (ಹಿತಾ)ಯಲ್ಲಿ ಮಾಯಕ್ಕ ಮತ್ತು ಇಬ್ಬರು ಅನಾಮಿಕ ಶ್ರಾವಕರು,[೨೧೫] ಲಿಂಗದೇವರಕೊಪ್ಪ (ಹಿತಾ)ದಲ್ಲಿ ಕುಂಚೂರು

ನಾಳ್ಪ್ರಭು,[೨೧೬] ಹಿರೇಕೋಣತಿ (ಹಿತಾ)ಯಲ್ಲಿ ಅನಾಮಿಕ ಶ್ರಾವಕನೊಬ್ಬ[೨೧೭] ಬಾಳೂರು (ಹಾನತಾ)ವಿನಲ್ಲಿ ಅನಾಮಿಕ ವ್ಯಕ್ತಿಯೊಬ್ಬ, ಕಬನೂರ (ಶಿತಾ)ಲ್ಲಿ ಶಾಂತಿವರ್ಮನ ಮಗ ಹೊಲ್ಲರಾಜ[೨೧೮] ಹೀಗೆ ೨೫ ವ್ಯಕ್ತಿಗಳು ಸಮಾಧಿ, ಸಂನ್ಯಸನ, ಸಲ್ಲೇಖನ ವಿಧಾನದ ಮೂಲಕ ಸಾವನ್ನು ಆಹ್ವಾನಿಸಿದ್ದಾರೆ. ಆಡೂರು ವಿಕ್ರಮಗೌಡ ನಿಸಿಧಿಯಲ್ಲಿ ಅವನ ಅಜ್ಜ ಬಲ್ಲಗವುಡನ ಸಮಾಧಿ ಮರಣದ ಉಲ್ಲೇಖವಿರುವುದರಿಂದ ೨೬ ಜನ ಸಾವನ್ನು ಆಹ್ವಾನಿಸಿದರು ಎಂದೇ ಅರ್ಥೈಯಿಸಿಕೊಳ್ಳಬೇಕು.

೧೩ನೆಯ ಈ ಶತಮಾನದ ಒಂದು ವಿಶೇಷ ಶಾಸನ ಹಾವೇರಿಯದು.[೨೧೯] ಮಾದರಸ ಎಂಬುವನು ಇಲ್ಲಿನ ಜಿನಮಂದಿರಕ್ಕೆ ಮೆಟ್ಟಿಲುಗಳನ್ನು ಮಾಡಿಸಿಕೊಟ್ಟಿದ್ದು ಶಾಸನದ ಸಾರ. ಸದ್ಯ ಈ ಶಾಸನ ಹಾವೇರಿಯ ಜೆ.ಪಿ. ವೃತ್ತದಲ್ಲಿರುವ ವೀರಭದ್ರೇಶ್ವರ ದೇವಾಲಯ ನವರಂಗದ ತೊಲೆಯ ಮೇಲಿದೆ. ಶಾಸನ ಮತ್ತು ದೇವಾಲಯದ ದ್ವಾರಬಂಧದಲ್ಲಿರುವ ಜಿನಬಿಂಬಗಳ ಚಿಕಣಿ ಶಿಲ್ಪಗಳಿಂದ ಇದೊಂದು ಜಿನಾಲಯವಾಗಿತ್ತು ಎಂದು ಖಚಿತವಾಗಿ ಹೇಳಬಹುದು. ಸದ್ಯ ಇದೇ ಊರ ನೇಮಿನಾಥ ಬಸದಿಯಲ್ಲಿರುವ ೧೩ನೆಯ ಶತಮಾನದ ಆದಿನಾಥ ಮೂರ್ತಿಯ ಆಧಾರದಿಂದ ವೀರಭದ್ರದೇವಾಲಯ ಆದಿನಾಥ ಬಸದಿಯಾಗಿದ್ದಂತೆ ತೋರುತ್ತದೆ. ಮಾದರಸನ ಶಾಸನ ಒಂದು ಕಂದಪದ್ಯವಾಗಿದ್ದು ಹಿತ-ಮಿತವಾಗಿದೆ.

> ಪರಹಿತ ಚರಿತಂ ಪಾವನ
> ತರತತ್ವ ವಿಚಾರನಮಳ ಗುಣಮಣಿ ಕೋಶಂ
> ಸುರಚಿತ ನವಪದಮಂ ಮಾ
> ದರಸಂ ಮಾಡಿನೆಸೆಯೆ ಜಿನಮಂದಿರದೊಳ್.

ಸೇವುಣರ ರಾಜಸತ್ತೆ ಹಾವೇರಿ ಪರಿಸರದ ಜೈನಧರ್ಮಕ್ಕೆ ಒಂದು ಸಂದಿಗ್ಧ ಕಾಲಘಟ್ಟ. ಇವರ ಕಾಲದಲ್ಲಿ ಜೈನಧರ್ಮ ಬೆಳೆಯದೆ ಇಳಿಮುಖದತ್ತ ಸಾಗಿತು. ಈ ಪರಿಸರದ ಒಟ್ಟು ೧೫೦ ಜೈನ ಶಾಸನಗಲ್ಲಿ ೭೧ ಸೇವುಣರ ಕಾಲಕ್ಕೆ ಸಂಬಧಿಸಿದವು. ಜೈನಶಾಸನಗಳ ಒಟ್ಟು ಸಂಖ್ಯಾದೃಷ್ಟಿಯಿಂದ ಸೇವುಣರ ಕೊಡುಗೆ ದೊಡ್ಡದು. ಆದರೆ ಈ ಶಾಸನಗಳು ದಾನಶಾಸನಗಳಾಗಿರದೆ, ಹೆಚ್ಚು ಮರಣಶಾಸನಗಳಾಗಿವೆ. ೭೧ ಶಾಸನಗಳಲ್ಲಿ ೬೦ ನಿಸಿಧಿ ಶಾಸನಗಳೆಂಬುದು ಚರ್ಚಾರ್ಹ. ಉಳಿದವು ೪ ಪಾದಪೀಠ, ೭ ದಾನ ಶಾಸನಗಳಾಗಿದ್ದು, ಸೇವುಣರು ನೇರವಾಗಿ ಯಾವ ದಾನ-ದತ್ತಿಗಳನ್ನೂ ಹಾವೇರಿ ಪರಿಸರದ ಜೈನ ಸ್ಮಾರಕಕ್ಕಾಗಲಿ, ವ್ಯಕ್ತಿಗಳಿಗಾಗಲಿ ನೀಡಿಲ್ಲ. ಇವರ ಕಾಲದಲ್ಲಿ ಹೆಚ್ಚು ಜನ ಸಾವನ್ನು ಆಹ್ವಾನಿಸಿದ್ದಂತೂ ದಿಟ.

ಮರಣವನ್ನು ಆಹ್ವಾನಿಸುವ ಪ್ರಕ್ರಿಯೆ ಜೈನಧರ್ಮದ ಆಧ್ಯಾತ್ಮಿಕ ಮಹೋನ್ನತಿಯ ಚಟುವಟಿಕೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಆದರೆ ಈ ಪ್ರಕ್ರಿಯೆ ಸಾಂದರ್ಭಿಕವಾಗಿ ಒದಗುವ ಉಪಸರ್ಗಗಳಿಂದ ಧಾರ್ಮಿಕ ಅವನತಿಯೂ ಎನ್ನಿಸುತ್ತದೆ. ಸಾವನ್ನು ಆಹ್ವಾನಿಸುವ ಕ್ರಿಯೆಯನ್ನು ಎರಡು ವಿಧವಾಗಿಯೇ ನೋಡಬೇಕು. ಒಂದು ಆಂತರಿಕ ಇನ್ನೊಂದು ಬಾಹ್ಯ ಪ್ರಕ್ರಿಯೆ. ಚತುರ್ವಿಧ ಉಪಸರ್ಗ (ದೇವ, ಮನುಷ್ಯ, ಅಚೇತನ, ತಿರಿಕೋಪಸರ್ಗ)ಗಳು ದೇಹಕ್ಕೆ, ಮನಸ್ಸಿಗೆ ಒದಗುವ ಉಪಸರ್ಗಗಳಿಂದ ಬಿಡುಗಡೆಗೊಂಡು ಆತ್ಮೋನ್ನತಿಗಾಗಿ ಪ್ರಾಣಬಿಡುವುದು ಆಂತರಿಕ ಅಂಶದ ಕಾರಣವಾದರೆ; ಈ ಎಲ್ಲಾ ಅಂಶಗಳ ಜೊತೆಗೆ ಸಮಕಾಲೀನ ರಾಜಕೀಯ, ಸಾಮಾಜಿಕ, ಧಾರ್ಮಿಕ ಉಪಸರ್ಗಗಳಿಂದ ಮರಣವನ್ನು ಅಪ್ಪಿಕೊಳ್ಳುವುದು ಬಾಹ್ಯ ಅಂಶಗಳ ಕಾರಣವಾಗುತ್ತದೆ. ಆಂತರಿಕ ಅಂಶಕ್ಕೆ ೭–೯ನೆಯ ಶತಮಾನದ ಕಳ್ವಪ್ಪು (ಶ್ರವಣಬೆಳಗೊಳದ ಚಿಕ್ಕಬೆಟ್ಟ)ವನ್ನು ಉದಾಹರಣೆಯಾದರೆ; ಎರಡನೆಯದು ಸೇವುಣರ ಕಾಲದ ಹಾವೇರಿ ಪರಿಸರ ನಿದರ್ಶನವಾಗುತ್ತದೆ. ಸೇವುಣರ ಕಾಲಾವಧಿಯಲ್ಲಿ ಇಷ್ಟೊಂದು ಪ್ರಮಾಣದ ಮರಣ ಸ್ಮಾರಕ ನಿರ್ಮಾಣವಾಗಲು ಸ್ಪಷ್ಟವಾದ ಕಾರಣಗಳು ದೊರೆಯವು. ಆದರೆ ೧೨ನೆಯ ಶತಮಾನದಲ್ಲಿ ಅಬ್ಬಲೂರಿನ ಜೈನರ ಮೇಲೆ ನಡೆದ ಏಕಾಂತರಾಮಯ್ಯನ ದಾಳಿ, ೧೩ನೆಯ ಶತಮಾನದಲ್ಲಿ ನಡೆಯುತ್ತಿದ್ದ ಯಾದವ ಕುಲದ ಹೊಯ್ಸಳ–ಸೇವುಣರ ನಿರಂತರ ಯುದ್ಧಗಳು, ಮತಾಂತರಗಳು, ಪರದೈವದ ಆರಾಧನೆಗಳು ಜೈನಧರ್ಮದ ಧರ್ಮಿಷ್ಠರನ್ನು ಘಾಸಿಗೊಳಿಸಿದವು. ಈ ಸರಣಿ ಅಪಘಾತದ ಅಟ್ಟುಳಿ ತಾಳಲಾರದೆ ಅವರು ಪಾರಮಾರ್ಥಿಕ ಸುಖವಾದ ಸಲ್ಲೇಖನದಂತಹ ಮರಣ ಪ್ರಕ್ರಿಯೆಗೆ ತಮ್ಮನ್ನು ಒಡ್ಡಿಕೊಂಡಂತೆ ಕಾಣುತ್ತದೆ. ಒಟ್ಟಿನಲ್ಲಿ ಸೇವುಣರ ಆಡಳಿತದಲ್ಲಿ ಹಾವೇರಿ ಪರಿಸರದ ಜೈನಧರ್ಮ ಇಳಿಮುಖಗೊಂಡಿತು ಎಂಬ ಮಾತು ಸತ್ಯ.

## ೧೨. ವಿಜಯನಗರ ಸಾಮ್ರಾಜ್ಯ (ಕ್ರಿ.ಶ. ೧೩೩೬–೧೬೩೨).

ಕರ್ನಾಟಕ ಕಂಡ ವೈಭವಯುತ ಸಾಮ್ರಾಜ್ಯಗಳಲ್ಲಿ ವಿಜಯನಗರಕ್ಕೆ ಅಗ್ರಸ್ಥಾನವಿದೆ. ಕ್ರಿ.ಶ. ೧೩೩೬ರಲ್ಲಿ ಹಕ್ಕಬುಕ್ಕರಿಂದ ಉದಯವಾದ ಈ ಸಾಮ್ರಾಜ್ಯ ಮೂರು ಶತಮಾನಗಳ ಕಾಲ ಆಳ್ವಿಕೆ ನಡೆಸಿ ಕ್ರಿ.ಶ. ೧೬೩೨ರಲ್ಲಿ ರಾಮದೇವನ ಕಾಲಕ್ಕೆ ಅಸ್ತಂಗತವಾಯಿತು. ವಾಸ್ತವವಾಗಿ ವಿಜಯನಗರ ಅರಸರ ಸಿಂಹಾಸನ ಉರುಳಿಬಿದ್ದದ್ದು ಕ್ರಿ.ಶ. ೧೫೬೫ರಲ್ಲಿಯೇ. ಅಳಿಯ ರಾಮರಾಯನ ಮೇಲೆ ಬಹಮನಿ ಸುಲ್ತಾನರು ಒಟ್ಟುಗೂಡಿ ತಾಳಿಕೋಟೆ ಕದನದಲ್ಲಿ ಕೊಂದು ಹಾಕಿದರು. ತದನಂತರ ಇವರು ವಿಜಯನಗರವನ್ನು ಮತ್ತು ಅವರ ರಾಜ್ಯದ ಬಹುತೇಕ ಭಾಗಗಳನ್ನು ತಮ್ಮ ಅಂಕೆಯಲ್ಲಿಟ್ಟುಕೊಂಡರು. ಮುಂದೆ ಬಂದ ಅರವೀಡು ವಂಶದ ವಿಜಯನಗರದ ಅರಸರು ನಾಮಮಾತ್ರ ಆಳ್ವಿಕೆ ನಡೆಸಿದಂತೆ ಕಾಣುತ್ತದೆ.

ಸಂಗಮ, ಸಾಳುವ, ತುಳುವ, ಅರವೀಡು ವಂಶಗಳು ವಿಜಯನಗರವನ್ನು ಆಳಿದ ಚತುರ್ವಂಶಗಳು. ಇವುಗಳಲ್ಲಿ ಸಂಗಮವಂಶದ ೧ನೆಯ ಹರಿಹರ (ಕ್ರಿ.ಶ. ೧೩೩೬–೫೬),

೧ನೆಯ ಬುಕ್ಕರಾಯ (ಕ್ರಿ.ಶ. ೧೩೫೬–೭೭) ಪ್ರೌಢದೇವರಾಯ (ಕ್ರಿ.ಶ. ೧೪೨೨–೨೪), ಸಾಳುವ ವಂಶದ ೨ನೆಯ ನರಸಿಂಹ (ಕ್ರಿ.ಶ. ೧೪೯೧–೧೫೦೫), ತುಳುವ ವಂಶದ ಶ್ರೀಕೃಷ್ಣದೇವರಾಯ (ಕ್ರಿ.ಶ. ೧೫೦೯–೨೯), ಅರವೀಡು ವಂಶದ ಅಳಿಯ ರಾಮರಾಯ (ಕ್ರಿ.ಶ. ೧೫೪೩–೬೫) ಪ್ರಸಿದ್ಧ ರಾಜರುಗಳು. ಇವರ ಕಾಲದಲ್ಲಿ ಜೈನರಿಗೆ–ಜೈನಧರ್ಮಕ್ಕೆ ಸೂಕ್ತ ಸ್ಥಾನಮಾನಗಳು ದೊರೆತರೂ; ಜನಮಾನಸದಲ್ಲಿ ಜೈನಧರ್ಮ ಪ್ರಭಾವ ಇಳಿಮುಖವಾಗತೊಡಗಿತ್ತು. ಈ ಧರ್ಮದ ಮೇಲೆ ಪರಮತದವರು ದಾಳಿನಡೆಸುವ ಪ್ರಸಂಗಗಳು ವಿಜಯನಗರ ರಾಜ್ಯಾಡಳಿತದ ಕಾಲದಲ್ಲೂ ಮುಂದುವರೆದುಕೊಂಡು ಬಂದಿವೆ. ಇದಕ್ಕೊಂದು ಸ್ಪಷ್ಟ ಉದಾಹರಣೆ ಶ್ರವಣಬೆಳಗೊಳದ ಭಂಡಾರಿ ಬಸದಿಯಲ್ಲಿರುವ ೧ನೆಯ ಬುಕ್ಕರಾಯನ ಶಾಸನ.

ಕ್ರಿ.ಶ. ೧೩೬೮ರ ಹೊತ್ತಿಗೆ ಆನೆಗೊಂದಿ, ಹೊಸಪಟ್ಟಣ, ಪೆನುಗೊಂಡೆ, ಕಲ್ಲೆಹ ಎಂಬ ಪ್ರದೇಶಗಳಲ್ಲಿ ಶ್ರೀವೈಷ್ಣವರ ಪ್ರಾಬಲ್ಯ ಹೆಚ್ಚಿತ್ತು. ಅಂತೆಯೇ ಅವರು ಅಲ್ಲಿನ ಜೈನರಿಗೆ ಉಪಟಳ ಕೊಡಲು ಪ್ರಾರಂಭಿಸಿದರು. ಇವರ ಅಟ್ಟುಳಿಯನ್ನು ತಾಳಲಾರದೆ ಕಲ್ಲೆಹದ ಬುಸವಿಸೆಟ್ಟಿ ಎಂಬುವನು ೧ನೆಯ ಬುಕ್ಕರಾಯನಿಗೆ ದೂರು ಕೊಟ್ಟ. ಬುಕ್ಕರಾಯನು ಶ್ರೀವೈಷ್ಣವರು–ಜೈನರು ಸಮಾನರು ಎಂದು ಘೋಷಿಸಿ, ಶ್ರವಣಬೆಳಗೊಳದಲ್ಲಿರುವ ಶ್ರೀವೈಷ್ಣವರಿಗೆ ಜೈನರಿಂದ ಅಪಾಯ ಬಂದೊದಗಬಹುದೆಂದು ಅವರನ್ನು ರಕ್ಷಿಸಲು ರಾಜ್ಯದಲ್ಲಿರುವ ಜೈನರು ಬಾಗಿಲುಗಟ್ಟಳೆಯಾಗಿ ಮನೆಗೊಂದರಂತೆ ವರ್ಷಕ್ಕೆ ಒಂದು ಹಣ ಕೊಡಬೇಕೆಂದು ವಿಧಿಸಿದ. ಈ ಹಣದಲ್ಲಿ ವೈಷ್ಣವರ ಮತ್ತು ಅವರ ದೇವರ ರಕ್ಷಣೆಗೆ ನಿಯಮಿಸಿದ ಅಂಗರಕ್ಷರ ಖರ್ಚನ್ನು ಭರಿಸಬೇಕು; ಉಳಿದಿದ್ದರಲ್ಲಿ ಜೀರ್ಣವಾದ ಜಿನಾಲಯಗಳಿಗೆ ಸುಣ್ಣವನ್ನು ಹೊಡೆಸಬೇಕು ಎಂದು ತಾತಾಚಾರ್ಯರ ಸಮ್ಮುಖದಲ್ಲಿ ತೀರ್ಪಿತ್ತ.[೨೨೦]

೧ನೆಯ ಬುಕ್ಕರಾಯನ ಈ ಶಾಸನ ಧರ್ಮಸಮನ್ವಯತೆಗೆ ಹಿಡಿದ ಕನ್ನಡಿ ಎಂಬ ಸಮರ್ಥನೆಗಳು ಜ್ಞಾನವಲಯದಲ್ಲಿ ಹರಿದಾಡುತ್ತಿವೆ. ಆದರೆ ಈ ತೀರ್ಪಲ್ಲಿ ಧರ್ಮಸಮನ್ವಯಕ್ಕಿಂತ ಅನ್ಯಾಯಕ್ಕೆ ಒಳಗಾದ ಧರ್ಮಕ್ಕೆ ಮತ್ತೇ ಅನ್ಯಾಯವಾದ ಅಂಶ ಎದ್ದು ತೋರುತ್ತದೆ. ಶಾಸನದಲ್ಲಿ ಹೇಳಿದ ಪ್ರದೇಶಗಳಲ್ಲಿ ಶ್ರೀವೈಷ್ಣವರಿಂದ ದಾಳಿಗೊಳಗಾದ ಜೈನರನ್ನು ರಕ್ಷಿಸುವುದನ್ನು ಬಿಟ್ಟು, ಶ್ರವಣಬೆಳಗೊಳ ಪರಿಸರದ ಶ್ರೀವೈಷ್ಣವರಿಗೆ ತೊಂದರೆಯಾಗದಂತೆ ಕಾಪಾಡುವ ಮುಂದಾಲೋಚನೆ ಇದೆಯಲ್ಲಾ ಆ ರಾಜನಿಗಿರುವ ವೈಷ್ಣವ ಪ್ರೀತಿಯನ್ನು ಎತ್ತಿ ತೋರಿಸುತ್ತದೆ. ಸಾಲದಕ್ಕೆ ಶ್ರೀವೈಷ್ಣವರ ರಕ್ಷಣೆಗೆ ಜೈನರು ಹಣ ಕೊಡಬೇಕೆಂಬ ಕಟ್ಟಳೆ ವಿಧಿಸಿದ್ದು ಜೈನರ ದೌರ್ಭಾಗ್ಯವೇ ಸರಿ. ಕಲ್ಯ ಶಾಸನ[೨೨೧]ದಲ್ಲಿ ಶ್ರೀವೈಷ್ಣವರು ಜೈನರನ್ನು ಕೊಲ್ಲುತ್ತಿದ್ದರೆಂದೇ ಒಕ್ಕಾಣಿಸಲಾಗಿದೆ. ಕಲ್ಯ ಶಾಸನ ಶ್ರವಣಬೆಳಗೊಳದ ಶಾಸನಕ್ಕಿಂತ ಮೂರು ತಿಂಗಳ ಹಿಂದಿನದು. ಈ ಘಟನೆಯಲ್ಲಿ ನಿಜವಾದ ಸಂತ್ರಸ್ತರು ಜೈನರು. ಪರಿಹಾರದ ಫಲಾನುಭವಿಗಳು ಮಾತ್ರ ಶ್ರೀವೈಷ್ಣವರು. ಒಟ್ಟಿನಲ್ಲಿ

ವಿಜಯನಗರ ಅರಸರ ಮೇಲೆ ಶ್ರೀವೈಷ್ಣವರ ಪ್ರಭಾವ ಎಷ್ಟಿತ್ತೆಂಬುದಕ್ಕೆ ಪ್ರಸ್ತುತ ಶಾಸನ ಸಾಕ್ಷಿಪ್ರಜ್ಞೆಯಾಗಿ ನಿಲ್ಲುತ್ತದೆ.

ವಿಜಯನಗರ ಅರಸರು ಕಟ್ಟಾ ಜೈನವಿರೋಧಿಗಳೇನಲ್ಲ. ಹೊಯ್ಸಳರ ಕಾಲಾವಧಿಯಿಂದಲೂ ಪ್ರಬಲಗೊಂಡಿದ್ದ ಶ್ರೀವೈಷ್ಣವರ ವಿರೋಧ ಕಟ್ಟಿಕೊಳ್ಳಲು ಅವರು ತಯಾರಿರಲಿಲ್ಲ. ರಾಜಸತ್ತೆಯಲ್ಲಿ ಬಲಿಷ್ಠಧರ್ಮ ಬಲವರ್ಧನೆಗೊಳ್ಳುತ್ತದೆ; ಉಳಿದವುಗಳು ಸೊರಗುತ್ತವೆ. ಜೈನಧರ್ಮದ ಪರಿಸ್ಥಿತಿ ಎರಡನೆಯ ಹಂತದ್ದಾಗಿತ್ತು. ಆದರೂ ವಿಜಯನಗರ ಆಡಳಿತಾವಧಿಯಲ್ಲಿ ಬೆರಳೆಣಿಕೆಯಷ್ಟು ಜೈನಚಟುವಟಿಕೆಗಳು ನಡೆದಿರುವುದು ಕಂಡುಬರುತ್ತವೆ. ವಿಜಯನಗರ "ರಾಜಧಾನಿಯಲ್ಲಿ ಇಮ್ಮಡಿ ಹರಿಹರ ಹಾಗೂ ಇಮ್ಮಡಿ ದೇವರಾಯರ ಕಾಲದ ಶಾಸನಗಳಲ್ಲಿ ಜೈನ ದೇವಾಲಯಗಳನ್ನು ನಿರ್ಮಿಸಿದುದರ ವಿವರಗಳಿವೆ. ಇಮ್ಮಡಿ ಹರಿಹರನ ದಂಡನಾಯಕ ಇರುಗಪ್ಪ ಕ್ರಿ.ಶ. ೧೩೮೫ರಲ್ಲಿ ೧೭ನೆಯ ತೀರ್ಥಂಕರ ಕುಂಥುನಾಥನ ಪ್ರತಿಷ್ಠೆಗಾಗಿ ಜೈನ ಬಸದಿಯನ್ನು ಕಟ್ಟಿಸಿದ. ಕರ್ನಾಟಕದಲ್ಲಿ ಈ ತೀರ್ಥಂಕರನಿಗೆ ಕಟ್ಟಿದ ಪ್ರತ್ಯೇಕ ಬಸದಿ ಇದೊಂದೆ. ಇಮ್ಮಡಿ ದೇವರಾಯನ ಆದೇಶದ ಮೇರೆಗೆ ೧೪೨೬ರಲ್ಲಿ ೨೩ನೆಯ ತೀರ್ಥಂಕರ ಪಾರ್ಶ್ವನಾಥನಿಗಾಗಿ ಪಾನ್‌ಸುಪಾರಿ ಬಜಾರಿನಲ್ಲಿ ದೇವಾಲಯವನ್ನು ಕಟ್ಟಲಾಯಿತು"[೨೨೨] ಸದ್ಯ ಗಜಶಾಲೆಯ ಹಿಂದುಗಡೆ ಅನತಿ ದೂರದಲ್ಲಿರುವ ಈ ಎರಡೂ ಜಿನಾಲಯಗಳು ಶಿಥಿಲಗೊಂಡಿವೆ. ಗರ್ಭಗೃಹದಲ್ಲಿ ತೀರ್ಥಂಕರರ ವಿಗ್ರಹಗಳಿಲ್ಲದೆ ಹಾಳುಸುರಿಯುತ್ತಿವೆ.

ರಾಜಧಾನಿ ಹೊರಪ್ರದೇಶಗಳಲ್ಲೂ ಜೈನ ಸ್ಮಾರಕಗಳು ವಿವಿಧ ವ್ಯಕ್ತಿಗಳಿಂದ ನಿರ್ಮಾಣಗೊಂಡವು. ಒಂದನೆಯ ದೇವರಾಯನ ಪಟ್ಟದರಾಣಿ ಭೀಮಾದೇವಿಯು ಶ್ರವಣಬೆಳಗೊಳದ ಮಂಗಾಯಿ ಬಸದಿಗೆ ಶಾಂತಿನಾಥ ತೀರ್ಥಂಕರ ವಿಗ್ರಹವನ್ನು ಮಾಡಿಸಿಕೊಟ್ಟಿದ್ದಾಳೆ.[೨೨೩] ದಂಡನಾಯಕನಾದ ಇರುಗಪ್ಪನು ಗುತ್ತಿಯಲ್ಲೊಂದು ಪಾರ್ಶ್ವನಾಥ ಜಿನಾಲಯವನ್ನು ಮತ್ತು ಆನೆಗೊಂದಿಯಲ್ಲಿ ಬಸದಿಯೊಂದನ್ನು ನಿರ್ಮಿಸಿದ.[೨೨೪] ವಿಜಯನಗರ ಕಾಲಾವಧಿಯಲ್ಲಿ ತುಳುನಾಡನ್ನು ಬಹುತೇಕ ಜೈನ ಅರಸರೇ ಆಳುತ್ತಿದ್ದರಿಂದ ಅಲ್ಲಿ ಜೈನ ಚಟುವಟಿಕೆಗಳು ಸಾಂಗವಾಗಿದ್ದವು. ಬೈಚೆಯ, ಇರುಗಪ, ಮಲ್ಲಪ, ೨ನೆಯ ಬೈಚಪ, ಇಮ್ಮಡಿ ಇರುಗಪ್ಪ, ಮಲ್ಲಪ ಪ್ರಸಿದ್ಧ ಜೈನ ದಂಡನಾಯಕರು ವಿಜಯನಗರ ಸಾಮ್ರಾಜ್ಯದಲ್ಲಿದ್ದರು.

ಹಾವೇರಿ ಪರಿಸರದಲ್ಲಿ ವಿಜಯನಗರ ಕಾಲಾವಧಿಯಲ್ಲಿ ಜೈನಚಟುವಟಿಕೆಗಳು ನಡೆದವು ಎಂಬುದಕ್ಕೆ ಶಾಸನಗಳು ಆಧಾರವಾಗಿ ನಿಲ್ಲುತ್ತವೆ. ಸೇವುಣರ ಕಾಲಾವಧಿಯಲ್ಲಿ ಬಲವಾಗಿ ಆಚರಿಸಲ್ಪಟ್ಟ ಸಮಾಧಿ ಮರಣದ ಪ್ರಕ್ರಿಯೆ ಇವರ ಆಡಳಿತಾವಧಿಯಲ್ಲೂ ಮುಂದುವರೆಯಿತು. ಸದ್ಯ ಈ ಅರಸರ ೧೫ ಜೈನಶಾಸನಗಳು ಲಭ್ಯವಿವೆ. ಇವುಗಳಲ್ಲಿ ೧೩ ನಿಸಿಧಿ ಶಾಸನಗಳು. ೨ನೆಯ ಬುಕ್ಕರಾಯನ-೦೧, ೨ನೆಯ ಹರಿಹರನ-೦೪, ೩ನೆಯ ವಿರೂಪಾಕ್ಷ-೦೧ ಉಳಿದವು ೧೪-೧೬ನೆ

ಶತಮಾನದ ರಚನೆಗಳಾಗಿವೆ. ಈ ಶತಮಾನಗಳಲ್ಲಿ ವಿಜಯನಗರದ ಆಳ್ವಿಕೆಯು ಹಾವೇರಿ ಪರಿಸರದಲ್ಲಿತ್ತು.

೨ನೆಯ ಬುಕ್ಕರಾಯ (ಕ್ರಿ.ಶ. ೧೩೫೬–೧೩೭೭) ಮಹಾಮಂಡಳೇಶ್ವರನಾಗಿ ವಿಜಯನಗರವನ್ನು ಆಳುವಾಗ ಕ್ರಿ.ಶ. ೧೩೭೬ರಲ್ಲಿ ಬಾಳೆಹಳ್ಳಿಯ ಮಹಾಪ್ರಭುವಿನ ಮಗನಾದ ಬೇಳಪ್ಪ ಎಂಬುವನು ಸಮಾಧಿ ಮರಣ ಹೊಂದಿದ್ದಾಗಿ ಸಾವಿಕೇರಿ (ಹಾನತಾ) ಶಾಸನವೊಂದು ಉಲ್ಲೇಖಿಸುತ್ತದೆ. ಬುಕ್ಕರಾಯನಿಗೆ 'ಅರಿರಾಯ ವಿಭಾಡ' ಎಂಬ ಅಪೂರ್ಣ ಪ್ರಶಸ್ತಿ ಮತ್ತು 'ವೀರಬುಕ್ಕರಾಯ' ಎಂದು ಉಲ್ಲೇಖಿಸಲಾಗಿದೆ.[೨೨೫]

೨ನೆಯ ಹರಿಹರನ ನಾಲ್ಕು ಶಾಸನಗಳು ಈ ಭಾಗದಲ್ಲಿ ದೊರೆತಿದ್ದು ಎಲ್ಲವೂ ನಿಸಿಧಿ ಶಾಸನಗಳಾಗಿವೆ. ಇವನನ್ನು ಮೂರು ಶಾಸನಗಳು 'ಮಹಾಮಂಡಳೇಶ್ವರ' ಎಂದು ಕರೆದರೆ ಸಂಗೂರು (ಹಾತಾ) ಶಾಸನ ಮಾತ್ರ 'ಚಕ್ರವರ್ತಿ' ಎಂದಿದೆ. 'ಪರಮವೈರಿ', 'ಅರಿರಾಯ', 'ಸತಬಿಟ್ಟಿ ಅರಿರಾಯ ವಿಭಾಡ', 'ಮಾತಿಗೆ (ಭಾಷೆಗೆ) ತಪ್ಪುವ ರಾಯರ ಗಂಡ' ಎಂಬಿತ್ಯಾದಿ ಪ್ರಶಸ್ತಿಗಳು ವೀರ ಹರಿಹರನಿಗೆ ಇಲ್ಲಿನ ಶಾಸನಗಳಿಂದ ಸಂದಿವೆ.

ಹಾವಣಗಿ (ಹಾನತಾ) ನಿಸಿಧಿ ಶಾಸನವು ವೀರ ಹರಿಹರನ ನಾಮೋಲ್ಲಿಖಿತ ಹಾವೇರಿ ಪರಿಸರದ ಮೊದಲ ಶಾಸನ.[೨೨೬] ಕ್ರಿ.ಶ. ೧೩೯೪ರಲ್ಲಿ ದೇಸಿಗಣದ ಅಗ್ರಗಣ್ಯರು, ಮಂಡಳಾಚಾರ್ಯರೂ, ರಾಜಗುರುಗಳೂ, ಪರವಾದಿ ಪಿತಾಮಹಾರಾದ ತ್ರಿಭುವನಮದನಕೀರ್ತಿಗಳ ಗುಡ್ಡನಾದ ಕೆಸವ ಎಂಬುವನು ಸಾವನ್ನು ಆಹ್ವಾನಿಸಿದ್ದು ಶಾಸನದ ಸಾರ. ಇದೇ ತಾಲ್ಲೂಕು ವೀರಾಪುರದ ನಿಸಿಧಿ ಶಾಸನವು ನಾಗರಹಳ್ಳಿ ಚಂದೋಜನ ಮಗ ಚಿಕ್ಕಚಂದಪ್ಪನು ಸ್ವರ್ಗಸ್ತನಾದ ಬಗ್ಗೆ ತಿಳಿಸುತ್ತದೆ. ಕ್ರಿ.ಶ. ೧೩೯೭ರಲ್ಲಿ ರಚನೆಯಾದ ಈ ಶಾಸನವು ೨ನೆಯ ಹರಿಹರನ ಆಳ್ವಿಕೆಯನ್ನು ಉಲ್ಲೇಖಿಸುತ್ತದೆ.[೨೨೭]

ಹಾವೇರಿ ಪರಿಸರದ ಶಾಸನೋಕ್ತ ನಿಸಿಧಿಗಳಲ್ಲಿಯೇ ಅಪರೂಪದ್ದು ಸಂಗೂರು (ಹಾತಾ) ನಿಸಿಧಿ.[೨೨೮] ಕ್ರಿ.ಶ. ೧೩೯೬ರಲ್ಲಿ ರಚನೆಯಾದ ಈ ಸ್ಮಾರಕ ೨ನೆಯ ಹರಿಹರನ ಆಳ್ವಿಕೆಯನ್ನು ದಾಖಲಿಸುತ್ತದೆ. ಸುಮಾರು ೧೫ ಅಡಿ ಎತ್ತರವಿರುವ ಈ ಸ್ಮಾರಕದ ಶಿಲ್ಪಗಳು ಚಲನಶೀಲತೆಯಿಂದ ಕೂಡಿವೆ. ದಂಡನಾಯಕ ಮಲ್ಲಪನ ಕುಟುಂಬಕ್ಕೆ ಸೇರಿದ ಈ ನಿಸಿಧಿಯು, ಇವನನ್ನೂ ಸೇರಿ ೧೯ ವ್ಯಕ್ತಿಗಳ ಸಮಾಧಿ ಮರಣದ ವಿವರವನ್ನು ದಾಖಲಿಸುತ್ತದೆ. ಮಲ್ಲಪ ಗೋವೆ ಕದಂಬರ ಮಾಧವನ ನೆಚ್ಚಿನ ಸೇನಾನಿಯಾಗಿದ್ದು, ಅವನಿಂದ ಚಂಗಾಪುರ (ಸಂಗೂರು) ದತ್ತಿಯಾಗಿ ದೊರೆತ್ತಿತ್ತು. ತದನಂತರ ಮಲ್ಲಪನ ವಂಶಜರು ಸಂಗೂರನ್ನು ಆಳ್ವಿಕೆಮಾಡತೊಡಗಿದರು. ಮಲ್ಲಪ ಅವನ ತಂದೆ–ತಾಯಿಗಳಾದ ಸಂಕದೇವ–ಸಾವಿಬಾಯಿ, ಹೆಂಡತಿ ಮರುದೇವಿ, ಮಕ್ಕಳಾದ ಶಂಖದೇವ,

ಹರಿಹರದೇವ, ಸಂಗಮದೇವ, ಸೊಸೆ ಸಾಮಯಿ ಮತ್ತು ಮೊಮ್ಮಗನೊಬ್ಬ ಹೀಗೆ ಕುಟುಂಬದ ೦೯ ಸದಸ್ಯರು ಪ್ರಾಣತ್ಯಾಗ ಮಾಡಿದ ಪರೋಕ್ಷವಿನಯಾರ್ಥವಾಗಿ ಇದೇ ವಂಶದ ನೇಮಂಣ ಎಂಬುವನು ತನ್ನ 'ಪಿತೃಪಿತಾಮಹಾಪ್ರಪಿತಾಮಹಾದಿಗಳ್ಗೆ ಸುಕೃತಾಭಿವೃದ್ಧಿ ಪರಿಪ್ರಾಪ್ತಿಯಾಗಬೇಕೆಂದು' ಈ ನಿಸಿಧಿ ಮಾಡಿಸಿ ವಿವಿಧ ಬಸದಿಗಳಿಗೆ ದಾನಕೊಟ್ಟನು. ಈ ಶಾಸನ ಒಂದು ಚಂಪೂ ಕಾವ್ಯವಾಗಿ ಕಂಗೊಳಿಸುತ್ತದೆ. ವಿಷಯದಲ್ಲಿ, ಗಾತ್ರದಲ್ಲಿ, ಶಿಲ್ಪದಲ್ಲಿ ಇಂಥಹ ಮನೋಜ್ಞ ನಿಸಿಧಿ ಶಾಸನ ಹಾವೇರಿ ಪರಿಸರದಲ್ಲಿ ಮತ್ತೊಂದಿಲ್ಲ.

ಬಾಳಂಬೀಡ (ಹಾನತಾ)ದ ಕ್ರಿ.ಶ. ೧೪೦೦ರ ನಿಸಿಧ ಶಾಸನ ಮಹಾಮಂಡಳೇಶ್ವರ ವೀರ ಹರಿಹರ ರಾಜ್ಯವಾಳುತ್ತಿರುವಾಗ ವರವಾಡದ ಸೂರಿಸೆಟ್ಟಿಯರು ದೇಸಿಯಗಣದಲ್ಲಿ ಅಗ್ರಗಣ್ಯರೆನಿಸಿದ ಆರೆಯ ಚಂದ್ರಸಿದ್ಧಾಂತ ಪಂಡಿತರಿಂದ ಸಲ್ಲೇಖನ ವ್ರತವನ್ನು ಸ್ವೀಕರಿಸಿ ಸ್ವರ್ಗಸ್ಥರಾದರೆಂದು, ಗೊಂಕಿಯ ಸಿಂಗಣಗೌಡರು ನಿಸ್ತಿಕೆಯ ಮಾಡಿಸಿದರೆಂದು ತಿಳಿಸುತ್ತದೆ.[೨೨೯]

ಕ್ರಿ.ಶ. ೧೪೫೧ರ ತೇದಿಯ ನಿಸಿಧಿ ಶಾಸನ ಹಿರೂರು (ಹಾನತಾ)ವಿನಲ್ಲಿದ್ದು,[೨೩೦] ಒನೆಯ ವಿರೂಪಾಕ್ಷನ ಕಾಲಕ್ಕೆ ಸಂಬಂಧಿಸಿದ್ದೆಂದು ಹೇಳಬಹುದು. ಹುಲಿಗೆರೆ (ಪುಲಿಗೆರೆ > ಹುಲಿಗೆರೆ > ಲಕ್ಷ್ಮೇಶ್ವರ)ಯ ಶಂಖಬಸದಿಯ ಆಚಾರ್ಯ ಮಾಗನಕ ಗಸ್ತಮದ ಹುಲಿಗೆರೆಯ ಗೊಗ್ಗಿಯ ಗುಂಮಟಸೆಟ್ಟಿಯ ಮಗಳು ಮತ್ತು ಗುಣಭೂಷಣ ದೇವರ ಗುಡ್ಡಿಯೂ ಆದ ವದ್ದಯೆ ಎಂಬುವಳು ಸ್ವರ್ಗಸ್ತೆಯಾದ ಪ್ರಯುಕ್ತ ಗುಡಗುಡಿಯ ಚೌಡೋಜ ಈ ಸ್ಮಾರಕ ನಿಲ್ಲಿಸಿದ. ಈ ಶಾಸನದೊಂದಿಗೆ ವಿಜಯನಗರ ಉಲ್ಲೇಖಿತ ಶಾಸನಗಳು ಕೊನೆಗೊಂಡಿವೆ. ಇನ್ನು ಅವರ ಆಡಳಿತಾವಧಿಯಲ್ಲಿ ರಚನೆಯಾದ ಅತೇದಿ ೧೪–೧೬ನೆಯ ಶತಮಾನದ ಶಾಸನಗಳು ಲಭ್ಯವಾಗುತ್ತವೆ.

## ೧೩. ಅತೇದಿ ಶಾಸನಗಳು (೧೪–೧೬ನೆಯ ಶತಮಾನ).

೧೪–೧೬ನೆಯ ಶತಮಾನದ ಒಟ್ಟು ೦೯ ಶಾಸನಗಳು ಲಭ್ಯವಿದ್ದು ಬಹುತೇಕ ನಿಸಿಧಿ ಶಾಸನಗಳಾಗಿವೆ. ಗುಡಗುಡಿ (ಹಾನತಾ)ಯಲ್ಲಿ ಸೂರಸ್ತಗಣದ ಮುನಿಯೊಬ್ಬರ ಶಿಷ್ಯೆ,[೨೩೧] ಮಂತಗಿ (ಹಾನತಾಲ್ಲೂಕು)ಯ ಮುರಾಗಿ,[೨೩೨] ಹೆರೂರು (ಹಾನತಾ) ಅಕಬೆಯ ಮಗ[೨೩೩] ಇದೇ ಊರ ಮಲಭಾಗ,[೨೩೪] ಹಿರೇಅಣಜಿ (ಬ್ಯಾತಾ)ಯ ಅಕ್ಕಸಾಲಿ ನೇಮೋಜ[೨೩೫], ಇದೇ ಊರ ಜಕ್ಕಲೆ ಮತ್ತು ಸೋಮಣ, ಅನಾಮಿಕ ಗುಡ್ಡಿಯೊಬ್ಬಳು[೨೩೬] ಸಾವನ್ನು ಆಹ್ವಾನಿಸುವ ಪ್ರಕ್ರಿಯೆಯನ್ನು ಶಾಸನಗಳು ದಾಖಲಿಸುತ್ತವೆ. ಇದೇ ಕಾಲಾವಧಿಯ ಶಾಡಗುಪ್ಪಿ (ಹಾನತಾ)ಯ ಜಿನಗಲ್ಲು (ಮುಕ್ಕೊಡೆ ಅಥವಾ ಗಡಿಕಲ್ಲು) ಒಂದು ಅಪರೂಪದ ಸ್ಮಾರಕ.[೨೩೭] ಹಾವೇರಿ ಪರಿಸರದ ಮುಕ್ಕೊಡೆ ಕಲ್ಲುಗಳಲ್ಲಿ ಶಾಸನವಿರುವ ಏಕೈಕ ಗಡಿಗಲ್ಲು ಇದು. ಶಾಸನದಲ್ಲಿ 'ಬಸದಿಯ ನಿವೇಸಣದ ಆಯದ ಕಲ್ಲು' ಎಂದು ನಮೂದಿಸಲಾಗಿದೆ. ಬಸದಿಗೆ ಬಿಟ್ಟ ನಿವೇಶನವನ್ನು ಗುರುತಿಸುವ ಸಲುವಾಗಿ ಈ ಕಲ್ಲನ್ನು ನೆಡಲಾಗಿತ್ತು. ಸದ್ಯ ಬಸದಿ ಇಲ್ಲ. ಹದಿನೈದನೆಯ ಶತಮಾನದ ಇನ್ನೊಂದು ದಾನಶಾಸನ

ಅರಟಾಳ (ಶಿತಾ)ದ್ದು.[೨೩೮] ಇಲ್ಲಿನ ಪಾರ್ಶ್ವನಾಥ ಜಿನಾಲಯಕ್ಕೆ 'ಹೊಸೂರು ಕಾನಂಣಾ' ಎಂಬುವನು ಗಂಧ ತೇಯುವ ಕಲ್ಲನ್ನು ಮಾಡಿಸಿಕೊಟ್ಟದ್ದು ಶಾಸನ ಸಾರ. ಈ ಶಾಸನ ಅಪೂರ್ಣವಾಗಿದ್ದು ಮುಕ್ಕಾದ ಗಂಧ ತೇಯುವ ಕಲ್ಲಿನ ಮೇಲೆ ಇದೆ. ಇದೊಂದು ಅಪರೂಪದ ಶಾಸನ.

ವಿಜಯನಗರದ ಅವನತಿಯೊಂದಿಗೆ ಹಾವೇರಿ ಪರಿಸರದಲ್ಲಿ ಜೈನ ಶಾಸನಗಳ ರಚನೆ ನಿಂತುಹೋದಂತೆ ಕಾಣುತ್ತದೆ. ಆದರು ವಿಜಯನಗರೋತ್ತರ ಕಾಲದಲ್ಲಿ ಬಾಳೂರ (ಹಾನತಾ)ಲ್ಲಿ ಈಗಿನ ಪಾಳು ಬಸದಿಯಲ್ಲಿರುವ ಶ್ರೀ ಪಾರಿಶ್ವನಾಥ ಜಿನಾಲಯ', 'ಶ್ರೀ ಜಿನಾಯನ್ಮಃ ಶಿರಸನಾಥ ಕಾಳೋಸಗರೇಂದ್ರ ಕರ ಲಿಖಿದ'[೨೩೯] ಎಂಬ ಎರಡು ಜೈನಶಾಸನಗಳನ್ನು ಹೊರತುಪಡಿಸಿದರೆ ಹಾವೇರಿ ಪ್ರದೇಶದಲ್ಲಿ ಮೌಲ್ಯಯುತ ಜೈನ ಶಾಸನಗಳು ರಚನೆಯಾಗಲಿಲ್ಲ ಎಂಬುದು ದಿಟ.

ಕ್ರಿಸ್ತಪೂರ್ವಕ್ಕಿಂತಲೂ ಬಹು ಶತಮಾನಗಳ ಹಿಂದೆಯೆ ಉಗಮಿಸಿದ ಜೈನಧರ್ಮ, ಮೌರ್ಯ, ಶಾತವಾಹನ ಅವಧಿಯಲ್ಲಿ ಉತ್ತೇಜನಗೊಂಡು, ಕದಂಬರ ಕಾಲದಲ್ಲಿ ಉದ್ದೀಪನಗೊಂಡಿತು. ಗಂಗರ ಅವಧಿಯಲ್ಲಿ ರಾಜಾಶ್ರಯ ಪಡೆದ ಈ ಧರ್ಮ ಚಲುಕ್ಯರಲ್ಲಿ ಪ್ರಮುಖ ಧರ್ಮಗಳಲ್ಲೊಂದಾಗಿ, ರಾಷ್ಟ್ರಕೂಟರ ಕಾಲದಲ್ಲಿ ರಾಷ್ಟ್ರಧರ್ಮದ ಪಟ್ಟವೇರಿತು. ಊರ್ಧ್ವಮುಖಿಗೊಂಡು ತನ್ನ ಕೀರ್ತಿಮುಖವನ್ನು ಪ್ರಜ್ವಲಿಸುತ್ತಿದ್ದ ಈ ಧರ್ಮಕ್ಕೆ ಹೊಡೆತ ಬಿದ್ದುದು ಚಾಳುಕ್ಯ ಆಡಳಿತ ಅಂತಿಮ ಘಟ್ಟದಲ್ಲಿ. ಕಲಚೂರಿಯ ಕಾಲದಲ್ಲಂತೂ ಜೈನಧರ್ಮದ–ಧರ್ಮಿಯರ ತೇಜೋವಧೆಗಳಾದವು. ಹೊಯ್ಸಳರ ಆರಂಭಿಕ ಕಾಲದಲ್ಲಿ ಮತ್ತೆ ಮರುಪೂರಣ ಪಡೆದುಕೊಂಡ ಜೈನಧರ್ಮ ಅಷ್ಟೇ ವೇಗವಾಗಿ ತನ್ನನ್ನು ಕಾಪಾಡಿಕೊಳ್ಳುವ ಸ್ಥಿತಿ ತಲುಪಿತು. ಸೇವುಣ, ವಿಜಯನಗರ ಕಾಲದಲ್ಲಿ ಸಂಪೂರ್ಣ ಇಳಿಮುಖಗೊಂಡ ಜೈನಧರ್ಮ ಜನಮಾನಸದಿಂದ ದೂರವಾಯಿತು. ಆದರೆ ತನ್ನ ಮೂಲ ಸಿದ್ಧಾಂತ ತತ್ವಗಳನ್ನು ಬದಲಾಯಿಸಿಕೊಳ್ಳಲು ರಾಜಿಯಾಗದ ಈ ಧರ್ಮ ಈಗಲೂ ತನ್ನ ಅಸ್ಮಿತೆಯನ್ನು ಉಳಿಸಿಕೊಂಡು ಬಂದಿದೆ. ಈ ಎಲ್ಲ ಚಿತ್ರಣಗಳನ್ನು ಎಳೆಎಳೆಯಗಿ ಬಿಚ್ಚಿಡುವಲ್ಲಿ ಹಾವೇರಿ ಜಿಲ್ಲೆಯ ೧೫೦ ಜೈನಶಾಸನಗಳ ಪಾತ್ರ ಅನನ್ಯ.

### ಆ. ಮುನಿ ಪರಂಪರೆ.

ಜೈನಧರ್ಮ ಇಂದಿಗೂ ತನ್ನ ಅಸ್ಮಿತೆಯನ್ನು ಉಳಿಸಿಕೊಂಡುಬರಲು ಬಹುಮುಖ್ಯ ಕಾರಣರು ಜಿನಮುನಿಗಳು. ಕಾಲಕಾಲಕ್ಕೆ ಈ ಧರ್ಮದ ಜನಸಾಂದ್ರತೆಯಲ್ಲಿ ಏರಿಳಿತ ಕಂಡರೂ; ಮುನಿಗಳು ಮಾತ್ರ ತಾವು ಆಚರಿಸುವ ಕಾಠಿಣ್ಯ ವ್ರತಗಳನ್ನು ಶಿಥಿಲಗೊಳಿಸಲಿಲ್ಲ. ಆದಿ ಕಾಲಕ್ಕಿದ್ದ ಮುನಿಯ ಸಿದ್ಧಾಂತಗಳೂ ಈಗಲೂ ಅಸ್ಥಿತ್ವದಲ್ಲಿವೆ ಎಂದರೆ ಅದಕ್ಕೆ ಜಿನಮುನಿಗಳೇ ಕಾರಣರಾಗುತ್ತಾರೆ. ದೈಹಿಕ ಮತ್ತು ಮಾನಸಿಕ ದಿಗಂಬರತ್ವವನ್ನು ಪಾಲಿಸುವ ಇವರು ಅತೀ ಕ್ಲಿಷ್ಟವಾದ ನಿಯಮಗಳ ಮೂಲಕ ದೇಹವನ್ನು ದಂಡಿಸುತ್ತಾರೆ. ಅತ್ಯುಚ್ಚ 'ಕರ್ಮಸಿದ್ಧಾಂತ' ಪರಿಪಾಲನೆ ಇವರ ಗುರಿ.

'ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂ'ಗಳಲ್ಲಿ[೨೪೦] ಮುನಿಗಳು ಸಂಚರಿಸುತ್ತಾ, ಮಳೆಗಾಲದಲ್ಲಿ (ಚಾತುರ್ಮಾಸ) ಒಂದು ಕಡೆ ನೆಲೆ ನಿಲ್ಲುವರು. ಈ ಸಂದರ್ಭದಲ್ಲಿಯೇ ಮುನಿಗಳ ವಸತಿಗಾಗಿ ಕಟ್ಟಡಗಳು ನಿರ್ಮಾಣವಾದವು. ಮುಂದೆ ಇದೇ ವಸತಿ > ಬಸದಿಯಾಯ್ತು. ಬಸದಿಗೆ ಇನ್ನೊಂದು ಹೆಸರು ಚೈತ್ಯ. ಚೈತ್ಯವಾಸಿ ಮುನಿಪಂಗಡವು ಜೈನಧರ್ಮದಲ್ಲುಂಟು. ಚಾತುರ್ಮಾಸ ಸಂದರ್ಭದಲ್ಲಿ ಮುನಿಗಳು ಒಂದೇ ಕಡೆ ನೆಲೆ ನಿಲ್ಲುವುದರಿಂದ ಶ್ರಾವಕರ ಮೇಲೆ ಪ್ರಭಾವ ಬೀರಿ ಅವರು ಧಾರ್ಮಿಕ ಚಟುವಟಿಕೆಗಳನ್ನು ಕೈಗೊಳ್ಳುವಲ್ಲಿ ಹುರಿದುಂಬಿಸಿದ್ದಾರೆ. ಇದೇ ಸಂದರ್ಭದಲ್ಲಿ ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಎಂಬ ಪಂಚಾಣುವ್ರತಗಳನ್ನು ಶ್ರಾವಕರಿಗೆ ಬೋಧಿಸುತ್ತ ತಾವೂ ಅನುಸರಿಸುತ್ತಾ ಬಂದಿದ್ದಾರೆ. ಹೀಗೆ ಪಾರಮಾರ್ಥಿಕ ಕಾರ್ಯದ ಜೊತೆಜೊತೆಗೆ ಆಂತರಿಕ ಕಷಾಯಗಳನ್ನು ಕಳೆದುಕೊಂಡು ಸಮಾಧಿ ಮರಣದ ಮೂಲಕ ಆತ್ಮವನ್ನು ಉದ್ಧಾರಗೊಳಿಸಿಕೊಳ್ಳುವ ಮುನಿಗಳ ನೂರಾರು ನಿದರ್ಶನಗಳು ಕರ್ನಾಟಕ ಪರಿಸರದಲ್ಲಿವೆ.

'ಮುನಿಧರ್ಮ' ಮತ್ತು 'ಶ್ರಾವಕಧರ್ಮ' ಎಂಬ ಎರಡು ಬಗೆಯ ಧರ್ಮಾಚರಣೆಗಳು ಜೈನಧರ್ಮದಲ್ಲಿ ಉಂಟು. ಮುನಿ (ರಿಸಿ), ಆರ್ಯಿಕೆ (ಕಂತಿ)ಯರು ಮೊದಲ ಶ್ರೇಣಿಯವರಾದರೆ; ಶ್ರಾವಕ ಮತ್ತು ಶ್ರಾವಿಕೆ (ಗೃಹಸ್ಥರು) ಎರಡನೆಯ ವರ್ಗದವರು. ಮೊದಲನೆಯವರು ಮಹಾವ್ರತಿಗಳಾದರೆ; ಎರಡನೆಯವರು ಅಣುವ್ರತಿಗಳು. ಪರಿಪೂರ್ಣ ವ್ಯಕ್ತಿತ್ವ ಹೊಂದಿದ ಒಬ್ಬ ಶ್ರಾವಕ ಮುನಿಯಾಗಲಿಕ್ಕೆ ಸಾಧ್ಯ. ದೇವಪೂಜೆ, ಗುರುಸೇವೆ, ಸ್ವಾಧ್ಯಾಯ, ಸಂಯಮ, ತಪಸ್ಸು, ದಾನ ಎಂಬ ಷಟ್ಕರ್ಮಗಳು ಶ್ರಾವಕನ ನಿತ್ಯ ವಿಧಿಗಳು. ಇವುಗಳ ಜೊತೆಗೆ ಅಣುವ್ರತಗಳನ್ನು ಪಾಲಿಸುತ್ತ 'ಉಂಡುಪವಾಸಿ ಬಳಸಿ ಸನ್ಯಾಸಿ' ಎಂಬ ರತ್ನಾಕರವರ್ಣಿಯ ವಾಕ್ಯದಂತೆ ಶ್ರಾವಕನು ಸಂಸಾರಿಯಾಗಿದ್ದಲೆ ಪಾರಮಾರ್ಥಿಕ ಸುಖದತ್ತ ಮುಖಮಾಡುವ ಒಂದು ಮನೋವೇದಿಕೆಯನ್ನು ಸಜ್ಜುಗೊಳಿಸಿಕೊಳ್ಳಬೇಕಾಗುತ್ತದೆ. ಸಾಂಸಾರಿಕ ಜೀವನದ ಜೊತೆ ಜೊತೆಗೆ ಮುನಿಜೀವನ ನಡೆಸುವುದು ಜೈನಧರ್ಮದಲ್ಲಿ ನಿಸಿದ್ಧ. ಕುಟುಂಬ ಜೀವನದಿಂದ ವಿಮುಖಗೊಂಡು ಬ್ರಹ್ಮಚರ್ಯವನ್ನಾಚರಿಸುತ್ತ ಕ್ಷುಲ್ಲಕ, ಐಲಕ, ಕೊನೆಗೆ ಮುನಿದೀಕ್ಷೆಯನ್ನು ಶ್ರಾವಕ ಪಡೆದುಕೊಳ್ಳಬಹುದಾಗಿದೆ.

### ೦೧. ಮುನಿ ಚರಿತೆ.

ಪ್ರಾಚೀನ ಕಾಲದಿಂದಲೂ ಜಿನಮುನಿಗಳ ನಿತ್ಯ ಜೀವನದ ವಿಧಿವಿಧಾನಗಳು ಅಲ್ಪವ್ಯತ್ಯಾಸಗಳೊಂದಿಗೆ ಸಾಗಿಬಂದಿರುವುದು ಗಮನಾರ್ಹವಾಗಿದೆ. ಪ್ರತಿಯೊಬ್ಬ ಮುನಿಯು ದಿಗಂಬರತ್ವವನ್ನು ಕಡ್ಡಾಯವಾಗಿ ಅನುಸರಿಸಬೇಕು. ಮೋಹ ಆವರಿಸುವ ಅವಕಾಶ ಒದಗಬಾರದೆಂಬುದಕ್ಕೆ ಸಂಚಾರವೂ ಕಡ್ಡಾಯ. ಸಂಚಾರದಲ್ಲಿ ಯಾವುದೇ ರೀತಿಯ ವಾಹನದ ವ್ಯವಸ್ಥೆಯನ್ನು ಬಳಸುವಂತಿಲ್ಲ. ಕ್ರಮಿಸುವ ಹಾದಿ ಎಷ್ಟೇ ದೂರವಿದ್ದರೂ ಬರಿಗಾಲಲ್ಲೇ

ನಡೆಯಬೇಕು ಅದು ಬೆಳಕಿನಲ್ಲಿಯೇ ಆಗಬೇಕು ಯಾಕೆಂದರೆ ನಡೆಯುವಾಗ ಹಾದಿಗೆ ಅಡ್ಡಬಂದ ಸಣ್ಣ ಜೀವಿಗಳು ಸಾಯದಿರಲಿ ಎಂಬ ಅಹಿಂಸೆಯ ಭಾವ ಮುನಿಯಲ್ಲಿರುತ್ತದೆ. ಶೀತೋಷ್ಣಸೋನೆಗಾಲದಲ್ಲಿಯೂ ಮುನಿಯು ನೆಲದ ಮೇಲೆ ಮಲಗಬೇಕು. ಯಾವುದೇ ಹಾಸಿಗೆಗಳನ್ನು ಬಳಸುವಂತಿಲ್ಲ. ಅನಾರೋಗ್ಯ ಇದ್ದರೂ ಇದೇ ನಿಯಮ. ಪ್ರತಿಯೊಬ್ಬ ಜಿನಮುನಿಯೂ ನಾಲ್ಕು ಗಳಿಗೆ ನಿದ್ರೆ ಮಾಡುತ್ತಾರೆ. ಕುಳಿತುಕೊಳ್ಳುವಾಗ ಉದುರಿಬಿದ್ದ ನವಿಲುಗರಿಯ ಪಿಂಛಿಯಿಂದ ನೆಲವನ್ನು ಶುಚಿಗೊಳಿಸಿ ಕೂರಬೇಕು. ಹಲ್ಲು ತಿಕ್ಕಬಾರದು, ಮೈ ತೊಳೆಯಬಾರದು. ತಲೆಗೂದಲಗಳನ್ನು, ಗಡ್ಡ-ಮೀಸೆಗಳನ್ನು ಬೆರಳುಗಳಿಂದ ಕೀಳಬೇಕು. (ಈ ಕ್ರಿಯೆಗೆ 'ಕೇಶಲುಂಚನ' ಎನ್ನುತ್ತಾರೆ.) ತಪ, ಧ್ಯಾನ, ಸ್ವಾಧ್ಯಾಯ ಕಡ್ಡಾಯ. ಚಾತುರ್ಮಾಸದಲ್ಲಿ ಸಂಚಾರ ನಿಸಿದ್ಧ. ಮಳೆಗಾಲದ ನಾಲ್ಕು ತಿಂಗಳ ಈ ಮಾಸದಲ್ಲಿ ಒಂದೇ ಸ್ಥಳದಲ್ಲಿ ವಾಸಿಸಬೇಕು. ಧರ್ಮಬೋಧನೆ ಮಾಡಬೇಕು. ವ್ರತಗಳನ್ನಾಚರಿಸಬೇಕು. ತೀರ್ಥದರ್ಶನ, ದೇವದರ್ಶನಗಳ ಜೊತೆಜೊತೆಗೆ ದೇಹಕ್ಕೆ ಮುಪ್ಪು ಬಂದಾಗ ಅಥವಾ ದೇಹದ ಮೇಲೆ ವೈರಾಗ್ಯ ಉಂಟಾದಾಗ ಸಲ್ಲೇಖನ ವ್ರತವನ್ನಾಚರಿಸಿ ಪ್ರಾಣತ್ಯಾಗ ಮಾಡಿ ಆತ್ಮೋದ್ಧಾರಗೊಳಿಸಿಕೊಳ್ಳಬೇಕು. ಇವಿಷ್ಟು ಜಿನಮುನಿಗಳು ಕಡ್ಡಾಯವಾಗಿ ಪಾಲಿಸಬೇಕಾದ ಪ್ರಾಥಮಿಕ ನಿಯಮಗಳು.

ಈ ರೀತಿಯಾಗಿ ಕಠೋರ ವ್ರತಾಚರಣೆ ನಿಯಮಗಳನ್ನು ಪಾಲಿಸುತ್ತ ಬಂದ ಮುನಿಗಳು ಲೋಕವಂದಿತರಾದರು, ರಾಜಸಮ್ಮಾನಿತರಾದರು, ಪ್ರಜೆಗಳ ಪ್ರೀತಿಪಾತ್ರರಾದರು. ಇವರ ಚಾರಿತ್ರ್ಯ ಮತ್ತು ಧರ್ಮಬೋಧನೆಯ ಪ್ರಭಾವಕ್ಕೆ ಒಳಗಾಗಿ ಅದೆಷ್ಟೋ ರಾಜ-ರಾಣಿಯರು, ಮಂತ್ರಿಮಹೋದಯರು, ಸಾಮಂತ ಅರಸಾದಿಗಳು, ದಂಡನಾಯಕ-ಚಮೂಪರು, ಶ್ರೇಷ್ಠಿಗಳು, ನಾಳ್ಗಾವುಂಡ-ಗಾವುಂಡರು, ಶ್ರಾವಕರು ಜೈನ ಧಾರ್ಮಿಕ ಚಟುವಟಿಕೆಗಳನ್ನು ಕೈಗೊಂಡು ಕರ್ನಾಟಕದಾದ್ಯಂತ ಬಸದಿ ಎಂಬ ಧಾರ್ಮಿಕ ಶ್ರದ್ಧಾಕೇಂದ್ರವನ್ನು ನಿರ್ಮಿಸುವಲ್ಲಿ ಜೈನಧರ್ಮಕ್ಕೆ ಬಲವರ್ಧನೆಯಾದರು. ಹಾವೇರಿ ಪರಿಸರಕ್ಕೆ ಈ ಪ್ರಕ್ರಿಯೆ ಹೊರತಾದದ್ದಲ್ಲ.

## ೦೨. ಮುನಿ ಸಂಘ.

ಸಾಮಾನ್ಯ ವ್ಯಕ್ತಿಯೊಬ್ಬನನ್ನು ಹೊಸದಾಗಿ ಪರಿಚಯ ಮಾಡಿಕೊಳ್ಳುವಾಗ ಅವನ ಹೆಸರು ಊರು, ಮನೆತನದ ಹೆಸರು ಕೇಳುವುದು ವಾಡಿಕೆ. ಈ ಕ್ರಿಯೆ ವ್ಯಕ್ತಿಯ ಗುರುತು (ಐಡೆಂಟಿಟಿ) ಹಚ್ಚುವ ಕ್ರಮ. ಇಂಥಹ ನಿಯಮ ಜಿನಮುನಿಗಳಲ್ಲೂ ಇತ್ತು. ಇವರಿಗೆ ಊರು, ಮನೆತನ ಇರದು. ತೆರೆದ ಆಗಸ, ಹಾಸಿದ ಭೂಮಿಯೇ ಮುನಿಗಳ ವಿಳಾಸ. ಆದರೂ ಅವರು ಗುರುತಿಗಾಗಿ ಮುನಿಸಂಘ, ಗಣ, ಗಚ್ಛ, ಬಳಿ, ಅನ್ವಯ ಪರಂಪರೆಯನ್ನು ಹೇಳುತ್ತಾರೆ. ಶಾಸನಗಳೂ ಈ ಗುರುತರವಾದ ಮಾಹಿತಿಯನ್ನು ಗರ್ಭೀಕರಿಸಿಕೊಂಡಿವೆ. ಜೈನಧರ್ಮದ ಆರಂಭಿಕ ಹಂತದಲ್ಲಿ ಈ ಕ್ರಮ ಇರಲಿಲ್ಲ. ೨೪ನೆಯ ತೀರ್ಥಂಕರ ವರ್ಧಮಾನ ಮಹಾವೀರರು ನಿರ್ವಾಣ ಆದ ಉತ್ತರೋತ್ತರ ಕಾಲಕ್ಕೆ ಇಂಥಹ ವಾಡಿಕೆ ಬಂದಂತೆ ತೋರುತ್ತದೆ. ಬಹುಶಃ ಉತ್ತರ ಭಾರತದಲ್ಲಿ

ಸಂಭವಿಸಿದ ೧೨ ವರ್ಷಗಳ ಭೀಕರ ಬರಗಾಲ ಜೈನಧರ್ಮದ ಮುನಿ ಪರಂಪರೆಯಲ್ಲಿ ಒಡಕಿನ ಬೀಜ ಬಿತ್ತುವಲ್ಲಿ ವೇದಿಕೆಯಾಯ್ತು. ಈ ಘಟನೆ ಕ್ರಿ.ಪೂ. ೩ನೆಯ ಶತಮಾನಕ್ಕೆ ನಡೆಯಿತು.

ಕ್ರಿ.ಪೂ ೩ನೆಯ ಶತಮಾನದಲ್ಲಿ "ಉತ್ತರ ಭಾರತ ಭೀಕರ ಬರಗಾಲದಿಂದ ತತ್ತರಿಸಿತ್ತು. ಮುನಿಸಮುದಾಯದ ಸುರಕ್ಷತೆಗಾಗಿ ಭದ್ರಬಾಹು ಮುನಿಗಳು ಚಂದ್ರಗುಪ್ತ ಮತ್ತು ವಿಶಾಖಾಚಾರ್ಯರ ಸಹಿತ ೧೨೦೦೦ ಮುನಿಸಮುದಾಯದ ಜೊತೆಗೂಡಿ ದಕ್ಷಿಣ ಭಾರತದ ಕಟ್ವಪ್ರು (ಶ್ರವಣಬೆಳಗೊಳ)ವಿನಲ್ಲಿ ಬೀಡುಬಿಟ್ಟರು. ತನ್ನ ಆಯುಷ್ಯ ಪ್ರಮಾಣದ ಕ್ಷೀಣವಾದದನ್ನು ಅರಿತ ಭದ್ರಬಾಹು ಭಟಾರ ಸಂನ್ಯಸನ ತೆಗೆದುಕೊಳ್ಳಲು ತೀರ್ಮಾನಿಸಿ, ತನ್ನ ಹಿರಿಯ ಶಿಷ್ಯ ವಿಶಾಖಾಚಾರ್ಯನೊಡನೆ ೮೦೦೦ ಮುನಿಗಳನ್ನು ಜೊತೆಗೂಡಿಸಿ ದ್ರವಿಳ ದೇಶಕ್ಕೆ ಕಳುಹಿಸಿದ. ಉತ್ತರದಲ್ಲಿ ಉಳಿದಿದ್ದ ರಾಮಿಲಾಚಾರ್ಯ, ಸ್ಥೂಲಾಚಾರ್ಯ, ಸ್ಥೂಲಭದ್ರಾಚಾರ್ಯ ಮೂವರು ತಮ್ಮ ರಿಸಿ ಸಮುದಾಯದೊಡನೆ ಸಿಂಧೂ ದೇಶಕ್ಕೆ ಪಯಣಗೊಳಿಸಿದರು. ಅಲ್ಲಿಯೂ ಆಹಾರದ ಭೀಕರತೆಯು ಆವರಿಸಿದ್ದರಿಂದ ಜನ ತತ್ತರಿಸಿದ್ದರು. ಸಾಂದರ್ಭಿಕ ಕಾರಣಗಳಿಂದ ಮುನಿಗಳು ಇರುಳು ಆಹಾರ ಪಡೆದು ಹಗಲು ಉಣ್ಣುವಂತಾಯಿತು. ಇಂಥಹ ಕ್ಲಿಷ್ಟ ಸಂದರ್ಭದಲ್ಲಿ ಒಮ್ಮೆ ಮುನಿಯೊಬ್ಬ ಇರುಳು ಆಹಾರ ಬೇಡಲು ಮನೆಯೊಂದಕ್ಕೆ ಹೋಗಿರಲು ಅಲ್ಲಿದ್ದ ಗರ್ಭಿಣಿಯೊಬ್ಬಳಿಗೆ ಈ ಬೆತ್ತಲೆ ರಿಸಿಯನ್ನು ಕಂಡು ಗರ್ಭಪಾತವಾಯಿತು. ಮುಂದೆ ಶ್ರಾವಕರ ವಿನಂತಿಯ ಮೇರೆಗೆ ಸಾಂದರ್ಭಿಕವಾಗಿ ಮುನಿಗಳು ಅರ್ಧಗಪ್ಪಡಿಗಳಾದರು (ಮರ್ಮ ಸ್ಥಾನಕ್ಕೆ ಅಡ್ಡಲಾಗಿ ಒಂದು ತುಂಡು ಬಟ್ಟೆಯನ್ನು ಹಿಡಿಯುವ ಪದ್ಧತಿ) ಹೀಗೆ ದಿನಗಳು ಉರುಳಿದಂತೆ ದಕ್ಷಿಣಭಾರತದಿಂದ ವಿಶಾಖಾಚಾರ್ಯರು ಹಿಂದಿರುಗಿ ಉತ್ತರ ಭಾರತಕ್ಕೆ ಬಂದು ಮುನಿಗಳ 'ಅರ್ಧಗಪ್ಪಡ' ಮಾರ್ಪಾಟನ್ನು ಕಂಡು ದಿಗ್ಭ್ರಾಂತರಾಗಿ ಆ ಮುನಿ ಸಮುದಾಯಕ್ಕೆ ನೀವಿನ್ನು ನಿರ್ಗ್ರಂಥರಾಗಿ ತಪದೊಳು ಪ್ರಾಯಶ್ಚಿತ ಮಾಡಿಕೊಳ್ಳಿರೆಂದು ಸಲಹೆಯಿತ್ತರು. ಈ ವಾಕ್ಯವನ್ನು ಪುರಸ್ಕರಿಸಿದ ರಾಮಿಲಾಚಾರ್ಯರು ಮತ್ತು ಸ್ಥೂಲಾಚಾರ್ಯರು ಅರ್ಧಗಪ್ಪಡವನ್ನು ಬಿಸುಟು ನಿರ್ಗ್ರಂಥರಾದರು. ಆದರೆ ಸ್ಥೂಲಭದ್ರಾಚಾರ್ಯರು ಮೊದಲಾಗಿ ಈ ಸಲಹೆ ಒಪ್ಪದೆ ಅರ್ಧಗಪ್ಪಡ ಸಂಪ್ರದಾಯದಲ್ಲಿ ಮುಂದುವರೆದರು. ಮುಂದೆ ಇವರೇ ಶ್ವೇತಪಟ (ಶ್ವೇತಾಂಬರ) ಮತ್ತು ಜಾಪುಲಿ (ಯಾಪನೀಯ) ಸಂಪ್ರದಾಯಕ್ಕೆ ಕಾರಣರಾದರು".[೨೪೧]

ಮೇಲಿನ ಇಡೀ ಪ್ರಕ್ರಿಯೆಯಲ್ಲಿ ಪ್ರಕೃತಿಯ ವಿಕೋಪದಿಂದ ಜಿನಮುನಿಗಳ ಸಂಪ್ರದಾಯದಲ್ಲಿ ವ್ಯತ್ಯಾಸವಾಗಿ ನಿಯಮಗಳು ಮಾರ್ಪಾಡಾಗಿರುವುದು ಗೋಚರವಾಗುತ್ತದೆ. ಒಟ್ಟಿನಲ್ಲಿ ಮೂಲ ಜೈನಧರ್ಮ ಒಡೆದು ಎರಡು ಹೋಳಾಯಿತು ಎಂದರೂ ಸರಿಯೆ. 'ನಿರ್ಗ್ರಂಥ' (ದಿಗಂಬರ) 'ಶ್ವೇತಪಟ' (ಶ್ವೇತಾಂಬರ) ಆ ಎರಡು ಹೋಳುಗಳು. ಈ ರೀತಿಯ ಜೈನಧರ್ಮದ ಒಡಕಿನ ಬೀಜದಲ್ಲಿ ಹುಟ್ಟಿದ್ದೆ ಮುನಿಸಂಘದ ಕಲ್ಪನೆ. ದಿಗಂಬರ ಮತ್ತು ಶ್ವೇತಾಂಬರ ಮುನಿ ಸಮುದಾಯಗಳು ಸಂಘಗಳಾಗಿದ್ದು ಮೊದಲ ಹಂತವಾದರೆ; ಸಂಪ್ರದಾಯಗಳಾಗಿದ್ದು ಎರಡನೆಯ

ಹಂತ. ಈ ಎರಡು ಸಂಪ್ರದಾಯಗಳನ್ನು ಆರಂಭದಲ್ಲಿ ಸಂಘಗಳೆಂದು ಪರಿಗಣಿಸುವುದೇ ಸೂಕ್ತ. ಎರಡೂ ಸಂಘಗಳ ಮಧ್ಯದ ಸೇತುಕೊಂಡಿಯಾಗಿ ಇನ್ನೊಂದು ಸಂಘವೂ ಉತ್ತರದಲ್ಲಿ ಉದಯವಾಯ್ತು ಅದುವೇ 'ಯಾಪನೀಯ ಸಂಘ' ಹೀಗೆಯೇ ಜೈನಧರ್ಮದ ಮುನಿಗಳಲ್ಲಿ ಸಂಘಬೇಧಗಳಾಗಿದ್ದರಿಂದ ದಿಗಂಬರ ಸಂಪ್ರದಾಯದವರಿಗೆ ಮೂಲಸಂಘದವರು ಎಂದಿರಲಿಕ್ಕೂ ಸಾಕು. ಇದೇ ಮುಂದೆ 'ಮೂಲ ಸಂಘ'ವಾಯ್ತು.

## ೨.೧ ನಿರ್ಗ್ರನ್ಥ ಮಹಾಶ್ರಮಣ ಸಂಘ.

ಕರ್ನಾಟಕ ಪರಿಸರದ ಜೈನಧರ್ಮದಲ್ಲಿ ನಿರ್ಗ್ರನ್ಥ ಮಹಾಶ್ರಮಣ ಸಂಘವೇ ಅಗ್ರಗಣ್ಯ. ನಿರ್ಗ್ರನ್ಥ ಎಂದರೆ ದಿಗಂಬರ ಎಂದರ್ಥ. ಮೂಲಸಂಘ ಎಂಬ ಪದಬಳಕೆಯೂ ಈ ಸಂಘಕ್ಕಿದೆ. ಅಖಂಡ ಜೈನಧರ್ಮದ ಮುನಿಸಮುದಾಯದಲ್ಲಿ ಮೂಲಸಿದ್ಧಾಂತದ ಬಗೆಗೆ ಭಿನ್ನಾಭಿಪ್ರಾಯಗಳಿಂದ ಒಡಕುಂಟಾಗಿ ಕೆಲವೊಂದಿಷ್ಟು ಮುನಿಗಳು ಹೊಸ ನಿಯಮಗಳನ್ನು ಅನುಸರಣೆಗೆ ತಂದರು ಅವರೆ ಮುಂದೆ ಶ್ವೇತಪಟ ಮತ್ತು ಯಾಪನೀಯ ಸಂಘವೆಂಬ ಪ್ರತ್ಯೇಕ ಮುನಿ ಪರಿವಾರ ಕಟ್ಟಿಬೆಳೆಸಿದರು. ಜೈನಧರ್ಮದ ಮೂಲಸಿದ್ಧಾಂತವನ್ನು ಅನುಸರಿಸುವ ಮುನಿಗಳು ತಮ್ಮನ್ನು ಮೂಲ ಮುನಿಸಂಘದವರೆಂದು ಕರೆದುಕೊಳ್ಳುವ ರೂಢಿ ಚಾಲ್ತಿಗೆ ಬಂದು ಅದು ಹಾಗೆ ನಿಂತು 'ಮೂಲಸಂಘ' ಎಂಬ ಪದ ಸೃಷ್ಟಿಯಾಯಿತು. ಕಾಲಾನಂತರದಲ್ಲಿ ನಿರ್ಗ್ರನ್ಥ ಮಹಾಶ್ರಮಣ ಸಂಘ ಎಂಬ ವಿಳಾಸಿಕೆ ಮರೆಯಾಗಿ 'ಮೂಲಸಂಘ' ಎಂಬ ಸಂಬೋಧನೆಯೇ ಶಾಸನಗಳಲ್ಲಿ ನಿಂತಿತು. ಮೂಲಸಂಘವನ್ನು ಉಲ್ಲೇಖಿಸುವ ಸಾವಿರಾರು ಶಾಸನಗಳು ಕರ್ನಾಟಕ ಪರಿಸರದಲ್ಲಿವೆ.

ಮೂಲಸಂಘದಲ್ಲಿ ಮತ್ತೆ ಉಪಸಂಘಗಳನ್ನಾಗಿ ಮಾಡಿದವರು ಆಚಾರ್ಯ ಅರ್ಹದ್ವಲಿಗಳು. ಇವರು "ಐದು ವರುಷಕ್ಕೊಮ್ಮೆ ನೂರು ಯೋಜನದೊಳಗೆ ವಾಸಿಸುವ ಮುನಿಗಳನ್ನೆಲ್ಲಾ ಒತ್ತಟ್ಟಿಗೆ ಕೂಡಿಸುತ್ತಿದ್ದರು. ಹೀಗೆ ಎಲ್ಲ ಮುನಿಗಳನ್ನು ಒಮ್ಮೆ ಕರೆಯಿಸಿದಾಗ ಅವರು ಎಲ್ಲ ಮುನಿಗಳು ಬಂದಿರಾ? ಎಂದು ಸಮೂಹವನ್ನು ಉದ್ದೇಶಿಸಿ ಕೇಳಿದರು. ಅದಕ್ಕೆ 'ಭಗವಾನ್' ನಾವೆಲ್ಲ ನಮ್ಮ ಸಂಘಗಳ ಸಹಿತ ಬಂದಿದ್ದೇವೆ ಎಂಬ ಉತ್ತರವು ಕೇಳಬಂದಿತು. ಅದರಿಂದ ಆಚಾರ್ಯರು ಇನ್ನು ಮುಂದೆ ಜೈನಧರ್ಮ, ಮುನಿಗಳು ಪಂಗಡ-ಪಂಗಡಗಳಾಗಿ ಬಾಳತಕ್ಕವರು ಎಂದು ಗಮನಿಸಿ ಸಂಘಗಳನ್ನು ನಿರ್ಮಿಸಿದರು. ಆ ಸಮೂಹದಲ್ಲಿ ಗುಹೆಗಳಿಂದ ಬಂದ ತಪಸ್ವಿಗಳಿಗೆ ನಂದಿ, ವೀರ ಎಂದೂ, ಅಶೋಕ ವೃಕ್ಷದ ಅಡಿಯಿಂದ ಬಂದವರಿಗೆ ದೇವ, ಅಪರಾಜಿತ ಎಂದೂ ಪಂಚಸ್ತೂಪದಿಂದ ಬಂದವರಿಗೆ ಭದ್ರ, ಸೇನ ಎಂದೂ, ಶಾಲ್ಮಲೀವೃಕ್ಷದ ನೆರಳಿನಿಂದ ಆಗಮಿಸಿದವರಿಗೆ ಗುಣಧರ, ಗುಪ್ತ ಎಂದೂ ನಾಗಕೇಸರ ವೃಕ್ಷದಿಂದ ಬಂದವರಿಗೆ ಸಿಂಹ, ಚಂದ್ರ ಎಂದೂ ಸಂಜ್ಞೆಗಳನ್ನೂ ಇತ್ತರು.[೧೪]

"ಈ ಸಂಜ್ಞೆಗಳ ವಿಷಯದಲ್ಲಿ ಮತಭೇದಗಳು ಉಂಟು. ಅವುಗಳ ಉಲ್ಲೇಖವನ್ನೂ ಇಂದ್ರನಂದಿ ಆಚಾರ್ಯನು ಮಾಡಿದ್ದಾನೆ. ಕೆಲವರ ಮತದ ಪ್ರಕಾರ ಗುಹೆಯಿಂದ ಬಂದವರು 'ನಂದಿ', ಅಶೋಕವನದಿಂದ ಬಂದವರು 'ದೇವ', ಪಂಚಸ್ತೂಪದಿಂದ ಬಂದವರು 'ಸೇನ', ಶಾಲ್ಮಲೀವೃಕ್ಷದ ಮೂಲದಿಂದ ಬಂದವರು 'ವೀರ' ಮತ್ತು 'ಖಂಡ', ಕೇಸರ ವೃಕ್ಷದವರು 'ಭದ್ರ, ಹಾಗೂ 'ಸಿಂಹ' ಎಂದು ಹೇಳಲಾಗುತ್ತಿದೆ. ಈ ಮತಭೇದಗಳಿಂದ ನಮಗೆ ಗೊತ್ತಾಗುವುದಿಷ್ಟೇ ಆಚಾರ್ಯ ಇಂದ್ರನಂದಿಗೂ ಕೂಡ ಈ ಸಂಘಗಳ ಪೂರ್ಣಜ್ಞಾನವಿರಲಿಲ್ಲ ಅದಕ್ಕಾಗಿ ಯಾವ ಸಂಘಕ್ಕೆ ಯಾವ ಸಂಜ್ಞೆಯನ್ನು ಯಾಕೆ ಕೊಡಲಾಯಿತೆಂಬುದೂ ಗೊತ್ತಾಗುವುದಿಲ್ಲ. ಇವೆಲ್ಲ ಸಂಜ್ಞೆಗಳಲ್ಲಿ ನಂದಿ, ಸೇನ, ದೇವ ಮತ್ತು ಸಿಂಹ ಈ ಹೆಸರುಗಳು ಹೆಚ್ಚು ಪರಿಚಿತವಾಗಿವೆ. ಭಟ್ಟಾರಕ ಇಂದ್ರನಂದಿ ಮೊದಲಾದವರು ಅರ್ಹದ್ಬಲಿ ಆಚಾರ್ಯರಿಂದ ಈ ನಾಲ್ಕು ಸಂಘಗಳು ಸ್ಥಾಪಿಸಲ್ಪಟ್ಟವೆಂದು ಉಲ್ಲೇಖಿಸುತ್ತಾರೆ".[೨೪೩] ಶಾಸನಗಳಲ್ಲಿ ಮಾತ್ರ ಇವುಗಳನ್ನು 'ಸಂಘ' ಎನ್ನದೇ 'ಗಣ' ಎಂದು ಪರಿಗಣಿಸಿದ್ದೇ ಹೆಚ್ಚು. ಮೂಲಸಂಘದ ಪ್ರಭಾವಲಯದಿಂದ ಹೊರಬರಲಾದೇ ನಂದಿ, ಸೇನ, ದೇವ, ಸಿಂಹ ಮುನಿಗುಂಪುಗಳು ಸಂಘ ಎಂಬ ಸ್ವತಂತ್ರ ಘಟಕಗಳಾಗದೆ ಮೂಲಸಂಘದ ಅಡಿಯಲ್ಲಿ ವಿಲೀನವಾಗಿ ಗಣಗಳಾದವು. ಉದಾ ದೇವಗಣ, ಭದ್ರಗಣ, ಸೇನಗಣ, ಸಿಂಹಗಣ.

ಸಂಘದ ಅಡಿಯಲ್ಲಿ ಗಣಗಳು ಶಾಸನಗಳಲ್ಲಿ ಉಲ್ಲೇಖವಾಗಿವೆ. "ಒಬ್ಬ ಆಚಾರ್ಯನ ನೇತೃತ್ವದಲ್ಲಿರುವ ಮುನಿಗಳ ಸಮುದಾಯವನ್ನೇ ಗಣ ಎಂದು ಕರೆಯಲಾಗುತ್ತದೆ. ಗಣದ ಶಾಖೆಗಳನ್ನು ಗಚ್ಛ ಎಂದು ಕರೆಯಲಾಗುತ್ತದೆ. ಗಚ್ಛವನ್ನು ಏಕಾಚಾರ್ಯ ಪರಿವಾರ: ಎಂದು ವಿವರಿಸಲಾಗಿದೆ. ಬಹುಶ: ಗಣ, ಗಚ್ಛಗಳೆರಡೂ ರಚನೆಯಲ್ಲಿ ಒಂದೇ ಆಗಿದ್ದು ಗಣವು ದೊಡ್ಡ ಗುಂಪನ್ನು, ಗಚ್ಛವು ಅದರಲ್ಲಿನ ಒಳಗುಂಪನ್ನು ಸೂಚಿಸುತ್ತದೆ. ಅನ್ವಯಗಳ ಅಥವಾ ಕುಲಗಳ ಸಮುದಾಯವೇ ಗಣ ಇವುಗಳಲ್ಲಿ ಕೆಲವು ವ್ಯಕ್ತಿಗಳ ಹೆಸರುಗಳನ್ನೂ ಇನ್ನು ಕೆಲವು ಊರುಗಳ ಹೆಸರನ್ನೂ ಇಟ್ಟುಕೊಂಡಿವೆ. ಯಾವುದೊ ಸಂಘದಿಂದ ಹೊರಟು ಬೇರೆಕಡೆ ಶಾಖೆಗಳನ್ನು (ಗಣ) ಸ್ಥಾಪಿಸಿದವರು ಮೊದಲು ಹೆಸರು ಹೇಳಿಕೊಳ್ಳುವಾಗ ತಮ್ಮ ಸಂಘದ ಹೆಸರನ್ನು ಹೇಳಿಕೊಳ್ಳುತ್ತಿದ್ದರು. ಈ ಗಣಗಳಿಂದ ಹೊರಟು ಬೇರೆ ಕಡೆ ಹೋಗಿ ಬೇರೆ ಶಾಖೆ (ಗಚ್ಛ)ಗಳನ್ನು ಸ್ಥಾಪಿಸಿದವರು ತಮ್ಮ ಹಿಂದಿನ ಸಂಘಗಳೆರಡನ್ನೂ ಹೇಳಿಕೊಂಡರು; ಇವರು ಮತ್ತೆ ಬೇರೆ ಕಡೆ ಹೋಗಿ ಬೇರೆ ಶಾಖೆ (ಅನ್ವಯ)ಗಳನ್ನು ಸ್ಥಾಪಿಸಿದಾಗ ಹಿಂದಿನ ಸಂಘ, ಗಣ, ಗಚ್ಛಗಳನ್ನು ಹೇಳಿಕೊಂಡಿರಬೇಕು"[೨೪೪]

ಮೂಲಸಂಘ ಮುನಿಗಳು ದೇಶ ಪರ್ಯಟನೆಯ ದೃಷ್ಟಿಯಿಂದ ಅನೇಕ ಗಣ, ಗಚ್ಛ ಅನ್ವಯ ಎಂಬ ಗಣಬೇಧವನ್ನು ಮಾಡಿದರು. ಇದರ ಒಳ ಪ್ರಭೇದಗಳಾಗಿ ಬಳಿ ಮತ್ತು ವಿಭವಗಳೂ ಹುಟ್ಟಿದವು. "ಮೂರು ಮುನಿಗಳ ಗುಂಪಿಗೆ ಗಣವೆಂದೂ ಏಳು ಜನ ಮುನಿಗಳ ಸಂಚಾರಿ ತಂಡಕ್ಕೆ ಗಚ್ಛವೆಂದೂ ಮುನಿಸಮುದಾಯಕ್ಕೆ ಒಕ್ಕೂಟಕ್ಕೆ ಸಂಘವೆಂದೂ ಹೇಳಿವೆ"[೨೪೫] ಈ ರೀತಿಯ ಸಂಘ,

ಗಣ, ಗಚ್ಛ, ಅನ್ವಯ ಹಾಗೂ ಬಳಿಗಳು ಕೇವಲ ಆ ಶಾಸನೋಕ್ತ ಮುನಿಗಳೂ ಹಾಗೂ ಕಂತಿಯರು ಯಾವ ಪರಂಪರೆಗೆ ಸೇರಿದವರೆಂಬುದನ್ನು ಗುರುತಿಸುವ ಸಲುವಾಗಿ ದಾಖಲಾಗಿವೆಯೇ ಹೊರತು ಮುನಿಗಳ ಶ್ರೇಣಿಗಳನ್ನು ಗುರುತಿಸಲು ಅಲ್ಲ.[೨೪೬]

ಮೂಲಸಂಘಾವಳಿಯ ಗಣ, ಗಚ್ಛ, ಅನ್ವಯ, ಬಳಿಯ ಪರಂಪರೆಯ ಹೆಸರುಗಳನ್ನು ಹಾವೇರಿ ಪರಿಸರದ ಮತ್ತು ನಾಡಿನ ಜೈನ ಶಾಸನಗಳಿಂದ ಕೆಲವನ್ನು ಹೀಗೆ ಗುರುತಿಸಬಹುದು.

ಮೂಲಸಂಘ

↓

ದೇಸಿಯಗಣ. ಸೂರಸ್ಥಗಣ. ಕಾಣೂರುಗಣ.
ಬಳಗಾರಗಣ. ಸಗರಗಣ. ಸಿಂಹಗಣ.
ದೇವಗಣ. ಸೇನಗಣ. ಭದ್ರಗಣ.

↓

ಮೇಷಪಾಷಾಣಗಚ್ಛ.
ಪೊಸ್ತಕಗಚ್ಛ.
ಪೊಗರಿಗಚ್ಛ.

↓

ಚಂದ್ರಿಕಾವಾಟಾನ್ವಯ.
ಕೊಂಡಕುಂದಾನ್ವಯ.
ಪೂಜ್ಯಪಾದಾನ್ವಯ.
ಚಿತ್ರಕೂಟಾನ್ವಯ.
ವಳ್ಳಕರಾನ್ವಯ.
ಲತಾನ್ವಯ.

↓

ಇಂಗುಳೇಶ್ವರಬಳಿ.
ವಡ್ಡದೇವರಬಳಿ.
ವಾಣದ ಬಳಿ.

**೨.೨ ಶ್ವೇತಪಟ ಮಹಾಶ್ರಮಣ ಸಂಘ.**

"ಸ್ಥೂಲಭದ್ರಾಚಾರ್ಯರ್ ಮೊದಲಾಗಿ ಕೆಲಂಬರ್ ಕೊಳಲೊಲ್ಲದವರ್ ಜಿನಕಲ್ಪಂ ಸ್ಥವಿರಕಲ್ಪಮೆಂದೆರಡು ಭೇದಂ ಮಾಡಿ ಅರ್ಧಗಪ್ಪಡದ ತೀರ್ಥಮಂ ನೆಗಟ್ಚಿದರ್"[೨೪೭] ಎಂಬ

ವಡ್ಡಾರಾಧನೆಯ ವಾಕ್ಕು ಶ್ವೇತಪಟ (ಶ್ವೇತಾಂಬರ) ಪರಂಪರೆಯ ಹುಟ್ಟಿನ ಮೂಲ ಹೇಳುವಂತದ್ದು. ಇಲ್ಲಿ ಜಿನಕಲ್ಪ ಎಂದರೆ ದಿಗಂಬರ; ಸ್ಥವಿರ ಕಲ್ಪ ಎಂದರೆ ವಸ್ತ್ರಧಾರಿ ಎಂದೇ ಅರ್ಥೈಯಿಸಿಕೊಳ್ಳಬೇಕು. ಜಿನಕಲ್ಪದಿಂದ ಬೇರ್ಪಟ್ಟ ಮುನಿಸಮುದಾಯವು ಸ್ಥವಿರಕಲ್ಪದತ್ತ ಮುಖಮಾಡಿ ವಸ್ತ್ರಧಾರಣೆಯ ಪದ್ಧತಿ ಆರಂಭಿಸಿದಾಗಲೆ ಶ್ವೇತಪಟರ ಉದಯವಾಯ್ತು. ಎಷ್ಟು ಪ್ರಮಾಣದ ಬಟ್ಟೆ ಎಂಬುದಕ್ಕೆ ವಡ್ಡಾರಾಧನೆಕಾರ ಒಂದು ಪರಿಮಾಣವನ್ನು ಗುರುತಿಸಿದ್ದಾನೆ. ಅದು ಮರ್ಮಾಂಗಕ್ಕೆ ಸುತ್ತುವರಿದ ಬಟ್ಟೆಯಾಗಿದ್ದಂತೆ ತೋರುತ್ತದೆ. ಆದ್ದರಿಂದಲೇ ಅರ್ಧಗಪ್ಪಡ (ಅರ್ಧ = ತುಂಡು, ಗಪ್ಪಡ>ಕಪ್ಪಡ>ಬಟ್ಟೆ) ಎಂಬುದನ್ನು ಸೂಚ್ಯವಾಗಿ ಹೇಳಿದ್ದಾನೆ. ಈ ಅರ್ಧಗಪ್ಪಡದವರೇ ಮುಂದೆ ಶ್ವೇತಪಟ (ಸಚೇಲಕ) ಸಂಪ್ರದಾಯ ಹುಟ್ಟಲು ಮಾರ್ಗವಾದರು. ಇವರು ಯಾಪನೀಯರೆಂದು "ಅರ್ಧಪಾಲಕ, ಚೇಲಖಣ್ಡ, ಅರ್ಧಕರ್ಪಟ, ಚೇಲಕ, ಫಾಲಕ. ಶಾಟಕ, ಪಟ, ಚಾದರ, ಸಾದರ, ತಟ್ಟೀ, ಕರ್ಪಟ, ಏಕನಾಟಕ, ಪಿಲೋತಕಖಣ್ಡ"[೨೪೮] ಶಬ್ದಗಳು ಸಂವಾದಿಯಾದವು ಎಂದು ನಾಡೋಜ ಹಂಪನಾರವರು ಗುರುತಿಸಿದ್ದಾರೆ.

"ಜಿನಧರ್ಮದ ೨೪ ತೀರ್ಥಂಕರರಲ್ಲಿ ಋಷಭಜಿನರು ಮತ್ತು ಮಹಾವೀರ ಜಿನರು ಅಚೇಲಕ (ದಿಗಂಬರ)ರಾದರೆ ಉಳಿದ ೨೨ ಜಿನರು ಸಚೇಲಕ (ವಸ್ತ್ರಧಾರಿ)ರೆಂಬ ಸೂಚನೆಯಿದೆ" ಸಚೇಲಕರಾದ ೨೨ ತೀರ್ಥಂಕರುಗಳಲ್ಲೇ ಶ್ವೇತಾಂಬರ ಸಂಪ್ರದಾಯದ ಮೂಲಧಾತು ಇದ್ದು, ಅದು ವರ್ಧಮಾನ ಮಹಾವೀರ ತೀರ್ಥಂಕರ ಉತ್ತರೋತ್ತರ ಕಾಲದಲ್ಲಿ ಸ್ವತಂತ್ರ ಅಸ್ಥಿತ್ವವನ್ನು ಕಂಡುಕೊಂಡಿದೆ. ಈ ಶ್ವೇತಾಂಬರರು "ಪ್ರಾಚೀನ ಕಾಲದಲ್ಲಿ ಇವರೂ ನಗ್ನರಾಗಿರುತ್ತಿದ್ದರು. ವಸ್ತ್ರಧಾರಣ ಮಾಡುವುದನ್ನು ಸ್ವೀಕರಿಸಿದ ಮೇಲೆಯೂ ಕ್ರಿಸ್ತಶಕ ಆರನೆಯ-ಏಳನೆಯ ಶತಮಾನಗಳವರೆಗೆ ಅವಶ್ಯವೆನಿಸಿದಾಗ ಮಾತ್ರ ಕಟಿವಸ್ತ್ರವೊಂದನ್ನು ಧರಿಸುತ್ತಿದ್ದರು. ಏಳನೆಯ ಶತಮಾನದ ಶ್ವೇತಾಂಬರಾಚಾರ್ಯನಾದ ಹರಿಭದ್ರಸೂರಿಯು ತನ್ನ ಸಂಭೋಧ ಪ್ರಕರಣದಲ್ಲಿ ಆ ಕಾಲದ ಸಾಧುಗಳ ವರ್ಣನೆಯನ್ನು ಮಾಡುವಾಗ, 'ಕಾರಣ ಇಲ್ಲದೆಯೂ ಕಟಿವಸ್ತ್ರವನ್ನು ಉಪಯೋಗಿಸುತ್ತಾರೆ, ಇದು ಅವರ ಮನಸ್ಸಿನ ಕ್ಲೈಬ್ಯವನ್ನು ವ್ಯಕ್ತಪಡಿಸುತ್ತದೆ, ಎಂದು ಮೊದಲಾಗಿ ಹೇಳಿದ್ದಾನೆ. ಈ ಪ್ರಕಾರ ಮೊದಮೊದಲು ಅವಶ್ಯವೆನಿಸಿದಾಗ ಲಂಗೋಟಿಯನ್ನು ಹಾಕುತ್ತಿದ್ದರು. ಮುಂದೆ ಬಿಳಿಯ ಅರಿವೆಗಳನ್ನು ಧರಿಸತೊಡಗಿದರು"[೨೪೯] ಬಹುಶ: ಮುಂದೆ ಈ ಕ್ರಮವೇ ಶ್ವೇತಾಂಬರ (ಶ್ವೇತ + ಅಂಬರ) ಎಂಬ ಪದನಿಷತ್ತಿಗೆ ಕಾರಣವಾದಂತಿದೆ.

ಶ್ವೇತಾಂಬರ ಶ್ರವಣರ ಸಂಚಾರ ಕರ್ನಾಟಕದಲ್ಲಿ ವಿರಳ. ಇಲ್ಲಿ ದಿಗಂಬರ ಮುನಿಗಳೇ ಬಾಹುಳ್ಯವಾಗಿದ್ದರು. ಆದರೂ ಬೆರಳೆಣಿಕೆಯ ಶ್ವೇತಾಂಬರ ಹೆಜ್ಜೆಗುರುತುಗಳು ಕರ್ನಾಟಕ ಪರಿಸರದಲ್ಲಿ ಲಭ್ಯವಿವೆ. "ಹರಿಭದ್ರನ ಹೇಳಿಕೆಯ ಪ್ರಕಾರ ಪಾದಪ್ತಾಚಾರ್ಯರೆಂಬ ಜೈನಗುರುಗಳು ಕ್ರಿ.ಶ. ೧ನೆಯ ಶತಮಾನದಲ್ಲಿ ದಕ್ಷಿಣಕ್ಕೆ ಬಂದಾಗ ಮಾನ್ಯಖೇಟದ ಸುತ್ತಮುತ್ತ ಶ್ವೇತಾಂಬರರಿದ್ದರು."[೨೫೦] ಜೈನಧರ್ಮದ ಒಂದು ಮುನಿಪಂಥವಾದ 'ಯಾಪನೀಯ' ಸಂಘವನ್ನು

ಕ್ರಿ.ಶ. ೧೫೯ರಲ್ಲಿ, ಕಲ್ಯಾಣ ಪಟ್ಟಣದಲ್ಲಿ ಶ್ವೇತಾಂಬರ ತನ್ನ ಯತಿಯಾದ ಶ್ರೀಕಲಶನಿಂದ ಉದ್ಘಾಟಿತವಾಯಿತೆಂದು ದೇವಸೇನ ಸೂರಿಯು (ಕ್ರಿ.ಶ. ೯೩೩) 'ದರ್ಶನ ಸಾರ' ಗ್ರಂಥದಲ್ಲಿ ಹೇಳಿದ್ದಾನೆ"[೨೫೧] ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಚಾರ ಶ್ರೀಕಲಶ ಮುನಿಯ ಪೂರ್ವ ಮುನಿ ಸಂಪ್ರದಾಯವನ್ನು. ಅವನು ಯಾಪನೀಯ ಸಂಘವನ್ನು ಹುಟ್ಟುಹಾಕುವ ಮುನ್ನ ಶ್ವೇತಾಂಬರನಾಗಿದ್ದ. ಕರ್ನಾಟಕದಲ್ಲಿ ದಿಗಂಬರ ಪಂಥವೇ ಹೆಚ್ಚಾಗಿದ್ದರಿಂದ ಶ್ರೀಕಲಶ ಮುನಿಯು ಆ ಸಂಪ್ರದಾಯವನ್ನೇ ಅನುಸರಿಸುವ ಅನಿವಾರ್ಯತೆ ತೋರಿದಂತೆ ಕಾಣುತ್ತದೆ. ಆದರೆ ಶ್ವೇತಾಂಬರ ಸಂಪ್ರದಾಯಗಳು ಅವನಲ್ಲಿ ರಕ್ತಗತವಾಗಿದ್ದರಿಂದ ಅದನ್ನೂ ಬಿಡಲಾಗಲಿಲ್ಲ. ಆಗ ಶ್ರೀಕಲಶ ಮುನಿ ಶ್ವೇತಾಂಬರ ಮತ್ತು ದಿಗಂಬರ ಪಂಥದ ತತ್ವ-ಸಿದ್ಧಾಂತಗಳನ್ನು ಅನುಸಂಧಾನಿಸಿಕೊಂಡು ಜಾವಣಿ (ಯಾಪನೀಯ) ಮುನಿಸಂಘವನ್ನು ಹುಟ್ಟುಹಾಕಿದ. ಇಲ್ಲಿದ್ದ ಶ್ವೇತಪಟ ಮಹಾಸಂಘದವರು ಯಾಪನೀಯ ಸಂಘದಲ್ಲಿ ಸೇರಿಕೊಂಡರು ಮತ್ತು ಕರ್ನಾಟಕದಲ್ಲಿ ಶ್ವೇತಾಂಬರ ಸಂಪ್ರದಾಯ ಕೊನೆಗಾಣಲು ಕಾರಣರಾದರು. ಆದ್ದರಿಂದಲೇ ಉತ್ತರ ಕರ್ನಾಟಕದ ಭಾಗಗಳಲ್ಲಿ ಯಾಪನೀಯ ಸಂಘ ಹೆಚ್ಚು ಪ್ರಸರಣಕ್ಕೆ ಬಂದಿತು.

ಶ್ವೇತಪಟ ಮಹಾಶ್ರಮಣ ಸಂಘದ ಪದಶ: ನೇರ ಮತ್ತು ಮೊದಲ ಉಲ್ಲೇಖ ದೊರೆಯುವುದು ಕದಂಬ ವಿಜಯ ಶಿವಮೃಗೇಶ ವರ್ಮನ ನಾಲ್ಕನೆಯ ವರ್ಷದ ದೇವಗಿರಿ ತಾಮ್ರಶಾಸನದಲ್ಲಿ.[೨೫೨] ಅರಸನಾದ ಶಿವಮೃಗೇಶವರ್ಮನು ವೈಜಯಂತಿ (ಬನವಾಸಿ)ಯಲ್ಲಿದ್ದು ಆಳುತ್ತಿದ್ದಾಗ 'ಬೃಹತ್ಪರಲೂರ' (ಇಂದಿನ ದೇವಗಿರಿ ಹಾವೇರಿ ತಾ/ಜಿ) ಜೇಂದ್ರನಿಗೆ, ಇಲ್ಲಿಯೇ ಇರುವ ಶ್ವೇತಪಟ ಮಹಾಶ್ರಮಣ ಸಂಘಕ್ಕೆ ಮತ್ತು ನಿರ್ಗ್ರಂಥ ಮಹಾಶ್ರಮಣ ಸಂಘಕ್ಕೆ ಕಾಲವಜ್ಞೊಗ ಎಂಬ ಗ್ರಾಮವನ್ನು ಮೂರು ಭಾಗಗಳನ್ನಾಗಿ ಮಾಡಿ ಅದರಿಂದ ಬರುವ ಆದಾಯವನ್ನು ಇವರ ಉಪಭೋಗಕ್ಕೆ ಬಿಟ್ಟ. ಕರ್ನಾಟಕದ ಮಧ್ಯ ಪ್ರದೇಶವಾದ ದೇವಗಿರಿಗೆ ಶ್ವೇತಾಂಬರರು ಬಂದಿದ್ದರೆಂದರೆ ಅವರು ಈ ನಾಡಿನಾದ್ಯಂತ ಸಂಚರಿಸಿದ್ದಾರೆಂದೇ ಅರ್ಥ. ಆದರೆ ಇಲ್ಲಿ ದಿಗಂಬರ ಸಂಪ್ರದಾಯದ ಮುನಿಸಂಘದ ಮುನಿಗಳನ್ನು ಒಪ್ಪಿ ಅಪ್ಪಿದ ಜನ ಶ್ವೇತಾಂಬರ ಸಂಪ್ರದಾಯಕ್ಕೆ ಮಾನ್ಯಮಾಡಲಿಲ್ಲವೆಂದು ತೋರುತ್ತದೆ. ಅಂತೆಯೇ ಪ್ರಾಚೀನ ಕರ್ನಾಟಕದಲ್ಲಿ ಇವರ ಪ್ರಭಾವ ಇಳಿಮುಖವಾಯ್ತು. ಇಲ್ಲವಾಯಿತು.

ಶ್ವೇತಾಂಬರ ಮುನಿಸಂಘ ಯಾವೊಬ್ಬ ಮುನಿಯ ನಿಖರವಾದ ಉಲ್ಲೇಖ ಕನ್ನಡ ಶಾಸನಗಳಲ್ಲಿ ಗಮನಕ್ಕೆ ಬಂದಿಲ್ಲ. ಅಂತೆಯೇ ಅವರ ಗಣ, ಗಚ್ಛ, ಬಳಿ, ಅನ್ವಯ ಪರಂಪರೆ ಇಲ್ಲಿಲ್ಲ. ಮುನಿ ಸಮುದಾಯ ಹೆಚ್ಚು ಹೆಚ್ಚು ಇದ್ದಹಾಗೆ ಈ ಗಣ, ಗಚ್ಛ, ಬಳಿ, ಅನ್ವಯ ಪರಂಪರೆ ಹುಟ್ಟಿಕೊಂಡವು ಎಂಬುದನ್ನು ಅರಿಯಬೇಕು. ದಿಗಂಬರರಲ್ಲಿ ಈ ಕ್ರಮ ಸಾಧ್ಯವಾಯ್ತು ಹಾಗೆಯೇ ಯಾಪನೀಯರಲ್ಲೂ ಇದು ಅನುಸರಣೆಯಾಗಿದೆ. ಶ್ವೇತಾಂಬರ ಮುನಿಸಂಖ್ಯೆ ಕರ್ನಾಟಕದಲ್ಲಿ

ಇರದೇ ಇದ್ದುದರಿಂದ ಗಣಪರಂಪರೆಯ ವಿಚಾರ ಗೌಣ. ಆದರೆ ಉತ್ತರ ಭಾರತದಲ್ಲಿ ಶ್ವೇತಾಂಬರರ ಬಾಹುಳ್ಯವಿದ್ದರಿಂದ ಅಲ್ಲಿ ಮುನಿಗಚ್ಛಗಳು ಇದ್ದುವು.

ಶ್ವೇತಾಂಬರರಲ್ಲಿ ೮೪ ಗಚ್ಛಗಳಿದ್ದವು. ಅವುಗಳಲ್ಲಿ "ಉಪಕೇಶಗಚ್ಛ, ಖರತರಗಚ್ಛ, ತಪಗಚ್ಛ, ಪಾರ್ಶ್ವಚಂದ್ರಗಚ್ಛ, ಸಾರ್ಧಪೌರ್ಣಿಮೀಯಗಚ್ಛ, ಅಂಚಲಗಚ್ಛ, ಆಗಮಿಕಗಚ್ಛ"[೨೫೩] ಎಂಬಿತ್ಯಾದಿಗಳು ಪ್ರಮುಖವಾದವುಗಳು. ಇವು ದಿಗಂಬರ ಸಂಪ್ರದಾಯದ ಗಣಪರಂಪರೆಯಂತಿರದೆ ಇವೇ ಕೆಲವೊಂದು ಹೊಸ ಸಿದ್ಧಾಂತಗಳನ್ನು ಅನುಷ್ಠಾನಗೊಳಿಸಿ ಸ್ವತಂತ್ರ ಸಂಪ್ರದಾಯವಾಗಲು ಹವಣಿಸುತ್ತಿದ್ದವು.

**೨.೩ ಯಾಪನೀಯ ಸಂಘ.**

ನಿರ್ಗ್ರಂಥ ಮತ್ತು ಶ್ವೇತಪಟ ಮುನಿಸಂಘಗಳಷ್ಟೇ ಘೋರವಾಗಿ ಬೆಳೆದ ಇನ್ನೊಂದು ಜಿನಮುನಿ ಸಂಘ ಯಾಪನೀಯ ಸಂಘ. ದಿಗಂಬರ ಮುನಿಗಳ ನಗ್ನತ್ವ, ಶ್ವೇತಾಂಬರ ಮತ್ತು ದಿಗಂಬರ ಕೆಲವು ತತ್ವಗಳ ಸಮಾಗಮ ಯಾಪನೀಯರು. ದಿಗಂಬರ ಮುನಿಗಳು ಅಚೇಲಕರು, ಶ್ವೇತಾಂಬರ ಮುನಿಗಳು ಸಚೇಲಕರಾದರೆ ಇವರು ಅರ್ಧ ಚೇಲಕರು. ವಡ್ಡಾರಾಧನೆಯಲ್ಲಿ ಅರ್ಧಚೇಲಕರನ್ನೇ 'ಅರ್ಧಗಪ್ಪಡ'ದವರೆನ್ನಲಾಗಿದೆ. "ಅರ್ಧಪಾಲಕ, ಅರ್ಧಕರ್ಪಟಕ, ಅರ್ಧಪಟ, ಏಕಸಾಟಕ, ಚೇಲಖಣ್ಡ, ಚೇಲಕ, ಫಾಲಕ, ಪಿತೋತಕಖಣ್ಡ, ಶಾಟಕ, ಚಾದರ, ಸಾದರ, ತಟ್ಟಿ- ಎಂಬೆಲ್ಲ ಶಬ್ದರೂಪಗಳು ನಿರ್ದೇಶಿಸುವುದು ಒಂದೇ ಅರ್ಥವಿರುವ, ಒಂದೇ ಬಗೆಯ ಮುನಿ ಸಂಪ್ರದಾಯವನ್ನು. ಈ ಸವಣ ಸಂಪ್ರದಾಯವು ಅಚೇಲಕ (ದಿಗಂಬರ) ಮತ್ತು ಸಚೇಲಕ (ಶ್ವೇತಾಂಬರ) ಸಂಪ್ರದಾಯಗಳ ನಡುವಣ ಮಾರ್ಗವಾಗಿತ್ತು. ಅರ್ಧಫಾಲಕ ಪದ್ಧತಿಯ ಇನ್ನೊಂದು ಹೆಸರು ಅರ್ಧಚೇಲಕ ಎಂಬುದು"[೨೫೪] ಇವರೇ ಯಾಪನೀಯ ಸಂಪ್ರದಾಯದವರು. ಹಾಗೇ ನೋಡಿದರೆ ಈ ಅರ್ಧಚೇಲಕ ಸಂಪ್ರದಾಯದವರೇ ಮುಂದೇ ಶ್ವೇತಾಂಬರರಾದಂತೆ ತೋರುತ್ತದೆ.[೨೫೫]

"ಅರ್ಧಪಾಲಕ (ಅರ್ಧಚೇಲಕ) ಸಂಪ್ರದಾಯದ ಮುನಿಸಂಘವು ಉತ್ತರದ ಕಡೆಯಿಂದ ಕರ್ನಾಟಕಕ್ಕೆ ಆಗಮಿಸಿತು ಮತ್ತು ಇಲ್ಲಿ 'ಯಾಪನೀಯ' ಎಂಬ ಹೆಸರನ್ನು ಪಡೆಯಿತು ಇದು ಕರ್ನಾಟಕಕಕ್ಕೆ ಎರಡನೆಯ ಶತಮಾನದ ಮಧ್ಯಭಾಗದಲ್ಲಿ ಇಲ್ಲಿಗೆ ಪ್ರವೇಶಿಸಿತೆಂದು ದಾಖಲೆಗಳು ತಿಳಿಸಿವೆ. ದೇವಸೇನ ಸೂರಿಯು (ಕ್ರಿ.ಶ. ೯೩೪) ತನ್ನ 'ದರ್ಶನಸಾರ' ಎಂಬ ಪ್ರಾಕೃತ ಕೃತಿಯಲ್ಲಿ ಯಾಪನೀಯ ಸಂಘದ ಆವಿಷ್ಕಾರ ತೇದಿಯನ್ನು ನಮೂದಿಸಿದ್ದಾನೆ:

> ಕಲ್ಲಾಣೇ ವರಣಯರೇ ದುಣ್ಣಿಸವಿ ಪಂಚ ಉತ್ತರೇ ಜಾದೇ
> ಜಾವಣಿಯ ಸಂಘ ಭಾವೋ ಸಿರಿಕಲಸಾದೋ ಹುಸೇವಡದೋ॥

ವಿಕ್ರಮ ಸಂವತ್ಸರ ೨೦೫ರಲ್ಲಿ, ಅಂದರೆ ಕ್ರಿ.ಶ. ೧೪೮ರಲ್ಲಿ, ಶ್ರೀ ಕಲಶ ಎಂಬ ಶ್ವೇತಾಂಬರ ಸಾಧುವು 'ಜಾವಣಿಯ ಸಂಘ'ವನ್ನು ಸ್ಥಾಪನೆ ಮಾಡಿದನು. ವಡ್ಡಾರಾಧನೆ ಗ್ರಂಥದಲ್ಲೂ ಜಾಪುಲಿಸಂಘವನ್ನು ಇದೇ ಹಿನ್ನೆಲೆಗೆ ಹೊಂದಿಸಿ ಹೇಳಲಾಗಿದೆ.[೨೫೬]

ನಿರ್ಗ್ರನ್ಥ ಮಹಾಶ್ರಮಣ ಸಂಘದಷ್ಟೇ ಯಾಪನೀಯ ಸಂಘವು ಕರ್ನಾಟಕದ ಪರಿಸರದಲ್ಲಿ ಹುಲುಸಾಗಿ ಬೆಳೆಯಿತು. ಅದರಲ್ಲೂ ಉತ್ತರ ಕರ್ನಾಟಕದಲ್ಲಿ ಯಾಪನೀಯ ಸಂಘವೇ ಅಗ್ರಗಣ್ಯ. ಮೂಲಸಂಘದಂತೆ ಇದುವೂ ಸಹ ತನ್ನ ಸಂಘದ ಮುನಿ ಪರಿವಾರವನ್ನು ವಿಂಗಡಿಸಿ ಗಣ, ಗಚ್ಛಗಳನ್ನಾಗಿ ಮಾಡಿಕೊಂಡಿತ್ತು. ಇದು ಮುನಿಗಳು ದೇಶಪರ್ಯಟನೆಗೆ ಅನುಕೂಲವಾಗಲು ಮಾಡಿಕೊಂಡ ನಿಯಮವಷ್ಟೇ.

ಯಾಪನೀಯ ಸಂಘದಲ್ಲಿ, ಕಾಣೂರುಗಣ, ಕಾರೇಯಗಣ, ಕುಮುದಿಗಣ, ಕೋಟಿಮಡುವಗಣ, ಪರಲೂರುಗಣ, ಬಲತ್ಕಾರಗಣ (ಬಳಗಾರಗಣ), ವಂದಿಯೂರ್ಗಣ ವವಿಯೂರು ಗಣ, ಸೂರಸ್ಥಗಣ, ಪುನ್ನಾಗವೃಕ್ಷ ಮೂಲಗಣ ಎಂಬ ೧೦ ಗಣ ಪರಂಪರೆಗಳು, ಕೌಟೂರೂ ಗಚ್ಛ, ಚಿತ್ರಕೂಟಗಚ್ಛ, ತರಿಗಲ್‌ಗಚ್ಛ, ತಿಂತ್ರಿಣಿಗಚ್ಛ, ಮೇಷ ಪಾಷಾಣಗಚ್ಛ, ಸ್ವರ್ಣಪಾಷಣಗಚ್ಛ, ಎಂಬ ೦೬ ಗಚ್ಛ ಪರಂಪರೆಗಳನ್ನು ಹಂಪನಾರವರು ಗುರುತಿಸಿದ್ದಾರೆ.[೨೫೭] ಇವಷ್ಟೇ ಅಲ್ಲದೇ ಇನ್ನೂ ಹಲವಾರು ಗಣಗಳು, ಗಚ್ಛಗಳು ಯಾಪನೀಯ ಸಂಘದಲ್ಲಿದ್ದವು ಎಂಬುದು ೧೧-೧೨ ಶತಮಾನದ ಲಕ್ಕುಂಡಿ ಶಾಸನದಿಂದ ತಿಳಿದು ಬರುತ್ತದೆ.[೨೫೮] ಇದರಲ್ಲಿ ಯಾಪನೀಯ ಸಂಘದ ಹದಿನಾರು ಗಣಗಳನ್ನು ಹೆಸರಿಸಲಾಗಿದೆ. ಅವು ಮೂಲಗಣ, ಉಡಿಯೂರ್ಗಣ, ಕುಮುದಿಗಣ, ಬಲ್ಲುಂಕೆಗಣ, ಬಾಗಿಗಣ, ಚೆಂಗಾಣ ಗಣ, ಪುಷೇಣಗಣ, ನಾಮಗಣ, ಕ್ಷುದ್ರವಾದಿಗಣ, ಪುರುಷಗಣ, ಕಡುಂಮಡುಂದಲಯ ಗಣ, ಕಂಡೂರ್ಗಣ, ಜಾಂಬವಗಣ, ಧರಿಯಾಳಿಕ ಗಣ, ಬೆಳ್ಳಟ್ಟೆಗಣ, ಕಾರಿಯಗಣ, ಉಡಿಯೂರ್ಗಣ, ಕುಮುದಿಗಣ, ಕಂಡುರ್ಗಣ, ಕಾರಿಯಗಣಗಳನ್ನು ಹೊರತುಪಡಿಸಿ ಉಳಿದ ೧೨ ಗಣಗಳು ಹೊಸದಾಗಿ ಬೆಳಕಿಗೆ ಬಂದಿವೆ. ಯಾಪನೀಯ ಗಣಗಳ ಸಂಖ್ಯೆ ಈಗ ಒಟ್ಟು ೨೨ಕ್ಕೆ ಏರಿದಂತಾಗಿದೆ. ಇದೇ ಶಾಸನದಲ್ಲಿ ಸೊರ್ನ್ನಧಿಭಾರತಿ, ಶ್ವತಾಂಬ್ರರಾಜ, ರಾಜವರ್ತ್ತ, ಪಚ್ಚೆ, ಧಾತು, ವಜ್ರ, ವೈಡೂರ್ಯ, ಮೌಕ್ತಿಕ, ವಿದ್ರುಮ, ನೀಲ, ತಾರಕಾಂಶ, ಸೀಸ, ರತ್ನ, ಗೋಮದಿ, ಯಾಪನೀಯ ಸಂಘದ ಗಚ್ಛಗಳನ್ನು ಹೆಸರಿಸಲಾಗಿದೆ. ಇಷ್ಟೊಂದು ಗಣಗಳು, ಗಚ್ಛಗಳನ್ನು ಹೊಂದಿದ ಯಾಪನೀಯ ಸಂಘ ಕರ್ನಾಟಕದಲ್ಲಿ ವಿಫುಲವಾಗಿ ಹರಡಿತ್ತೆಂಬುದು ಸಾಬೀತಾಗುತ್ತದೆ.

ಯಾಪನೀಯ, ಯಾಪನಿಕ, ಜಾಪುಲಿ, ಜಾವಳಿಗೆ, ಅಪುಲಿ, ಯಾಪನ ಇತ್ಯಾದಿ ರೂಪಗಳಿಂದ ಪ್ರಸಿದ್ಧಿಯಾಗಿದ್ದ ಯಾಪನೀಯ ಸಂಘ ಶಾಸನಗಳು ತೇಂಗಳಿ ಸೇಡಂ (ಚಿತ್ತಾಪುರ ತಾ. ಗುಲ್ಬರ್ಗ ಜಿ) ಹಲಸಿ (ಬೆಳಗಾವಿ ಜಿ), ದೇವಗಿರಿ (ಹಾವೇರಿ ಜಿ), ಹೊಸಕೋಟೆ (ಬೆಂಗಳೂರು

ಜಿ), ಕಡಬ (ತುಮಕೂರು ಜಿ), ಸವದತ್ತಿ ಹೂಲಿ (ಬೆಳಗಾವಿ ಜಿ), ಲಕ್ಕುಂಡಿ ಹೊಸೂರು (ಗದಗ ಜಿ), ಅರಸಿಕೆರೆ, ಅಡಕೆ, ಸೇಡಂ (ಗುಲ್ಬರ್ಗ ಜಿ), ಪಡೆಸೂರು, ಅದರಗುಂಚಿ (ಧಾರವಾಡ ಜಿ) ಮುಂತಾದ ಕಡೆಗಳಲ್ಲಿ ದೊರೆತಿವೆ. ಈ ಸಂಘದ ಅಗ್ರಗಣ್ಯ ಮುನಿಗಳ ಒಂದು ಪಟ್ಟಿಯನ್ನು ಲಕ್ಕುಂಡಿ ಶಾಸನದಲ್ಲಿ ಗಮನಿಸಬಹುದು. ಅಕಲಂಕ, ಪಾಲ್ಯಕೀರ್ತಿ, ಸಿದ್ಧನಂಜ, ಮುನಿ ಪುಷ್ಪದಂತ, ಭೂತಬಲಿ, ಸಿವಕೋಟಿ, ಸಿಂಹನಂದಿ, ಮಾಘನಂದಿ, ಜಯಕೀರ್ತಿ, ಸುಭಕೀರ್ತಿ, ಸಕಳೇಂದು, ಸಾಕಟಾಯನ, ವೀರಸೇನ, ಜಿನಸೇನ[೨೯] ಇತ್ಯಾದಿ.

ದಿಗಂಬರ ಮತ್ತು ಶ್ವೇತಾಂಬರ ಸೇತುಕೊಂಡಿಯಾದ ಯಾಪನೀಯರು ದಕ್ಷಿಣ ಭಾರತ ಅದರಲ್ಲೂ ಕರ್ನಾಟಕದಲ್ಲಿಯೇ ತಮ್ಮ ನೆಲೆ ಕಂಡುಕೊಂಡರು, "ಪರಶಾಸನವೇ ಮೋಕ್ಷ (ಉಳಿದ ಪಥಗಳನ್ನು ಅನುಸರಿಸುವವರಿಗೂ ಮೋಕ್ಷವುಂಟ), ಸಗ್ರಂಥಾನಾಂ ಮೋಕ್ಷ: (ಸಂಸಾರಿಗಳಿಗೂ ಮೋಕ್ಷವುಂಟು), ಸ್ತ್ರೀಣಾಂ ತದ್ಭವೇ ಮೋಕ್ಷ: (ಸ್ತ್ರೀಯರಿಗೆ ಈ ಜನ್ಮದಲ್ಲಿಯೇ ಮೋಕ್ಷವು ಸಾಧ್ಯ)"[೩೦] ಎಂಬ ತಮ್ಮ ಮೂಲ ತತ್ವಗಳ ಮೂಲಕ ಅನ್ಯಮತದವರನ್ನು, ಸಂಸಾರಿಗಳನ್ನು, ಸ್ತ್ರೀಯರನ್ನು ತಮ್ಮ ಸಂಘದತ್ತ ಸೆಳೆದುಕೊಂಡರು. ಯಕ್ಷ-ಯಕ್ಷಿಯ ಆರಾಧನೆ ಪ್ರಾರಂಭವಾಗಿದ್ದು ಯಾಪನೀಯರಿಂದಲೆ, ಮೈಳಾಪ ತೀರ್ಥ (ಯಲ್ಲಮನ ಗುಡ್ಡ) ಇವರ ಹಿಡಿತದಲ್ಲಿಯೇ ಇತ್ತು ಎಂಬುದು ಮನಗಾಣಬೇಕು. ಪಾರ್ಶ್ವನಾಥ ತೀರ್ಥಂಕರನ ಯಕ್ಷಿ ಪದ್ಮಾವತಿ ಇಲ್ಲಿ ಆರಾಧನೆಗೆ ಒಳಗಾದಳು. ಕ್ರಮೇಣ ಈ ಯಕ್ಷಿಯೇ > ಎಲ್ಲಮ್ಮ ಆದಳು. ಎಲ್ಲರ ಅಮ್ಮ ಅನ್ನಿಸಿದಳು. ಈ ಎಲ್ಲಮ್ಮನ ಜೊತೆ ರೇಣುಕೆಯನ್ನು ತಗುಳ್ಚಿ ರೇಣುಕಾಎಲ್ಲಮ್ಮ ಎಂದು ಬ್ರಾಹ್ಮಿಣಿಕರಣಗೊಳಿಸಿದ್ದು ನಂತರದ ಕಥೆ. ಈಗಲೂ ಸಾಕಷ್ಟು ಸಂಖ್ಯೆ ಜೈನರ ಆರಾಧ್ಯದೈವ ಸವದತ್ತಿ ಎಲ್ಲಮ್ಮ ಎಂಬುದು ಗಮನದಲ್ಲಿಡಬೇಕಾದ ವಿಚಾರ. ಎಲ್ಲಮ್ಮನ ಆರಾಧಕ ಜೈನರು ಹಿಂದೆ ಯಾಪನೀಯ ಮುನಿ ಪರಂಪರೆಯ ಅನುಯಾಯಿಗಳಾಗಿದ್ದಂತೆ ತೋರುತ್ತದೆ. ಸದ್ಯ ಯಾಪನೀಯರಿಲ್ಲ. ಯಾಪನೀಯತ್ವ ಮಾತ್ರ ಜೈನರಿಲ್ಲಿ ಉಳಿದುಕೊಂಡು ಬಂದಿದೆ ಎಂಬುದಕ್ಕೆ ಯಕ್ಷಿ ಆರಾಧನೆ ಸಾಕ್ಷಿಯಾಗಿ ನಿಲ್ಲುತ್ತದೆ.

"ಸುಮಾರು ಕ್ರಿ.ಶ. ಹದಿನಾಲ್ಕನೆಯ ಶತಮಾನದವರೆಗೂ ಯಾಪನೀಯ ಪಳೆಯುಳಿಕೆಯ ಗಣಗಚ್ಛಾದಿಗಳ ಹೆಸರುಗಳು ಕಾಣಿಸಿದರೂ ವಾಸ್ತವವಾಗಿ ಹತ್ತನೆಯ ಶತಮಾನದ ವೇಳೆಗೆ ಯಾಪನೀಯ ಹಳ್ಳವು ದಿಗಂಬರ ಮುಖ್ಯವಾಹಿನಿಯಾದ ಮೂಲಸಂಘದ ತೊರೆಯಲ್ಲಿ ಸೇರಿಹೋಯಿತು."[೩೧] ಬಹುಶ: ದಿಗಂಬರ ಶ್ರಾವಕರ ಬಾಹುಳ್ಯತೆ, ಅನೇಕ ಧಾರ್ಮಿಕ ದಾಳಿಗಳು, ತಪ್ಪಿದ ರಾಜಾಶ್ರಯ ಎರಡೂ ಪಂಥಗಳ ವಿಲೀನಕ್ಕೆ ಕಾರಣವಾದವು. ಹನ್ನೆರಡನೆಯ ಶತಮಾನದಲ್ಲಿ ಮೂಲಸಂಘ ಮತ್ತು ಯಾಪನೀಯ ಸಂಘ ಸಂಪೂರ್ಣವಾಗಿ ಒಂದಾಗುವ ಪರಿಸ್ಥಿತಿ ಅನಿವಾರ್ಯವಾಯಿತು. ಅನ್ಯಧರ್ಮಿಯರ ದಾಳಿಗಳು, ಮತಾಂತರ ಪ್ರಕ್ರಿಯೆಗಳು, ರಾಜಾಶ್ರಯದ ವಿಮುಖತೆ ಜೈನಧರ್ಮಿಯರನ್ನು ಘಾಸಿಗೊಳಿಸಿದವು ಅಂತೆಯೇ ಜೈನಶ್ರಾವಕರ ಸಂಖ್ಯೆ ಇಳಿಮುಖವಾಗತೊಡಗಿತು. ಇಂಥಹ ಸಾಂದರ್ಭಿಕ ಸೂಕ್ಷ್ಮಗಳನ್ನು ಗಮನಿಸಿದ ಯಾಪನೀಯರು

ಮತ್ತು ದಿಗಂಬರ (ಮೂಲಸಂಘ) ಮುನಿಗಳ ನಡುವೆ ಒಡಂಬಡಿಕೆ ಏರ್ಪಟ್ಟು ಅವೆರಡೂ ಒಂದಾದವು. ಅಂತೆಯೇ ಯಾಪನೀಯ ಸಂಘದ ಗಣ, ಗಚ್ಛಗಳು ಮೂಲಸಂಘದಲ್ಲಿ ಗುರುತಿಸಿಕೊಂಡಿದ್ದು ಕಂಡುಬರುತ್ತದೆ. ಇವುಗಳಲ್ಲಿ ಕಾಣೂರುಗಣ, ಸೂರಸ್ಥಗಣ, ಬಳೆಗಾರಗಣ, ಮೇಷಪಾಷಾಣಗಚ್ಛ, ತ್ರಿಂತ್ರಿಣಿ ಗಚ್ಛ ಪ್ರಮುಖವಾದವುಗಳು. ಉದಾ: ಶ್ರೀ ಕುಂಡಕುಂದಾನ್ವಯ ಮೂಲಸಂಘೇ ಕ್ರಾಣೂರ್ಗಣೇಗಚ್ಛಸು ತ್ರಿಂತ್ರಿಣಿಕೇಯಂ[೨೬೨], ಮೂಲಸಂಘದ ಕಾನೂರ್ಗ್ಗಣದ ಮೇಷಪಾಷಾಣ ಗಚ್ಛ[೨೬೩], ಮೂಲಸಂಘ ಬಳೆಗಾಱಗಣ.[೨೬೪], ಮೂಲಸಂಘ ಸೂರಸ್ಥಗಣ ಚಿತ್ರಕೂಟಾನ್ವಯ[೨೬೫].

ಹಾವೇರಿ ಪರಿಸರದ ಜೈನಶಾಸನಗಳಲ್ಲಿ ಮೂಲಸಂಘವನ್ನೇ ಹೆಚ್ಚಾಗಿ ಪ್ರಸ್ತಾಪಿಸಲಾಗಿದೆ. ಅಂತೆಯೇ ಈ ಸಂಘದ ಮುನಿಗಳ ಒಡನಾಟ ಇಲ್ಲಿ ಅವ್ಯಾಹಿತವಾಗಿತ್ತು. ಉಳಿದಂತೆ ಮೂಲಸಂಘದ ಇನ್ನೊಂದು ಶಾಖೆಯಾದ ದ್ರವಿಳಸಂಘದ ಒಂದು ಉಲ್ಲೇಖವು ಶೀಲವಂತ ಸೋಮಾಪುರ (ಶಿತಾ)ದ ಶಾಸನದಲ್ಲಿದೆ. ಯಾಪನೀಯ ಸಂಘದ ಉಲ್ಲೇಖ ಕದಂಬ ಯುವರಾಜ ದೇವವರ್ಮನ ದೇವಗಿರಿ ತಾಮ್ರಶಾಸನದಲ್ಲಿ ಕಂಡು ಬಂದರೂ ಅದರ ಗಣಗಳನ್ನು ಪ್ರಸ್ತಾಪಿಸಿಲ್ಲ. ಕೆಲವು ಕಡೆ ಈ ಸಂಘದ ನೇರಪ್ರಸ್ಥಾಪವಿಲ್ಲದೆ ಅದರ ಗಣಗಳನ್ನು ಮಾತ್ರ ಉಲ್ಲೇಖಿಸಲಾಗಿದೆ. ಒಟ್ಟಾರೆಯಾಗಿ ಹಾವೇರಿ ಪರಿಸರದ ಸಂಘ, ಗಣ, ಗಚ್ಛ ಅನ್ವಯಗಳನ್ನು ಈ ರೀತಿಯಾಗಿ ಕಲೆಹಾಕಬಹುದು.

ಮೂಲಸಂಘ, ಶ್ವೇತಸಂಘ, ದ್ರವಿಳಸಂಘ, ಯಾಪನೀಯ ಸಂಘ, ದೇಸಿಯಗಣ, ಕಾಣೂರುಗಣ, ಸೇನಗಣ, ಸೂರಸ್ತಗಣ, ದೇವಗಣ, ಸಗರಗಣ, ಭದ್ರಗಣ, ಬಳಗಾರಗಣ, ಮೇಷಪಾಷಾಣಗಚ್ಛ, ಪುಸ್ತಕಗಚ್ಛ, ಚಂದ್ರಿಕವಾಟ ವಂಶ, ಕೊಂಡಕುಂದಾನ್ವಯ, ಪೂಜ್ಯಪಾದಾನ್ವಯ, ಚಿತ್ರಕೂಟಾನ್ವಯ, ಲತಾನ್ವಯ ಇತ್ಯಾದಿಗಳು.

ಮೇಲ್ಕಾಣಿಸಿದ ಸಂಘ, ಗಣ, ಗಚ್ಛ, ಅನ್ವಯ ಪರಂಪರೆಯ ಸಾವಿರಾರು ಮುನಿಪುಂಗವರು ಹಾವೇರಿ ಪರಿಸರದಲ್ಲಿ ಸಂಚರಿಸಿದ್ದಾರೆ. ಇವರ ಪ್ರಭಾವನೆಗೆ ಒಳಗೊಂಡ ಸಾಕಷ್ಟು ಶ್ರಾವಕರು ಬಸದಿ ನಿರ್ಮಿಸಿದ್ದಾರೆ, ಜೀರ್ಣೋದ್ಧಾರಿಸಿದ್ದಾರೆ. ದಾನ-ದತ್ತಿಗಳನ್ನು ಸಂದಾಯಿಸಿದ್ದಾರೆ. ಕೆರೆ ಕಟ್ಟೆಗಳನ್ನು ನಿರ್ಮಿಸಿದ್ದಾರೆ. ಇನ್ನೂ ಕೆಲವು ಶ್ರಾವಕ ಶ್ರಾವಕಿಯರು ಸಲ್ಲೇಖನ ತೆಗೆದು ವ್ರತ ತೆಗೆದುಕೊಂಡು ಮುಡಿಪಿದ ನೂರಾರು ಉದಾಹರಣೆಗಳೂ ಇಲ್ಲಿವೆ. ಧರ್ಮಪರ್ಯಟನೆಯ ನಿಮಿತ್ತ ಹಾವೇರಿ ಪರಿಸರದಲ್ಲಿ ಸಂಚರಿಸಿ; ಜೈನಧರ್ಮದ ಅಂತಸತ್ವವನ್ನು ಹೆಚ್ಚಿಸಿ ಅದು ನಿತ್ಯ ಚಲನಶೀಲವಾಗಿರುವಂತೆ ಮಾಡಿದವರು ಜಿನಮುನಿಗಳು ಅಂಥಹ ಅತೀ ಮುಖ್ಯವಾದ ಮುನಿಗಳನ್ನು ಮಾತ್ರ ಇಲ್ಲಿ ಪರಿಚಯಿಸಿಕೊಳ್ಳುವುದು ಅತ್ಯಗತ್ಯ.

## ೦೩. ಪ್ರಮುಖ ಮುನಿಗಳು.

ಕರ್ನಾಟಕದಲ್ಲಿ ಜೈನಧರ್ಮ ಪಸರಿಸಲು ಆ ಧರ್ಮದ ಮುನಿಪುಂಗವರ ಪಾತ್ರ ಅನನ್ಯ. ಈ ಅಂಶ ಹಾವೇರಿ ಪರಿಸರಕ್ಕೂ ಹೊರತಲ್ಲ. ಈ ಭಾಗದಲ್ಲಿ ಸಂಚರಿಸಿದ, ಧರ್ಮ ಪ್ರಸರಣಗೈದ ಶಾಸನೋಕ್ತ ಜಿನಮುನಿಗಳ ಪರಿಚಯ ಅತ್ಯಗತ್ಯ. ಅಧ್ಯಯನ ಮಿತಿಯ ದೃಷ್ಟಿಯಿಂದ ಒಟ್ಟು ಇಪ್ಪತ್ತು ಜಿನಮುನಿ, ಇಬ್ಬರು ಕಂತಿಯರನ್ನು ಇಲ್ಲಿ ಅಭ್ಯಸಿಸಲಾಗಿದೆ.

### ೩.೧ ಪೂಜ್ಯಪಾದರು (ಸು ೫ನೆಯ ಶತಮಾನ).

ಜಿನಧರ್ಮವನ್ನು ಜನಧರ್ಮವನ್ನಾಗಿಸುವಲ್ಲಿ ಆಚಾರ್ಯ ಪೂಜ್ಯಪಾದರ ಶ್ರಮ ಅನನ್ಯ. ಮೌಖಿಕವಾಗಿದ್ದ ತೀರ್ಥಂಕರರ ಸಂದೇಶಗಳನ್ನು ಸಿದ್ಧಾಂತರೂಪದಲ್ಲಿ ಗ್ರಂಥಗೊಳಿಸಿದವರಲ್ಲಿ ಪೂಜ್ಯಪಾದರೂ ಒಬ್ಬರು. ನಾಡಿನಾದ್ಯಂತ ಧರ್ಮಸಂವರ್ಧನೆಗೆ ಪರ್ಯಟನೆ ಮಾಡಿದ ಇವರು ಹಾವೇರಿ ಪರಿಸರದ ಬಂಕಾಪುರಕ್ಕೆ ಬಂದಿದ್ದರೆಂಬುದಾಗಿ ದೇವಚಂದ್ರನ 'ರಾಜಾವಳಿ ಕಥಾಸಾರ' ಕೃತಿಯಲ್ಲಿ ಪ್ರಸ್ತಾಪವಾಗಿದೆ. "ಪೂಜ್ಯಪಾದರು ತಮಗೆ ಅರಿಯದ ಕೆಲವು ಜೈನಸಿದ್ಧಾಂತಗಳ ಸಂದೇಹ ನಿವಾರಿಸಿಕೊಳ್ಳಲು ತಮಗೆ ಗೊತ್ತಿದ್ದ 'ಪಾದಲೇಪನ ಔಷಧ ಸಹಾಯದಿಂದ ಪೂರ್ವವಿದೇಹ (ಬಿಹಾರ ಪ್ರದೇಶ)ಕ್ಕೆ ಹೋದರು. ಅಲ್ಲಿ ಸಮವಸರಣ ಮಂಟಪದಲ್ಲಿದ್ದ ತೀರ್ಥಂಕರರಿಗೆ ವಂದಿಸಿ, ಸಂದೇಹಕ್ಕೆ ಉತ್ತರ ದೊರಕಿಸಿಕೊಂಡು ಅದನ್ನು ಪುಸ್ತಕದಲ್ಲಿಯೂ ಬರೆದುಕೊಂಡು ಹಿಂತಿರುಗಿದರು. ಬರುವ ದಾರಿ ಮಧ್ಯ ಅತೀ ಉಷ್ಣವು ಇವರ ದೃಷ್ಟಿಯನ್ನು ಕಳೆಯಿತು. ಹೀಗೆ ನಡೆಯಲಾಗಿ ಸಂಚರಿಸುತ್ತಾ 'ಬಂಕಾಪುರ'ಕ್ಕೆ ಬಂದ ಪೂಜ್ಯಪಾದರು ಇಲ್ಲಿರುವ ಶಾಂತಿಜಿನೇಶ್ವರನನ್ನು ಆರಾಧಿಸಿ 'ಶಾಂತ್ಯಷ್ಟಕ'ವನ್ನು ಬರೆದು ಕಳೆದು ಹೋದ ತಮ್ಮ ದೃಷ್ಟಿಯನ್ನು ಮರಳಿ ಪಡೆದುಕೊಂಡರು"[೨೬] ದೇವಚಂದ್ರ ನಿರೂಪಿಸಿದ ಪೂಜ್ಯಪಾದರ ಕಥೆಯ ಸತ್ಯಾಸತ್ಯತೆ ಏನೇ ಇರಲಿ ಅವರು ಬಂಕಾಪುರಕ್ಕೆ ಬಂದದ್ದನ್ನು ಅಲ್ಲಗಳೆಯಲಾಗದು. ಮೇಲಾಗಿ ಜಿನಮುನಿ ದೇಶಸಂಚಾರಿಯಾಗಿದ್ದು ಈ ಅಂಶ ದಿಟವಾಗಿದೆ. ಅಂತೆಯೇ ಪೂಜ್ಯಪಾದರು ಹಾವೇರಿ ಪರಿಸರದಲ್ಲಿ ಸಂಚರಿಸಿದ ದಾಖಲೆಯುಕ್ತ ಮೊದಲ ಮುನಿ ಎಂದು ಒಪ್ಪಿಕೊಳ್ಳಬೇಕಾಗುತ್ತದೆ.

ಪ್ರಾಗಭ್ಯಧಾಯಿ ಗುರುಣಾ ಕಿಲ ದೇವನಂದೀ ಬುದ್ಧ್ಯಾಪುನರ್ವ್ವಿಪುಳಯಾಸಜಿನೇಂದ್ರ ಬುಧ್ಧಿ:
ಶ್ರೀ ಪೂಜ್ಯಪಾದ ಇತಿ ಚೈಷ ಬುಧ್ಯೈ: ಪ್ರಚಖ್ಯೇ ಯತ್ಪೂಜಿತ: ಪದಯುಗೆ ವನದೇವತಾಭಿ:[೨೭]

ಕ್ರಿ.ಶ. ೧೪೩೮ ಶ್ರವಣಬೆಳಗೊಳದ ಈ ಶಾಸನವು ಪೂಜ್ಯಪಾದರ ಮೊದಲ ಹೆಸರು 'ದೇವನಂದಿ' ಎಂದು ಸಾರಿದೆ. ದೇವನಂದಿ ಮುನಿಯ ಅಪಾರ ಬುದ್ಧಿವಂತರಾಗಿದ್ದರಿಂದ 'ಜಿನೇಂದ್ರ ಬುಧ್ಧಿ' ಎಂಬ ಹೆಸರು ಸಿದ್ಧಿಸಿತು. ಈ ಜಿನೇಂದ್ರಬುದ್ಧಿಯ ಪಾದಗಳನ್ನು ವನದೇವತೆಗಳು ಪೂಜೆ ಮಾಡಿದ್ದರಿಂದ ಪೂಜ್ಯಪಾದ ಎಂಬ ಅಭಿದಾನವು ಪ್ರಾಪ್ತವಾಯಿತ್ತೆಂದು ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಪೂಜ್ಯಪಾದರ ಕಾಲ ಕ್ರಿ.ಶ. ಐದನೆಯ ಶತಮಾನವೆಂದು, ಇವರು

ಕೊಳ್ಳೇಗಾಲದವರೆಂಬುದು ಸತ್ಯವಿರಬಹುದೆಂದು ಹಂಪನಾ ಅವರು ಅಭಿಪ್ರಾಯಪಟ್ಟಿದ್ದಾರೆ.[೨೬೮] ಈಗಲೂ ಮೈಸೂರು ಜಿಲ್ಲೆಯ ಮಲೆಯೂರು ಹತ್ತಿರವಿರುವ ಕನಕಗಿರಿಯಲ್ಲಿ ಪೂಜ್ಯಪಾದರ ಪಾದನಿಸಿಧಿ ಇದೆ. ಅಂತೆಯೇ ಇವರು ಇಲ್ಲಿಯೇ ಸಮಾಧಿಮರಣ ಹೊಂದಿದರು. "ಕರ್ನಾಟಕದಲ್ಲಿ ದೊರೆತ ಪ್ರಾಚೀನ ನಿಸಿಧಿ ಸ್ಮಾರಕ ಪೂಜ್ಯಪಾದರದ್ದು"[೨೬೯] ಎಂಬುದು ಗಮನಾರ್ಹ.

> ಸುಕವಿ ಪ್ರಣುತ ವ್ಯಾಕರ
> ಣ ಕರ್ತೃಗಳ್ ಗಗನ ಗಮನ ಸಾಮರ್ಥ್ಯತಾ
> ರ್ಕಿಕ ತಿಳಕರೆಂದು ಪೊಗಟ್ವುದು
> ಸಕಳಜನಂ ಪೂಜ್ಯಪಾದ ಭಟ್ಟಾರಕರಂ.[೨೭೦]

ಗಂಗರ ಮಹಾಸೇನಾನಿ ಚಾವುಂಡರಾಯ ತನ್ನ 'ತ್ರಿಷಷ್ಟಿ ಶಲಾಕಾ ಪುರುಷ ಪುರಾಣ' (ಕ್ರಿ.ಶ. ೯೭೮) ಕೃತಿಯ ಸ್ತುತಿ ಪದ್ಯಗಳಲ್ಲಿ ಪೂಜ್ಯಪಾದರ ಬಗ್ಗೆ ಉಲ್ಲೇಖಿಸಿರುವ ಪ್ರಶಸ್ತಿ ಪದ್ಯವಿದು. ವ್ಯಾಕರಣ, ಔಷಧ, ತರ್ಕ ಶಾಸ್ತ್ರಗಳಲ್ಲಿ ಪರಿಣಿತರಾದ ಪೂಜ್ಯಪಾದರನ್ನು ಸಕಲ ಜನ (ವಿದ್ವಾಂಸರು) ಹೊಗಳುತ್ತದೆ ಎಂಬುದ ಈ ಪದ್ಯದರ್ಥ. ಪೂಜ್ಯಪಾದರ ಬಗ್ಗೆ ಪ್ರಶಸ್ತಿಸಿದ ಈ ಪದ್ಯ ಅತೀಶಯವಾದುದಲ್ಲ. ಅವರು ಸಾಕಷ್ಟು ವಿಷಯಗಳಲ್ಲಿ ಪರಿಣಿತಿ ಹೊಂದಿ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಅಂತೆಯೇ ಈ ಅಭಿಧಾನ ದೊರೆಕಿದೆ. 'ಇಷ್ಟೋಪದೇಶ', 'ಸಾರಸಂಗ್ರಹ', 'ಶಾಂತ್ಯಷ್ಟಕ', 'ಛಂದಶಾಸ್ತ್ರ', 'ಸ್ವಪ್ನಾವಲಿ', 'ಸರ್ವಾರ್ಥಸಿದ್ಧಿ', 'ಕಲ್ಯಾಣಕಾರಕ', 'ಶಬ್ದಾವತಾರ', 'ಜೈನೇಂದ್ರ ವ್ಯಾಕರಣ' ಇವುಗಳಲ್ಲಿ ಪ್ರಮುಖವಾದವುಗಳು.

ಜಿನಮುನಿಗಳ ಸಮುದಾಯದಲ್ಲಿಯೇ ಅಪಾರ ಬುದ್ಧಿಮತ್ತೆಯನ್ನು ಹೊಂದಿದ್ದ ಪೂಜ್ಯಪಾದರದ್ದು ದೊಡ್ಡ ಹೆಸರು. ಅಂತೆಯೇ ಪಂಪನ ಆದಿಯಾಗಿ ದೇವಚಂದ್ರನವರೆಗಿನ ಎಲ್ಲ ಜೈನಕವಿಗಳೂ ಇವರನ್ನು ಸ್ಮರಿಸಿದ್ದಾರೆ. ಇವರ ಬೌದ್ಧಿಕ ಗುಣಾವಳಿಯನ್ನು ಮೆಚ್ಚಿ ಅಪಾರ ಜಿನಮುನಿಗಳು ಹಿಂಬಾಲಕರಾಗಿದ್ದಂತೆ ತೋರುತ್ತದೆ. ಅಲ್ಲದೆ ಹಿಂಬಾಲಕರಾದ ಜಿನಮುನಿಗಳು 'ಪೂಜ್ಯಪಾದಾನ್ವಯ' ಎಂಬ ಅನ್ವಯ ಪರಂಪರೆಯನ್ನು ಕೀರ್ತಿಸಿದರು. ಹಾವೇರಿ ಪರಿಸರದ ಕರಗುದರೆ (ಹಾನತಾ) ಮತ್ತು ನೀರಲಗಿ (ಹಾತಾ)ಯ ಕ್ರಿ.ಶ. ೧೧೪೮ರ ಶಾಸನಗಳಲ್ಲಿ ಪೂಜ್ಯಪಾದನ್ವಯದ ಉಲ್ಲೇಖಗಳಿವೆ. ನಾಗಚಂದ್ರ, ಹರಿಣಂದಿದೇವ, ಚಂದ್ರಮತಿ ಕಂತಿಯರು ಈ ಅನ್ವಯದ ಮುನಿಕಂತಿಯರಲ್ಲಿ ಪ್ರಸಿದ್ಧರು. ಒಟ್ಟಿನಲ್ಲಿ ಹಾವೇರಿ ಪರಿಸರಕ್ಕೆ ಪೂಜ್ಯಪಾದರ ಕೊಡುಗೆ ಅನನ್ಯ. ಹಾಗೇ ಇದೇ ಪರಿಸರದಲ್ಲಿ ಅವರಿಗೆ ಮರಳಿ ದೃಷ್ಟಿಬಂದಿರುವುದು ಬಂಕಾಪುರ ನಿಸರ್ಗದ ಉತ್ಕೃಷ್ಟತೆಯನ್ನು ಸೂಚಿಸುತ್ತದೆ.

## ೩.೨ ವಿನಯನಂದಿ (೮ನೆಯ ಶತಮಾನ).

ಹಾವೇರಿ ಪರಿಸರದ ಮೊದಲ ಶಾಸನೋಕ್ತ ಜಿನಮುನಿ ವಿನಯನಂದಿ. ಈ ಮುನಿಯ ಉಲ್ಲೇಖ ಕ್ರಿ.ಶ. ೭೫೦ ಆಡೂರು (ಹಾತಾ) ಶಾಸನದಲ್ಲಿದೆ.[೨೧] ಹಾವೇರಿ ಪರಿಸರದ ಪರಲೂರು (ದೇವಗಿರಿ) ಕದಂಬರ ಕಾಲಕ್ಕೆ ಒಂದು ಅಗ್ರಗಣ್ಯ ಜೈನಕೇಂದ್ರವಾಗಿತ್ತು. ಈ ಕೇಂದ್ರ ವಿವಿಧ ಸಂಘಗಳ ಜಿನಮುನಿಗಳು ನೆಲೆಸಿದ್ದು ಊರ ಹೆಸರಿಂದಲೆ ಒಂದು ಜಿನಮುನಿ ಗಣವೂ ಸ್ಥಾಪನೆಯಾಯ್ತು. ಇದರ ಹೆಸರು 'ಪರಲೂರು ಗಣ'. ಈ ಗಣ ಹಾವೇರಿ ಪರಿಸರದಲ್ಲಿ ಜನ್ಮತಾಳಿದ ಸ್ಥಳೀಯ ಮತ್ತು ಏಕೈಕ ಜಿನಮುನಿಗಣ ಎಂಬ ಹೆಗ್ಗಳಿಕೆಗೆ ಭಾಜನವಾಗಿದೆ. ಪರಲೂರು ಗಣಕ್ಕೆ ಅಗ್ರಗಣ್ಯ ಮುನಿ ಪ್ರಸ್ತುತ ವಿನಯನಂದಿ. ಶಾಸನದಲ್ಲಿ ಇವರ ಶಿಷ್ಯ 'ವಾಸುದೇವ' ಮತ್ತು ಅವರ ಶಿಷ್ಯ 'ಪ್ರಭಾಚಂದ್ರ'ಮುನಿ ಎಂದು ಉಲ್ಲೇಖಿಸಲಾಗಿದೆ. ವಿನಯನಂದಿ ಮುನಿಪ ಪರಲೂರು ಗಣದ ಸ್ಥಾಪಕರೆ ಎಂಬುದಕ್ಕೆ ಸ್ಪಷ್ಟ ಆಧಾರಗಳು ಅಲಭ್ಯ. ಪರಲೂರಗಣಾಗ್ರಣೀ ಎಂಬ ಬಿರುದಾವಳಿಯಿಂದ ವಿನಯನಂದಿ ಈ ಗಣದ ಪ್ರಭಾವಿ ಮುನಿ ಎನ್ನಲಡ್ಡಿಯಿಲ್ಲ. ಯಾಪನೀಯ ಪರಂಪರೆಯಲ್ಲಿ ಪರಲೂರು ಗಣವೂ ಒಂದು. ಅಂತೆಯೇ ಹಾವೇರಿ ಪರಿಸರದ ಶಾಸನೋಕ್ತ ಮೊದಲ ಮುನಿ ವಿನಯನಂದಿ ಒಬ್ಬ ಯಾಪನೀಯ ಮುನಿ.

## ೩.೩ ಪ್ರಭಾಚಂದ್ರ (೮ನೆಯ ಶತಮಾನ).

ಪರಲೂರು ಗಣದ ಮುನಿ ಪರಂಪರೆಯಲ್ಲಿ ಪ್ರಭಾಚಂದ್ರ ಮುನಿಯೂ ಒಬ್ಬರು. ಈ ಮುನಿಯ ಉಲ್ಲೇಖ ಕ್ರಿ.ಶ. ೭೫೦ರ ಆಡೂರು (ಹಾನತಾ) ಶಾಸನದಲ್ಲಿ ಉದ್ಧೃತವಾಗಿದೆ.[೨೨] ಬಸದಿಗಾಗಿ ಶ್ರಾವಕರಿಂದ ದಾನ-ದತ್ತಿ ಪಡೆದ ಹಾವೇರಿ ಪರಿಸರದ ಮೊದಲ ಮುನಿ ಪ್ರಭಾಚಂದ್ರ. ಈ ಮುನಿಯ ಗುರು ವಾಸುದೇವ. ಪ್ರಭಾಚಂದ್ರ ಶಿಷ್ಯನಾದ ಧರ್ಮಗಾಮುಣ್ಡನ ಪುತ್ರನೂ ಆದ ಶ್ರೀಪಾಲನು ೨೫ ನಿವರ್ತನ ಭೂಮಿಯನ್ನು ತಾನು ನಿರ್ಮಿಸಿದ ಜಿನಾಲಯದ ನಿಮಿತ್ತ, ಮತ್ತು ಇದೇ ಜಿನೇಂದ್ರ ಭವನದ 'ಹವಿರಕ್ಷತ ಗನ್ಧ ಪುಷ್ಪಾದಿಗಳ್ಗೆ' ದೋಣಗಾಮುಣ್ಡ, ಎಳಗಾಮುಣ್ಡ, ಮಳ್ಳೆರ್ಸ, ವೇಜಿಃಯರು ೦೮ ಮತ್ತರು ಗದ್ದೆಯನ್ನು ಪ್ರಭಾಚಂದ್ರ ಗುರವರಿಗೆ ದತ್ತಿಬಿಟ್ಟರು. ಪರಲೂರು ಚೇದಿ (ಚೈತ್ಯಾಲಯ)ಯ ಬಳಿ ಈ ದಾನ ಕಾರ್ಯ ನೆರವೇರುವುದು. ಈ ಸಂದರ್ಭದಲ್ಲಿ ಪ್ರಭಾಚಂದ್ರ ಮುನಿಪ ಪರಲೂರಲ್ಲೇ ಇದ್ದುದಾಗಿ ತಿಳಿದುಬರುತ್ತದೆ.

## ೩.೪ ಮೋನಿ ಗುರುವ (೮-೯ನೆಯ ಶತಮಾನ).

ಹಿರೇಕೆರೂರು ತಾಲ್ಲೂಕಿನ ಮೇದೂರು ಗ್ರಾಮದ ರಾಷ್ಟ್ರಕೂಟ ಮೂರನೆಯ ಗೋವಿಂದನ ಕಾಲಾವಧಿ (ಕ್ರಿ.ಶ. ೭೯೩-೮೧೪)ಯಲ್ಲಿ ಪ್ರಥಮವಾಗಿ ಕಾಣಿಸಿಕೊಳ್ಳುವ ಮೋನಿಗುರವರು 'ವಳ್ಳಕರಾನ್ವಯ' ಎಂಬ ಅನ್ವಯ ಮುನಿಪರಂಪರೆಗೆ ಸೇರಿದವರು[೨೩] ಮೇದೂರ (ಮೇಜವೂರು) ದೇಮಲ್ಲವೆ ಬಸದಿಗೆ ಭೂದಾನ ಕೊಡುವ ಸಂದರ್ಭದಲ್ಲಿ ಈ ಮುನಿಯ ಹೆಸರು ಪ್ರಸ್ತಾಪವಾಗಿದೆ. ಇವರಿಗೆ ಶ್ರೀಪಾಲ ಎಂಬ ಶಿಷ್ಯ ಇದ್ದುದಾಗಿ ಇದೇ ಶಾಸನ ಉಲ್ಲೇಖಿಸುತ್ತದೆ.

ಅತೀ ಕಠಿಣ ಸಾಧನೆಯಿಂದ 'ಮೋನಿ' ಎಂಬ ಅಭಿಧಾನ ಮೋನಿ ಗುರುವರಿಗೆ ಇಲ್ಲಿ ಸ್ಥಾಪಿತವಾಗಿದ್ದು ಗಮನಿಸಬೇಕು. ಅಂತರ್ಮುಖಿ ಸ್ವಭಾವದ ನಿರಂತರ ತಪ, ಧ್ಯಾನ, ಸ್ವಾಧ್ಯಾಯಗಳಲ್ಲಿ ನಿರತರಾದವರಿಗೆ ಈ ವಿಶೇಷಣ ಪ್ರಾಪ್ತವಾಗುತ್ತದೆ. ಮೌನಿಯ ತದ್ಭವ ರೂಪ ಮೋನಿ ಇನ್ನು ಗುರುವ ಎಂದರೆ ಮುನಿ, ಸಂನ್ಯಾಸಿ, ತಪಸ್ವಿ ಎಂಬರ್ಥಗಳು ಪ್ರಾಪ್ತವಾಗುತ್ತವೆ. ಮೋನಿಗುರುವ ಎಂದರೆ ಮೌನವಾಗಿರುವ ಮುನಿ ಎಂದರ್ಥ. ಹೆಚ್ಚು ಮಾತಾಡದವನೇ ಮೋನಿ ಎಂದರೂ ಸರಿಯೆ. ಕಾಳಾಮುಖಯತಿಗಳಲ್ಲೂ ಇದೇ ಅರ್ಥದಲ್ಲಿ ಮೌನಿ>ಮೌನೇಶ ಎಂಬ ಹೆಸರುಗಳು ಬಳಕೆಯಾಗಿವೆಯೆಂದು ತೋರುತ್ತದೆ.

ಕಟ್ವಪ್ಪು (ಶ್ರವಣಬೆಳಗೊಳದ ಚಿಕ್ಕಬೆಟ್ಟ)ವಿನ ಶಾಸನಗಳಲ್ಲಿ ಮೋನಿಗುರುವರ ಪ್ರಸ್ತಾಪವಿದೆ. ಒಂದು ಶಾಸನದಲ್ಲಿ ಅಗಟಿಯ ಮೋನಿಗುರವರ ಶಿಷ್ಯ ಕೊಟ್ಟರದ ಗುಣಸೇನಗುರವರ್ನ್ನೋನ್ತು ಮುಡಿಪ್ಪಿದ್ದಾಗಿಯು[೨೭೪] ಇನ್ನೊಂದು ಶಾಸನದಲ್ಲಿ ಅದೆಯಜಿಸಾಡ ಚಿತ್ತೂರ ಮೋನಿಗುರವಡಿಗಳ ಶಿಷಿತಿಯಾದ ನಾಗಮತಿ ಕನ್ತಿ ಮೂರು ತಿಂಗಳುನೋನ್ತು ಮುಡಿಪಿದ್ದಾಗಿಯೂ ಉಲ್ಲೇಖಿಸಲಾಗಿದೆ.[೨೭೫] ಇಲ್ಲಿರುವ ಮೋನಿಗುರುವರು ಮೇದೂರುನಲ್ಲಿ ಪ್ರಸ್ತಾಪವಾದ ಮೋನಿಗುರುವರು ಅಭಿನ್ನರು ಎನ್ನುವುದಕ್ಕೆ ಸ್ಪಷ್ಟ ಆಧಾರಗಳ ಅಲಭ್ಯ.

ಇಲ್ಲಿ ಉಕ್ತವಾಗಿರುವ 'ಮೋನಿಗುರುವ' ಮತ್ತು 'ವಳ್ಳಕರಾನ್ವಯ' ಪದಗಳು ಮುನಿ ಮತ್ತು ಅವರು ಅನುಸರಿಸುವ ಅನ್ವಯ ಪರಂಪರೆಗಳಲ್ಲಿ ವಿಶೇಷವಾದವು. "ತೀರ್ಥಂಕರ ಅಥವಾ ಜಿನನನ್ನು 'ಬೆಳ್ದೇವರು ಎಂದು, ಧರ್ಮಗುರುವನ್ನು 'ಬೆಳ್ಳವಾಸದ ಗುರುವರ' ಎಂದು (ಧವಳ, ದಿಗಂಬರ, ಎಂಬ ಅರ್ಥದಲ್ಲಿ), ಮತ್ತು ಇವರು 'ವಳ್ಳಕರಾನ್ವಯ'ಕ್ಕೆ ಸೇರಿದವರೆಂಬುದು ಗುರುತಿಸುವುದು. ಬೆಳ್ಳಿವಾಸಿ ಎಂದರೆ ಹಿಮ ಅಥವಾ ಕೊರೆಯುವ ನೊರೆನೀರಿನಲ್ಲಿ ಕದಲದೆ ನಿಂತು ದೇಹ ದಂಡಿಸಿ, ಆತ್ಮಕಲ್ಯಾಣಕ್ಕಾಗಿ ಯೋಗಮುದ್ರೆಯಲ್ಲಿರುವುದು. ಇದರ ಉಲ್ಲೇಖ ಮಧ್ಯಕಾಲೀನ ಜೈನಪುರಾಣಗಳಲ್ಲಿ, ವಿಶೇಷವಾಗಿ ಪಾರ್ಶ್ವಪಂಡಿತನ ಪಾರ್ಶ್ವಪುರಾಣದಲ್ಲಿ ಬಂದಿದೆ"[೨೭೬]

## ೩.೫ ನಾಗಣನ್ದಿ (ಕ್ರಿ.ಶ. ೮೫೯-೬೦).

ಕ್ರಿ.ಶ. ೮೫೯-೬೦ರಲ್ಲಿ ರಚನೆಯಾದ ರಾಣೇಬೆನ್ನೂರು ಶಾಸನದಲ್ಲಿ ನಾಗಣನ್ದಿ ಮುನಿಯ ಹೆಸರು ಉಲ್ಲೇಖವಾಗಿದೆ.[೨೭೭] ಸಿಂಘವೂರ ಗಣಕ್ಕೆ ಸಂಬಂಧಪಟ್ಟ ನಾಗಣನ್ದಿ ಆಚಾರ್ಯ ನಾಗುಳರ ಪೊಲ್ಲಬ್ಬೆ ಮಾಡಿಸಿದ 'ನಾಗುಳ ವಸದಿ' ನಿಮಿತ್ತ ವಿವಿಧ ದಾನಿಗರಿಂದ ಭೂಮಿ, ಗದ್ದೆ, ತೋಟಗಳನ್ನು ದಾನವಾಗಿ ಪಡೆದುಕೊಂಡರು. ನಾಗಣನ್ದಿ ಮುನಿಗಳು ಪ್ರತಿನಿಧಿಸುವ ಸಿಂಘವೂರ ಗಣ ಹಾವೇರಿ ಪರಿಸರದ ಏಕೈಕ ಉಲ್ಲೇಖ ಗಣವಾಗಿದೆ ಸಿಂಹ>ಸಿಂಘ>ಸಿಂಗ. ಇದೊಂದು ಪರಿಚಿತವಲ್ಲದ ಮುನಿಗಣ ಶಾಖೆ ಎಂದು ಷ.ಶೆಟ್ಟರ್ ಅವರು ಅಭಿಪ್ರಾಯಪಟ್ಟಿದ್ದಾರೆ.[೨೭೮] ದಿಗಂಬರ ಮುನಿ

ಸಂಪ್ರದಾಯದಲ್ಲಿ ಸಿಂಹಸಂಘವನ್ನು ಅರ್ಹದ್ಬಲಿ ಆಚಾರ್ಯರು ಸ್ಥಾಪಿಸಿದ್ದಾರೆ. (ಹಿಂದೆ ಹೇಳಲಾಗಿದೆ) ಸಿಂಹಸಂಘವೇ ಮುಂದೆ ಸಿಂಹಗಣವಾಗಿರುವ ಸಾಧ್ಯತೆಯೇ ಹೆಚ್ಚು.

## ೩.೬ ವೃಷಭಣನ್ದಿಗೊರವ, ತಿರಳಣನ್ದಿಗೊರವ (೯ನೆಯ ಶತಮಾನ).

ಬ್ಯಾಡಗಿ ತಾಲ್ಲೂಕಿನ ಕದರಮಂಡಲಗಿಯ ರಾಷ್ಟ್ರಕೂಟರ ಶಾಸನವೊಂದರಲ್ಲಿ ನಂದಿ ಪರಂಪರೆಗೆ ಸೇರಿದ ವೃಷಭಣನ್ದಿ ಮತ್ತು ತಿರಳಣನ್ದಿಗೊರವರ ಉಲ್ಲೇಖವಿದೆ.[೨೫] ಕಳನೂರ್ಗ್ಗಣಕ್ಕೆ ಸೇರಿದ ಈ ಮುನಿಗಳಿಗೆ ವಿದ್ಯಾದಾನ, ಸಕ್ಕಿ ಬಸದಿಯ ಜೀರ್ಣೋದ್ಧಾರಕ್ಕೆ ಬಸದಿಯ ಮುಂದಾಡುವ ವರ್ಗದವರಿಗೆ, ಅಭ್ಯಾಗತರ ಉಪಚಾರ ನಿಮಿತ್ತ ಚಿಕ್ಕಂಬರ ಕುಳುಗಗಾಮುಣ್ಡನು ನೀರ್ಮಣ್ಣು, ತೋಂಟವನ್ನು ಕಾಲ್ಗಚ್ಚಿದಾನಮಾಡಿದ. ಇಲ್ಲಿನ ಕಳನೂರ್ಗ್ಗಣ ಕಾಣೂರುಗಣವಿದ್ದಂತೆ ತೋರುತ್ತದೆ. ಮತ್ತು ಈ ಗಣ ಯಾಪನೀಯ ಪಂಥದ್ದು.

## ೩.೭ ಜಿನಸೇನಾಚಾರ್ಯ (೯ನೆಯ ಶತಮಾನ).

ಹಾವೇರಿ ಪ್ರಾದೇಶಿಕತೆಯಲ್ಲಿ ರಚನೆಯಾದ ಜೈನವಾಙ್ಮಯದ ಮಹೋತ್ತುಂಗ ಕೃತಿ 'ಪೂರ್ವ ಪುರಾಣ'. 'ಆದಿ ಪುರಾಣ', 'ತ್ರಿಷಷ್ಠಿ ಶಲಾಕಾ ಪುರುಷ ಮಹಾಪುರಾಣ', ಎಂದೆಲ್ಲಾ ಕರೆಯುವ ಈ ಕೃತಿಯನ್ನು ಧವಲಶ್ರೀ ಜಿನಸೇನಾಚಾರ್ಯರು ರಚಿಸಿದರು. ಅವರು ಈ ಕೃತಿಯ ೪೨ ಪರ್ವಗಳನ್ನು ಬರೆಯುವಲ್ಲಿ ಅಕಾಲಿಕ ಮರಣಕ್ಕೆ ತುತ್ತಾದರು. ಉಳಿದ ೩೫ ಪರ್ವಗಳನ್ನು ಇವರ ಶಿಷ್ಯ ಗುಣಭದ್ರಾಚಾರ್ಯರು ಪೂರ್ಣಗೊಳಿಸಿದರು. "ಜಿನಸೇನಾಚಾರ್ಯರ ಪೂರ್ವಪುರಾಣದ ಆರಂಭೋತ್ಸವವು ರಾಷ್ಟ್ರಕೂಟ ಅರಸನ ಸಾನಿಧ್ಯದಲ್ಲಿ ವಟಗ್ರಾಮದ ಜಿನಮಂದಿರದಲ್ಲಾಯಿತು ಎಂಬುದು ಪ್ರತೀತಿ"[೨೬೦] ಹಾನಗಲ್ಲು ತಾಲ್ಲೂಕಿಗೆ ಸೇರುವ ಇಂದಿನ ವಳಗೆರೆಯೆ ಅಂದಿನ ವಾಟಗ್ರಾಮ

ಪೂಜ್ಯಪಾದರ ಶಿಷ್ಯಪರಂಪರೆಯ ವೀರಸೇನಾಚಾರ್ಯ ಜಿನಸೇನಾಚಾರ್ಯರ ಗುರು. "ಮೂಲಸಂಘ ಸೇನಗಣದ ಪಂಚಸ್ತೂಪಾನ್ವಯ ಪರಂಪರೆಯ ವೀರಸೇನಾಚಾರ್ಯನು (ಕ್ರಿ.ಶ. ೭೩೫–೮೨೦) ಕಷಾಯಪ್ರಾಭೃತ ಮತ್ತು ಇದರ ಮೇಲೆ ರಚಿತವಾದ ಚೂರ್ಣಿಸೂತ್ರಗಳ ಮೇಲೆ ಟೀಕಾಗ್ರಂಥವನ್ನು ರಚಿಸಲು ಪ್ರಾರಂಭಿಸಿ, ಇಪ್ಪತ್ತು ಸಾವಿರ ಶ್ಲೋಕಗಳನ್ನು ರಚಿಸಿ ಸ್ವರ್ಗಸ್ಥನಾದನು. ಇದರ ಮುಂದಿನ ಭಾಗವನ್ನು (೪೦,೦೦೦ ಶ್ಲೋಕಗಳು) ಆತನ ಶಿಷ್ಯನಾದ ಜಿನಸೇನಾಚಾರ್ಯನು (ಕ್ರಿ.ಶ. ೭೫೮–೮೪೮) ರಾಷ್ಟ್ರಕೂಟರ ಅಮೋಘವರ್ಷ ನೃಪತುಂಗನ ಆಳ್ವಿಕೆಯ (ಕ್ರಿ.ಶ. ೮೧೪–೮೭೮) ಕಾಲಾವಧಿಯಲ್ಲಿ ಕ್ರಿ.ಶ. ೮೩೭ರಲ್ಲಿ ವಾಟಗ್ರಾಮದ ಚಂದ್ರಪ್ರಭನಾಥ ಬಸದಿಯಲ್ಲಿ ಪೂರ್ಣಗೊಳಿಸಿದನು." ಈ ಗ್ರಂಥವನ್ನು 'ಜಯಧವಲಾ' ಎಂದು ಹೆಸರಿಸಲಾಗಿದೆ. ಪ್ರಾಕೃತ–ಸಂಸ್ಕೃತ ಭಾಷೆಯಲ್ಲಿ ರಚಿತವಾಗಿರುವ ಈ ಗ್ರಂಥದಲ್ಲಿ ಮೂಲಕೃತಿಗಳು ಸೇರಿ ಒಟ್ಟು ಏಪ್ಪತ್ತೆಂಟು ಸಾವಿರದ ಆರನೂರು ಎಂಭತ್ತಾರು ಶ್ಲೋಕಗಳಿವೆ"[೨೬೧] ಅಮೋಘವರ್ಷ ನೃಪತುಂಗನ ಗುರುವಾಗಿದ್ದ

ಜಿನಸೇನಾಚಾರ್ಯರ ಉತ್ತರ ಪುರಾಣವನ್ನು ಬಂಕಾಪುರದಲ್ಲಿ ಆನೆಯ ಮೇಲೆ ಅಂಬಾರಿಯಲ್ಲಿಟ್ಟು ಮೆರವಣಿಗೆ ಮಾಡಿದ್ದರೆಂದರೆ ಗ್ರಂಥದ ಮೌಲ್ಯ ಎಂಥಹದು ಎಂದು ತಿಳಿಯುತ್ತದೆ.

## ೩.೮ ಗುಣಭದ್ರಾಚಾರ್ಯರು (೯ನೆಯ ಶತಮಾನ).

ಜಿನಸೇನಾಚಾರ್ಯರ ಅಗ್ರಶಿಷ್ಯಪುತ್ರ "ವಿಹಿತಭುವನಭದ್ರಂ ವೀತ ಮೋಹೋರುನಿದ್ರಂ ವಿನಮತ ಗುಣಭದ್ರ"[೨೮೨] ಈ ಗುಣಭದ್ರ ರೂಢವಾಗಿ ಗುಣಭದ್ರಾಚಾರ್ಯರಾಗಿದ್ದಾರೆ. ತನ್ನ ಗುರುವಾದ ಜಿನಸೇನರು ಅರ್ಧಗೊಳಿಸಿದ ಆದಿಪುರಾಣದ ಉತ್ತರಾರ್ಧದ ಭಾಗವನ್ನು ಗುಣಭದ್ರರು ಪೂರ್ಣಗೊಳಿಸಿದ್ದಾರೆ. ಇದಕ್ಕೆ 'ಉತ್ತರ ಪುರಾಣ' ಎಂದು ಹೆಸರು. ಚಾವುಂಡರಾಯ ತನ್ನ ಚಾವುಂಡರಾಯ ಪುರಾಣ ಕೃತಿಯಲ್ಲಿ ಗುಣಭದ್ರರನ್ನು ಗುಣಗಾಣಿಸಿದ್ದಾನೆ. ಜಿನಸೇನರ 'ಪೂರ್ವ ಪುರಾಣ' ಮತ್ತು ಗುಣಭದ್ರರ 'ಉತ್ತರ ಪುರಾಣ' ಒಟ್ಟಾಗಿ 'ಮಹಾಪುರಾಣ'ವಾಯ್ತು. ಜೈನ ವಾಙ್ಮಯದ ಅತ್ಯಂತ ಪ್ರಭಾವಶಾಲಿ ಕೃತಿ ಇದು.

## ೩.೯ ಚಂದ್ರಪ್ರಭ ಭಟ್ಟಾರಕ (೧೦ನೆಯ ಶತಮಾನ).

ಬಂಕಾಪುರ ಜೈನತೀರ್ಥದಲ್ಲಿ ಸಂಚರಿಸಿದ ಜಿನಮುನಿಗಳಲ್ಲಿ ಚಂದ್ರಪ್ರಭ ಭಟ್ಟಾರಕರೂ ಒಬ್ಬರು. ಇಲ್ಲಿನ ಧೋರ ಜಿನಾಲಯದ ಅಧಿಪತಿಯಾಗಿದ್ದ ಈ ಮುನಿಯು ಪ್ರಭಾವ ಎಷ್ಟಿತ್ತೆಂದರೆ ರಾಜಸತ್ತೆಯು ಇಡೀ ಒಂದು ಗ್ರಾಮವನ್ನೆ ದತ್ತಿಯಾಗಿ ಕೊಡುತ್ತದೆ. ರಾಷ್ಟ್ರಕೂಟರ ಮೂರನೆಯ ಇಂದ್ರನ ಕಾಲಾವಧಿಯಲ್ಲಿ ಪಸುಣ್ಡಿ (ಅಸುಂಡಿ, ಗದಗ ತಾ) ಎಂಬ ಗ್ರಾಮವನ್ನು ಚಂದ್ರಪ್ರಭ ಭಟ್ಟಾರಕ ಅಭ್ಯಂತರ ಸಿದ್ಧಿ (ತೆರಿಗೆ ಮುಕ್ತ ಅಧಿಕಾರ)ಯಿಂದ ಆಳುತ್ತಿದ್ದ.[೨೮೩] ಮುನಿಯೊಬ್ಬನಿಗೆ ಒಂದು ತೆರಿಗೆ ರಹಿತ ಗ್ರಾಮ ದತ್ತಿಯಾಗಿ ದೊರಕಬೇಕಾದರೆ ರಾಜಸತ್ತೆಯಲ್ಲಿ ಆ ಮುನಿಗಿರುವ ಗೌರವ ಎಂಥದ್ದು ಎಂದು ಅರಿಯಬೇಕಾಗುತ್ತದೆ.

## ೩.೧೦ ದೇವೇಂದ್ರ ಸಿದ್ಧಾಂತ ದೇವ (೧೦ನೆಯ ಶತಮಾನ).

"ವಂಕಾಪುರ ಮುನೀಂದ್ರೋ ಭೂದ್ದೇವೇಂದ್ರೋ"[೨೮೪] ಎಂಬ ಶಾಸನ ವಿಳಾಸೋಕ್ತಿಯು ದೇವೇಂದ್ರ ಮುನಿಯು ಬಂಕಾಪುರ ಜೈನ ತೀರ್ಥಕ್ಷೇತ್ರದಿಂದ ಗುರುತಿಸಿಕೊಂಡಿದ್ದರೆಂಬುದು ದಿಟವಾಗುತ್ತದೆ. ಬಂಕಾಪುರ ಒಂದು ವಿದ್ಯಾಕೇಂದ್ರವಾದ್ದರಿಂದ ಮುನಿಗಳ ಇರುವಿಕೆ ಸಹಜವೇ ಆಗಿತ್ತು. ದೇವೇಂದ್ರ ಮುನಿ ಬಂಕಾಪುರ ಜೈನ ತೀರ್ಥದಲ್ಲಿ ಸಾಕಷ್ಟು ಸಾರಿ ಚಾತುರ್ಮಾಸ ಆಚರಿಸಿದಂತೆ ತೋರುತ್ತದೆ. ಮತ್ತು ಇದು ವಿದ್ಯಾಕೇಂದ್ರವಾಗಿದ್ದರಿಂದ ಅನೇಕ ವಿದ್ಯಾಕಾಂಕ್ಷಿಗಳ ತವರು ಆಗಿತ್ತು. ಅಂಥಹ ಜ್ಞಾನಪಿಪಾಸು ಶಿಷ್ಯರಿಗೆ ಜೈನ ಸಿದ್ಧಾಂತ ಬೋಧನೆಯನ್ನು ದೇವೇಂದ್ರ ಮುನಿಗಳು ಮಾಡುತ್ತಿದ್ದರು. ಆದಿಕವಿ ಇವರಲ್ಲಿ ಒಬ್ಬ. ಪಂಪನು ತನ್ನ 'ಆದಿಪುರಾಣ'ದ ಪ್ರಾರಂಭದಲ್ಲಿ ಅಕ್ಷರಮಾಲೆಯಿಂದ ತನ್ನ ಗುರುಗಳಾದ ದೇವೇಂದ್ರ ಮುನಿಯನ್ನು ಸ್ತುತಿಸಿದ್ದಾನೆ. "ಶ್ರೀದೇವೇಂದ್ರ ಮುನೀಂದ್ರವಂದಿತ ಗುಣವ್ರಾತಂ"[೨೮೫] ಎಂದು ತಾನು "ಗುರು ದೇವೇಂದ್ರ

ಮುನೀಂದ್ರನಿಂದ್ರನಮಿತಂ ದೇವಂ"[೨೮೬] ಅವರ ಶಿಷ್ಯ ಎಂದಿದ್ದಾನೆ. ಪಂಪನಂತಹ ಅದ್ಭುತ ಪ್ರತಿಭೆಯನ್ನು ಕನ್ನಡ ಸಾಹಿತ್ಯಕ್ಕೆ ಕೊಟ್ಟಿದು ದೇವೇಂದ್ರ ಮುನಿಯ ಹೆಗ್ಗಳಿಕೆಯೆ ಸರಿ.

ದೇವೇಂದ್ರ ಮುನಿಗಳು ಮೂಲಸಂಘ ದೇಸಿಯಗಣ ವಕ್ರಗಚ್ಛ ಕೊಣ್ಡುಕುಂದಾನ್ವಯ ಮುನಿ ಪರಂಪರೆಗೆ ಸೇರಿದವರು. ಇವರು ಪರಿಯಳಿಯ ವಡ್ಡದೇವರಬಳಿ ಎಂಬ ಬಳಿ ಮುನಿಪರಂಪರೆಯನ್ನು ಪ್ರತಿನಿಧಿಸುತ್ತಿದ್ದರು.

ದೇವೇಂದ್ರ ಮುನಿಯ ಗುರು-ಶಿಷ್ಯ ಪರಂಪರೆಯನ್ನು ಹೀಗೆ ನೋಡಬಹುದು.

ದೇವೇಂದ್ರ ಸಿದ್ಧಾನ್ತಮುನಿ.

↓

ವೃಷಭನಂದ್ಯಾಚಾರ್ಯ.

↓

ಗೋಪನನ್ದಿಪಂಡಿತ ದೇವರು.

↓

ಸಧರ್ಮರು.
- → ಮಹೇಂದ್ರಚಂದ್ರಪಂಡಿತ ದೇವ.
- → ದೇವೇಂದ್ರಸಿದ್ಧಾನ್ತದೇವ.
- → ಶುಭಕೀರ್ತಿಪಂಡಿತದೇವ.
- → ಮಾಘನನ್ದಿ ಸಿದ್ಧಾನ್ತದೇವ.
- → ಜಿನಚಂದ್ರ ಪಂಡಿತ ದೇವ.
- → ಗುಣಚಂದ್ರ ಮಲಧಾರಿ ದೇವ.

↓

ತ್ರಿರತ್ನ ನಂದಿಭಟ್ಟಾರ.

ಸಧರ್ಮ್ಮರು.
- → ಕಲ್ಯಾಣ ಕೀರ್ತಿಭಟ್ಟಾರಕದೇವ.
- → ಮೇಘಚಂದ್ರ ಸಿದ್ಧಾನ್ತದೇವ.
- → ಬಾಳಚಂದ್ರಸಿದ್ಧಾನ್ತದೇವ.

ಶಿಷ್ಯರು.
- → ಗೋಪನಂದಿಪಂಡಿತ ದೇವ.
- → ಜಸಕೀರ್ತಿಪಂಡಿತದೇವ.
- → ವಾಸವಚಂದ್ರಪಂಡಿತದೇವ.
- → ಚನ್ದನನ್ದಿಪಣ್ಡಿತದೇವ.
- → ಹೇಮಚಂದ್ರ ಮಲಧಾರಿ ಗಂಡವಿಮುಕ್ತ, ಗೌಳದೇವ.
- → ತ್ರಿಮುಷ್ಟಿದೇವ.[೨೮೭]

### ೩.೧೧ ಅಜಿತಸೇನಾಚಾರ್ಯ (೧೧ನೆಯ ಶತಮಾನ).

ದೇವೇಂದ್ರಸಿದ್ಧಾಂತ ಮುನಿ ನಂತರ ಬಂಕಾಪುರದ ಕೀರ್ತಿಯನ್ನು ಉತ್ತುಂಗಕ್ಕೇರಿಸಿದವರು ಅಜಿತಸೇನಾಚಾರ್ಯರು. ಶಕ್ತಿಕವಿ ರನ್ನ ಇವರ ಪಟ್ಟ ಕವಿಶಿಷ್ಯ. ಅಜಿತಸೇನರು ರನ್ನನಿಗೆ ಬಂಕಾಪುರದಲ್ಲಿ ತಮ್ಮ ಸಕಲ ವಿದ್ಯೆಯನ್ನು ಧಾರೆಯೆರೆದರು ಎನ್ನುವ ಮಾತು ಜನಜನಿತ. ಅಂತೆಯೆ ರನ್ನ ತನ್ನ ವಿದ್ಯಾಗುರುವರ್ಯ್ಯರಾದ ಅಜಿತಸೇನರ ಮೇಲಿನ ಅಭಿಮಾನದಿಂದ ಅವರ ನಾಮಾಂಕಿತ 'ಅಜಿತತೀರ್ಥಂಕರ ಪುರಾಣ ತಿಲಕ'ವನ್ನು ಬರೆದು ಸಮರ್ಪಿಸಿದ. ಈ ಪುರಾಣದ ಪ್ರತೀ ಆಶ್ವಾಸದ ಸಮಾಪ್ತಿಯಲ್ಲಿ "ಇದು ಸಕಲ ಮುನೀಂದ್ರ ವೃಂದ ವೃಂದಾರಕ ಶ್ರೀಮದಜಿತಸೇನ ಭಟ್ಟಾರಕ ಶ್ರೀಪಾದಪದ್ಮ ಪ್ರಸಾದಾಸಾದಿತ"[೨೮೮] ಎಂದು ಅಜಿತಸೇನರನ್ನು ನೆನೆಯುತ್ತಾನೆ. ಅಲ್ಲದೆ ತನ್ನ ಆಶ್ರಯದಾತೆಯಾದ ಅತ್ತಿಮಬ್ಬೆಯ ಗುಣಾವಳಿಯನ್ನು ಅಜಿತಸೇನಾಚಾರ್ಯರಿಗೆ ಸಮೀಕರಿಸಿರುವುದು ಅವರಿಗಿರುವ ವಿದ್ವತ್ತಿಗೆ ಸಂದ ಗೌರವ ಎಂಬುದನ್ನು ಅರಿಯದಿರಲಾಗದು.

ರನ್ನನ ಅಪರೂಪದ ಸ್ನೇಹಿತ ಗಂಗಚಮೂಪ ಚಾವುಂಡರಾಯ. ಚಾವುಂಡರಾಯ ರನ್ನನ ಒಡನಾಟದಿಂದ ಅಜಿತಸೇನರ ಶಿಷ್ಯತ್ವ ಪಡೆಯುವಲ್ಲಿ ಯಶಸ್ವಿಯಾದ. "ಗುಣಮಣಿ ವಿಭೂಷಣರುಂ, ಶೀಳಾಳಂಕಾರರುಂ, ಜಗತ್ಪವಿತ್ರಚಾರಿತ್ರರುಂ, ವಿಜಿತ ದುರಿತಾರಾತಿಸೇನರುಮ್ ಎನಿಸಿದ ಅಜಿತಸೇನ ಭಟ್ಟಾರಕರೆ ಗುರುಗಳಾಗೆ"[೨೮೯] ಎಂದು ಅಜಿತಸೇನರ ಗುಣಾವಳಿಯನ್ನು ತನ್ನ 'ತ್ರಿಷಷ್ಟಿ ಶಲಾಕಾಪುರುಷ ಪುರಾಣ'ದಲ್ಲಿ ಉತ್ಕೀರ್ತಿಸಿದ ಚಾವುಂಡರಾಯ ತನ್ನ ಗುರುಗಳು ಅವರೆ ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ. ಈ ಚಾವುಂಡರಾಯನ ಮಗನಾದ ಜಿನದೇವಣ ಅಪ್ಪನಂತೆಯೆ ಅಜಿತಸೇನರ ಶಿಷ್ಯನಾಗಿದ್ದ. ಶ್ರವಣಬೆಳಗೊಳದ ಚಾವುಂಡರಾಯ ಬಸದಿಯ ಮೇಲಿನ ಸಮವಸರಣ ಮಂಟಪದೊಳಗಿನ ಪಾರ್ಶ್ವತೀರ್ಥಂಕರ ಪ್ರತಿಮೆಯನ್ನು ಜಿನದೇವಣ ಮಾಡಿಸಿದ. ಆ ಮೂರ್ತಿಯ ಪಾದಪೀಠದಲ್ಲಿ

> ಜಿನಗೃಹಮಂ ಬೆಳ್ಗೊಳದೊಳ್
> ಜನಮೆಲ್ಲಂ ಪೊಗಳೆ ಮನ್ತ್ರಿ ಚಾಮುಣ್ಡನ
> ನ್ದನನೊಲವಿಂ ಮಾಡಿಸಿದಂ
> ಜಿನದೇವಣನಜಿತಸೇನ ಮುನಿಪರ ಗುಡ್ಡಂ॥[೨೯೦]

ಎಂದು ತಾನು ಅಜಿತಸೇನರ ಶಿಷ್ಯ ಎಂದು ಜಿನದೇವಣ ಶಾಸನದ ಮೂಲಕ ಸಾರಿದ್ದಾನೆ.

"೧ನೆಯ ನಾಗವರ್ಮನು 'ಛಂದೋಂಬುಧಿಯಲ್ಲಿ ಅಜಿತಸೇನಾಚಾರ್ಯರು ತನ್ನ ಗುರುಗಳೆಂದು ಕೃತಜ್ಞತೆಯಿಂದ ಸ್ಮರಿಸಿದ್ದಾನೆ. ಇದೇ ರೀತಿ ಮುಳುಗುಂದದ ಉಭಯಭಾಷಾ ಕವಿಚಕ್ರವರ್ತಿ ಮಲ್ಲಿಷೇಣ (ಕ್ರಿ.ಶ.೧೦೪೯), ಶಾಂತಿನಾಥ ಪಂಡಿತ, ಪದ್ಮನಾಭ ಪಂಡಿತ ಕವಿಗಳೂ ಅಜಿತಸೇನಾಚಾರ್ಯನ ಶಿಷ್ಯರಾಗಿದ್ದರು. ಇವರು ತಮ್ಮ ಕಾವ್ಯಗಳಲ್ಲಿ ಈ ಆಚಾರ್ಯನನ್ನು

ಗೌರವದಿಂದ ಕೊಂಡಾಡಿದ್ದಾರೆ. ಹಾಗೆಯೇ ಶ್ರವಣಬೆಳಗೊಳ, ಕೊಪ್ಪಳ, ಹೊಂಬುಜದ ಕೆಲವು ಶಾಸನಗಳಲ್ಲಿಯೂ ಅಜಿತಸೇನಾಚಾರ್ಯನ ಪ್ರಸ್ತಾಪಗಳಿವೆ."[೨೯೧]

ಅಜಿತಸೇನಾಚಾರ್ಯರು ಬಂಕಾಪುರವನ್ನು ವಿದ್ಯಾಕೇಂದ್ರವಾಗಿ, ಧಾರ್ಮಿಕ ಶ್ರದ್ಧಾಕೇಂದ್ರವಾಗಿಸುವಲ್ಲಿ ಅನನ್ಯ ಪರಿಶ್ರಮ ವಹಿಸಿದರು. ಬಂಕಾಪುರವನ್ನು ಆಳ್ವಿಕೆ ಮಾಡಿ ಇಲ್ಲವಾಗಿದ್ದ ಚಲ್ಲಕೇತನರ ಪ್ರಭಾವದ ಒತ್ತಾಸೆಯೂ ಬಂಕಾಪುರದಲ್ಲಿ ಮತ್ತೇ ಜೈನಧರ್ಮವನ್ನು ಊರ್ಜಿತಗೊಳಿಸುವಲ್ಲಿ ಅಜಿತಸೇನರಿಗೆ ಸಹಾಯವಾದದ್ದು ಅಲ್ಲಗಳೆಯುವಂತಿಲ್ಲ. ಅಜಿತಸೇನರು ಮತ್ತು ಬಂಕಾಪುರ ಅವೆಷ್ಟು ಪ್ರಸಿದ್ಧವಾಗಿತ್ತೆಂದರೆ ಗಂಗ ಸಾಮ್ರಾಜ್ಯದ ರಾಜನಾದ ಮಾರಸಿಂಹ (೧೦ನೇ ಶ) ರಾಜ್ಯಾಧಿಕಾರ ಮೋಹದಿಂದ ಬಿಡಿಸಿಕೊಂಡು ನೇರವಾಗಿ "ಬಂಕಾಪುರದೊಳ್ ಅಜಿತಸೇನ ಭಟ್ಟಾರಕರ ಶ್ರೀಪಾದ ಸನ್ನಿಧಿಯೊಳ್ ಆರಾಧನಾ ವಿಧಿಯಂ ಮೂಱುದೆವಸ ನೋನ್ತು ಸಮಾಧಿಯಂ ಸಾಧಿಸಿದಂ॥"[೨೯೨] ಒಂದು ರಾಜಸತ್ತೆಯ ಮುಖ್ಯ ಅಂಗವಾದ ರಾಜನೇ ಅಜಿತಸೇನರ ಬಳಿ ಸಲ್ಲೇಖನ ತೆಗೆದುಕೊಳ್ಳುತ್ತಾನೆ ಎಂದರೆ ಅದು ಅವರಿಗಿರುವ ಪರಮ ಪಾವಿತ್ರ ಮುನಿಚರಿತೆಯು ಸಾಕ್ಷಿಪ್ರಜ್ಞೆಯಾಗಿ ನಿಲ್ಲುತ್ತದೆ.

ಆರ್ಯಸೇನ ಮಹಾಮನಿಪತಿಯ ಶಿಷ್ಯರಾದ ಅಜಿತಸೇನಾಚಾರ್ಯರು[೨೯೩] ಮೂಲಸಂಘ ಸೇನಗಣ ಚಂದ್ರಿ(ದ್ರ)ಕಾವಾಟಗಚ್ಚದ ಮುನಿ ಪರಂಪರೆಗೆ ಸೇರಿದವರು. ಇವರ ಶಿಷ್ಯ ಪರಂಪರೆಯಲ್ಲಿ ಕನಕಸೇನ ಭಟ್ಟಾರಕ, ಸಮನ್ತಭದ್ರದೇವ, ಆಷ್ಟೋಪವಾಸಿದೇವಸೇನ ಮುಂತಾದವರು ಆಗಿಹೋಗಿದ್ದಾರೆ.[೨೯೪] ಹೊಂಬುಜದ ಶಾಸನವೊಂದು ಅಜಿತಸೇನ ಮುನಿಯನ್ನು 'ಶಬ್ದಚತುರ್ಮುಖ', 'ಲೌಕಿಕ ಚಕ್ರವರ್ತಿ', 'ವಾದೀಭಸಿಂಹ' ಎಂದು ಹೊಗಳಿದ್ದು ಅತಿಶಯವಾಗಲಾರದು. ಈ ವಿಶೇಷಣಗಳು ಆ ಮುನಿ ವಿದ್ವತ್ತನ್ನು ತೆರೆದಿಡುತ್ತವೆ.[೨೯೫].

### ೩.೧೨ ಕನಕಚಂದ್ರ ಸಿದ್ಧಾಂತದೇವ (ಕ್ರಿ.ಶ.೧೧೨೨).

ಕ್ರಿ.ಶ. ೧೧೨೨ರ ಅರಟಾಳ ಶಾಸನದಲ್ಲಿ ಕನಕಚಂದ್ರ ಮುನಿಯ ಉಲ್ಲೇಖವಿದ್ದು, ಈ ಮುನಿಯು ಹಾವೇರಿ ಪರಿಸರದಲ್ಲಿ ಸಂಚರಿಸಿ ಧರ್ಮಪ್ರಚಾರ ಕೈಗೊಂಡಿದ್ದು ಸ್ಫುಟವಾಗುತ್ತದೆ. ಮೂಲಸಂಘ ಕ್ರಾಣೂರ್ಗ್ಗಣ ಮೇಷಪಾಶಾಣಗಚ್ಚ ಪರಂಪರೆಗೆ ಸೇರುವ ಈ ಮುನಿ ಮಾಧವಚಂದ್ರದೇವನ ನೇರ ಶಿಷ್ಯರಾಗಿದ್ದರು.

ಕನಕಚಂದ್ರ ಸಿದ್ಧಾನ್ತದೇವರ ಗುಡ್ಡನಾದ ಗಂಗರ ಬಮಿಸೆಟ್ಟಿ ಪಯಿಟ್ಟಣ (ಅರಟಾಳ)ದಲ್ಲಿ ಮಾಡಿಸಿದ ಬಸದಿಗೆ ಮೂರುಕೆರೆಯ ಹಿರಿಯ ಮುಖಂಡರು, ಪ್ರಭುಗಾವುಂಡರು ಅರವತ್ತೊಕ್ಕಲರು ಮತ್ತು ಐನೂರ್ವ್ವರು ಸಂಘಗಳ ಸದಸ್ಯರು ಕನಕಚಂದ್ರ ಸಿದ್ಧಾನ್ತದೇವರ ಕಾಲುತೊಳೆದು ಗದ್ದೆ, ಹೂದೋಟ, ಎಣ್ಣೆ, ನಾಣ್ಯ ಇತ್ಯಾದಿಗಳನ್ನು ದಾನ ಮಾಡಿದರು. ಯಮನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೋನಾನುಷ್ಠಾಣ ಸಮಾಧಿ ಶೀಳ ಸಂಪನ್ನರಾಗಿದ್ದ ಕನಕಚಂದ್ರ ಮುನಿಯ ಗುಣಾವಳಿಯನ್ನು ಚಿತ್ರಿಸುವ ಸುಂದರ ಪದ್ಯಗಳು ಶಾಸನ ಕವಿಯ ಪ್ರಬುದ್ಧತೆಗೆ ಕನ್ನಡಿ ಹಿಡಿಯುತ್ತವೆ.

ನತಭೂಪಾಳಕ ಮೌಳಿ
ಸ್ಥಿತರತ್ನದ್ಯುತಿಗಳಿಂ ಪದದ್ಯುತಿಯೆಸೆಗುಂ
ಸತತಂ ಸಂಧ್ಯಾರಬಿಯ ವೊ
ಲ ತನ್ನ ಮದೇಭಾರಿ ಕನಕಚಂದ್ರ ಬ್ರತಿಯ.

ಶಿರಬಾಗಿದ ಅರಸರ ಕಿರೀಟರತ್ನದ ಕಾಂತಿಯಿಂದ ಶೋಭಿಸುವ ಪಾದಗಳುಳ್ಳವರೂ, ಸಂಧ್ಯಾಕಾಲ ರವಿಯಂತೆ ಕಾಂತಿಯುಳ್ಳವರೂ ಆದ ಶ್ರೀ ಕನಕಚಂದ್ರ ಅನುಪಮರಾಗಿದ್ದರು ಎಂಬ ವರ್ಣನೆಯು ಮುನಿಯ ಶ್ರೇಷ್ಠತೆಗೆ ಇರುವ ಒಂದು ಒರೆಗಲ್ಲೇ ಸರಿ. ಇವರ ಸಾಧನೆ, ಕಠಿಣ ವ್ರತ, ಮಹಾವಾಗ್ಮಿತನ, ಪರಧರ್ಮ ಸಹಿಷ್ಣುತಾಭಾವವನ್ನು ಒಂದು ವೃತ್ತದಲ್ಲಿ ಈ ರೀತಿಯಾಗಿ ವರ್ಣಿಸಲಾಗಿದೆ.

ಅನುಪಮರೆಂದು ಬಣ್ಣಿಪುದನಾನಱಿಯೆಂ ತನು ಕಲ್ಲಕಂಭದ
ನ್ತೆನಿತು ಪರಿಕ್ಷಹ ಪ್ರಬಳಭಾರಮನಾನ್ತುದು ಚಿತ್ತವಾತ್ಮಭಾ
ವನೆಯೊಡಗೂಡಿತೀ ಕನಕಚಂದ್ರ ಮಹಾಮುನಿಪಂಗೆ ಕಾಲವ
ತ್ತನದವಸರ್ಪ್ಪಣಂ ನೆಗಳದಿರ್ದ್ದಡೆ ನೆಟ್ಟನೇರಿದ್ಧಿ ಪುಟ್ಟದೇ.

ಇದೇ ಮುನಿಯ ಪ್ರಭಾವದಿಂದ ಹುಲ್ಲುಂಗೂರ ಕೇತಿಸೆಟ್ಟಿಯ ಮಗ ಪಾರಿಸಯ್ಯ ಎಂಬುವನು ಹರಿತಾಣ (ಅರಟಾಳ) ಬಸದಿಗೆ ಶಾನ್ತಿನಾಥ ತೀರ್ಥಂಕರ ಪ್ರತಿಮೆಯನ್ನು ಮಾಡಿಸಿಕೊಟ್ಟ.[೨೯೬] ಈ ಮುನಿ ಶಿಷ್ಯರಾದ ಮಾದಿಸೆಟ್ಟಿ, ಭೋಗಿಸೆಟ್ಟಿಯರು ಪಾರ್ಶ್ವನಾಥ ಪ್ರತಿಮೆಯನ್ನು ಮಾಡಿಸಿದರೆಂದು ಸಮ್ಮಸಗಿಯಲ್ಲಿರುವ ಶಾಸನವೊಂದು ತಿಳಿಸುತ್ತದೆ (ಹಾನತಾ).

## ೩.೧೩. ಹರಿಣಂದಿದೇವ (೧೨ನೆಯ ಶತಮಾನ).

ಕ್ರಿ.ಶ ೧೧೪೮ರ ಕರಗುದರಿ (ಹಾನತಾ) ಮತ್ತು ನೇರಲಗಿ (ಹಾತಾ) ಶಾಸನಗಳಲ್ಲಿ ಹರಿಣಂದಿದೇವ ಮುನಿಯ ಉಲ್ಲೇಖವಿದೆ.[೨೯೭] ಈ ಮುನಿಯು ನೇಱಿಲಗೆಯಲ್ಲಿ ನಾಳ್ಪ್ರಭು

ಮಲ್ಲಗಾವುಣ್ಡ ನಿರ್ಮಿಸಿದ ಮಲ್ಲಿನಾಥ ಜಿನಾಲಯದ ಆಚಾರ್ಯರಾಗಿದ್ದರು. ಇವರ ಶಿಷ್ಯ ಪರಂಪರೆಯಲ್ಲಿ ನಾಗಚಂದ್ರ, ನನ್ದಿಮುನಿಪ, ಜಯಕೀರ್ತ್ತಿ, ಮಾಣಿಕದೇವ, ಬಾಳಚಂದ್ರ ತ್ರೈವಿದ್ಯಾದೇವ ಮತ್ತು ಚಂದ್ರಮತಿ ಅವ್ವೆ ಎಂಬ ಕಂತಿಯು ಪ್ರಮುಖರು.[೨೯೮] ಹೊಳಗುಂದ (ಬಳ್ಳಾರಿ ಜಿ) ಶಾಸನವು ಹರಿಣಂದಿ ದೇವನ ಗುರುಗಳು ವಾಸುಪೂಜ್ಯರೆಂದು ಮತ್ತು ಶಿಷ್ಯ ನಾಗಚಂದ್ರರೆಂದು ಉಲ್ಲೇಖಿಸಿದೆ.[೨೯೯] ಮೂಲ ಸಂಘ ಸೂರಸ್ಥಗಣ ಚಿತ್ರಕೂಟಗಚ್ಛ ಪೂಜ್ಯಪಾದನ್ವಯ ಮುನಿಪರಂಪರೆಯ ಹರಿಣಂದಿ ಮುನಿಯನ್ನು ನೇಱಿಲಗೆಯ ಶಾಸನ ಈ ರೀತಿ ಕೊಂಡಾಡಿದೆ.

ಸ್ಮರಮತ್ತೇಭ ಕಿಶೋರ ಕೇಸರಿ ಮನೋಜೋರ್ವ್ವೀದ್ಧ್ರವಜ್ರಂ ರತೀ
ಶ್ವರ ನೀಳೋತ್ಪಳಷಣ್ಡಚಣ್ಡಕರನಾಶಾಯೋಷಿದುತ್ತಂಸ ಬ
ನ್ಧುರ ಮುಕ್ತಾಫಳ ರಶ್ಮಿ ನಿರ್ಮ್ಮಳಯಶಃ ಶ್ರೀರೋಚಿಯಾಗಲು ದಿಗಂ
ಬರಪೂಜ್ಯಂ ಹರಿಣನ್ದಿದೇವನೆಸೆದಂ ಚಾರಿತ್ರ ಚಕ್ರೇಶ್ವರಂ॥

## ೩.೧೪ ಚಂದ್ರಮತಿ ಅವ್ವೆ (೧೨ನೇ ಶತಮಾನ).

ಹಾವೇರಿ ಪರಿಸರದಲ್ಲಿ ಸಂಚರಿಸಿದ ಕೆಲವೇ ಕೆಲವು ಕಂತಿಯರಲ್ಲಿ ಚಂದ್ರಮತಿ ಕಂತಿಯೂ ಒಬ್ಬಳು. ಕ್ರಿ.ಶ ೧೧೪೮ರ ನೇಱುಲಗೆ (ಹಾತಾ) ಶಾಸನದಲ್ಲಿ ಈ ಕಂತಿಯ ಉಲ್ಲೇಖವಿದೆ.[೩೦೦]

ಮೂಲಸಂಘ ಸೂರಸ್ಥಗಣ ಚಿತ್ರಕೂಟಗಚ್ಛ ಪೂಜಪಾದಾನ್ವಯ ಮುನಿಪರಂಪರೆಯ ಚಂದ್ರಮತಿ ಕಂತಿಯು ಹರಿಣಂದಿದೇವನ ಶಿಷ್ಯೆ. ಸರಸ್ವತಿಯ ವಿದ್ವತ್ತು, ಶಾಂತಸ್ವಭಾವ, ತಪಚಾರಿತ್ರ್ಯ, ಧರ್ಮ ಮಾರ್ಗದರ್ಶಿ ಸ್ವಭಾವದಿಂದ ಚಂದ್ರಮತಿ ಅವ್ವೆಯನ್ನು ಧರಿತ್ರೆಯೇ ಹೋಗಳುತ್ತಿತ್ತು ಎಂಬ ಶಾಸನಕಾರನ ಮಾತುಗಳು. ಚಂದ್ರಮತಿ ಕಂತಿಯ ಗುಣಾವಳಿಗೆ ಹಿಡಿದ ಕನ್ನಡಿ.

ಸರಸತಿ ಕುಂಚಮಂ ಧರಿಯಿಸಿರ್ದ್ದಳೊ ಶಾನ್ತರಸಂ ತಪಸ್ವಿನೀ
ಚರಿತಮನಾತ್ತುದೊ ಸಕಳ ಭವ್ಯ ಜನಂಗಳ ಪುಣ್ಯವೃದ್ಧಿ ಪೆ
ಣ್ಬರಿಜಿನೊಳಾರ್ಯ್ಯಿಕಾಕೃತಿ ಯನಾನ್ತುದೊ ಪೇಳಿಮಿದೆಂದೊಱಲ್ದು ಬಿ
ತ್ತರಿಪುಮ ಧಾತ್ರಿ ಚಂದ್ರಮತಿಯವ್ವೆಗದಂ ವಸುದಾ . . . .॥

## ೩.೧೫ ಕುಕ್ಕಟೇಶ ಮಲಧಾರಿ ದೇವ (೧೨ನೆಯ ಶತಮಾನ).

ಕ್ರಿ.ಶ.೧೧೪೬ರ ಬಾಳೇಹಳ್ಳಿ (ಹಾನತಾ) ಶಾಸನದಲ್ಲಿ ಕುಕ್ಕಟೇಶ ಮಲಧಾರಿದೇವನ ಉಲ್ಲೇಖವಿದ್ದು, ಈ ಮುನಿಯು ಮೂಲಸಂಘ ದೇಶಿಯಗಣ ಪುಸ್ತಕಗಚ್ಛ ಕೊಂಡಕುಂದಾನ್ವಯ ಪರಂಪರೆಗೆ ಸೇರಿದವನಾಗಿದ್ದಾನೆ. ಇದೇ ಪರಂಪರೆಯನ್ನು ಉಲ್ಲೇಖಿಸುವ 'ಮಲಧಾರಿ' ಮುನಿಯು ಕ್ರಿ.ಶ. ೧೧೬೨ರ ಗುತ್ತಲ (ಹಾತಾ) ಶಾಸನದಲ್ಲಿ ಉದ್ಧೃತವಾಗಿದ್ದು, ಇಬ್ಬರೂ ಮಲಧಾರಿ ಮುನಿಗಳು

ಏಕೈಕ ಮುನಿಯಾಗಿದ್ದಾರೆ. ಬಾಳೇಹಳ್ಳಿ ಬಮ್ಮಿಶೆಟ್ಟಿ ಎಂಬುವನು ಬಸದಿಯೊಂದನ್ನು ಕಟ್ಟಿಸಿ ಅದರಲ್ಲಿ ಪಾರ್ಶ್ವನಾಥನ ಪ್ರತಿಮೆಯನ್ನು ಪ್ರತಿಷ್ಠೆ ಮಾಡಿ ಕುಕ್ಕುಟೇಶ ಮಲಧಾರಿ ದೇವರ ಕಾಲಂಕರ್ಚ್ಚಿ ಕೊಟ್ಟರೆ, ಇದೇ ಮಲಧಾರಿ ದೇವರ ಶಿಷ್ಯನಾದ ವಡ್ಡಬ್ಯವಹಾರಿ ಕೇತಿಸೆಟ್ಟಿ ಎಂಬುವನು ಗುತ್ತಲದಲ್ಲೊಂದು ಪಾರ್ಶ್ವನಾಥ ತೀರ್ಥಂಕರರ ಬಸದಿಯೊಂದನ್ನು ನಿರ್ಮಿಸಿದ.[೩೦೧]

'ಮಲಧಾರಿ' ಎಂಬುದು ಒಂದು ವಿಶೇಷಣ. ಮುನಿಯ ಹೆಸರೆ ಬೇರೆಯಿರುತ್ತದೆ. ಅತೀ ಕಠೋರ ವ್ರತಾಚರಣೆಗಳ ಮೂಲಕ ಈ ಅಭಿದಾನ ಪ್ರಾಪ್ತವಾಗಿರುತ್ತದೆ. ದೇಹದ ಮೇಲೆ ತಿಲಮಾತ್ರವೂ ಮೋಹವಿಲ್ಲದೆ, ಸ್ನಾನ ಮಾಡದೇ, ಹಲ್ಲುತಿಕ್ಕದೆ, ಮೈಗಂಟಿದ ಮಲ (ಹೊಲಸು, ಧೂಳು)ವನ್ನೇ ಸಿರಿಗಂಧದ ಲೆಪ್ಪವೆಂದು ಬಗೆದವರೆ ಮಲಧಾರಿಗಳು. ಪ್ರಸ್ತುತ ಕುಕ್ಕುಟೇಶ ಮಲಧಾರಿ ಮುನೀಂದ್ರ ಈ ನಿಯಮಗಳನ್ನು ಅನುಸರಿಸಿದ್ದರಿಂದಲೇ ಮಲಧಾರಿ ಅಭಿದಾನಕ್ಕೆ ಪಾತ್ರನಾಗಿದ್ದಾನೆ. 'ಮಲಧಾರಿ' ಅಭಿದಾನದ ಮುನಿವರ್ಯ್ಯರು ಕರ್ನಾಟಕದ ಪರಿಸರದಲ್ಲಿ ಸಾಕಷ್ಟು ಜನ ಇದ್ದು,[೩೦೨] ಕ್ರಿ.ಶ. ೧೧೧೯ ರ ಶ್ರವಣಬೆಳಗೊಳದಲ್ಲಿ ಬರುವ ಮಲಧಾರಿ ಮುನಿಯು ಮತ್ತು ಹಾವೇರಿ ಪರಿಸರದ ಕುಕ್ಕಟೇಶ ಮಲಧಾರಿ ಮುನಿಗಳ ಸಂಘ, ಗಣ, ಗಚ್ಛ, ಅನ್ವಯ ಒಂದೇ ಆಗಿರುವುದರಿಂದ ಇವರಿಬ್ಬರು ಅಭಿನ್ನರು. ಪ್ರಸ್ತುತ ಮಲಧಾರಿ ಮುನಿ ಅದೆಷ್ಟು ಕಠೋರ ವ್ರತಗಳ ಅನುಷ್ಠಾನಕರಾಗಿದ್ದರೆಂದರೆ

> ನೇಱಿಯೆತನುತ್ರಮಿಕ್ಕಿದವೊಲಿಳ್ದ್ದಿ ಮಲಂ ತಿನೆ ಮೆಯ್ಯನೊರ್ಮ್ಮೆಯುಂ
> ತುಱಿಸುವುದಿಲ್ಲ ನಿದ್ದೆವರೆ ಮಗ್ಗುಲನಿಕ್ಕುವುದಿಲ್ಲ ಬಾಗಿಲಂ
> ಕಿಱಿತೆಱೆಯಂಬುದಿಲ್ಲುಗಳ್ವದಿಲ್ಲ ಮಲಂಗುವುದಿಲ್ಲಹೀಂದ್ರನುಂ
> ನೇಱಿವನೆ ಬಣ್ಣಿಸಲ್ಗುಣಗಣಾವಳಿಯಂ ಮಳಧಾರಿದೇವರಂ.[೩೦೩]

ಮೈಗಂಟಿದ ಮಲದಿಂದ ತುರಿಕೆ ಬಂದರೂ ತುರಿಸದೆ, ನಿದ್ರೆಬಂದರೂ ಮಲಗದ, ಬಾಗಿಲನ್ನು ತೆರೆಯದ, ಮಲಗದ, ಉಗುಳದ ಮಳಧಾರಿಯ ಗುಣಾವಳಿಯನ್ನು ಅಹೀಂದ್ರ (ಅಹಿ+ಇಂದ್ರ=ಆದಿಶೇಷ)ನೂ ಬಣ್ಣಿಸಲಸಾಧ್ಯವಾದನು ಎಂಬ ಕವಿವಾಣಿ ಅತೀಶಯವೆನಲ್ಲ. ಮಳಧಾರಿ ಮುನಿ ಇರುವುದೇ ಹಾಗೇ ಸದಾ ತಪೋಮಗ್ನರು ಆದ್ದರಿಂದಲೆ ಈ ಅಭಿದಾನ.

ಪ್ರಸ್ತುತ ಮಲಧಾರಿಮುನಿಗೆ ಕುಕ್ಕುಟೇಶ ಎಂಬ ಇನ್ನೊಂದು ನಾಮವಿದ್ದು, ಕುಕ್ಕುಟಾಸನ ವಿಧಾನದಿಂದ ಈ ವಿಶೇಷಣ ಪ್ರಾಪ್ತವಾಗಿದೆ. ಕುಕ್ಕುಟದ ರೀತಿಯ ಧ್ಯಾನಭಂಗಿಯಿಂದ ಕುಕ್ಕುಟಾಸನ ಬಂದಿರಲಿಕ್ಕೆ ಸಾಕು. ಕುಕ್ಕುಟ ಎಂದರೆ ಹುಂಜ ಮತ್ತು ಕೋಳಿ ಎರಡೂ ಅರ್ಥ ಪ್ರಾಪ್ತಿಯಾಗುತ್ತದೆ. ಕುಕ್ಕುಟಾಸನದಲ್ಲಿ ಎರಡು ವಿಧ. ಒಂದು ಹುಂಜ ನಿಲುವಂತೆ ನಿಂತು ಕೋಳಿಯಂತೆ ಕುಳಿತು ಧ್ಯಾನ ಮಾಡುವುದು. ಇನ್ನು ಕುಕ್ಕುಟೇಶ್ವರ ಎಂದರೆ ಲೌಖಿಕ ಜಗತ್ತಿನಿಂದ ವಿಮುಖವಾಗಿ ಮನಸ್ಸನ್ನು

ಊರ್ಧ್ವಗೊಳಿಸಿ ತದೇಕಚಿತ್ತದ ಧ್ಯಾನದಲ್ಲಿ ಮುಳುಗಿ ದೃಢಸ್ತಂಭದಂತೆ ಪ್ರತಿಮಾ ಯೋಗದಲ್ಲಿ ನಿಲ್ಲುವವನು ಎಂದರ್ಥ. ಇಂಥಹ ಧ್ಯಾನಭಂಗಿಯಿಂದಲೇ ಶ್ರವಣಬೆಳಗೊಳದ ಗೊಮ್ಮಟನಿಗೆ 'ಉನ್ನತ ಕುಕ್ಕುಟೇಶ್ವರ' ಎಂಬ ಅಭಿದಾನವನ್ನು ರನ್ನ ಕವಿಯು ಉತ್ಕೀರ್ತಿಸಿದ್ದಾನೆ.

ಬ್ರಹ್ಮಶಿವನು ತನ್ನ 'ಸಮಯಪರೀಕ್ಷೆ' ಕೃತಿಯಲ್ಲಿ ಜಿನಮುನಿಗಳ ಚಾರಿತ್ರ್ಯವನ್ನು ವರ್ಣಿಸುವಾಗ ಕುಕ್ಕುಟಾಸನ ವಿಧಾನವನ್ನು ಹೇಳಿದ್ದಾನೆ. "ಜಿನಮುನಿಗಳು ತುರಿಕೆ ಬಂದರೂ ತುರುಸುವುದಿಲ್ಲ, ಮೈತುಂಬಾ ಮಲವನ್ನು ಧರಿಸಿರುತ್ತಾರೆ, ಕುಕ್ಕುಟದ ತೆರದಿ ಕುಳಿತುಕೊಳ್ಳುತ್ತಾರೆ. ಒಂದೇ ಮಗ್ಗುಲಲ್ಲಿ ಮಲಗುತ್ತಾರೆ, ರಾತ್ರಿ ಪ್ರತಿಮೆ ನಿಂತಂತೆ ನಿಂತು ಯೋಗಮಗ್ನರಾಗುತ್ತಾರೆ"[೩೦೪] ಎಂದಿದ್ದಾನೆ. ಪ್ರಸ್ತುತ ಹಾವೇರಿ ಪರಿಸರದಲ್ಲಿ ಸಂಚರಿಸಿದ ಕುಕ್ಕುಟೇಶ ಮಲಧಾರಿ ಮುನಿಯಲ್ಲಿ ಈ ಎಲ್ಲ ವಿಧಾನಗಳು ನಿತ್ಯವಾಗಿದ್ದವು.

### ೩.೧೬ ಬಾಳಚಂದ್ರ ಸಿದ್ಧಾಂತದೇವ (೧೨ನೆಯ ಶತಮಾನ).

ದೇವಗಿರಿ (ಹಾತಾ) ಯ ೨ನೆಯ ಜಗದೇಕಮಲ್ಲನ ಕ್ರಿ.ಶ. ೧೧೩೯ರ ಶಾಸನದಲ್ಲಿ ಬಾಳಚಂದ್ರ ಸಿದ್ಧಾಂತದೇವ ಮುನಿಯ ಉಲ್ಲೆಖವಿದೆ.[೩೦೫] ಈ ಮುನಿಯು ಮೂಲಸಂಘ ದೇಸಿಯಗಣ ವಕ್ರಗಚ್ಛ ಮುನಿಪರಂಪರೆಯಲ್ಲಿ ಗುರುತಿಸಿಕೊಂಡಿದ್ದರು. ಬಾಸವೂರು ೧೪೦ರ ಅಧಿಕಾರಿ ಕಲಿಯಮರಸ ದೇವಗಿರಿಯಲ್ಲೊಂದು ಶಾನ್ತಿನಾಥ ಜಿನಾಲಯವನ್ನು ಸ್ಥಾಪಿಸಿ ದತ್ತಿ ಕೊಡುವಾಗ ಈ ಮುನಿಯ ಉಲ್ಲೇಖ ದೊರೆಯುತ್ತದೆ. ಗಣ ಗಚ್ಛ ಹೊರತಾಗಿ ಬಾಳಚಂದ್ರ ಮುನಿಯ ಹೆಚ್ಚಿನ ಮಾಹಿತಿ ದೇವಗಿರಿ ಶಾಸನದಲ್ಲಿ ಅಲಭ್ಯ.

ಮೂಲಸಂಘ ದೇಸಿಯಗಣ ವಕ್ರಗಚ್ಛ ಕೊಣ್ಡಕುಂದಾನ್ವಯ ಪರಿಯಳಿಯ ವಡ್ಡದೇವರ ಬಳಿಯ ದೇವೇಂದ್ರ ಸಿದ್ಧಾನ್ತದೇವರ ಶಿಷ್ಯ ಪರಂಪರೆಯಲ್ಲಿ ಬಾಳಚಂದ್ರ ಸಿದ್ಧಾನ್ತಮುನಿಯೂ ಒಬ್ಬರು ಎಂದು ಶ್ರವಣಬೆಳಗೊಳದ ಶಾಸನವೊಂದ ಸವಿವರವನ್ನು ನೀಡುತ್ತದೆ.[೩೦೬] ತ್ರಿರತ್ನನಂದಿ ಭಟ್ಟಾರಕದೇವರ ಸದ್ಧರ್ಮರಲ್ಲಿ ಕಲ್ಯಾಣಕೀರ್ತಿ ಭಟ್ಟಾರಕ, ಮೇಘಚಂದ್ರ ಪಂಡಿತದೇವ, ಬಾಳಚಂದ್ರ ಸಿದ್ಧಾನ್ತದೇವ ಪ್ರಮುಖರು. ಈ "ಬಾಳಚಂದ್ರ ಮುನಿಗಳು ವಾಗ್ದೇವಿಯ ಜ್ಞಾನ ನೇತ್ರರಾಗಿ, ಜಿನಧರ್ಮಾಂಬುಧಿ ಚಂದ್ರರಾಗಿ, ವ್ಯಾಕರಣ ಕನ್ಯೆಯ ಲೋಚನ ಚಕೋರ ಚಂದ್ರರಾಗಿ, ಕಾವ್ಯಲಕ್ಷ್ಮಿಯ ಕಡೆ ಕಟಾಕ್ಷ ಬೀರುವ ಕಲೆಯ ಶಿಕ್ಷಾಚಾರ್ಯರಾಗಿ ರಾರಾಜಿಸಿದರು. ಮೂಲಸಂಘ ಕಮಲಾಕರ ರಾಜಹಂಸರೂ, ದೇಶಿಯಗಣಭೂಷಣರೂ, ವಕ್ರಗಚ್ಛ ತಿಳಕರೂ ಸಿದ್ಧಾಂತಾದಿ ಅಖಿಳಾಗಮ ವ್ಯಾಖ್ಯಾನ ಪ್ರವೀಣರೂ, ಆತ್ಮವಿಜ್ಞಾನ ತತ್ವ ನಿರ್ಣಯಕಾರರೂ, ವ್ಯಾಕರಣ, ಅರ್ಥಶಾಸ್ತ್ರ, ಭರತಶಾಸ್ತ್ರ, ಸಾಹಿತ್ಯ ಇವುಗಳಲ್ಲಿ ಪ್ರವೀಣರೂ ಆದ ಬಾಳಚಂದ್ರಮುನಿಗಳಂತೆ ಲೋಕವಿಖ್ಯಾತರಾದವರು

ಯಾರಿದ್ದಾರೆ?"[೩೦೭] ಎಂದು ಬಾಳಚಂದ್ರ ಸಿದ್ಧಾಂತದೇವ ಮುನಿಯನ್ನು ಶಾಸನಕವಿಯು ಕೊಂಡಾಡಿದ್ದಾನೆ.

## ೩.೧೭ ಸೋಮದೇವ (೧೨ನೆಯ ಶತಮಾನ).

ಹಾವೇರಿ ತಾಲ್ಲೂಕಿನ ಅಕ್ಕೂರು ಗ್ರಾಮದಲ್ಲಿ ವೀರಭದ್ರೇಶ್ವರ ದೇವಾಲಯದಲ್ಲಿರುವ ಜಿನಸಾಸನವು ಸೋಮದೇವಕುಮಾರ ಮುನಿಯನ್ನು ಉಲ್ಲೇಖಿಸುತ್ತದೆ.[೩೦೮] 'ಕುಮಾರ' ಎಂಬ ಪದ ಬಳಕೆಯು ಅವಿವಾಹಿತ ಎಂಬ ಅರ್ಥ ಕೊಡುವುದರಿಂದ ಸೋಮದೇವ ಮುನಿಯು ಬಾಲ್ಯದಲ್ಲಿಯೇ ಸಂನ್ಯಾಸಿಯಾಗಿದ್ದಂತೆ ತೋರುತ್ತದೆ. ಮೂಲಸಂಘ ದೇವಗಣಕ್ಕೆ ಸೇರಿದ ಈ ಮುನಿಯ ಗುರು ಮುನಿಹಿತಕರನಾದ ಸುಧಾರಕದೇವ, ಸಾತೋಜ ರಾಮೋಜರು ಸೋಮದೇವಕುಮಾರನ ಶಿಷ್ಯ ಶ್ರಾವಕರಾಗಿದ್ದು, ಅಕ್ಕೂರಲ್ಲಿ ಒಂದು ಶಾಂತಿನಾಥ ಬಸದಿಯನ್ನು ಮಾಡಿಸಿದರು. ಸೋಮದೇವಕುಮಾರ ಮುನಿಯನ್ನು ಶಾಸನದಲ್ಲಿ 'ದೇವಗಣಕುಮುದಚಂದ್ರ', 'ದೇವಗಣ ಪ್ರಣುತ', 'ಜಿನಮತಾಂಬುದಿಚಂದ್ರ', 'ಪಾವನ ಚರಿತ್ರಚಿತ್ರ', 'ಶುದ್ಧಾತ್ಮ' ಎಂದು ಹೊಗಳಲಾಗಿದೆ. ಈ ವಿಶೇಶಣಗಳು ಸೋಮದೇವ ಕುಮಾರ ಮುನಿ ಮೂಲಸಂಘ ದೇವಗಣದ ಪ್ರಭಾವಿಮುನಿ ಎಂಬುದು ಸ್ಪಷ್ಟ ಪಡಿಸುತ್ತವೆ.

## ೩.೧೮ ಶ್ರೀಮತಿ ಅವ್ವೆ (೧೨ನೆಯ ಶತಮಾನ).

ಕರ್ನಾಟಕ ಜೈನಧರ್ಮ ಪರಂಪರೆಯಲ್ಲಿ ಮೊದಲ ಜೈನಧರ್ಮ ಆಚಾರ್ಯಳಾಗಿ ಶ್ರೀಮತಿ ಅವ್ವೆ ಕಂಡುಬರುತ್ತಾಳೆ. ಹಾವೇರಿ ಪರಿಸರದ ಸ್ಥಳೀಯ ಮೊದಲ ಕಂತಿ ಶ್ರೀಮತಿ ಅವ್ವೆ. ಈಗಿನ ಹೊಸರಿತ್ತಿ (ಹಾತಾ) ಪ್ರದೇಶ ಈ ಕಂತಿಯ ಮೂಲನೆಲೆ. ಮೂಲಸಂಘ ಸೂರಸ್ಥಗಣ ಚಿತ್ರಕೂಟಾನ್ವಯ ಹರಿಣನ್ದಿ ಭಟ್ಟಾರಕ ಶಿಷ್ಯ ಪರಂಪರೆಯಲ್ಲಿ ಶ್ರೀಮತಿ ಅವ್ವೆಯು ಒಬ್ಬಳು. "ಸ್ವಸ್ತಿಶ್ರೀ ಮನ್ಮಹಾ ಮಂಡಳಾಚಾರ್ಯ್ಯರಪ್ಪ ಹರಿಣಂದಿ ಭಟ್ಟಾರಕ ದೇವರ ಶಿಷ್ಯತಿ ರಿತ್ತಿ ಬೀಡಿನ ಶ್ರೀಮತಿಯವ್ವೆಗಳು ಚತುರ್ವ್ವಿಂಶತಿ ತೀರ್ತ್ಥ ದೇವರ ಬಸದಿಗಾಚಾರ್ಯ್ಯಗನ್ತಿಯರು"[೩೦೯] ಎಂಬ ಶಾಸನವಾಕ್ಕುಗಳಿಂದ ತಿಳಿಯುತ್ತದೆ. ಇಲ್ಲಿ ಗಮನಿಸಬೇಕಾದ ವಿಶೇಷ ವಿಚಾರವೆಂದರೆ ಮಂತಗಿ ಚೌವ್ವೀಸ ತೀರ್ಥಂಕರರ ಬಸದಿಗೆ ಶ್ರೀಮತಿ ಅವ್ವೆ ಆಚಾರ್ಯಳಾಗಿದ್ದಳು ಎಂಬುದು. ಜೈನಧರ್ಮದಲ್ಲಿ ಇಂತಹದೊಂದು ಧಾರ್ಮಿಕ ಪದವಿ ದೊರೆತದ್ದು ಇದೇ ಮೊದಲ್ಗೊಂಡಂತಿದೆ. ಈ ಹಿಂದೆ ದಿಗಂಬರ ಪಂಥದಲ್ಲಿ ಸ್ತ್ರೀಗೆ ಆಚಾರ್ಯ ಪದವಿಯನ್ನು ಕೊಟ್ಟ ಉದಾಹರಣೆಗಳಿಲ್ಲ. ೧೨ನೆಯ ಶತಮಾನದ ಹೊತ್ತಿಗೆ ಮೂಲಸಂಘ ಸ್ತ್ರೀಯ ಅಧಿಕಾರಗಳನ್ನು ಮಹೋನ್ನತಗೊಳಿಸಿದ್ದು ವಿಮರ್ಷನೀಯ. ಈ ಬದಲಾವಣೆ ಯಾಪನೀಯ ಸಂಘದಿಂದ ಬಂದದ್ದು. 'ಸ್ತ್ರೀಣಾಂ ತದ್ಭವೇ ಮೋಕ್ಷಃ' ಎಂಬ ತತ್ವದಡಿಯಲ್ಲಿ ಯಾಪನೀಯರು ಸ್ತ್ರೀಗೂ ಧಾರ್ಮಿಕ ಸ್ವತಂತ್ರವನ್ನು

ಉಚಿತಗೊಳಿಸಿದ್ದರು. ೧೨ನೆಯ ಶತಮಾನದ ಹೊತ್ತಿಗೆ ಯಾಪನೀಯರು ಮೂಲಸಂಘದಲ್ಲಿ ವಿಲೀನಗೊಂಡಾಗ ಅವರ ಕೆಲವೊಂದು ತತ್ವಗಳು ಮೂಲಸಂಘದಲ್ಲಿ ಒಡಂಬಟ್ಟವು. ತತ್ಪರಿಣಾಮವಾಗಿ ಶ್ರೀಮತಿ ಅವ್ವೆಗೆ ಬಸದಿಯ್ಯಾಚಾರ್ಯ ಪದವಿ ಗೌರವ ದೊರೆಯಿತು.

### ೩.೧೯ ನಾಗಚಂದ್ರಮುನಿಪ (೧೩ನೆಯ ಶತಮಾನ).

ಮೂಲಸಂಘ ಸೂರಸ್ಥಗಣ ಪೂಜ್ಯಪಾದಾನ್ವಯ ಚಿತ್ರಕೂಟಾನ್ವಯ ಮುನಿ ಪರಂಪರೆಗೆ ಸೇರುವ ನಾಗಚಂದ್ರ ಮುನಿಯು ಕ್ರಿ.ಶ. ೧೨೨೬ರ ಸುಣಕಲ್ಲಬಿದರೆ (ರಾತಾ) ನಿಸಿಧಿ ಶಾಸನದಲ್ಲಿ ಹಾವೇರಿ ಜಿಲ್ಲೆಗೆ ಅನ್ವಯಿಸುವಂತೆ ಮೊದಲು ಕಂಡುಬರುತ್ತಾರೆ.[೩೧೦] ಮಂಡಳಾಚಾರ್ಯರಾದ ನಾಗಚಂದ್ರ ಮುನಿಯು "ವರ ಸೂರಸ್ತಗಣಾಗ್ರಣ್ಯನಮಳ ಶ್ರೀಮೂಲಸಂಘಾನ್ವಯಾಂಬರಹಂಸ ಪರಮಾಗಮೋದಿತ ಸುಧಾಭೋರಾಸಿಚಂದ್ರ ದಿಗಂಬರ ಸಂಸೋಭಿತ" ಎಂದು ಸುಣಕಲ್ಲಬಿದರೆಯ ನಿಸಿಧಿ ಶಾಸನ ಕೊಂಡಾಡಿದೆ. ಈ ಮುನಿಯು ಹರಿಣಂದಿ ಬ್ರತಿನಾಥನ ಶಿಷ್ಯರಾಗಿದ್ದರೆಂದು ನೇರಲಗಿ (ಹಾತಾ) ಮತ್ತು ಕರಗುದರೆ (ಹಾನತಾ) ಶಾಸನಗಳು ತಿಳಿಸುತ್ತವೆ.[೩೧೧] ನಾಗಚಂದ್ರ ಮುನಿಗೆ ನಂನ್ದಿಮುನಿಪ, ಜಯಕೀರ್ತಿಭಟಾರ, ಮಾಣಿಕ್ಯದೇವ, ಬಾಳಚಂದ್ರ ತ್ರೈವಿದ್ಯಾದೇವ ಎಂಬ ಪ್ರಬುದ್ಧ ಮುನಿ ಶಿಷ್ಯರಿದ್ದರು.[೩೧೨]

"ಅತ್ಯಧಿಕ ಪ್ರಸರಣ ಹೊಂದಿದ ಮೂಲಸಂಘದ ಗಣಗಳಲ್ಲಿ ಸೂರಸ್ತಗಣವೂ ಒಂದು. ಇದರ ಅನ್ವಯಗಳಲ್ಲಿ ಚಿತ್ರಕೂಟಾನ್ವಯವು ಪ್ರಸಿದ್ಧಿ ಪಡೆದಿತ್ತು. ಚಿತ್ರಕೂಟಾನ್ವಯದಲಿದ್ದು ಅದರ ಪ್ರಸರಣವನ್ನು ಮತ್ತಷ್ಟು ಹೆಚ್ಚಿಸುತ್ತಾ ಮತ್ತೊಂದು ಹೊಸ ಅನ್ವಯ ಪರಂಪರೆಯನ್ನು ಹುಟ್ಟುಹಾಕಿದ ಕೀರ್ತಿ ನಾಗಚಂದ್ರರಿಗೆ ಸಲ್ಲುತ್ತದೆ. ಈ ಹೊಸ ಅನ್ವಯದ ಹೆಸರು 'ಲತಾನ್ವಯ' ಶಾಸನದಲ್ಲಿ ನಾಗಚಂದ್ರರನ್ನು 'ಲತಾನ್ವಯ ಕೋರಕ' ಎಂದೇ ಕರೆಯಲಾಗಿದೆ. ಕೋರಕ ಎಂದರೆ ಮೊಗ್ಗು, ನನೆ ಎಂದರ್ಥ. ಮೊಗ್ಗು ಎಂದರೆ ಮೊದಲು. ನಂತರ ಹೂ. ಒಟ್ಟಾರೆ ಅರ್ಥದಲ್ಲಿ ಮೊಗ್ಗನ್ನು ಒಂದು ಚಟುವಟಿಕೆಯ ಪ್ರಾರಂಭ ಎಂದು ಅರ್ಥೈಯಿಸಬಹುದು. ಅಂತೆಯೇ ಲತಾನ್ವಯ ಎಂಬ ಮುನಿಗುಂಪಿನ ಮೊದಲ ಮೊಗ್ಗು ನಾಗಚಂದ್ರಮುನಿ.[೩೧೩] ನಾಗಚಂದ್ರ ಮುನಿಪ, ನಾಗಚಂದ್ರ ಬ್ರತೀಶ್ವರ, ನಾಗಚಂದ್ರ ಭಟಾರ, ನಾಗಚಂದ್ರಮುನಿ, ನಾಗಚಂದ್ರ ಬ್ರತೀಂದ್ರ ಎಂದು ನಾಗಚಂದ್ರ ಮುನಿಗೆ ವಿವಿಧ ನಾಮಾವಳಿಗಳಿದ್ದವು ಎಂಬುದು ಹಾವೇರಿ ಪರಿಸರದ ವಿವಿಧ ಶಾಸನಗಳಿಂದ ತಿಳಿದುಬರುತ್ತದೆ. ಸುಣಕಲ್ಲುಬಿದರೆ (ರಾತಾ) ಯ ಬೊಪ್ಪಿಸೆಟ್ಟಿ ಮತ್ತು ಆಲದಗೆರೆಯ ಅನಾಮಧೇಯ ವ್ಯಕ್ತಿಗೆ ಇವರು ಸಲ್ಲೇಖನ ಬೋಧಿಸಿದ್ದಾರೆ.[೩೧೪] ಹಾನಗಲ್ಲಿನ ಕಲಿದೇವ ಸೆಟ್ಟಿಯು ಮಂತಗೆಯಲ್ಲಿ ಚತರ್ವಿಂಶತಿ ತೀರ್ಥಂಕರರನ್ನು ಸ್ಥಾಪಿಸಿ ನಾಗಚಂದ್ರಭಟ್ಟಾರಕರಿಗೆ ದಾನ ನೀಡಿದ್ದು ಗಮನಾರ್ಹ.[೩೧೫]

## ೩.೨೦ ಕುಮಾರಸೇನ (೧೩ನೆಯ ಶತಮಾನ).

ಕ್ರಿ.ಶ. ೧೨೪೫ರ ಹಿರೇಅಣಜಿ (ಬ್ಯಾತಾ)ಯ ನಿಸಿಧಿಯಲ್ಲಿ ಕುಮಾರಸೇನ ಮುನಿಯ ಉಲ್ಲೇಖ ಕಂಡುಬರುತ್ತದೆ. ಸೋಯಸೆಟ್ಟಿಯ ಹೆಂಡತಿಗೆ ಈ ಮುನಿಯು ಸಲ್ಲೇಖನ ಬೋಧಿಸಿದ್ದಾರೆ.[೩೧೬] ಕ್ರಿ.ಶ ೧೨೬೭ರಲ್ಲಿ ಆಡೂರು (ಹಾತಾ) ಶಾಸನದಲ್ಲಿ ಕುಮಾರಸೇನ ಮುನಿಯು ಮೂಲಸಂಘ ಸೇನಗಣಕ್ಕೆ ಸೇರಿದವರೆಂದಿ ಉಲ್ಲೇಖಿಸಲಾಗಿದೆ.[೩೧೭] ಮೂಲಸಂಘ ಸೇನಗಣವು ಹಾವೇರಿ ಪರಿಸರದಲ್ಲಿ ತನ್ನ ಊರ್ಜಿತಾವಸ್ಥೆಯನ್ನು ಕಂಡುಕೊಂಡಿದ್ದು, ಅಜಿತಸೇನಾಚಾರ್ಯರ ನೇತೃತ್ವದಲ್ಲಿ ಬಂಕಾಪುರವನ್ನು ವಿದ್ಯಾಕೇಂದ್ರವನ್ನಾಗಿಸಿದ್ದು ದಿಟ. ಈ ಸೇನಗಣದ ಮುನಿಪರಂಪರೆಯ ಮುಂದುವರೆಕೆ ಕುಮಾರಸೇನದೇವ. ಈ ಮುನಿಯ ಗುಡ್ಡಿಯಾದ ನಾಳ್ಪ್ರಭು ಹರಿಯಮಗಾಮುಂಡನ ಹೆಂಡತಿ ಕನಕಿಗಾವುಂಡಿ ಆಡೂರಲ್ಲಿ ಸಮಾಧಿ ವಿಧಾನದಿಂದ ಮುಡಿಸಿದಳು. ಗೋಕಾಕ ತಾಲ್ಲೂಕಿನ ಕೊಣ್ಣೂರಿನ ಪಾದಪೀಠ ಶಾಸನವೊಂದರಲ್ಲಿ ಕುಮಾರಸೇನ ಮುನಿಯ ಉಲ್ಲೇಖವಿದೆ.[೩೧೮]

## ೩.೨೧ ಕಲ್ಯಾಣಕೀರ್ತಿ ಭಟ್ಟಾರಕ (೧೩ನೆಯ ಶತಮಾನ).

ಹಿರೇಕೇರೂರು ತಾಲ್ಲೂಕು ಹಿರೇಕೊಣತಿಯ ಎರಡು ನಿಸಿಧಿ ಶಾಸನಗಳಲ್ಲಿ ಈ ಮುನಿಯ ಪ್ರಸ್ತಾಪವಿದೆ. ಕಲ್ಯಾಣಕೀರ್ತಿಯು ನಿರ್ಯಾಪಕಾಚಾರ್ಯರಾಗಿ ತಮ್ಮ ಶಿಷ್ಯರಾದ 'ಬಮ್ಮಯ್ಯ'ನಿಗೆ ಕ್ರಿ.ಶ. ೧೨೪೫ರಲ್ಲಿ, ಇದೇ ಊರ ಇನ್ನೊಬ್ಬ ಶಿಷ್ಯನಿಗೆ (ತ್ರುಟಿತ) ಕ್ರಿ.ಶ. ೧೨೬೩ರಲ್ಲಿ ಸಮಾಧಿವಿಧಿಯನ್ನು ಬೋಧಿಸಿದ್ದಾರೆ.[೩೧೯] ೧೭ ವರ್ಷದ ಅಂತರದಲ್ಲಿ ಎರಡು ಸಾರಿ ಈ ಮುನಿಯು ಹಿರೇಕೋಣತಿಗೆ ಬಂದಿದ್ದಾರೆ. ಆದ್ದರಿಂದ ಹಾವೇರಿ ಪರಿಸರದೊಂದಿಗೆ ಕಲ್ಯಾಣಕೀರ್ತಿ ಭಟ್ಟಾರಕರು ಹೆಚ್ಚು ಒಡನಾಡಿಗಳಾಗಿದ್ದರೆಂದು ತೊರುತ್ತದೆ. ಮೂಲ ಸಂಘ ದೇಶೀಯಗಣ ವಕ್ರಗಚ್ಛದ ಕೊಂಣ್ಡಕುಂದಾನ್ವಯ ಪರಿಯಳಿಯ ವಡ್ಡದೇವರ ಬಳಿಯ ಮುನಿಪರಂಪರೆಯಲ್ಲಿ ಕಲ್ಯಾಣಕೀರ್ತ್ತಿ ಭಟ್ಟಾರಕ ಒಬ್ಬರಾಗಿದ್ದು, ತ್ರಿರತ್ನ ನಂದಿಭಟ್ಟಾರಕರ ಸಧರ್ಮ್ಮ (ಸಹಪಾಠಿ)ರಾಗಿದ್ದರು.[೩೨೦] ಅಲ್ಲದೇ ಇದೇ ಶಾಸನವು ಕಲ್ಯಾಣಕೀರ್ತಿ ಭಟ್ಟಾರಕ "ಶಾಕಿನ್ಯಾದಿಗ್ರಹಾಣಾಂ ಚ ನಿರ್ದ್ಧಾಟನದುರ್ದ್ಧರು" ಎಂದಿರುವುದರಿಂದ ಶಾಕಿನಿಯಂಥಹ ಭೂತಗಳನ್ನು ಓಡಿಸುವಲ್ಲಿ ಇವರು ಸಿದ್ಧ ಹಸ್ತರಾಗಿದ್ದರು. ಈ ಅಂಶದಿಂದ ೧೩ನೆಯ ಶತಮಾನದಲ್ಲಿ ಕೆಲವು ಜಿನಮುನಿಗಳನ್ನು ಯಂತ್ರ-ತಂತ್ರದಂತಹ ವಿದ್ಯೆಯು ಆಕರ್ಷಿಸಿದ್ದು ದಿಟವಾಗುತ್ತದೆ.

## ೩.೨೨ ನಂನ್ದಿಭಟ್ಟಾರಕ ದೇವ (೧೩ನೆಯ ಶತಮಾನ).

ಹಾವೇರಿ ಪರಿಸರದ ಬಹುತೇಕ ಭಾಗಗಳಲ್ಲಿ ಸಂಚರಿಸಿದ ಮುನಿ ನನ್ದಿಭಟಾರಕ, ನಿಡಸಿಂಗಿ, ಹೆರೂರು, ಶಾಡಗುಪ್ಪಿ (ಹಾನತಾ), ಆಲದಗೆರೆ (ಹಿತಾ) ಕಡಕೋಳ ಹತ್ತಿಮತ್ತೂರು(ಸತಾ), ಹಾವೇರಿ

(ಹಾತಾ), ಮಾಕನೂರು (ರಾತಾ) ಎಂಬ ಎಂಟು ಜೈನ ಜೈನಕೇಂದ್ರಗಳಲ್ಲಿ ಹಲವಾರು ಭಾರಿ ಉಲ್ಲೇಖಗೊಂಡಿದ್ದಾರೆ. ಹಾವೇರಿ ಪರಿಸರದ ಇಷ್ಟೊಂದು ಶಾಸನಗಳಲ್ಲಿ ಉದ್ಧೃತವಾಗಿರುವ ಈ ಮುನಿ ಈ ಭಾಗದ ಜೈನಧರ್ಮದ ಪುನರುದ್ಧಾರಕ ಎಂದರೆ ತಪ್ಪಾಗಲಾರದು. ಮೂಲಸಂಘ ಸೂರಸ್ಥಗಣ ಚಿತ್ರಕೂಟಾನ್ವಯ ಮತು ಪೂಜ್ಯಪಾದಾನ್ವಯಕ್ಕೆ ಸೇರಿದ ನಂದಿಭಟ್ಟಾರಮುನಿಯು ನಾಗಚಂದ್ರ ಮುನಿಯ ಶಿಷ್ಯ, ನಂದಿಭಟ್ಟಾರಗೆ ಜಯಕೀರ್ತಿ, ಮಾಣಿಕದೇವ, ಬಾಳಚಂದ್ರ ತ್ರೈವಿದ್ಯಾದೇವ ಎಂಬ ಶಿಷ್ಯ ಪರಂಪರೆ ಇದ್ದಿತು.

ನಂನ್ದಿಭಟ್ಟಾರಕ ಮುನಿಯು ಕ್ರಿ.ಶ. ೧೨೪೫ರಲ್ಲಿ ಕಡಕುಳ (ಸತಾ)ದ ದೇವಗಾಮುಂಡ ಗೌರಿಗೌಡಿಯ ಮಗಳು, ಹೇರೂರು ಕೇಸಮಗಾಮುಂಡನ ಹೆಂಡತಿ (ಮದವಳಿಗೆ) ಯಾದ ಕನಕವ್ವೆಗೆ, ಕಡಕುಳದ ಅದೇ ದಂಪತಿಯ ಮಗಳೂ ಮಣಿಗವತ್ತಿಯ ಹೆಗ್ಗಡೆಯ ಮಲ್ಲಯನ ಮದವಳಿಗೆಯಾದ ನಾಗವ್ವೆಗೆ ಕ್ರಿ.ಶ. ೧೨೫೯ರಲ್ಲಿ,[೩೨೧] ಕ್ರಿ.ಶ.೧೨೬೮ರಲ್ಲಿ ಸೆಡಗುಪ್ಪೆ (ಹಾನತಾ) ಯ 'ಗುಣವತಿ', 'ಮಹಾಸತಿ'ಯಾದ ಯಚವೆಗೆ,[೩೨೨] ಇದೇ ವರ್ಷ ಕಡಕುಳ (ಸತಾ)ದ ಸಾವಂತ(ನಾಯಕ) ದೇವಗಾವುಂಡನ ಮಗ ಮಾರಗಾವುಂಡನಿಗೆ,[೩೨೩] ಹತ್ತಿಮತ್ತೂರ (ಸತಾ) ಶಿಷ್ಯನೊಬ್ಬನಿಗೆ,[೩೨೪] ಮಾಕನೂರು (ರಾತಾ) ಬೊಪ್ಪಗೌಡನಿಗೆ[೩೨೫] ಹೀಗೆ ಅನೇಕ ಶ್ರಾವಕರಿಗೆ ಇವರು ಸಲ್ಲೇಖನ ಬೋಧಿಸಿದ್ದಾರೆ.

ಜೈನಧರ್ಮದಲ್ಲಿ ಸಲ್ಲೇಖನ ವ್ರತಕ್ಕೆ ಅತ್ಯುಚ್ಚ ಸ್ಥಾನವಿದೆ. ಈ ವ್ರತ ಎಷ್ಟು ಉನ್ನತವೋ; ಅದನ್ನಾಚರಿಸುವ ಪ್ರದೇಶ ಅಷ್ಟೇ ಪವಿತ್ರವಾಗಿರಬೇಕು ಎಂಬುದು ಪ್ರಾಚೀನ ಜಿನಿಮುನಿಗಳಲ್ಲಿ ಇದ್ದಂತೆ ತೋರುತ್ತದೆ. ಅಂತೆಯೇ ಅವರು ಸಾವನ್ನು ಆಹ್ವಾನಿಸುವಾಗ ಮೊದಮೊದಲು ಕಳ್ವಪ್ಪು (ಶವಣಬೆಳಗೊಳ) ತದನಂತರ ಕೋಪಣ (ಕೊಪ್ಪಳವನ್ನು ಆಯ್ದುಕೊಂಡರು. ಹತ್ತನೆಯ ಶತಮಾನದ ನಂತರ ಈ ಭಾವನೆಗಳು ಮರೆಯಾಗಿ ಕರ್ನಾಟಕದ ಒಂದು ಕುಗ್ರಾಮದಲ್ಲಿಯೂ ಮುನಿಗಳು ಸಲ್ಲೇಖನ ವ್ರತವನ್ನು ತೆಗೆದುಕೊಳ್ಳಲು ಪ್ರಾರಂಭಿಸಿದರು. ಭೂಮಿಯ ಪ್ರತಿಯೊಂದು ಭಾಗವೂ ಶ್ರೇಷ್ಠವೇ ಎಂಬ ಮನೋಭಾವನೆಯಿಂದ ಹಾವೇರಿ ಪರಿಸರದಲ್ಲಿ ಮೂರು ಮುನಿಗಳು ಸಾವನ್ನು ಆಹ್ವಾನಿಸಿದ್ದಾರೆ.

ಹಾವೇರಿ ಪರಿಸರದಲ್ಲಿ ಇದುವರೆಗೂ ದೊರೆತ ಶಾಸನ ಆಕರಗಳಿಂದ ಸಾವನ್ನು ಆಹ್ವಾನಿಸಿದ ಮೊದಲ ಮುನಿ ಮಲಧಾರಿ ನರೇಂದ್ರ ಮುನಿಗಳು. ಸವಣೂರು ಹನುಮಂತ ದೇವರ ಗುಡಿಯ ಮುಂದಿರುವ ೧೨ನೆಯ ಶತಮಾನದ ನಿಸಿಧಿ ಶಾಸನ ಈ ಹೇಳಿಕೆಗೆ ಪ್ರಮಾಣವಾಗಿಸಬಹುದು.[೩೨೬] ನಿಸಿಧಿ ಈ ಊರಲ್ಲೇ ಇರುವುದರಿಂದ ಮಲಧಾರಿ ನರೇಂದ್ರ ಮುನಿಗಳು ಸವಣೂರಲ್ಲೇ ಪ್ರಾಣತ್ಯಾಗ ಮಾಡಿದ್ದು ದಿಟ. ಮೇಲಾಗಿ ಸವಣೂರು ಸವಣರ ನಿತ್ಯಸಂಪರ್ಕದಿಂದ ತನ್ನ ಹೆಸರನ್ನು

ಪಡೆದುಕೊಂಡಿತ್ತು. ಅಂತೆಯೇ ಇದೊಂದು ಪವಿತ್ರ ಭೂಮಿ ಎಂದರಿತ ಮಲಧಾರಿ ನರೇಂದ್ರಮುನಿಗಳು ಸಂನ್ಯಸನ ವಿಧಾನದಲ್ಲಿ ದೇಹತ್ಯಾಗ ಮಾಡಿದರು. ದೇವಗಣಕ್ಕೆ ಸೇರುವ ಈ ಮುನಿಯ ಹೆಚ್ಚಿನ ಮಾಹಿತಿ ಅಲಭ್ಯ. ಇವರ ನಿಸಿಧಿ ಶಿಲ್ಪ ಮನೋಜ್ಞವಾಗಿದ್ದು ಗುರು-ಶಿಷ್ಯರನ್ನು ಜಿನಸನ್ನಿಧಿಯಲ್ಲಿ ಚಿತ್ರಿಸಲಾಗಿದೆ. ಮಲಧಾರಿ ನರೇಂದ್ರ ಮುನಿಯ ಗುರು ಯಾರೆಂಬುದು ಶಾಸನದಲ್ಲಿ ಉಲ್ಲೇಖವಾಗಿಲ್ಲ.

ತುಂಗಭದ್ರೆಯ ಎಡದಂಡೆ ಪಾತ್ರದ ಗ್ರಾಮ ನೆಗಳೂರಲ್ಲಿ (ಹಾತಾ) ಜೈನಧರ್ಮ ಅವ್ಯಾಹತವಾಗಿತ್ತು. ಬಸದಿಯೂ ಇಲ್ಲಿತ್ತು. ಇಲ್ಲಿ ಕ್ರಿ.ಶ.೧೨೫೧ರಲ್ಲಿ ಸಕಳಚಂದ್ರದೇವ ಎಂಬ ಮುನಿಯು ಸಕಲಸನ್ಯಸನ ವಿಧಾನದಿಂದ ಪ್ರಾಣತ್ಯಾಗ ಮಾಡಿದರು.[೨೭] ಈ ಮುನಿಯ ಗುರು ವಿಮಳಚಂದ್ರದೇವ ಸಕಳಚಂದ್ರದೇವ ಮುನಿಯ ನಿಸಿಧಿ ಸ್ಮಾರಕವು ಇಂದಿನ ಮೈಲಾರ ಗುಡಿಯ ಎಡ ಭಾಗಕ್ಕೆ ನೆಡಲಾಗಿದೆ. ಈ ಮುನಿಯ ಗಣ, ಗಚ್ಚಗಳ ಬಗ್ಗೆ ಹೆಚ್ಚಿನ ಮಾಹಿತಿ ದೊರೆತಿಲ್ಲ.

ಹಾವೇರಿ ಪರಿಸರದಲ್ಲಿ ಮೂರನೆಯ ಮುನಿನಿಸಿಧಿ ಆಲದಗೆರೆ (ಹಿತಾ)ಯಲ್ಲಿ ದೊರೆಯುತ್ತದೆ. ಕ್ರಿ.ಶ. ೧೨೫೭ರಲ್ಲಿ ಮಾಣಿಕದೇವ ಮುನಿಯು ಸಕಳ ಸಂನ್ಯಸನ ವಿಧಾನದಿಂದ ದೇಹತ್ಯಾಗ ಮಾಡಿದರು. ಈ ಮುನಿ ಮೂಲಸಂಘ ಸೂರಸ್ತಗಣ ಚಿತ್ರಕೂಟಾನ್ವಯದಲ್ಲಿ ಗುರುತಿಸಿಕೊಂಡಿದ್ದರು. ಮಂಡಳಾಚಾರ್ಯ್ಯನಾದ ಜಯಕೀರ್ತಿ ಭಟ್ಟಾರಕ ಮಾಣಿಕದೇವನ ಗುರುಗಳು ಈ ಮುನಿದ್ವರಯರು ನಾಗಚಂದ್ರ ನನ್ದಿಮುನಿಯ ಶಿಷ್ಯಪರಂಪರೆಯವರು.

ಅತಿಮುಖ್ಯವೆನಿಸಿದ ಹಾವೇರಿ ಪರಿಸರ ಮುನಿಪರಂಪರೆಯನ್ನು ಇಲ್ಲಿ ಅಭ್ಯಸಿಸಲಾಗಿದೆ. ಇವರನ್ನು ಹೊರತುಪಡಿಸಿ ಮೂಲಸಂಘ ಸೂರಸ್ತಗಣದ ವಾಸುಪೂಜ್ಯ, ರಾವಣಂದಿ (ನದಿಹರಳಹಳ್ಳಿ-ರಾತಾ), ಸಿರಿಣಂದಿ ಭಟಾರ (ಆಡೂರು-ಹಾನತಾ), ಮಾಧವಚಂದ್ರ ಭಟಾರ (ಬಾಳಂಬಿಡ-ಹಾನತಾ), ಜಯಕೀರ್ತಿಬಾಳಚಂದ್ರತ್ರೈ, ವಿದ್ಯಾದೇವ (ಆಲದಗೆರೆ ಹಿತಾ), ಸಹಸ್ರಕೀರ್ತಿ (ಮಂತಗಿ-ಹಾನತಾ), ಮೂಲಸಂಘ ಸೇನಗಣದ ಕನಕಸೇನ, ನರೇಂದ್ರಸೇನ, ಸಮನ್ತಭದ್ರ, ದೇವಸೇನ (ಅರಟಾಳ-ಶಿತಾ), ನರೇಂದ್ರಸೇನ (ಸಂಗೂರು-ಹಾತಾ).

ಮೂಲಸಂಘ ದೇಸಿಗಣದ ನರೇಂದ್ರನನ್ದಿ, ನನ್ದಿಭಟಾರ, ಜರ್ನ್ನಯಣನ್ದಿ ಪಣ್ಡಿತ, ಶಾಸ್ತಿಣನ್ದಿ, ದೇವಣನ್ದಿ (ಮೊಟೆಬೆನ್ನೂರು-ಬ್ಯಾತಾ), ಚಂದ್ರದೇವ, ದೇವಕೀರ್ತಿ (ಯಳವಟ್ಟಿ-ಹಾನತಾ), ಚಂದ್ರಕೀರ್ತಿ (ಬಾಡ-ಶಿತಾ), ಸಮಯಾಚರಣ ದೇವ (ಹಿರೇಅಣಜಿ-ಬ್ಯಾತಾ), ಅನಂತಕೀರ್ತಿಭಟಾರ

(ಯಳವಟ್ಟಿ–ಶಿತಾ), ದೇವಗಣದ ಭವಸೇನ (ಚೆನ್ನಮುಳಗುಂದ–ಹಿತಾ), ಸರಗಣದ ಸಮಂತಭದ್ರ (ಕಲಕೇರಿ–ಹಾನತಾ).

ಭದ್ರಗಣದ ಸುಭದ್ರಸ್ವಾಮಿ (ಹೊನ್ನತಿ–ರಾತಾ), ಬಳೆಗಾರಗಣದ ರಾಮಚಂದ್ರಭಟಾರ (ಅರಟಾಳ–ಶಿತಾ), ಪುಸ್ತಕಗಚ್ಛದ ಶೃತಕೀರ್ತಿ (ಬಾಳೇಹಳ್ಳಿ–ಹಾನತಾ), ಇಷ್ಟೇ ಅಲ್ಲದೆ ಸಂಘ ಗಣ ಗಚ್ಛಗಳ ಉಲ್ಲೇಖವಿಲ್ಲದ ತ್ರಿಪಾತ್ರದೇವ (ತಿಳುವಳ್ಳಿ–ಹಾನತಾ), ಮೇಘಚಂದ್ರ, ಚಿಕ್ಕಣಂದಿದೇವ (ಬಾಳೂರು–ಹಾನತಾ), ಸೇನದೇವ ಅನಂತಕೀರ್ತಿ, ಸೇನಭಟಾರ (ಹಿರೇಕೋಣತಿ–ಹಿತಾ), ಶ್ರೀಯಣಂದಿ (ಹೇರೂರು–ಹಾನತಾ), ಪದುಮಸೇನ (ಹಿರೇಅಣಜಿ–ಬ್ಯಾತಾ), ಶಾಂತಿಭಟ್ಟಾರಕ (ಕದರಮಂಡಲಗಿ–ಬ್ಯಾತಾ), ಪುಷ್ಪಸೇನ (ಸಾತೇನಹಳ್ಳಿ–ಹಿತಾ), ದೇವೇಂದ್ರದೇವ (ಆಡೂರು–ಹಾನತಾ), ಜಿನಚಂದ್ರ (ಮೋಟೆಬೆನ್ನೂರು–ಬ್ಯಾತಾ) ಮಾಧವಚಂದ್ರ (ಬಾಳೇಯಹಳ್ಳಿ ಹಾನತಾ) ತ್ರಿಭುವನ ಮದನಕೀರ್ತಿ (ಹಾವಣಗಿ–ಹಾನತಾ) ಇನ್ನೂ ಮುಂತಾದ ಮುನಿಗಳ ಉಲ್ಲೇಖ ಹಾವೇರಿ ಪರಿಸರದ ೧೦–೧೫ ಶತಮಾನಗಳ ಜೈನಶಾಸನಗಳಲ್ಲಿ ಕಂಡು ಬರುತ್ತವೆ. ಇವಿಷ್ಟು ಉಲ್ಲೇಖಿತ ಜಿನಮುನಿಗಳ ಪಟ್ಟಿ ಮಾತ್ರ, ಇವರಲ್ಲದೆ ಸಾವಿರಾರು ಅಲಿಖಿತ ಜಿನಮುನಿಗಳ ಈ ಪರಿಸರದಲ್ಲಿ ಸಂಚಾರ ಮಾಡಿ ಧರ್ಮೋಪದೇಶ ಮಾಡಿದ್ದಾರೆ. ಈಗಲೂ ನೂರಾರು ಮುನಿಗಳ ಸಂಚಾರ ಈ ಭಾಗದಲ್ಲಿದೆ.

## ಇ. ಪ್ರಾಚೀನ ಜೈನ ಕೇಂದ್ರಗಳು.

ಪ್ರತೀ ಐದು ಗ್ರಾಮಗಳಿಗೆ ಒಂದು ಜೈನ ಸ್ಮಾರಕ ದೊರೆಯುತ್ತದೆ ಎಂಬುದು ಹಾವೇರಿ ಪರಿಸರಕ್ಕೆ ಅಕ್ಷರಶಃ ಅನ್ವಯವಾಗುತ್ತದೆ. ಕ್ರಿ.ಶ. ೫ ನೆಯ ಶತಮಾನದಿಂದ ಹಿಡಿದು ೧೭ನೆಯ ಶತಮಾನದವರೆಗೂ ಜೈನ ವಿವಿಧ ಸ್ಮಾರಕಗಳು ಈ ಪರಿಸರದಲ್ಲಿ ಲಭ್ಯ. ಮುರಿದ ಮುಕ್ಕಾದ, ಸ್ಫುಟವಾದ, ಮತಾಂತರವಾದ, ಲಿಪಿರಹಿತ ೧೫೦ ಜೈನ ಶಾಸನಗಳು. ಹಾಳಾದ ಪರಿವರ್ತಿತವಾದ, ಸುಸ್ಥಿತಿಯಲ್ಲಿರುವ, ಉಲ್ಲೇಖವಿರುವ ಶತಕವನ್ನೂ ದಾಟುವ ಬಸದಿಗಳು, ಜಿನಶಿಲ್ಪಗಳು, ಜಿನಗಲ್ಲುಗಳು, ಮುನಿಗಳ ಸಂಚಾರ ಉಲ್ಲೇಖಗಳು ಹೀಗೆ ಹತ್ತು ಹಲವಾರು ಆಯಾಮಗಳಲ್ಲಿ ಜೈನ ಸಂಸ್ಕೃತಿಗೆ ಸಂಬಂಧಿಸಿದ ಕುರುಹುಗಳು ಈಗಲೂ ಲಭ್ಯ. ನಗ್ನತ್ವವನ್ನು ಪುರಸ್ಕರಿಸುವ ಈ ಧರ್ಮದ ಭಗ್ನಗೊಂಡ ಕೇಂದ್ರಗಳ ಅಧ್ಯಯನ ಪ್ರಸ್ತುತ ಅಧ್ಯಾಯದಲ್ಲಿ ಅನಾವರಣಗೊಳಿಸಲಾಗಿದೆ. ೧೫೦ರಷ್ಟು ಜೈನಕೇಂದ್ರಗಳಲ್ಲಿ ಅತೀ ಮುಖ್ಯವಾದ ಜೈನಕೇಂದ್ರಗಳನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ.

## ೦೧. ದೇವಗಿರಿ (ಹಾವೇರಿ ತಾ).

ಹಾವೇರಿ ಪರಿಸರದ ಮೊದಲ, ಮಧ್ಯಕರ್ನಾಟಕದ ಪ್ರಬಲ ಜೈನ ಕೇಂದ್ರ ಹಾವೇರಿ ತಾಲ್ಲೂಕಿನ ದೇವಗಿರಿ. ಇದು ಆದಿಕದಂಬರ ಮತ್ತೊಂದು ಆಡಳಿತ ಕೇಂದ್ರವಾಗಿತ್ತು ಎಂದು ಈ ಹಿಂದೆ ಚರ್ಚಿಸಲಾಗಿದೆ. ಬೃಹತ್ ಪರಲೂರು, ಪರಲೂರು, ಪರೆಲೂರು ಎಂಬುದು ಈ ಊರ ಪ್ರಾಚೀನ ನಾಮ. ೧೨ನೆಯ ಶತಮಾನದ ಹೊತ್ತಿಗೆ ಪರಲೂರು > ದೇವಗಿರಿಯಾಯ್ತು. ಕದಂಬರ ಮೃಗೇಶವರ್ಮ, ವಿಜಯಶಿವಮೃಗೇಶವರ್ಮ, ದೇವವರ್ಮನ ಕಾಲದ ತಾಮ್ರಪಟಗಳು ಇಲ್ಲಿ ದೊರೆತಿವೆ. ಇಲ್ಲಿ ಕದಂಬರ ಕಾಲಕ್ಕೇನೇ ನಿರ್ಗ್ರನ್ಥ ಶ್ರಮಣ ಸಂಘ, ಶ್ವೇತಪಟ ಶ್ರಮ ಸಂಘ, ಯಾಪನೀಯ ಎಂಬ ಜಿನಮುನಿಗಳ ತ್ರಿಸಂಘಗಳು ಅಸ್ತಿತ್ವದಲ್ಲಿದ್ದವು. ಸಾಕಷ್ಟು ಸಂಖ್ಯೆ ಮುನಿಗಳು ಪರಲೂರಲ್ಲಿ ವಾಸವಾಗಿದ್ದು ಅವರಿಗೆ ದತ್ತಿಗಳು ಕದಂಬ ರಾಜರಿಂದ ಸಂದಿವೆ. ಅರ್ಹತ ಜಿನೇಂದ್ರಾಲಯವೊಂದು ಇಲ್ಲಿದ್ದುದಾಗಿ ಇದೇ ತಾಮ್ರ ಶಾಸನಗಳು ದಾಖಲಿಸಿವೆ. ಪರಲೂರಿನ ಒಂದು ವಿಶೇಷ ಎಂದರೆ ಇಲ್ಲಿಂದಲೇ ಒಂದು ಜಿನಮುನಿ ಗಣ ಸ್ಥಾಪನೆಯಾಗಿದ್ದು, ಯಾಪನೀಯ ಸಂಘದ 'ಪರಲೂರು ಗಣ'ವೇ ಆ ಜಿನಮುನಿಗಣ. ಈ ಗಣ ಪರಲೂರದ್ದಾಗಿದ್ದು ಊರ ಹೆಸರೆ ಗಣಕ್ಕಾಯ್ತು. ಇದೊಂದ್ದು ಸ್ಥಳೀಯ ಜಿನಮುನಿಗಣ.

ಕ್ರಿ.ಶ. ಸುಮಾರು ೬೫೦ರ ಬಾದಾಮಿ ಚಾಲುಕ್ಯರ ಆಡೂರು ಶಾಸನದಲ್ಲಿ 'ಪರಲೂರು' ಪ್ರಸ್ತಾಪವಾಗಿದೆ. ಇಲ್ಲಿನ ಜಿನೇಂದ್ರಭವನಕ್ಕೆ ದೋಣಗಾಮುಣ್ಣ ಮತ್ತು ಎಳಮಗಾಮುಣ್ಡರು ಎಂಟು ಮತ್ತರು ಗದ್ದೆಯನ್ನು ದಾನ ಬಿಡುತ್ತಾರೆ. ಈ ದಾನವನ್ನು 'ಪರಲೂರಾ ಚೇದಿಯಬಟ್ಟ' ಪ್ರಭಾಚನ್ದ್ರಗುರಾವರ್ಪಡೆದರು.[೩೨೮] ಆಡೂರಲ್ಲೆ ಬಸದಿ ಇದ್ದು ದಾನವನ್ನು ಪರಲೂರಿಗೆ ಬಂದು ಕೊಡುವ ಔಚಿತ್ಯವನ್ನಿಲ್ಲಿ ಗಮನಿಸಬೇಕು. ದಾನ ಕೊಡುವುದು ಎಷ್ಟು ಶ್ರೇಷ್ಠವೋ; ಅದನ್ನು ಕೊಡುವ ಸ್ಥಳವೂ ಶ್ರೇಷ್ಠವಾಗಿರಬೇಕು ಎಂಬುದು ದಾನಿಗರ ಕಲ್ಪನೆಗೆ ಬಂದಿರಬೇಕು. ಅಂತೆಯೇ ಅವರು ಗಂಗಿಪಾಣ್ಡಿವೂರಿಂದ (ಆಡೂರು) ೨೦ ಕಿ.ಮೀ. ಅಂತವಿರುವ ಪರಲೂರಿಗೆ ಬರುತ್ತಾರೆ. ಪರಲೂರಿಗೆ ಇರುವ ಅನನ್ಯತೆ ಪ್ರಭಾಚನ್ದ್ರರ ಶ್ರೇಷ್ಠತೆ ಈ ಕ್ರಿಯೆಗೆ ಕಾರಣ.

ಪರಲೂರು ಹಾವೇರಿ ಪರಿಸರದ ಮುಂಚೂಣಿ ಜೈನ ಶ್ರದ್ಧಾಕೇಂದ್ರ ಎಂಬುದಕ್ಕೆ ಎರಡು ಮಾತಿಲ್ಲ. ೦೮ ರಿಂದ ೧೦ನೆಯ ಶತಮಾನಕ್ಕೆ ಸಲ್ಲುವ ಐದು ಜಿನಬಿಂಬಗಳು ಈಗಲೂ ಇಲ್ಲಿ ಲಭ್ಯ. ಊರ ಮುಸ್ಲಿಂ ಸ್ಮಶಾನ (ಖಬರಿಸ್ತಾನ್) ಪಕ್ಕ ಹೊಲವೊದರಲ್ಲಿ ಹೂಳಲ್ಪಟ್ಟ ತೀರ್ಥಂಕರ ಆಳೆತ್ತರದ ವಿಗ್ರಹವಿದೆ. ೪೧/೨ ಅಡಿ ಅಗಲ, ೦೬ ಅಡಿ ಉದ್ದ ಇರುವ ಈ ಜಿನಬಿಂಬದ ಇಕ್ಕೆಲಗಳಲ್ಲಿ ಚಾಮರಧಾರಿಣಿಯರಿದ್ದಾರೆ. ಸುಂದರವಾದ ಪ್ರಭಾವಳಿ, ಒರಗುಪೀಠ, ಮಂದಸ್ಮಿತದ ಮುಖಮಂಡಲ ಹೊಂದಿರುವ ತೀರ್ಥಂಕರ ಪದ್ಮಾಸನದಲ್ಲಿ ಕುಳಿತಿದ್ದಾನೆ. ಇದೇ ರೀತಿಯ ಮತ್ತೊಂದು ಜಿನಬಿಂಬ ಊರಲ್ಲಿದ್ದು, ಹೊನ್ನಪ್ಪ ಬೂದಣ್ಣವರ ಹಿತ್ತಲದಲ್ಲಿದೆ. ೦೫ ಅಡಿ ಎತ್ತರ, ೦೩ ಅಡಿ ಅಗಲವಿರುವ ಈ

ಬಿಂಬ ಅಲ್ಲಲ್ಲಿ ಭಗ್ನಗೊಂಡಿದೆ. ಈ ಎರಡೂ ಜಿನಬಿಂಬಗಳು ಹಿಂದೂ ಸಂಪ್ರದಾಯದಂತೆ ಪೂಜೆಗೊಳ್ಳುತ್ತಿವೆ. ಊರ ಪೂರ್ವಕ್ಕೆ ಮಲ್ಲಪ್ಪ ಹಿರೇಹಳ್ಳಿ ಎಂಬುವರ ಹೊಲದಲ್ಲಿ ಒಂದು ಪಾರ್ಶ್ವನಾಥ ವಿಗ್ರಹವು, ಇತ್ತೀಚೆಗೆ ಶಂಬಣ್ಣ ಬಿ. ಸಂಗೂರು ಅವರ ಮನೆ ಮುಂದೆ ಗುಂಡಿ ತೋಡುವಾಗ ೦೨ ತೀರ್ಥಂಕರ ಬಿಂಬಗಳು ದೊರೆತಿದ್ದು ೧೨ನೆಯ ಶತಮಾನಕ್ಕೆ ಸಲ್ಲುತ್ತವೆ. ಹೀಗೆ ಒಟ್ಟು ಐದು ಜಿನಬಿಂಬಗಳಿವೆ. ಅಂತೆಯೇ ಇಲ್ಲಿ ಐದು ಜಿನಾಲಯಗಳಿದ್ದವೆಂದೇ ಅರ್ಥ. ಈಗಲೂ ಊರಲ್ಲಿ ಬಸದಿಯ ನಿವೇಶನವಿದೆ.

ಕದಂಬರ ಶಾಸನಗಳನ್ನು ಹೊರತುಪಡಿಸಿ ೧೨ನೆಯ ಶತಮಾನದವರೆಗೂ ಯಾವ ಜೈನ ಶಾಸನಗಳು ಇಲ್ಲಿ ಲಭ್ಯವಿಲ್ಲ. ಕ್ರಿ.ಶ. ೧೧೩೯ರಲ್ಲಿ ಕಲ್ಯಾಣ ಚಾಲುಕ್ಯರ ೨ನೆಯ ಜಯಸಿಂಹ (ಜಗದೇಕಮಲ್ಲ) ಕಾಲದ ಜೈನ ಶಾಸನವೇ ಸದ್ಯಕ್ಕೆ ಇಲ್ಲಿ ದೊರೆತ ಕೊನೆಯ ಜೈನ ಶಾಸನವಾಗಿದೆ. ಬಾಸವೂರು ೧೪೦ ರ ಅಧಿಕಾರಿ ಪದ್ಮಾವತಿದೇವಿಲಬ್ಧ ವರಪ್ರಸಾದನೂ ಆದ ಕಲಿಯಮರಸ ೧೧೩೯ರಲ್ಲಿ ದೇವಗಿರಿಯಲ್ಲಿ ಒಂದು ಶಾಂತಿನಾಥ ಜಿನಾಲಯವನ್ನು ನಿರ್ಮಿಸಿದ್ದು ಶಾಸನಸಾರ. ದೇಸಿಗಣದ ವಕ್ರಗಚ್ಛದ ಬಾಳಚಂದ್ರ ಸಿದ್ಧಾಂತದೇವನ ಸಮ್ಮುಖದಲ್ಲಿ ಕಲಿಯಮ್ಮರಸ ಮತ್ತು ತಂತ್ರಪಾಳ ಬಾಚಣ್ಣ ರಿಂದ ಶಾಂತಿನಾಥ ಜಿನಾಲಯಕ್ಕೆ ಅಪಾರ ಪ್ರಮಾಣ ದಾನ-ದತ್ತಿಗಳೂ ಸಂದಿವೆ.[೩೨೯]

ಪರಲೂರು > ದೇವಗಿರಿ ಕ್ರಿ.ಶ. ೦೫ನೆಯ ಶತಮಾನದಿಂದ ೧೨ನೆಯ ಶತಮಾನದವರೆಗೂ ಒಂದು ಜೈನ ತೀರ್ಥಕ್ಷೇತ್ರ ಎಂದು ಇಲ್ಲಿನ ಲಭ್ಯ ಶಾಸನಗಳಿಂದ ಸಾಧಿತವಾಗಿದೆ. ಸದ್ಯ ಒಂದೂ ಜಿನಾಲಯವಿಲ್ಲ. ರಣದೇವಿ ಎಂಬ ವಿಳಾಸಿಕೆಯ ಒಂದೇ ಕುಟುಂಬದ ಹಲವಾರು ಜೈನ ಮನೆಗಳಿವೆ. ಇವರೇ ಶಂಬಣ್ಣನವರ ಮನೆಯಲ್ಲಿ ದೊರೆತ ಜಿನಬಿಂಬಗಳನ್ನು ಮನೆಯ ಮಹಡಿಯಲ್ಲಿಟ್ಟು ಪೂಜಿಸುತ್ತಿದ್ದಾರೆ.

### ೦೨. ಆಡೂರು (ಹಾನಗಲ್ಲು ತಾ)

ಆಡೂರು ಹಾನಗಲ್ಲು ತಾಲ್ಲೂಕಿನ ಒಂದು ಊರು. ಇದರ ಶಾಸನೋಕ್ತ ನಾಮ ಗಂಗಿಪಾಂಡಿಯೂರು. ಇಲ್ಲಿ ಒಟ್ಟು ೦೮ ಜೈನ ಶಾಸನಗಳಿವೆ. ಒಂದು ಹಾಳು ಬಸದಿಯಿದೆ. ಕ್ರಿ.ಶ ೭೫೦ರ ಚಾಲುಕ್ಯ ಕೀರ್ತಿವರ್ಮನ ಶಾಸನವು ಆಡೂರಲ್ಲಿ ಒಂದು ಜಿನಾಲಯವು, ಒಂದು ದಾನಶಾಲೆಯೂ ಇದ್ದುದಾಗಿ ತಿಳಿಸುತ್ತದೆ. ಪರಲೂರು ಗಣದ ಪ್ರಭಾಚಂದ್ರನ ಶಿಷ್ಯ ಶ್ರೀಪಾಲ ಎಂಬುವನ್ನು ೨೫ ನಿವರ್ತನ ಭೂಮಿಯನ್ನು ದೋಣಗಾಮಣ್ಣ, ಎಳಮಗಾಮಣ್ಣರು ೦೮ ಮತ್ತರು ಗದ್ದೆಯನ್ನು ಈ ಜಿನಾಲಯಕ್ಕೆ ಬಿಟ್ಟರು.[೩೩೦] ೧೨ನೆಯ ಶತಮಾನದ ಹೊತ್ತಿಗೆ ಆಡೂರು

ಪ್ರವರ್ಧಮಾನ ಜೈನ ಕೇಂದ್ರವಾಗಿ ಇಚ್ಛಾಮರಣವನ್ನು ಆಹ್ವಾನಿಸುವ ಶ್ರದ್ಧಾಕೇಂದ್ರವಾಗಿಯೂ ಬೆಳೆಯಿತು. ಎಂಟು ಜನ ಇಲ್ಲಿ ಸಾವನ್ನು ಆಹ್ವಾನಿಸಿದ್ದಾರೆ. ಅಂತೆಯೇ ಅವರ ನಿಸಿಧಿಗಳೂ ಇವೆ.

ಹತ್ತನೆಯ ಶತಮಾನಕ್ಕೆ ಬಂಕಾಪುರ ಪ್ರಸಿದ್ಧ ಜೈನಕೇಂದ್ರ ಅಲ್ಲದೇ ಸಾವನ್ನು ಆಹ್ವಾನಿಸುವ ತೀರ್ಥವೂ ಆಗಿತ್ತು. ಗಂಗರ ಮಾರಸಿಂಹ ಇಲ್ಲಿ ಸಲ್ಲೇಖನ ತೆಗೆದುಕೊಂಡಿದ್ದ. ೧೨ನೆಯ ಶತಮಾನದ ಹೊತ್ತಿಗೆ ಬಂಕಾಪುರಕ್ಕಿಂತ ಆಡೂರು ಹೆಚ್ಚು ಹೆಚ್ಚು ಪ್ರಚಾರಗೊಂಡು ಜೈನ ಶ್ರದ್ಧಾಕೇಂದ್ರವಾಗಿ ಬೆಳೆಯಿತು. ಅಂತೆಯೇ ಕ್ರಿ.ಶ. ೧೨೪೭ರಲ್ಲಿ ಬಂಕಾಪುರದ ಹಡವಳನಾದ ಚಟ್ಟಯ್ಯನ ಹೆಂಡತಿ ಭಾಗವ್ವೆ ಇಲ್ಲಿ ಬಂದು ಸಾವನ್ನು ಆಹ್ವಾನಿಸಿದಳು.[೩೩೧] ೧೨೬೨-೬೩ರಲ್ಲಿ ಆಡೂರ ನಾಳ್ಪ್ರಭು ಹರಿಯಮಗಾಮುಂಡನ ಹೆಂಡತಿ ಕನಕಿಗಾವುಂಡಿ, ಇವನ ಪುತ್ರನಾದ ಕೇಸವಗಾಮುಂಡ, ಇನ್ನೊಬ್ಬ ಮಾನಿಸ ಪುತ್ರನಾದ ಗಾಮಯ್ಯ, ೧೨೯೩ರಲ್ಲಿ ಮತ್ತೊಬ್ಬ ಪುತ್ರ ವಿಕ್ರಮಗೌಡನ್, ಕ್ರಿ.ಶ. ೧೨೮೬ರಲ್ಲಿ ಇವನ ತಂದೆ ಬಲ್ಲಗವುಡ ಹೀಗೆ ಒಂದೇ ಕುಟುಂಬದ ಐದು ಜನ ಮತ್ತು ಸೇನಭೋವ ಸುಬ್ಬಯಿನ ಮಗಳು ಮಾದವ್ವೆ ಸಮಾಧಿ ಮರಣ ಹೊಂದಿದರು.[೩೩೨]

ಇಲ್ಲಿನ ಮಠದ ಹತ್ತಿರ ನಿಸಿಧಿ ಕಲ್ಲುಗಳು ಜೊತೆಗೆ ಎರಡು ಜಿನಬಿಂಬಗಳಿವೆ. ಎರಡೂ ಪದ್ಮಾಸನ ಮೂರ್ತಿಗಳು. ಒಂದರಲ್ಲಿ ಸಿಂಹಪೀಠವಿದೆ. ಇನ್ನೊಂದರಲ್ಲಿ ಮಕರ ತೋರಣ, ಚಾಮರಧಾರಣಿಯರು, ಉಪಸರ್ಗ್ಗಗಳ ಚಿತ್ರಣ, ಚೈತ್ಯವೃಕ್ಷ, ಮುಕ್ಕೊಡೆ, ಪ್ರಭಾವಳಿ, ಪ್ರಭಾಮಂಡಲ ಇತ್ಯಾದಿಗಳು ಚಿತ್ರಣಗಳಿವೆ. ಶಿಲ್ಪಗಳು ಅಲ್ಲಲ್ಲಿ ಮುಕ್ಕಾಗಿದ್ದು ೧೨ನೆಯ ಶತಮಾನಕ್ಕೆ ಸಲ್ಲುತ್ತವೆ.

## ೦೩. ಬಂಕಾಪುರ (ಶಿಗ್ಗಾವಿ ತಾ).

ಕರ್ನಾಟಕದ ಮೊದಲ ಸಹಸ್ರಮಾನದ ಕೊನೆಯ ಘಟ್ಟದಲ್ಲಿ ದಕ್ಷಿಣದಲ್ಲಿ ಶ್ರವಣಬೆಳಗೊಳ, ಉತ್ತರದಲ್ಲಿ ಕೊಪ್ಪಳ, ಮಧ್ಯಕರ್ನಾಟದಲ್ಲಿ ಬಂಕಾಪುರಗಳು ಜಿನಧರ್ಮದ ಪ್ರಬಲ ನೆಲೆಗಳಾಗಿದ್ದವು. ಒಂದೊಮ್ಮೆ ಧಾರ್ಮಿಕ ವಿದ್ಯಾಕೇಂದ್ರವಾಗಿ ಪ್ರಸಿದ್ಧಿ ಪಡೆದಿದ್ದ ಬಂಕಾಪುರ ಇಂದು ಯಾವ ಜೈನ ಸ್ಮಾರಕಗಳನ್ನು ತನ್ನಲ್ಲಿ ಇಟ್ಟುಕೊಂಡಿಲ್ಲ. ಈ ಕುರಿತು ಆನುಷಂಗಿಕವಾದ ಆಕರಗಳು ಹೇರಳವಾಗಿವೆ. ಪೂಜ್ಯಪಾದ, ಜಿನಸೇನಾಚಾರ್ಯ, ಗುಣಭದ್ರಾಚಾರ್ಯ, ದೇವೇಂದ್ರಮುನಿ, ಅಜೀತಸೇನಾಚಾರ್ಯ ಇತ್ಯಾದಿ ಮುನೀಂದ್ರರ ತಪೋಭೂಮಿಯಾಗಿ, ಪಂಪ, ರನ್ನ, ಅತ್ತಿಮಬ್ಬೆ, ಚಾವುಂಡರಾಯರ ಆಡುಬಲ್ಲ ಜಾಗವಾಗಿ., ವಿಷ್ಣುವರ್ಧನ, ಮಾರಸಿಂಹರ ಪ್ರಾಣತ್ಯಾಗದ ಸ್ಥಳವಾಗಿ ವಿದ್ಯಾಕೇಂದ್ರವಾಗಿ ಬಂಕಾಪುರ ಪ್ರಸಿದ್ಧಿ ಪಡೆದಿತ್ತು.

ರಾಷ್ಟ್ರಕೂಟರ ಸಾಮಂತ ಮನೆತನ ಚಲ್ಲಕೇತನರದ್ದು. ಇದು ಒಂದು ಬಂಕಾಪುರವನ್ನಾಳಿದ ಜೈನ ಮನೆತನ. ಎರಕೋರಿ, ಧೋರಗ, ಬಂಕೇಯ, ಲೋಕಾದಿತ್ಯ, ಕುಂದಟೆ, ೧ನೇ ಕಲಿವಿಟ್ಟ, ೨ನೇ ಧೋರ, ೨ನೇ ಬಂಕೆಯ, ೨ನೇ ಕಲಿವಿಟ್ಟ ಈ ಮನೆತನದಲ್ಲಿ ಆಗಿಹೋಗಿದ್ದಾರೆ. ಚಲ್ಲಕೇತನ ವಂಶದ ಲೋಕಾದಿತ್ಯನೆಂಬುವ ತನ್ನ ತಂದೆ ಬಂಕೇಯನ ಸ್ಮಾರಕಾರ್ಥವಾಗಿ ಈ ಊರಿಗೆ 'ವಂಕಾಪುರ' ಎಂದು ನಾಮಕರಣ ಮಾಡಿದ[೩೩೩] 'ವ' ಕಾರ 'ಬ'ಕಾರವಾಗುವ ಪ್ರಕ್ರಿಯೆ ಕನ್ನಡದಲ್ಲಿ ಸಹಜವಾಗಿದ್ದು ವಂಕಾಪುರ > ಬಂಕಾಪುರವಾಯ್ತು. ಇಲ್ಲಿ ಧೋರ ಜಿನಾಲಯ, ಉಪ್ಪಟಾಯ್ತನ, ಕಲಿವಿಟ, ಕೊಂತಿಮಹಾದೇವಿ ಬಸದಿಗಳು, ಶಾಂತಿನಾಥ ಬಸದಿ ಅರವತ್ತೂರು ಸ್ತಂಭಗಳ ಬಸದಿಗಳಿದ್ದವು.

ಕ್ರಿ.ಶ.೯೨೫ರ ಅಸುಂಡಿ ಶಾಸನವು ಬಙ್ಕಪುರದಲ್ಲಿ ಧೋರ ಜಿನಾಲಯವಿದ್ದುದಾಗಿ ಮತ್ತು ಈ ಬಸದಿಯು ಚನ್ದ್ರಪ್ರಭ ಭಟಾರರಿಗೆ ಪ್ರತಿಬದ್ಧವಾಗಿದ್ದಾಗಿ ತಿಳಿದು ಬರುತ್ತದೆ[೩೩೪]. ಚಲ್ಲಕೇತನರ ಒಂದನೆಯ ಧೋರ ಈ ಬಸದಿಯನ್ನು ಕಟ್ಟಿಸಿದ. ಬಂಕಾಪುರದಲ್ಲಿದ್ದ ಇನ್ನೆರಡು ಪ್ರಮುಖ ಬಸದಿಗಳು 'ಉಪ್ಪಟ್ಟಾಯ್ತನ' ಮತ್ತು 'ಕಲಿವಿಟ' ಬಸದಿಗಳು. ಇವು ಶಿಥಿಲವಾದಾಗ ಹೊಯ್ಸಳ ದಂಡಾಧಿಪ ಹುಳ್ಳಮಯ್ಯ ಕ್ರಿ.ಶ ೧೧೫೯ರಲ್ಲಿ ಜೀರ್ಣೋದ್ಧಾರಗೊಳಿಸಿದ ವಿವರಗಳು ಶ್ರವಣಬೆಳಗೊಳದ ಶಾಸನದಲ್ಲಿವೆ.[೩೩೫] ಮಂತಗಿ (ಹಾನತಾ)ಯ ಶಾಸನವೊಂದು ಬಂಕಾಪುರದಲ್ಲಿ ಕೊಂತಿಮಹಾದೇವಿಯರ ಬಸದಿಯೊಂದು ಇದ್ದುದಾಗಿ ಪ್ರಸ್ತಾಪಿಸುತ್ತದೆ.[೩೩೬] ದೇವಚಂದ್ರನ ರಾಜಾವಳಿ ಕಥಾಸಾರ ಕೃತಿಯಲ್ಲಿ ಪೂಜ್ಯಪಾದರ ಪ್ರಸ್ತಾಪವಿದ್ದು, ಅವರು ಬಂಕಾಪುರದ ಶಾಂತಿನಾಥ ಜಿನಾಲಯಕ್ಕೆ ಬಂದಿದ್ದರು ಎಂಬ ವಿವರಗಳಿವೆ. ಆದ್ದರಿಂದ ಬಂಕಾಪುರದಲ್ಲಿ ಶಾಂತಿನಾಥ ಜಿನಾಲಯವೊಂದಿತ್ತು ಎಂದು ತಿಳಿಯಬಹುದು. ಈ ಆಧಾರದಿಂದ ಬಂಕಾಪುರದ ಪ್ರಥಮ ಜಿನಾಲಯ ಶಾಂತಿನಾಥ ಜಿನಾಲಯವೆಂದು ಮನಗಾಣಬಹುದು. "ಗುಣಭದ್ರಾಚಾರ್ಯನು ಉತ್ತರ ಪುರಾಣವನ್ನು ಚಲ್ಲಕೇತನರ ಲೋಕಾದಿತ್ಯನ ಆಳ್ವಿಕೆಯ ಸಂದರ್ಭದಲ್ಲಿ ಅಂದರೆ ಕ್ರಿ.ಶ. ೮೯೮ರಲ್ಲಿ ಬಂಕಾಪುರದ ಬಸದಿಯಲ್ಲಿ ಬರೆದು ಪೂರ್ಣಗೊಳಿಸಿದ್ದಾನೆ. ಈ ಕಾರ್ಯವು ಬಂಕಾಪುರದ 'ಅರವತ್ತೂರು ಸ್ತಂಭಗಳ ಬಸದಿ'ಯಲ್ಲಿ ಜರುಗಿತ್ತೆಂಬ ಐತಿಹ್ಯವಿದೆ. ಈ ಪಟ್ಟಣದ ಕೋಟೆಯ ಆವರಣದಲ್ಲಿರುವ ನಗರೇಶ್ವರ ದೇವಾಲಯವೇ ಆ ಅರವತ್ತೂರು ಸ್ತಂಭಗಳ ಬಸದಿಯಾಗಿತ್ತೆಂದು ಪ್ರತೀತಿಯೂ ಇರುವುದು".[೩೩೭]

ಜೈನ ಕವಿ ಪುಂಗವರು, ಮಹಾಮುನಿಗಳು, ಮಹಾಸಾಮಂತರು, ಅನೇಕ ಬಸದಿಗಳಿದ್ದ ಬಂಕಾಪುರದಲ್ಲಿ ಇಂದು ಮಹತ್ವದ ಜೈನ ಕುರುಹುಗಳು ಉಳಿದು ಬಂದಿಲ್ಲ. ಜೈನ ಧರ್ಮದ ಶ್ರೀಮಂತಿಕೆಯಿಂದ ಕಂಗೊಳಿಸುತ್ತಿದ್ದ ಬಂಕಾಪುರ ತದನಂತರ ದಿನಗಳಲ್ಲಿ ಜೈನ ಧರ್ಮದಿಂದ ವಿಮುಖಗೊಂಡಿದ್ದಕ್ಕೆ ಸ್ಪಷ್ಟ ಕಾರಣಗಳಿಲ್ಲ. ಬಹುಶಃ ಬಂಕಾಪುರ ಒಂದು ಆಡಳಿತ

ಕೇಂದ್ರವಾಗಿದ್ದರಿಂದ ಸಂಪತ್ತು ಹೇರಳವಾಗಿತ್ತು. ಅಂತೆಯೇ ದಾಳಿಗಳು ಸಹಜವಾಗಿದ್ದವು. ರಾಜಕೀಯ ಮತ್ತು ಧಾರ್ಮಿಕ ದಾಳಿಗಳಿಗೆ ಬೇಸತ್ತ ಜೈನರು ಇಲ್ಲಿಂದ ವಲಸೆ ಅಥವಾ ಮತಾಂತರವಾದಂತೆ ತೋರುತ್ತದೆ. ಕಾಲಾನಂತರ ಇಲ್ಲಿರುವ ಜೈನ ಸ್ಮಾರಕಗಳು ಹಾಳಾದವು. ಬಿದ್ದವು, ಇಲ್ಲವಾದವು. ಹೀಗೆ ಒಂದು ಕಾಲದಲ್ಲಿ ಜೈನಧರ್ಮದ ಉತ್ತುಂಗ ಕೇಂದ್ರವಾಗಿದ್ದ ಬಂಕಾಪುರ ಈಗ ಸಾಮಾನ್ಯ ಪಟ್ಟಣ.

**೦೪. ಹಾನಗಲ್ಲು (ಹಾನಗಲ್ಲು ತಾ).**

ಹಾನಗಲ್ಲು ಕದಂಬರ ರಾಜಧಾನಿ ಹಾನಗಲ್ಲು. ಇವರು ಇತರೆ ಧರ್ಮದಂತೆ ಜೈನಧರ್ಮವನ್ನು ಪೋಷಿಸಿ ಬೆಳೆಸಿದರು. ಹಾನಗಲ್ಲು ಸುತ್ತಮುತ್ತಲಿನ ಗ್ರಾಮಗಳಾದ ಕರಗುದರೆ, ಕುಂಟನಹೊಸಳ್ಳಿ, ಬಾಳೂರು, ಬೆಳವತ್ತಿ, ಬಾಳೇಹಳ್ಳಿ, ವೀರಾಪುರ, ಹಾವಣಗಿ, ಬಾದಾಮಗಟ್ಟಿ, ಅರಳೇಶ್ವರ ಹಿರೇಕಣಗಿ, ತಿಳವಳ್ಳಿ, ಹಿರೂರು, ಆಡೂರು ಮುಂತಾದ ಪ್ರದೇಶಗಳು ಹಾನಗಲ್ಲು ಕದಂಬರ ಕಾಲಾವಧಿಯ ಜೈನಕೇಂದ್ರಗಳಾಗಿದ್ದವು. ಇವರು ಜೈನ ಧರ್ಮದ ಬಗ್ಗೆ ಅದೆಷ್ಟು ಗೌರವಾದರಗಳನ್ನು ಹೊಂದಿದ್ದರೆಂದರೆ ತಮ್ಮ ಕೋಟೆಯ ಆವರಣದಲ್ಲಿ ಒಂದು ಬಸದಿಯನ್ನೇ ಕಟ್ಟಿಸಿದ್ದರು. ಈಗಲೂ ಈ ಬಸದಿ ಉಳಿದಿದ್ದು ಮತಾಂತರವಾಗಿ ವೀರಭದ್ರೇಶ್ವರ ದೇವಾಲಯವಾಗಿದೆ.

ಹಾನಗಲ್ಲು ಕದಂಬರ ಕೋಟೆಯ ಆವರಣವು ಸದ್ಯ ತೋಟಗಾರಿಕಾ ಇಲಾಖೆಯ ಸುಪರ್ಧಿಯಲ್ಲಿದ್ದು, ಈ ಸ್ಥಳದಲ್ಲಿ ತೋಟವನ್ನು ಬೆಳಸಲಾಗಿದೆ. ಇಲ್ಲಿರುವ ದೇವತಾ ಸ್ಮಾರಕಗಳಲ್ಲಿ ವೀರಭದ್ರದೇವಾಲಯವೊಂದೆ ಸುಸ್ಥಿತಿಯಲ್ಲಿದೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ನವರಂಗದ ವಿತಾನಕ್ಕೆ ಹೊಂದಿಕೊಂಡ ನಾಲ್ಕೂ ತೊಲೆಗಳಲ್ಲಿ ತೊಲೆಗೆ ಆರರಂತೆ ಒಟ್ಟು ಇಪ್ಪತ್ನಾಲ್ಕು ಕಾಯೋತ್ಸರ್ಗದ ತೀರ್ಥಂಕರರ ಬಿಂಬಗಳನ್ನು ಕೆತ್ತಲಾಗಿದೆ. ಅಂತರಾಳ ಮತ್ತು ಗರ್ಭಗೃಹದ ಪ್ರವೇಶದ್ವಾರದಲ್ಲಿ ಪರ್ಯಂಕಾಸನಸ್ಥ ಜಿನಬಿಂಬವನ್ನು ಮುಕ್ಕೊಡೆ ಮತ್ತು ಚಾಮರ ಧಾರಣಿಯರ ಸಹಿತ ಚಿತ್ರಿಸಲಾಗಿದೆ. ಅಲ್ಲದೇ ದೇವಾಲಯದ ಹೊರಭಿತ್ತಿಯಲ್ಲಿ ಯಕ್ಷ-ಯಕ್ಷಿಯರ ಚಿಕಣಿಶಿಲ್ಪಗಳನ್ನು ಕೆತ್ತಲಾಗಿದೆ. ಈ ಹೊರಭಿತ್ತಿಯ ಸುತ್ತ ಊರ್ಧ್ವದಲ್ಲಿ ಸಿಂಹಲಾಂಛನದ ಕೀರ್ತಿಮುಖವನ್ನು ಶಿಲ್ಪಿಸಲಾಗಿದೆ. ಸದ್ಯದ ಎಲ್ಲಾ ಆಧಾರಗಳಿಂದ ಪ್ರಸ್ತುತ ವೀರಭದ್ರ ದೇವಾಲಯ ಹಿಂದೆ ಜಿನಾಲಯವಾಗಿತ್ತು ಎಂದು ನಿಸ್ಸಂದೇಹವಾಗಿ ಹೇಳಬಹುದು.

ನಯನ ಮನೋಹರವಾದ ಹಾನಗಲ್ಲು ಬಸದಿ ಶಿಲ್ಪಕಲಾವಂತಿಕೆಯಲ್ಲಿ ಶ್ರೀಮಂತವಾದದ್ದು. ಇಡೀ ಬಸದಿಯ ಮಾದರಿಯನ್ನು ಬಸದಿಯ ಭಿತ್ತಿಗಳಲ್ಲಿ ತೋರಿಸಿದ್ದು ಶಿಲ್ಪಿಯ ಸೃಜನಶೀಲ

ಕೌಶಲ್ಯ. "ಈ ದೇಗುಲದ ಶಿಲ್ಪಿಯು ಸೃಜನಶೀಲವಾಗಿದ್ದು, ತನ್ನ ಸಮಕಾಲೀನ ವಾಸ್ತುಶಿಲ್ಪಿಗಳಿಗಿಂತ ಭಿನ್ನವಾದ ಪರಂಪರೆಯನ್ನು ಪ್ರತಿನಿಧಿಸುವಂತಿದೆ. ಇಲ್ಲಿ ಗೋಡೆಯ ಅಲಂಕಾರಿಕ ವಿನ್ಯಾಸಗಳು ಕರ್ನಾಟಕದಲ್ಲಿ ಬೇರೆಡೆ ಕಂಡುಬಂದಿಲ್ಲ:[೩೩೮] ಈ ರೀತಿಯ ಬಹುವೆಚ್ಚದ ಕಲಾವೈಭವದ ನಿರ್ಮಾತೃ 'ಹಾನಗಲ್ಲು ಕದಂಬ'ರೆ ಆಗಿದ್ದಾರೆ. ಈ ಜಿನಾಲಯ ಕೋಟೆಯ ಆವರಣದಲ್ಲಿದ್ದರಿಂದ ಕದಂಬರಿಂದ ನಿತ್ಯಪೂಜೆಗೆ ಒಳಪಡುತ್ತಿತ್ತು. ಅಂತಾಗಿ ಈ ಜಿನಾಲಯ ಹಾನಗಲ್ಲು ಕದಂಬರ 'ಪಟ್ಟಜಿನಾಲಯ' ಮತ್ತು 'ರಾಜ ಪೋಷಿತ ಜಿನಾಲಯ'ವಾಗಿತ್ತು ಎಂಬುದರಲ್ಲಿ ಸಂದೇಹವಿಲ್ಲ.

ಇತ್ತೀಚೆಗೆ ಹಾನಗಲ್ಲು ಕೋಟೆಯ ಆವರಣದಲ್ಲಿ ಒಂದು ಶಾಸನೋಕ್ತ ಚೌವ್ವೀಸ ತೀರ್ಥಂಕರ ಆದಿನಾಥ ಪ್ರಧಾನ ಬಿಂಬವೊಂದು ದೊರೆತಿದ್ದು ಅಜ್ಞಾತ ವ್ಯಕ್ತಿಯೊಬ್ಬರಿಂದ ಹಾವೇರಿ ನೇಮಿನಾಥ ಬಸದಿ ಸೇರಿದೆ. ಮೂಲಸಂಘ ಸೂರಸ್ಥಗಣದ ನಂದಿಭಟ್ಟಾರಕ ಶಿಷ್ಯ ಮಾಧವಚಂದ್ರ ಭಟ್ಟಾರಕ ಇವರ ಗುಡ್ಡಿಯಾದ ಲಖ್ಖವೆ ಎಂಬುವಳು ಅಣತಿ ನೋಂಪಿಯ ಉದ್ಯಾಪನ ನಿಮಿತ್ತ ಈ ಪ್ರತಿಮೆಯನ್ನು ಹಾನಗಲ್ಲು ಬಸದಿಗೆ ಮಾಡಿಸಿಕೊಟ್ಟಿದ್ದಾಳೆ.[೩೩೯] ಈ ಆಧಾರದಿಂದ ಹಾನಗಲ್ಲು ೧೩ನೆಯ ಶತಮಾನದವರೆಗೂ ಜೈನಕೇಂದ್ರವಾಗಿತ್ತು ಎಂಬುದನ್ನು ಮನಗಾಣಬಹುದು. ಇಡೀ ಹಾವೇರಿ ಜಿಲ್ಲೆಯಲ್ಲಿ ಅತೀ ಹೆಚ್ಚು ಜೈನರು ಇರುವ ತಾಲ್ಲೂಕು ಹಾನಗಲ್ಲು ತಾಲ್ಲೂಕು. ಈಗಲೂ ಈ ತಾಲ್ಲೂಕಿನ ಅನೇಕ ಗ್ರಾಮಗಳಲ್ಲಿ ಜೈನರ ಬಾಹುಳ್ಯವಿದೆ.

**೦೫. ಬಾಳೂರು (ಹಾನಗಲ್ಲು ತಾ).**

ಅಕ್ಕಿಆಲೂರಿನಿಂದ ೦೨ ಕಿ.ಮೀ. ದೂರದಲ್ಲಿರುವ ಆಡೂರು ೧೨ ಶತಮಾನಕ್ಕೆ ಒಂದು ಜೈನ ಕೇಂದ್ರ. ಇಲ್ಲಿ ಒಂದು ಹಾಳಾದ ಜಿನಾಲಯ ಈಗಲೂ ಇದೆ. ಬಸದಿಯ ಲಲಾಟದ ಮೇಲೆ 'ಶ್ರೀ ಜಿನಾಲಯ ಸಗರೇಂದ್ರ' ಎಂಬ ೧೬ನೆಯ ಶತಮಾನದ ಶಾಸನವಿದೆ. ಬಹುಶಃ ಇದು ಸಗರ ಜಿನಾಲಯ ಇದ್ದಂತೆ ತೋರುತ್ತದೆ. ಗ್ರಾಮ ಪಂಚಾಯಿತಿ ದಾಖಲೆಗಳಲ್ಲಿ ಈ ಜಿನಾಲಯಕ್ಕೆ ಸಂಬಂಧಿಸಿದ ಭೂಮಿಯ ವಿವರಗಳು ಈಗಲೂ ಲಭ್ಯ.

ಹದಿಮೂರನೆಯ ಶತಮಾನಕ್ಕೆ ಬಾಳೂರು ಪ್ರಭಾವಿ ಜೈನ ಕೇಂದ್ರವಾಗಿದ್ದು, ಸಾಕಷ್ಟು ಶ್ರಾವಕರು ಸಲ್ಲೇಖನ ತೆಗೆದುಕೊಂಡಿದ್ದಾರೆ. ಇವರಲ್ಲಿ ನಾಳ್ಪ್ರಭುವಾದ ಕಸಪಗಾವುಂಡ, ಇವನ ಮಗ ನಾಳ್ಪ್ರಭು ಭರತಗಾಮುಂಡ ಪ್ರಮುಖರು. ಉಳಿದಂತೆ ಬಸದಿಯ ಬಲ್ಲಯ, ಮಲ್ಲವೆ, ಚೌಕಿಗುಡಿ ಇಲ್ಲಿ ಸಾವನ್ನು ಆಹ್ವಾನಿಸಿದರು. ಇವಷ್ಟೇ ಅಲ್ಲದೇ ಇನ್ನೂ ಅನೇಕ ಜನ ಬಾಳೂರಲ್ಲಿ ಸಲ್ಲೇಖನ ಸ್ವೀಕರಿದ್ದರು ಎಂದು ತೋರುತ್ತದೆ. ಊರ ಮಠದ ಪಕ್ಕ ಇರುವ ತ್ರುಟಿತ ನಿಸಿಧಿ ಸ್ಮಾರಕಗಳು ಹೇಳಿಕೆಗೆ ಆಧಾರವಾಗಿ ನಿಲ್ಲುತ್ತವೆ. ಇಲ್ಲಿರುವ ಎಲ್ಲ ನಿಸಿಧಿಗಳು ೧೩ನೆಯ ಶತಮಾನಕ್ಕೆ ಸಲ್ಲುತ್ತವೆ.

ಚೌಕಿಗೌಡಿ ನಿಸಿಧಿಯಲ್ಲಿ ಜೈನರ ಪವಿತ್ರ ಮಂತ್ರವಾದ 'ಣಮೋಕಾರ' ಮಹಾಮಂತ್ರವಿರುವುದು ವಿಶೇಷ. ಇಡೀ ಭಾರತದ ಶಾಸನಗಳಲ್ಲಿ ಪೂರ್ಣ ಪ್ರಮಾಣದ ಣಮೋಕಾರ ಹೊಂದಿದ ಏಕೈಕ ಶಾಸನವಿದು.

### ೦೬. ಯಳವಟ್ಟಿ (ಹಾನಗಲ್ಲು ತಾ).

ಹಾವೇರಿ ಪರಿಸರದಲ್ಲಿ ಈಗಲೂ ಸುಸ್ಥಿತಿಯಲ್ಲಿ ಉಳಿದು ಬಂದಿರುವ ಏಕೈಕ ಬಸದಿಯೆಂದರೆ ಅದು ಯಳವಟ್ಟಿಯ ಚಂದ್ರನಾಥ ಬಸದಿ. ಈ ಬಸದಿಯನ್ನು ಗ್ರಾಮಸ್ಥರೇ ಸೇರಿ ಕ್ರಿ.ಶ. ೧೯೮೦-೮೪ರ ಅವಧಿಯು ಜೀರ್ಣೋದ್ಧಾರಗೊಳಿಸಿದ್ದಾರೆ. ರಾಮಣ್ಣ ವಡ್ಡರ್ (ಪಂಚಗಾವ ಬೆಳಗಾವಿ ಜಿ) ಈ ಕಾರ್ಯದ ನೇತೃತ್ವ ವಹಿಸಿದ್ದರು. ಸದ್ಯ ಬಸದಿಯ ಗರ್ಭಗೃಹದಲ್ಲಿ ನವೀನ ಚಂದ್ರನಾಥ ತೀರ್ಥಂಕರ ಮೂರ್ತಿ ಇದ್ದು, ಹಳೆಯದನ್ನು ನವರಂಗದಲ್ಲಿಟ್ಟಿದ್ದಾರೆ. ಇಲ್ಲಿಯೆ ಆದಿನಾಥ ಮತ್ತು ಶಾಂತಿನಾಥರ ಬಿಂಬಗಳಿವೆ. ಬಸದಿಯ ಒಳ ಆವರಣ ಮತ್ತು ಮುಂಭಾಗಕ್ಕೆ ಆಧುನಿಕ ಬಣ್ಣ (ಆಯಿಲ್ ಪೇಂಟ್) ಬಳಿಯಲಾಗಿದೆ. ೧೨ನೆಯ ಶತಮಾನಕ್ಕೆ ಸಲ್ಲುವ ಈ ಬಸದಿ ಪ್ರಾಚೀನ ಮಾನಸ್ತಂಭವನ್ನು ಹೊಂದಿದೆ. ಪ್ರವೇಶಮಂಟಪ, ನವರಂಗ, ಅಂತರಾಳ, ಗರ್ಭಗೃಹ, ಕದಂಬನಾಗರ ಶಿಖರವನ್ನು ಬಸದಿಯ ವಾಸ್ತುವಿನ್ಯಾಸದಲ್ಲಿ ಕಾಣಬಹುದು. ಲಿಪಿ ರಹಿತ-ಸಹಿತ ಒಟ್ಟು ಎಂಟು ನಿಸಿಧಿಗಳು ಇಲ್ಲಿವೆ. ೧೦೦ ಜೈನ ಕುಟುಂಬಗಳು ಸು. ೬೦೦ ರಷ್ಟು ಜೈನರು ಯಳವಟ್ಟಿಯಲ್ಲಿದ್ದಾರೆ. ಮಹಾವೀರ ಜಯಂತಿ, ದಶಲಕ್ಷಣ ಪರ್ವ, ನೋಂಪಿ ವ್ರತಾಚರಣೆಗಳು ಈಗಲೂ ಇಲ್ಲಿ ನಡೆದುಕೊಂಡು ಬರುತ್ತಿವೆ. ಪ್ರಾಚೀನ ಕಾಲದಿಂದಲೂ ಜೈನ ಚಟುವಟುಕೆಗಳಿಂದ ಪ್ರಭಾವಿತವಾದ ಯಳವಟ್ಟಿ ಆ ಸಂಸ್ಕೃತಿಯನ್ನು ಜತನದಿಂದ ಕಾಪಾಡಿಕೊಂಡು ಬಂದಿದೆ. ಸದ್ಯ ಅವಿಭಜಿತ ಧಾರವಾಡ ಜಿಲ್ಲೆಯಲ್ಲಿ ಪ್ರಭಾವ ಹೊಂದಿದ ಮತ್ತು ಅರಟಾಳ (ಶಿತಾ) ಜೈನಕ್ಷೇತ್ರವನ್ನು ಪುನರುದ್ಧಾರ ಮಾಡಿದ 'ಪುಣ್ಯಸಾಗರ ಮುನಿ' ಇದೇ ಊರವರು.

### ೦೭. ಹಾವೇರಿ (ಹಾವೇರಿ ತಾ).

ಹಾವೇರಿ ಒಂದು ಪ್ರಾಚೀನ ಜೈನನಕೇಂದ್ರ. ೧೨ನೆಯ ಶತಮಾನಕ್ಕೆ ಸಲ್ಲುವ ನೇಮಿನಾಥ, ಆದಿನಾಥ ತೀರ್ಥಂಕರರ ವಿಗ್ರಹಗಳು, ಒಂದು ನಿಸಿಧಿ, ಒಂದು ರೂಪಾಂತರ ಬಸದಿ ಇಲ್ಲಿವೆ. ಆದಿನಾಥರ ವಿಗ್ರಹ ಸದ್ಯದ ನೇಮಿನಾಥ ಜಿನಾಲಯದಲ್ಲಿ ಪ್ರತಿಷ್ಠೆಯಾಗಿದ್ದು, ನೇಮಿನಾಥ ತೀರ್ಥಂಕರರ ಮೂರ್ತಿಯ ಇರುವಿಕೆ ತಿಳಿದಿಲ್ಲ. ಈ ಮೂರ್ತಿಯನ್ನು ಗೇರುಸೊಪ್ಪೆಯಿಂದ ತರಲಾಗಿತ್ತು. 'ದೇವಚಂದ್ರ ಸೂರಿಯ ಆದೇಶದಂತೆ ಕಲ್ಲಪ್ಪ ಶ್ರೇಷ್ಠಿಯ ಮಗ ಓಣಜ[೩೪೦] ಇದನ್ನು ಮಾಡಿಸಿದನು. ಇದರಷ್ಟೇ ಪ್ರಾಚೀನ ವಿಗ್ರಹ ಆದಿನಾಥರದ್ದು. ಈ ಮೂರ್ತಿಗೆ 'ಮುತ್ತುಮಾಣಿಕಸ್ವಾಮಿ' ಎಂಬ ಇನ್ನೊಂದು ಹೆಸರಿದೆ. ಸಿದ್ಧೇಶ್ವರ ಗುಡಿಯ ಹಿಂದಿನ ಬಾವಿಯಲ್ಲಿ ದೊರೆತ ಮೂರ್ತಿಗೆ

ಪಾಯಸಾಗರ ಮುನಿಗಳು ಕ್ರಿ.ಶ. ೧೯೪೧ರಲ್ಲಿ ಬಸದಿಯೊಂದನ್ನು ನಿರ್ಮಿಸಿ ಪುನರ್ ಪ್ರತಿಷ್ಠಾಪಿಸಿದರು.

ಕದಂಬನಾಗರ ಶೈಲಿಯ ಶಿಖರ ಹೊಂದಿರುವ ೧೨ನೆಯ ಶತಮಾನದ ಬಸದಿಯೊಂದು ಹಾವೇರಿಯಲ್ಲಿದೆ. ಸದ್ಯದ ಜೆ.ಪಿ.ವೃತ್ತದಲ್ಲಿರುವ ಬಸದಿಯು ರೂಪಾಂತರವಾಗಿ ವೀರಭದ್ರೇಶ್ವರ ದೇವಾಲಯವಾಗಿದೆ. ಪ್ರವೇಶದ್ವಾರದ ಲಲಾಟದ ಜಿನಬಿಂಬವನ್ನು ವಿರೂಪಗೊಳಿಸಲಾಗಿದ್ದು, ಇದರ ಮೇಲ್ಪಟ್ಟಿಕೆಯಲ್ಲಿರುವ ಮೂರು ಜಿನಬಿಂಬಗಳನ್ನೂ ಕೆತ್ತಿ ತೆಗೆಯಲಾಗಿದೆ. ದ್ವಾರದ ಚೌಕಟ್ಟಲ್ಲಿ ಇರುವ ಜಿನಬಿಂಬಗಳನ್ನು ಈಗಲೂ ಕಾಣಬಹುದು. ಬಾಗಿಲುಪಟ್ಟಿಗಳು ಅತ್ಯಾಕರ್ಷವಾಗಿದ್ದು, ಸಿಂಹತೋರಣ, ಚಾಮರಧಾರಿಣಿಯರನ್ನು ಚಿತ್ರಿಸಲಾಗಿದೆ. ಸದ್ಯ ಇವೆಲ್ಲ ಬಣ್ಣದಲ್ಲಿ ಮುಚ್ಚಿಹೋಗಿವೆ. ನವರಂಗದ ತೊಲೆಯಲ್ಲಿ ೧೩ನೆಯ ಶತಮಾನದ ಶಾಸನವೊಂದಿದ್ದು, ಇದು ಬಸದಿಗೆ ಮಾದರಸ ಎಂಬುವನು ಮೆಟ್ಟಿಲುಗಳನ್ನು ನಿರ್ಮಿಸಿದ್ದಾಗಿ ತಿಳಿಸುತ್ತದೆ.[೩೪೧]

## ೧೮. ಸಂಗೂರು (ಹಾವೇರಿ ತಾ).

ಶಾಸನೋಕ್ತ ಚಂಗಾಪುರ > ಚಂಗೂರು ಇಂದಿನ ಸಂಗೂರು. ಈಗಲೂ ಬಸ್ತಿಮಟ್ಟಿ ಎಂದು ಕರೆಯುವ ಸ್ಥಳದಲ್ಲಿ ಎರಡು ನಿಸಿಧಿ, ಒಂದು ತೀರ್ಥಂಕರ ಪಾದಪೀಠವಿದೆ. ಬಹುಶಃ ಈ ಸ್ಥಳದಲ್ಲಿ ಹಿಂದೆ ಬಸದಿ ಇದ್ದಂತೆ ತೋರುತ್ತದೆ. ಆದ್ದರಿಂದಲೇ ಬಸ್ತಿಮಟ್ಟಿ ಎಂಬ ಹೆಸರು ಜನಪದರಲ್ಲಿ ಉಳಿದು ಬಂದಿದೆ. ಈ ಊರನ್ನು ಗೋವಾ ಕದಂಬರ ರಾಜನಾದ ಮಾಧವ ತನ್ನ ಸೇನಾಪತಿಯಾದ ಮಲ್ಲಪನಿಗೆ ಉಂಬಳಿಯಾಗಿ ಬಿಟ್ಟಿದ್ದ. ಮಲ್ಲಪ ಜೈನನಾಗಿದ್ದು ಚಂಗಾಪುರದಲ್ಲಿ ಜೈನಚಟುವಟಿಕೆಗಳ ಸಹಜವಾಗಿಯೇ ಬಲವರ್ಧನೆಗೊಂಡವು. ಇವನ ಕುಟುಂಬದ ಸದಸ್ಯ ನೇಮಣ್ಣ ಎಂಬುವನು ನಿಲ್ಲಿಸಿದ ನಿಸಿಧಿಶಾಸನದಲ್ಲಿ ಈ ವಿಚಾರಗಳು ಪ್ರಸ್ತಾಪವಾಗಿವೆ.[೩೪೨] ಇದೊಂದು ಕೌಟುಂಬಿಕ ನಿಸಿಧಿಯೂ ಆಗಿದ್ದು ೧೯ ತಲೆಮಾರುಗಳು ಸಾವನ್ನು ಆಹ್ವಾನಿಸಿದವರ ದಾಖಲೆಯೂ ಆಗಿದೆ.

ಮೂಲಸಂಘ ಸೇನಗಣದ ನರೇಂದ್ರಸೇನ ಮುನಿಯ ಶಿಷ್ಯ ರಾಜಶ್ರೇಷ್ಠಿ ಸೋಮ ಎಂಬುವನು ಚಂಗೂರಲ್ಲಿ ಒಂದು ಅನಂತನಾಥ ಬಸದಿಯನ್ನು ನಿರ್ಮಿಸಿದ್ದ.[೩೪೩] ಇದೇ ಊರಲ್ಲಿ ಪಾರ್ಶ್ವನಾಥ ಜಿನಾಲಯ ಮತ್ತು ಶಂಭವನಾಥ ಜಿನಾಲಯಗಳಿದ್ದವು ಎಂಬುದಾಗಿ ಇದೇ ಕ್ರಿ.ಶ. ೧೩೯೭ರ ಶಾಸನದಲ್ಲಿದ್ದು ನೇಮಂಣ ಎಂಬುವನಿಂದ ಭೂದಾನ ಸಂದಿದೆ. ಈ ಅಂಶಗಳಿಂದ ಸಂಗೂರಲ್ಲಿ ಮೂರು ಜಿನಾಲಯಗಳಿದ್ದು, ೧೫ನೆಯ ಶತಮಾನದವರೆಗೆ ಇದು ಒಂದು ಪ್ರಬಲ ಜೈನಕೇಂದ್ರವಾಗಿತ್ತು, ಎಂಬುದನ್ನು ಮನಗಾಣಬಹುದು.

## ೦೯. ನೆಗಳೂರು (ಹಾವೇರಿ ತಾ.).

ಗುತ್ತರ ರಾಜಧಾನಿ ಗುತ್ತಲದಿಂದ ವಾಯುವ್ಯಕ್ಕೆ ೮ ಕಿ.ಮಿ. ದೂರದಲ್ಲಿ ಇರುವ ಊರು ನೆಗೆಯೂರು ೧೫ (ನೆಗಳೂರು). ೧೨ನೇ ಶತಮಾನದ ಅವಧಿಯಲ್ಲಿ ಕಾಳಾಮುಖ ಮತ್ತು ಜೈನ ಸಂಸ್ಕೃತಿಗಳ ವೈಭವ ಈ ಊರಲ್ಲಿತ್ತು. ಕಾಲಕ್ರಮೇಣ ಈ ಎರಡೂ ಸಂಸ್ಕೃತಿಗಳು ಇಳಿಮುಖವಾಗುತ್ತ ಇಲ್ಲವಾದವು. ಕುರುಹುಗಳು ಈಗಲೂ ಲಭ್ಯವಿದೆ. ಊರಿನ ಸಿದ್ಧೇಶ್ವರ ಗುಡಿಯ ಬಳಿಯ ಇರುವ ಎರಡು ಒಡೆದ ಕಲ್ಲಿನ ಹೋಳುಗಳಲ್ಲಿ ಶಾಸನವಿದ್ದು, ಇದರಲ್ಲಿ "ಕಾಳಮುಖ ಸಿದ್ಧಾನ್ತದೇವರ ಸಿಶ್ಯಸ್ತಾನಾಚಾರ್ಯ್ಯರ್ಜ್ಞಾನಶಕ್ತಿ ಪಣ್ಡಿತರು" ಉಲ್ಲೇಖಿಸಲ್ಪಟ್ಟಿದ್ದಾರೆ. ಇದೇ ಊರಿನ ಮೈಲಾರಲಿಂಗಪ್ಪನ ಗುಡಿಯ ಎಡಗಡೆ ಇರುವ ನಿಸಿಧಿಯಲ್ಲಿ "ಚಂದ್ರಭಟ್ಟಾರಕ ದೇವರ ಶಿಷ್ಯ ಸಕಳಚಂದ್ರದೇವ" ನ ಸಮಾಧಿ ಮರಣ ಹೊಂದಿದ ಉಲ್ಲೇಖವಿದೆ. ಇಲ್ಲಿಯೇ ಇರುವ ಈಶ್ವರ ಗುಡಿ ಮೊದಲು ಬಸದಿಯಾಗಿತ್ತು. ಸಕಳ ಚಂದ್ರದೇವ ಮುನಿಗಳ ನಿಷಧಿ ಕ್ರಿ.ಶ. ೧೨೫೧ರಲ್ಲಿ ನಿರ್ಮಾಣವಾಗಿದೆ.[೩೪೪] ಅಂತೆಯೇ ಅವರು ಅದೇ ವರುಷ ಸಲ್ಲೇಖನ ತೆಗೆದುಕೊಂಡರು. ಜೈನರ ಬಾಹುಳ್ಯವಿರುವ ಪ್ರದೇಶದಲ್ಲಿ ಸಾಮಾನ್ಯವಾಗಿ ಮುನಿಗಳು ನಿಸಿಧಿ ಹೋಗುತ್ತಾರೆ. ಸಲ್ಲೇಖನ ಸ್ವೀಕರಿಸುವ ಮೊದಲು ಮುನಿಯಾದವರು ಬಸದಿಗೆ ಹೋಗುವುದು ಸಂಪ್ರದಾಯ ಕೂಡ. ಸಲ್ಲೇಖನ ನಡೆಯುವುದು ಬಸದಿಯಲ್ಲಿಯೇ. ಆ ಪ್ರಕಾರವಾಗಿ ಸಕಳಚಂದ್ರದೇವ ಮುನಿಗಳು ಸಲ್ಲೇಖನವನ್ನು ಬಸದಿಯಲ್ಲಿಯೆ ತೆಗೆದುಕೊಂಡಿರುತ್ತಾರೆ. ಬಸದಿಯೊಂದು ಈ ಊರಲ್ಲಿರಬಹುದು ಎಂದು ಹುಡುಕಿದಾಗ ಊರಿನ ಮಧ್ಯ ಭಾಗದಲ್ಲಿ ಕಂಡುಬಂತು. ಬಸದಿ ಈಗ ರೂಪಾಂತರಗೊಂಡು ಈಶ್ವರ ಗುಡಿಯಾಗಿದೆ. ಗರ್ಭಗೃಹ ಮತ್ತು ಶಿಖರ ಮಾತ್ರ ಈಗ ಉಳಿದಿದೆ. ಗುಡಿಯ ಗರ್ಭಗೃಹದ ಪ್ರವೇಶದ್ವಾರದ ಲಲಾಟದಲ್ಲಿ ಪರ್ಯಾಂಕಾಸನ ಜಿನಬಿಂಬವಿದೆ. ಗರ್ಭಗೃಹದಲ್ಲಿ ಶಿವನ (ಲಿಂಗ) ಮೂರ್ತಿಯು ಅದರ ಮುಂದೆ ಬಸವಣ್ಣನ ಮೂರ್ತಿ ಇದೆ. ಶಿಖರದಲ್ಲಿ ನಾಲ್ಕು ಭಾಗಗಳಲ್ಲಿ ಪರ್ಯಂಕಾಸನಸ್ಥ ಜಿನನ ರೇಖಾಚಿತ್ರಗಳು, ಸುತ್ತಲೂ ಭವಾವಳಿಯಿರುವ ಶಿಲ್ಪಗಳನ್ನು ಕಾಣಬಹುದು. ಸಂಪೂರ್ಣ ಶಿಥಿಲಾವಸ್ಥೆಯಲ್ಲಿರುವ ರೂಪಾಂತರಗೊಂಡ ಬಸದಿಗೆ ಜೀರ್ಣೋದ್ಧಾರದ ಕಾಯಕಲ್ಪ ಅಗತ್ಯವಿದೆ. ಶಿಖರದ ಭಾಗದಲ್ಲಿ ಈಚಿನ ತಮಿಳು ಅಕ್ಷರಗಳಿದ್ದು, ಒಂದೊಮ್ಮೆ ಈ ದೇವಾಲಯದ ಜೀರ್ಣೋದ್ಧಾರ ಮಾಡಲು ಪರಿಶೀಲನೆಯಾಗಿತ್ತು ಎಂದು ತೊರುತ್ತದೆ. ಆದರೆ ಜೀರ್ಣೋದ್ಧಾರ ಇದುವರೆಗೂ ಆಗಿಲ್ಲ.

ಶಿಖರದಲ್ಲಿ ಮನುಷ್ಯ ಮಾತ್ರ ಬಾಗಿಕೊಂಡು ಹೋಗಬಹುದಾದ ಚಿಕ್ಕ ಗರ್ಭಗೃಹ ಒಂದಿದ್ದು ಸ್ಥಳೀಯರು ಅಲ್ಲಿ ಮುನಿಗಳು ಕುಳಿತು ತಪಸ್ಸು ಮಾಡುತ್ತಿದ್ದರಂತೆ ಎನ್ನುತ್ತಾರೆ. ವಾಸ್ತವವಾಗಿ ಗಮನಿಸಿದಾಗ ಈ ಬಸದಿಯ ವಾಸ್ತುಶೈಲಿ ಜೈನ ಸಿದ್ಧಾಂತ ನೆಲೆಯಲ್ಲಿ ರಚನೆಯಾಗಿದೆ. ಗರ್ಭಗೃಹದ ಮೇಲೆ ಮತ್ತೊಂದು ಗರ್ಭಗೃಹವಿರುವುದು ಜೈನ ವಾಸ್ತುಶಿಲ್ಪದ ಸಂಕೇತ. ಲಕ್ಕುಂಡಿ, ಶ್ರವಣಬೆಳಗೊಳ, ಐಹೊಳೆ, ಎಲ್ಲಮ್ಮನಗುಡ್ಡ (ರಟ್ಟರ ಪಟ್ಟಜಿನಾಲಯ) ಪದ್ಮಾವತಿಯ ಬಸದಿಯು

ಈಗ ಎಲ್ಲಮ್ಮನ ಗುಡಿಯಾಗಿದೆ. (ಮೂಲದಲ್ಲಿ ಇದು ಪಾರ್ಶ್ವನಾಥ ಬಸದಿಯಾಗಿತ್ತು) ಈ ರೀತಿಯ ಬಸದಿಯನಿರ್ಮಾಣ 'ಸಮವಸರಣ'ದ ಕಲ್ಪನೆಯಾಗಿದೆ. ಸಮವಸರಣ ಎಂದರೆ ತೀರ್ಥಂಕರ ಮೋಕ್ಷ ಹೊಂದುವ ಕೊನೆಯ ಘಟ್ಟ. ಬಸದಿಯ ಮೊದಲ ಹಂತದಲ್ಲಿ ತೀರ್ಥಂಕರ ಧರ್ಮಬೋಧನೆ ಮಾಡುತ್ತಾನೆ. ಇಲ್ಲಿ ಶ್ರಾವಕರು ಭೇಟಿ ಕೊಡಬಹುದು. ಎರಡನೆ ಹಂತ ಅಂದರೆ ಶಿಖರದಲ್ಲಿ ಸಣ್ಣದಾದ ಗರ್ಭಗೃಹದಲ್ಲಿ ತೀರ್ಥಂಕರ ಏಕಾಂತದಲ್ಲಿ ಧ್ಯಾನಸ್ಥನಾಗಿ ಆತ್ಮೋನ್ನತಿ ಮಾಡಿಕೊಳ್ಳುತ್ತಿರುತ್ತಾನೆ. ಆದ್ದರಿಂದಲೇ ಇಲ್ಲಿ ಶ್ರಾವಕರಿಗೆ ಪ್ರವೇಶ ನಿರ್ಬಂಧವಾಗಿರುತ್ತದೆ. ಅಂತೆಯೇ ಪ್ರವೇಶ ದ್ವಾರವೂ ಕಿರಿದಾಗಿರುತ್ತದೆ. ಈ ರೀತಿಯ ವಾಸ್ತುಶಿಲ್ಪ ಬಸದಿಗಳಲ್ಲಿ ಮಾತ್ರ ಲಭ್ಯವಿದೆ. ಕಾಲಾನಂತರ ಸ್ಥಳೀಯ ಧರ್ಮಗಳ ಪ್ರಭಾವದಿಂದ ಈ ರೀತಿಯ ವಾಸ್ತು ಮಾಯವಾಗಿ ಒಂದೇ ಗರ್ಭಗೃಹವಿರುವ ಬಸದಿಗಳು ನಿರ್ಮಾಣಗೊಂಡವು. ಸಮವಸರಣ ವಾಸ್ತುವಿರುವ ಬಸದಿಯಲ್ಲಿ ಎರಡೂ ಹಂತದಲ್ಲಿ ಒಂದೇ ತೀರ್ಥಂಕರ ಪ್ರತಿಮೆ ಇರಬೇಕು. ಕಾಲಾನಂತರ ಈ ನಿಯಮ ಬದಲಾಗಿ ಅನುಕೂಲಕ್ಕೆ ತಕ್ಕಂತೆ ಕೆಳಗೆ ಆದಿನಾಥ ಶಿಖರದಲ್ಲಿ ನೇಮಿನಾಥ, ಕೆಳಗೆ ಪಾರ್ಶ್ವನಾಥ ಶಿಖರದಲ್ಲಿ ಸುಪಾರ್ಶ್ವನಾಥ ಶಿಲ್ಪಗಳನ್ನು ಪ್ರತಿಷ್ಠಾಪಿಸುವ ರೂಢಿ ಬಂದಿತು.

ಬಸದಿಯ ರೂಪಾಂತರವಾದ ಈಶ್ವರಗುಡಿಯ ಅನತಿ ದೂರದಲ್ಲಿ 'ದಿಗಂಬರ ಮಠ' ಎಂದು ಕರೆಯಲ್ಪಡುವ ಸ್ಥಳವೊಂದಿದೆ. ಈಗ ಹಾಗೆ ಕರೆಯಲು ಒಂದು ಕುರುಹುಗಳು ಅಲ್ಲಿಲ್ಲ ಗ್ರಾಮಸ್ಥರಾದ ಶ್ರೀ ಗದಿಗಯ್ಯ ಸ್ವಾಮಿ ಫಕ್ಕೀರಯ್ಯ ಸ್ವಾಮಿ ಹಿರೇಮಠರು ಹೇಳುವ ಹಾಗೆ ಇಲ್ಲಿ ತೊಂಬತ್ತು ವರ್ಷದ ಕೆಳಗೆ ಒಬ್ಬ ದಿಗಂಬರ ಮುನಿಗಳು ವಾಸವಾಗಿದ್ದರಂತೆ. ೧೨ನೇ ಶತಮಾನದ ಹೊತ್ತಿಗೆ ಈ ಊರಲ್ಲಿ ಜೈನ ಧರ್ಮ ಅವನತಿ ಹೊಂದಿದರೂ ಜಿನಮುನಿಗಳು ಮಾತ್ರ ಈ ಸ್ಥಳಕ್ಕೆ ಭೇಟಿಕೊಡುತ್ತಲೇ ಬಂದಿದ್ದಾರೆ. ಈಗಲೂ ಬರುತ್ತಾರಂತೆ.

### ೧೦. ಅರಟಾಳ (ಶಿಗ್ಗಾವಿ ತಾ).

ಶಾಸನೋಕ್ತ ಪಯಿಟ್ಟಣ ಇಂದಿನ ಅರಟಾಳ. ಇಲ್ಲಿ ಕ್ರಿ.ಶ. ೧೦೬೧ ರ ಸುಮಾರಿಗೆ ಹರಿಯಬ್ಬೆ ಬಸದಿಯೊಂದು ಇತ್ತು. ಈ ಬಸದಿಗೆ ಹಾನಗಲ್ಲು ಕದಂಬರ ರಾಯ ಹರಿಕೇಸರಿದೇವ ಮತ್ತು ಆತನ ರಾಣಿ ಲಚ್ಚಲದೇವಿ ದತ್ತಿ ನೀಡಿದ್ದಾರೆ. ಹರಿಯಬ್ಬೆ ಇದೇ ಮನೆತನದ ಹರಿಕಾಂತದೇವನ ರಾಣಿಯಾಗಿದ್ದಳು. ಅವಳು ಅರಟಾಳದಲ್ಲಿ ಬಸದಿ ಕಟ್ಟಿಸಿದ್ದರಿಂದ ಆಕೆಯ ಹೆಸರೆ ಬಸದಿಗಾಯ್ತು. ಈಗ ಈ ಬಸದಿ ಇಲ್ಲ. ನಾಶವಾಗಿದೆ. ಇದೇ ಅರಟಾಳದಲ್ಲಿ ಕ್ರಿ.ಶ.೧೧೨೨ ರಲ್ಲಿ ಬೆಟ್ಟಕೆರೆ ಗಂಗರ ಬಮ್ಮಿಸೆಟ್ಟಿ ಮಾಡಿಸಿದ ಬಸದಿಗೆ ಮೂರು ಕೇರಿಯ ಪ್ರಭುಗಾವುಂಡರು, ಅರವತ್ತೊಕ್ಕಲರು, ಐನೂರ್ವ್ವರು ಸಂಘಗಳ ಸದಸ್ಯರು 'ಕದಂಬಕುಳತಿಳಕ' ಎಂದು ಹೆಸರಿಟ್ಟು, ಮೂಲಸಂಘ ಕಾಣೂರುಗಣದ ಮೇಷಪಾಷಾಣಗಚ್ಛ ಪರಂಪರೆಯ ಕನಕಚಂದ್ರ ಸಿದ್ಧಾಂತದೇವನ ಪಾದಗಳನ್ನು ತೊಳೆದು ಧಾರಾಪೂರ್ವಕವಾಗಿ ದೇವರ ಅಷ್ಟವಿಧಾರ್ಚನೆಗೆ ಮತ್ತು ಮುನಿಗಳ ಆಹಾರದಾನಕ್ಕೆ

ಭೂದಾನ ಮಾಡಿದ ಪ್ರಸ್ತಾಪವಿದೆ.[೨೪೫] ಇದೇ ಬಸದಿಗೆ ಹುಲ್ಲುಂಗೂರ ಪಾರಿಸಯ್ಯ ಶಾಂತಿನಾಥ ಪ್ರತಿಮೆಯನ್ನು ಮಾಡಿಸಿಕೊಟ್ಟ.[೩೪೬]

ಗರ್ಭಗೃಹ, ಅಂತರಾಳ, ನವರಂಗ ಮಾತ್ರವಿದ್ದ ಪಾರ್ಶ್ವನಾಥ ಬಸದಿಯು ಇಂದು ಜೀರ್ಣೋದ್ಧಾರಗೊಂಡಿದೆ. ಪುಣ್ಯಸಾಗರ ದಿಗಂಬರ ಮುನಿಯ ಪ್ರೇರಣೆಯಿಂದ ಮತ್ತು ಪುರಾತತ್ವ ಇಲಾಖೆಯ ವತಿಯಿಂದ ಬಸದಿಯು ನಾವೀನ್ಯವಾಗಿದೆ. ಇದೇ ಸ್ಥಳದಲ್ಲಿ ಬಸದಿಗೆ ಹೊಸ ಮಾನಸ್ತಂಭ ಅಳವಡಿಸಲಾಗಿದೆ. ಇತ್ತೀಚಿಗೆ ಪುಣ್ಯಸಾಗರ ಮುನಿಗಳು ಪಾರ್ಶ್ವನಾಥ ಬಸದಿಯ ಸುತ್ತಲೂ ಚೌವ್ವೀಸ ತೀರ್ಥಂಕರ ಸ್ವತಂತ್ರ ಬಿಂಬಗಳನ್ನು ಮತ್ತು ಒಂದು ಬಾಹುಬಲಿಯ ವಿಗ್ರಹವನ್ನು ಸ್ಥಾಪಿಸಿದ್ದಾರೆ.

**೧೧. ಸವಣೂರು (ಸವಣೂರು ತಾ).**

ಸವಣೂರು ಹೆಸರೇ ಸೂಚಿಸುವಂತೆ ಸವಣರ ಊರು. ಸವಣ ಎಂದರೆ ಜಿನಮುನಿ. ಶ್ರಮಣ > ಶ್ರವಣ >ಸವಣ. ಶ್ರವಣದ ತದ್ಭವ ಸವಣ. ಬನವಾಸಿ, ಹಾನಗಲ್ಲು, ಬಂಕಾಪುರ ದೇವಗಿರಿ ಮುಂತಾದ ಊರುಗಳಿಂದ ಲಕ್ಕುಂಡಿಗೆ ಹೋಗುವ ಮುನಿಗಳು ಸವಣೂರು ಮೂಲಕ ಹಾದು ಹೋಗುತ್ತಿದ್ದಂತೆ ತೋರುತ್ತದೆ. ಸವಣೂರಿಗೆ ಲಕ್ಕುಂಡಿ ಸಮೀಪ; ಹಾಗೆ ಲಕ್ಕುಂಡಿಗೆ ಹೋಗುವ ಮುನಿಗಳು ಸವಣೂರಲ್ಲಿ ತಂಗುತ್ತಿದ್ದರು. ಜೊತೆಗೆ ಇಲ್ಲಿ ಜಿನಮುನಿ ಸಂಘಗಳೂ ತಂಗಿದ ಸಾಧ್ಯತೆ ಇದೆ. ಅಂತೆಯೇ ಈ ಊರಿಗೆ ಸವಣೂರು ಎಂದು ಹೆಸರಾಯ್ತು. ಈ ಶ್ರೇಷ್ಠತೆ ಅರಿತ ದೇವಗಣದ ಮಲಧಾರಿ ನರೇಂದ್ರಮುನಿ ಈ ಊರಲ್ಲಿಯೇ ಸಂನ್ಯಸನ ವಿಧಾನದಿಂದ ಸಾವನ್ನು ಆಹ್ವಾನಿಸಿದರು.[೩೪೭]

ಅಬ್ದುಲ್ ರವೂಫ್‌ಖಾನ್ (ಸವಣೂರು ನವಾಬ) ಅಧಿಕಾರಕ್ಕೆ ಬರುವ ಮುಂಚೆ ಸವಣೂರೇ ಅಸ್ತಿತ್ವದಲ್ಲಿಯೇ ಇರಲಿಲ್ಲ ಎಂದೂ ಸಾವನಹಳ್ಳಿ >ಸಾವನೂರು > ಸವಣೂರು ಆಯಿತು ಎಂದೂ, ಶಹಾನೂರು > ಸವಣೂರು ಆಗಿರುವ ಸಾಧ್ಯತೆಗಳನ್ನು ಸುಲಭವಾಗಿ ಅಲ್ಲಗಳೆಯಲು ಬರುವುದಿಲ್ಲ ಎಂದು ಗೋವಿಂದಮೂರ್ತಿ ದೇಸಾಯಿಯವರು 'ಸವಣೂರು ನವಾಬರು' ಕೃತಿಯಲ್ಲಿ ಚರ್ಚಿಸಿದ್ದಾರೆ.[೩೪೮] ಸದ್ಯ ನವಾಬರ ಬಂಗಲೆ ಹಿಂದೆ ಒಂದು ಅಪ್ರಕಟಿತ ಶೈವಶಾಸನವಿದ್ದು ಇದರಲ್ಲಿ ಸವಣೂರು ಅಗ್ರಹಾರದ ಉಲ್ಲೇಖವಿದೆ. ಕ್ರಿ.ಶ.೧೦೮೭ ರಲ್ಲಿ ರಚಿತವಾದ ಈ ಶಾಸನ ಆರನೆಯ ವಿಕ್ರಮಾದಿತ್ಯನ ಕಾಲದ್ದು. ಚಾಳುಕ್ಯರ ಕಾಲದಲ್ಲಿಯೆ 'ಸವಣೂರು' ಗ್ರಾಮ ಅಸ್ಥಿತ್ವವಿರುವುದರಿಂದ ಗೋವಿಂದಮೂರ್ತಿ ದೇಸಾಯಿಯವರ ಅಭಿಪ್ರಾಯ ಊಹಾತ್ಮಕವಾಗಿದೆ. ಶ್ರವಣನಹಳ್ಳಿ, ಸವಣನ ಬಿಳಿಲು, ಸವಣನಹಳ್ಳಿ, ಸಾಣೆಹಳ್ಳಿ, ಸವಣೇರು ಇತ್ಯಾದಿ ಗ್ರಾಮನಾಮಗಳು ಜೈನ ಶ್ರವಣರ

ಪ್ರಭಾವದಿಂದಲೇ ಬಂದಿದ್ದು, ಅಂತೆಯೇ ಸವಣೂರು ಎಂಬ ಹೆಸರು ಸಹ ಜಿನಮುನಿಗಳ ಪ್ರಭಾವದಿಂದಲೇ ಬಂದಿದ್ದು ಸಹಜವಾದದ್ದಾಗಿದೆ.

### ೧೨. ಕಡಕೋಳ(ಸವಣೂರು ತಾ).

ಒಂದೇ ಕುಟುಂಬದ ಐದು ಜನ ಸದಸ್ಯರು ಸಲ್ಲೇಖನ ತೆಗೆದುಕೊಂಡ ಕುಟುಂಬ ಕಡಕೋಳದಲ್ಲಿದೆ. ಕೇಸಿಗವುಡ ಜಿನಭಕ್ತೆಯಾದ ಕನಕವ್ವೆ ದಂಪತಿಗಳಿಗೆ ಬೊಪ್ಪಗೌಡ, ದೇವಗೌಡ, ಚಿಕಬೊಪ್ಪಗೌಡ ಪುತ್ರರು. ಈ ಮನೆತನ ಕಡಕೋಳದ ಸಾವಂತ ವೃತ್ತಿಯನ್ನು ನಿಭಾಯಿಸುತ್ತಿತ್ತು. ಸಾವಂತ ಎಂದರೆ ಮುಖಂಡ, ನಾಯಕ ಎಂದರ್ಥ. ಇವರ ವೃತ್ತಿಯೆ ಮನೆತನದ ವಿಳಾಸವೂ ಆಯ್ತು. ಕೆಲವು ಕಡೆ ಸಾವಂತ ಎನ್ನುವ ಪರ್ಯಾಯವಾಗಿ ಹೆರ್ಗ್ಗಡೆ ಪದವನ್ನು ಬಳಸಲಾಗಿದೆ. ಬೊಪ್ಪಗೌಡನ ಮಗ ಹೆರ್ಗ್ಗಡೆ ಸೋಮಯ್ಯ ಕ್ರಿ.ಶ. ೧೨೪೧ರಲ್ಲಿ ಕಡಕೋಳದಲ್ಲಿ ಸಮಾಧಿ ವಿಧಿಯಿಂದ ಸಾವನ್ನು ಆಹ್ವಾನಿಸಿದರೆ, ದೇವಗೌಡದ ಮಕ್ಕಳಾದ ಮಾರಗಾವುಂಡ ಕ್ರಿ.ಶ ೧೨೬೮ರಲ್ಲಿ ಕಡಕೋಳದಲ್ಲಿ, ಕ್ರಿ.ಶ. ೧೨೪೫ರಲ್ಲಿ ಕನಕವ್ವೆ ಮತ್ತು ಕ್ರಿ.ಶ. ೧೨೫೬ರಲ್ಲಿ ನಾಗವ್ವೆ ಹೆರೂರ (ಹಾನತಾ)ಲ್ಲಿ ಸಾವನ್ನು ಆಹ್ವಾನಿಸಿದರು. ಇವರೆಲ್ಲರಿಗೂ ಇಚ್ಛಾಮರಣದ ವ್ರತ ಬೋಧಿಸಿದವರು ಮೂಲ ಸಂಘ ಸೂರಸ್ಥಗಣದ ಶ್ರೀ ನನ್ದಿಭಟ್ಟಾರಕರು. ಇದೇ ಕುಟುಂಬದ ಸಾವಂತ ಸಿರಿಯಮ ಗೌಡನ ಹೆಂಡತಿ ಚಂದಿಗೌಡಿ ಪದುಮಸೇನರಿಂದ ಮರಣವನ್ನು ಆಹ್ವಾನಿಸುತ್ತಾಳೆ. ಈ ನಿಮಿತ್ತವಾಗಿ ಈಕೆಯ ಪರಿವಾರದವರು ಕಡಕೋಳದ ಬಸದಿಗೆ ಒಂದು ಯರೆಮತ್ತರು ಭೂಮಿಯನ್ನು ದಾನ ಮಾಡಿದ್ದಾರೆ. ಇದೇ ಊರಲ್ಲಿ ಚಂದಯ ಎಂಬುವನು ನಿಸಿಧಿಯೂ ಇದೆ.[೩೪೯]

ನಾಲ್ಕು ನಿಸಿಧಿ ಶಾಸನ ಸ್ಮಾರಕಗಳು ಮತ್ತು ಬಸದಿ ಉಲ್ಲೇಖ ಹೊರತು ಪಡಿಸಿದರೆ ಕಡಕೋಳದಲ್ಲಿ ಮತ್ಯಾವುದೆ ಜೈನ ಅವಶೇಷಗಳು ಲಭ್ಯವಿಲ್ಲ. ಚಂದಯ, ಮಾರಗಾವುಂಡ, ಮತ್ತು ಸೋಮಯ್ಯ ಅವರ ನಿಸಿಧಿಗಳು ಕ್ಷೇತ್ರಕಾರ್ಯದಲ್ಲಿ ಹೊಸದಾಗಿ ದೊರೆತಿದ್ದು ಶ್ರೀರಾಮಣ್ಣ ಮುಗದೂರು ಅವರ ಹೊಲದಲ್ಲಿ ಹಿಂದೂ ಸಂಪ್ರದಾಯದಂತೆ ಪೂಜೆಗೊಳ್ಳುತ್ತಿವೆ.

### ೧೩. ಹೊನ್ನತ್ತಿ (ರಾಣೆಬೆನ್ನೂರು ತಾ).

ಪೊಂನವರ್ತ್ತಿ > ಹೊನ್ನವರ್ತಿ ಎಂಬ ಶಾಸನೋಕ್ತ ಪ್ರಾಚೀನ ನಾಮಗಳು ಇಂದಿನ ಹೊನ್ನತ್ತಿಯವು. ೧೨ನೆಯ ಶತಮಾನದ ಹೊತ್ತಿಗೆ ಅಗ್ರಹಾರವಾಗಿದ್ದ ಈ ಊರಲ್ಲಿ ಜೈನ, ಶೈವ, ವೈಷ್ಣವ ಎಂಬ ತ್ರಿಧರ್ಮಗಳು ಉಚ್ಛ್ರಾಯ ಹಂತದಲ್ಲಿದ್ದವು. ಈಗ ಶೈವ ಮಾತ್ರ ಪ್ರಚಲಿತದಲ್ಲಿದೆ. ಇಲ್ಲಿದ್ದ ಜಿನಾಲಯ ಪರಿವರ್ತಿತವಾಗಿ ವೀರಭದ್ರ ದೇವಾಲಯವಾಗಿದೆ. ನವರಂಗ, ಅಂತರಾಳ,

ಗರ್ಭಗೃಹ ಮತ್ತು ಕದಂಬನಾಗರ ಶಿಖರವನ್ನು ಹೊಂದಿದ ಈ ಬಸದಿಯು ಈಗ ಶಿಥಿಲಾವಸ್ಥೆಯಲ್ಲಿದೆ. ಈ ಬಸದಿಗೆ ಸಂಬಂಧಿಸಿದ ಶಾಸನ ಇದೇ ಕಟ್ಟಡದ ಬಲಭಾಗದಲ್ಲಿ ಇದ್ದು ತುಂಡಾಗಿದೆ. ಗುಣಭದ್ರ ಮಲಧಾರಿ ಮುನಿಯ ಶಿಷ್ಯನೊಬ್ಬ ಈ ಶಾಸನವನ್ನು ಹಾಕಿಸಿದ್ದಾನೆ. ಬಸದಿ ರೂಪಾಂತರವಾದಂತೆ ಶಾಸನದ ಶಿಲ್ಪಗಳನ್ನೂ, ಜಿನಬಿಂಬವನ್ನೂ ಕೆತ್ತಿ ಶಿವಲಿಂಗವಾಗಿ ಮಾರ್ಪಡಿಸಲಾಗಿದೆ. ಶಾಸನ ತ್ರುಟಿತವಾಗಿದ್ದರಿಂದ ಹೆಚ್ಚಿನ ಮಾಹಿತ ಅಲಭ್ಯ.

ಇದೇ ಊರ ನಾರಾಯಣ ದೇಗುಲದ ಬಳಿಯಿರುವ ೧೩ನೆಯ ಶತಮಾನದ ನಿಸಿಧಿಯಲ್ಲಿ 'ನಗರ ಜಿನಾಲಯ'ದ ಉಲ್ಲೇಖವೂ, ರಾಮಲಿಂಗ ದೇವಾಲಯದಲ್ಲಿರುವ ತ್ರಿಭುವನಮಲ್ಲನ ಶಾಸನದಲ್ಲಿ 'ಚೆಂಬಸದಿ'ಯ ಉಲ್ಲೇಖಗಳಿವೆ.[೩೪೦] ಈ ಎರಡೂ ಬಸದಿಗಳು ಹೆಸರುಗಳು ಮೇಲೆ ಹೇಳಿದ ಬಸದಿಗೆ ಸಂಬಂಧಿಸಿದವು ಎಂಬಂತೆ ತೋರುತ್ತದೆ. ಇವು ಬೇರೆ ಬೇರೆಯೇ ಆಗಿದ್ದಲ್ಲಿ ಹೊನ್ನತ್ತಿಯಲ್ಲಿ ಒಟ್ಟು ಮೂರು ಜಿನಾಲಯಗಳಿದ್ದವು.

## ೧೪. ಸುಣಕಲ್ಲಬಿದರಿ (ರಾಣೆಬೆನ್ನೂರು ತಾ).

ಸುಣಕಲ್ಲಬಿದರಿ, ಸುಣಕಲ್ಲುಬಿದರಿ, ಸುಣಕಲ್‌ಬಿದರೆ ಎಂದು ಕರೆಯಲ್ಪಡುವ ಈ ಊರ ಪ್ರಾಚೀನ ನಾಮ ಬಿದಿರೆ. ರಾಣೆಬೆನ್ನೂರಿನಿಂದ ನೈಋತ್ಯಕ್ಕೆ ೧೬ ಕಿ.ಮೀ. ದೂರದಲ್ಲಿರುವ ಈ ಊರಲ್ಲಿ ಒಂದು ನಿಸಿಧಿ, ಒಂದು ಮುಕ್ಕೊಡೆ ಕಲ್ಲು, ಒಂದು ತೀರ್ಥಂಕರರ ಪಾದ ಪೀಠ, ಒಂದು ಬಸದಿಯ ನಿವೇಶನ ಇದೆ. ಊರ ಈಶ್ವರ ದೇವಾಲಯದ ಹಿಂದಿನ ಪಾಳು ಜಾಗೆಯನ್ನು ಬಸದಿಯ ನಿವೇಶನವೆಂದು ಗ್ರಾಮಸ್ಥರು ಗುರುತಿಸುತ್ತಾರೆ. ಈ ಬಸದಿಯ ಅವಶೇಷಗಳನ್ನು ಅಸುಂಡಿ ಕೆರೆಯನ್ನು ಮತ್ತು ಕದರಮಂಡಲಗಿಯ ಸೇತುವೆಯನ್ನು ಕಟ್ಟಲು ಬಳಿಸಿದ್ದಾರೆ ಎಂಬುದು ಆಡೊಂಬೊಲ. ಈ ಸ್ಥಳಗಳಿಗೆ ಹೋಗಿ ಪರಿಶೀಲಿಸಿದಾಗ ಕದರಮಂಡಲಗಿ ಸೇತುವೆ ಕೆಳಭಾಗದಲ್ಲಿ ಜೈನ ಶಾಸನವಿರುವುದು ಗಮನಕ್ಕೆ ಬಂತು. ಕತ್ತಲಾದ್ದರಿಂದ ಛಾಯಾಚಿತ್ರ ತೆಗೆಯಲು ಆಗಲಿಲ್ಲ. ಇನ್ನೊಮ್ಮೆ ಹೋದಾಗ ಸೇತುವೆ ನವೀಕರಣಗೊಂಡಿತ್ತು. ಶಾಸನ ನಾಪತ್ತೆ.

ಬಸವಣ್ಣನ ಗುಡಿಯ ಎಡಗಡೆ ದೇವಗಿರಿ ಯಾದವ (ಸೇವುಣ) ರ ಕಾಲದ ಒಂದು ನಿಸಿಧಿ ಇದ್ದು ಕ್ರಿ.ಶ. ೧೨೨೬ರಲ್ಲಿ ರಚನೆಯಾಗಿದೆ.[೩೪೧] ಬಿದಿರೆಯ ಬೊಪ್ಪಿಸೆಟ್ಟಿ ಎಂಬುವನು ಪಂಚಪದವನ್ನು ಸ್ಮರಿಸುತ್ತ ಸಂನ್ಯಸನ ವಿಧಾನದಿಂದ ಸಮಾಧಿಯಾದ ವಿಷಯ ಈ ಶಾಸನದಲ್ಲಿದೆ. ನಿಸಿಧಿ ಶಾಸನದ ಆರಂಭದಲ್ಲಿ 'ವರ್ದ್ಧಮಾನ ಜಿನೇಂದ್ರ'ನನ್ನು ಸ್ತುತಿಸಿರುವುದರಿಂದ ಈ ಊರಲ್ಲಿ ೨೪ನೆಯ ತೀರ್ಥಂಕರನಾದ ಮಹಾವೀರನ ಜಿನಾಲಯವಿದ್ದಂತೆ ತೋರುತ್ತದೆ. ಇಡೀ ಹಾವೇರಿ ಪರಿಸರದಲ್ಲಿ ಮಹಾವೀರನ ಪ್ರಾಚೀನ ಬಸದಿಯ ಉಲ್ಲೇಖಗಳು ಅಪರೂಪ ಇದೊಂದೆ.

## ೧೫. ನದಿಹರಳಹಳ್ಳಿ (ರಾಣೆಬೆನ್ನೂರು ತಾ.).

ತುಂಗಭದ್ರಾ ನದಿಯ ಎಡದಂಡೆಗೆ ಹೊಂದಿಕೊಂಡಿರುವ ಊರು ನದಿಹರಳಹಳ್ಳಿ. ಇದರ ಪ್ರಾಚೀನ ನಾಮ ಗೊಟ್ಟಗಡಿ. ಕಳಚೂರ್ಯ್ಯ ಅರಸೊತ್ತಿಗೆಯ ಭಾಗವಾಗಿದ್ದ ಈ ಊರ ನಾಗಗಾವುಂಡ ಕ್ರಿ.ಶ. ೧೧೬೮ರಲ್ಲಿ ಗೊಟ್ಟಗಡಿಯಲ್ಲೊಂದು 'ವೃಷಭಜಿನೇಂದ್ರ ಬಸದಿ'ಯನ್ನು ನಿರ್ಮಿಸಿದ.[೩೫೨] ಅಲ್ಲದೆ ತನ್ನ ಹೆಂಡತಿಯಾದ ಅರಸಿಗಾವುಂಡಿಯ ಜೊತೆ ಸೇರಿ ಚೈತ್ಯಾಲಯಕ್ಕೆ ರಿಸಿಯರಿಗೆ, ಅಜ್ಜಿಯರಿಗೆ, ಜಿರ್ಣೋದ್ಧಾರಕ್ಕೆ ತೋಟ, ಗದ್ದೆ, ಭೂಮಿಯನ್ನು ದಾನವಾಗಿ ಬಿಟ್ಟ ಈ ಬಸದಿಯಲ್ಲಿ ಜಿನಮುನಿಗಳು ತಂಗುತ್ತಿದ್ದರು. ಅಜ್ಜಿಯರು (ಆರ್ಯಿಕೆ, ಸನ್ಯಾಸಿನಿ) ಸ್ಥಾನಿಕವಾಸಿಗಳಾಗಿದ್ದಂತೆ ತೊರುತ್ತದೆ. ಇದೇ ಬಸದಿಗೆ ಸೋವಿದೇವನ ಆಡಳಿತದಲ್ಲಿದ್ದ ಸುಂಕವರ್ಗ್ಗಡೆಗಳಾದ ದಾವರಸ ಮತ್ತು ಬಂಮದೇವ ಎಂಬುವರು ಕ್ರಿ.ಶ. ೧೧೭೨ರಲ್ಲಿ ದಾನ-ದತ್ತಿಗಳನ್ನು ಸಲ್ಲಿಸಿದ್ದಾರೆ.[೩೫೩]

ನದಿಹರಳಹಳ್ಳಿ ಊರ ಮಧ್ಯದಲ್ಲಿದ್ದ ವೃಷಭಜಿನೇಂದ್ರಾಲಯ ಈಗ ಸೋಮೇಶ್ವರ ದೇಗುಲವಾಗಿ ಪರಿವರ್ತಿತವಾಗಿದೆ. ಆದರೆ ಜಿನಶಾಸನಗಳು ದೇವಾಲಯದ ಒಳಗಡೆಗೆ ಇನ್ನೂ ಕಾಪಿವೆ. ಉತ್ತರಾಭಿಮುಖವಾಗಿರುವ ಈ ಬಸದಿಯು ಚಾಳುಕ್ಯ ಶೈಲಿಯ ಕಳಚೂರ್ಯರ ಕಾಲದ ಕಟ್ಟಡ. "ಪ್ರವೇಶದ್ವಾರ ಮತ್ತು ಗರ್ಭಗೃಹದ ದ್ವಾರಗಳ ಲಲಾಟದಲ್ಲಿ ಜಿನಬಿಂಬವಿದೆ. ನವರಂಗದಲ್ಲಿ ಭುವನೇಶ್ವರಿ ಗುಮ್ಮಟ ರಚನೆಯಿದೆ. ಇದೇ ರಚನೆ ಪ್ರವೇಶ ಮಂಟಪದಲ್ಲಿಯೂ ಕಂಡುಬರುತ್ತದೆ. ಕಕ್ಷಾಸನದಿಂದ ಕೂಡಿರುವ ಪ್ರವೇಶಮಂಟಪವನ್ನೇರಲು ಮೆಟ್ಟಿಲುಗಳಿದ್ದು, ಇಕ್ಕೆಲಗಳಲ್ಲಿ ಯಾಳದ ಸೊಂಡಿಲಿನ ರಚನೆಗಳುಂಟು"[೩೫೪] ಪ್ರವೇಶಮಂಟಪ, ನವರಂಗ, ಅಂತರಾಳ, ಗರ್ಭಗೃಹದಿಂದ ಕೂಡಿದ ಪರಿವರ್ತಿತ ದೇಗುಲದ ಹೊರ ಗೋಡೆಯನ್ನು ಗಚ್ಚಿನಿಂದ ಮುಚ್ಚಲಾಗಿದೆ. ಸಡಿಲಗೊಂಡ ಪ್ರವೇಶಮಂಟಪವನ್ನು ಗ್ರಾಮಸ್ಥರೆ ದುರಸ್ಥಿ ಮಾಡಿದ್ದಾರೆ.

## ೧೬. ಕಾಗಿನೆಲೆ (ಬ್ಯಾಡಗಿ ತಾ.).

ಹಾವೇರಿ ಜಿಲ್ಲಾ ಕೇಂದ್ರದಿಂದ ದಕ್ಷಿಣಕ್ಕೆ ೧೪ ಕಿ.ಮೀ.ಇರುವ ಕಾಗಿನೆಲೆ ರಾಷ್ಟ್ರಕೂಟರ ಕಾಲದಿಂದಲೂ ಅಸ್ತಿತ್ವದಲ್ಲಿರುವ ಊರು. ಚಾಳುಕ್ಯರ ಕಾಲದಲ್ಲಿ ಇದು ಒಂದು ಜೈನ ಕೇಂದ್ರವೂ ಆಗಿತ್ತು. ಅಂತೆಯೇ ಯಾಪನೀಯ ಮುನಿಗಳ ಸಂಪರ್ಕವನ್ನೂ ಹೊಂದಿತ್ತು.

೧೧-೧೨ ನೆಯ ಶತಮಾನದಲ್ಲಿ ಊರ ಗೌಡ ಆದಿತ್ಯವರ್ಮ ಎಂಬುವನು ಇಲ್ಲಿ ಒಂದು ಬಸದಿಯೊಂದನ್ನು ಮಾಡಿಸಿದ. ಇದು ಯಾಪನೀಯ ಪಂಥಕ್ಕೆ ಸೇರಿದ 'ಕ್ರಾಣೂರ್ಗ್ಗಣದ

ಮೇಷಪಾಷಾಣ ಗಚ್ಛದ ಬಸದಿ'.[೨೫೫] ಸದ್ಯ ಈ ಬಸದಿ ಸಮೂಲ ನಾಶವಾಗಿದ್ದು. ಅವಶೇಷಗಳು ಉಳಿದು ಬಂದಿವೆ. ಈ ಬಸದಿಯ ಶಾಸನೋಕ್ತ ಕಂಬಗಳನ್ನು ಊರ ಮಧ್ಯದ ಆದಿಕೇಶವ ಮತ್ತು ಲಕ್ಷ್ಮೀನರಸಿಂಹ ದೇವಾಲಯದ ಆವರಣದಲ್ಲಿ ಕಾಣಬಹುದು. ಉಡುಪಿಯ ಭಂಡಾರಕೇರಿ ಸ್ವಾಮಿಯ ಸಮಾಧಿ ಕಟ್ಟಡಕ್ಕೆ ಬಸದಿಯ ಕಂಬಗಳನ್ನು ಬಳಸಲಾಗಿದೆ. ಕಂಬಗಳು ಕಲಾತ್ಮಕವಾಗಿ ಕೂಡಿದ್ದು ಸೂಕ್ಷ್ಮ ಕೆತ್ತನೆಗಳನ್ನು ಹೊಂದಿವೆ. ಈ ಅಂಶಗಳನ್ನು ಗಮನಿಸಿದಾಗ 'ಮೇಷಪಾಷಾಣಗಚ್ಛದ ಬಸದಿ'ಯು ಒಂದು ಬಹುವೆಚ್ಚದ ಚೈತ್ಯಾಲಯವಾಗಿದ್ದು, ಆದಿಕೇಶವ ದೇವಾಲಯದ ಆವರಣದಲ್ಲೆ ಇತ್ತು ಎಂದು ತೋರುತ್ತದೆ. ಆದಿಕೇಶವನ ದೇವಾಲಯದ ದ್ವಾರಬಂಧದ ಲಲಾಟದಲ್ಲಿ ಮುಕ್ಕೊಡೆಯ ಒಕ್ಕೊಡೆ ಇರುವುದರಿಂದ ಇದು ಮೊದಲು ಬಸದಿಯಾಗಿತ್ತೇ ಎಂಬ ಅನುಮಾನಕ್ಕೆ ಎಡೆ ಮಾಡಿಕೊಡುತ್ತದೆ. ಸ್ಪಷ್ಟ ಆಧಾರ ಅಲಭ್ಯ.

ಕಾಗಿನೆಲೆಯಲ್ಲಿ ಎರಡು ಬಸದಿ ಇದ್ದವು. ಮೇಷಪಾಷಾಣಗಚ್ಛದ ಬಸದಿ ಮತ್ತು ಮೂಲ ಸಂಘದ ಬಸದಿಗಳೇ ಅವು. ಮೊದಲನೆಯದು ಯಾಪನೀಯ ಸಂಘಕ್ಕೆ ಸೇರಿದ್ದಾದರೆ, ಇನ್ನೊಂದು ದಿಗಂಬರ ಸಂಪ್ರದಾಯದ್ದು. ಊರಲ್ಲಿ ಒಟ್ಟು ಎರಡು ತೀರ್ಥಂಕರರ ಸಿಂಹಪೀಠ ದೊರೆತಿದ್ದು, ಸಂಗಮೇಶ್ವರ ದೇಗುಲದ ಬಳಿ ಇರುವ ಸಿಂಹಪೀಠದಲ್ಲಿ ಮೂಲ ಸಂಘವನ್ನು ಉಲ್ಲೇಖಿಸುವ ಶಾಸನವಿದೆ. ಕಾಗಿನೆಲೆ ಬಾಸವೂರು ೧೪೦ ಕಂಪಣದ ಒಂದು ಆಡಳಿತ ಉಪಘಟಕ. ಕಾಗಿನೆಲೆ ೧೨ ಎಂದು ಕರೆಯಲ್ಪಡುವ ಈ ಆಡಳಿತ ಕೇಂದ್ರವು ಆರನೆಯ ವಿಕ್ರಮಾದಿತ್ಯನ ಕಾಲಕ್ಕೆ ಜೈನರ ಗಾವುಂಡಿಕೆಯಲ್ಲಿತ್ತು. ಕಾಳಗಾವುಂಡ ಅವನ ಮಗ ಆದಿತ್ಯವರ್ಮ ಇಲ್ಲಿ ಪ್ರಮುಖ ಜೈನ ಅಧಿಕಾರಿಗಳು. ಇವರ ಮೇಲಧಿಕಾರಿಗಳಾದ ಬಾಸವೂರು ೧೪೦ ಕಂಪಣದ ಅಧಿಕಾರಿಗಳು ಜೈನರೆ ಆಗಿದ್ದು ಕಾಗಿನೆಲೆಯಲ್ಲಿ ಜೈನಧರ್ಮಕ್ಕೆ ಪ್ರೋತ್ಸಾಹವಿತ್ತರು. ಅಂತೆಯೇ ಬಸದಿಗಳೆದ್ದವು. ಮುನಿಗಳು ಸಂಚರಿಸಿದರು. ಪ್ರಸ್ತುತ ಜೈನರಾರು ಇಲ್ಲ.

## ೧೭. ಮಲ್ಲೂರು (ಬ್ಯಾಡಗಿ ತಾ).

ಮಲ್ಲೂರಲ್ಲಿ ಚಾಳುಕ್ಯ ಶೈಲಿಯ ಒಂದು ದೇಗುಲವಿದ್ದು ವೀರಭದ್ರ ದೇವಾಲಯವೆಂದು ಕರೆಯಲ್ಪಡುತ್ತಿದೆ. ಅಪಾರ ಪ್ರಮಾಣದ ಭಕ್ತರನ್ನು ಹೊಂದಿದೆ. ಈ ದೇವಾಲಯ ಮೂಲತಃ ಬಸದಿಯಾಗಿತ್ತು. ನವೀಕರಣಗೊಂಡ ದೇಗುಲ ಅಂತರಾಳ, ಗರ್ಭಗೃಹವನ್ನು ಒಳಗೊಂಡಿದೆ. ಗರ್ಭಗೃಹದಲ್ಲಿ ತೀರ್ಥಂಕರರ ಸಿಂಹಪೀಠದ ಮೇಲೆ ವೀರಭದ್ರನ ಮೂರ್ತಿಯನ್ನು ಸ್ಥಾಪಿಸಲಾಗಿದೆ. ಸಿಂಹಪೀಠದ ಪರಿಶೀಲನೆಗೆ ಪೂಜಾರಿಗಳು ಅವಕಾಶ ಕೊಡಲಿಲ್ಲ. ಶಾಸನ ಇದ್ದಿರಬಹುದು. ಅಲಂಕರಣದಿಂದ ಪೀಠವನ್ನು ಮುಚ್ಚಲಾಗಿತ್ತು. ಸಿಂಹಗಳು ಸ್ಪಷ್ಟವಾಗಿಯೇ ಗರ್ಭಗೃಹದ ಹೊರಗಿನಿಂದಲೆ ಕಾಣುತ್ತವೆ. ಲಲಾಟದಲ್ಲಿರುವ ಜಿನಬಿಂಬದಿಂದ ಇದು ಬಸದಿಯೇ ಎಂಬುದು ಖಚಿತವಾಗುತ್ತದೆ. ತೀರ್ಥಂಕರರ ಮೂರ್ತಿಯನ್ನು ದೇವಾಲಯದ ಎದುರಿನ ಕಟ್ಟೆಯೊಂದರಲ್ಲಿ

ಅರ್ಧ ಹೂಳಲಾಗಿದೆ. ಗಜಗಳ, ಮಕರಗಳ ಅಲಂಕರಣ, ಚಾಮರಧಾರಿಣಿಯರ ಸಹಿತ ತೀರ್ಥಂಕರ ಪದ್ಮಾಸನ ಭಂಗಿಯಲ್ಲಿ ಕುಳಿತಿದ್ದಾನೆ. ಯಾವ ತೀರ್ಥಂಕರ ಎಂದು ಗುರುತಿಸಲು ಸಾಧ್ಯವಾಗಿಲ್ಲ. ಇದು ಬಸದಿಯ ಒಳಗಿರುವ ಒಂದು ಮೂರ್ತಿ. ಅಥವಾ ಈ ಊರಲ್ಲಿ ಇದ್ದಿರಬಹುದಾದ ಇನ್ನೊಂದು ಬಸದಿಯದಾಗಿರಬಹುದು. ಮೂಲಮೂರ್ತಿಯಂತೂ ಅಲ್ಲ.

ವೀರಭದ್ರ ದೇವಾಲಯದ ಮೂಲ ತೀರ್ಥಂಕರ ಮೂರ್ತಿಯನ್ನು ಭಗ್ನಗೊಳಿಸಲಾಗಿದೆ. ಅದರ ರುಂಡವನ್ನು ಇದೇ ದೇವಾಲಯದ ಎದುರಿನ ಕಟ್ಟೆಯಲ್ಲಿ ನೆಡಲಾಗಿದೆ. ಇದಕ್ಕೆ ನಿತ್ಯ ಎಣ್ಣೆ ಸುರಿದು ಪೂಜೆ ಮಾಡಲಾಗುತ್ತದೆ. ಸ್ಥಳೀಯ ಐತಿಹ್ಯದ ಪ್ರಕಾರ ಏಕಾಂತರಮಯ್ಯನು ಕತ್ತರಿಸಿದ ಶಿರವಿದು. ಈ ಆಧಾರದಿಂದ ಏಕಾಂತರಾಮಯ್ಯ ಮಲ್ಲೂರು ಬಸದಿಯ ಮೇಲೆ ದಾಳಿ ಮಾಡಿದ್ದು ದಿಟವೆನಿಸುತ್ತದೆ. ಇವನ ಶಿರಸ್ಸು ಪವಾಡ ವಿವರಗಳು ಅಬ್ಬಲೂರಲ್ಲಿ ಲಭ್ಯ. (ಅಬ್ಬಲೂರ ಬಗ್ಗೆ ಮುಂದೆ ಹೇಳಲಾಗಿದೆ.) ಪ್ರಸ್ತುತ ತೀರ್ಥಂಕರ ರುಂಡದ ಪೂರ್ಣ ಮೂರ್ತಿಯು ಮೂರರಿಂದ ನಾಲ್ಕು ಅಡಿಯದ್ದಾಗಿರಬೇಕು. ಈ ಮೂರ್ತಿಯ ಚಾಮರಧಾರಿಣಿಯರನ್ನು ಇದರ ಹಿಂದಿರುವ ಮೇಲೆ ಹೇಳಿದ ತಿರ್ಥಂಕರರ ಮೂರ್ತಿಯ ಅಕ್ಕ-ಪಕ್ಕ ಹೂಳಲಾಗಿದೆ. ಅಲಂಕೃತ ಚಾಮರಧಾರಿಣಿಯರ ಶಿಲ್ಪಗಳು ಪ್ರತ್ಯೇಕವಾಗಿದ್ದು ಮನೋಹರವಾಗಿವೆ. ಈ ಎಲ್ಲಾ ಆಧಾರಗಳಿಂದ ಮಲ್ಲೂರು ಒಂದು ಜೈನ ಕೇಂದ್ರವಾಗಿದ್ದು ಸ್ಪಷ್ಟ. ಪ್ರಸ್ತುತ ಬಸದಿಯ ರೂಪಾಂತರ ವೀರಭದ್ರ ದೇವಾಲಯದ ಗರ್ಭಗೃಹದ ಸುತ್ತ ಮಣ್ಣಿನ ದಿಬ್ಬವಿದ್ದು, ಉತ್ಖನ ಮಾಡಿದರೆ ಇನ್ನಷ್ಟು ಜೈನ ಕುರುಹುಗಳು ಲಭ್ಯವಾಗಬಹುದು. ಊರಲ್ಲಿ ಯಾವುದೇ ಜೈನಶಾಸನಗಳು ಕಂಡುಬಂದಿಲ್ಲ.

## ೧೮. ಮೋಟೆಬೆನ್ನೂರು (ಬ್ಯಾಡಗಿ ತಾ).

ಬೆಣ್ಣೆವುರ-೧೨ ಆಡಳಿತ ಪ್ರದೇಶದ ಕೇಂದ್ರ ಬೆಣ್ಣೆವುರ. ಇದು ಇಂದಿನ ಮೋಟೆಬೆನ್ನೂರು. ಇಲ್ಲಿನ ಪೆಳೆಯಗೇರಿಯಲ್ಲಿ ಆಯ್ಚಿಮಯ್ಯ ಎಂಬುವನು ಶಾನ್ತಿನಾಥ ಜಿನೇಂದ್ರ ಗೃಹವನ್ನು ಕ್ರಿ.ಶ. ೧೦೬೬ರಲ್ಲಿ ಮಾಡಿಸಿದ.[೩೫೬] ಚಾಳುಕ್ಯ ೧ನೆಯ ಸೋಮೇಶ್ವರನ ಕಾಲಾವಧಿಯ ಶಾನ್ತಿನಾಥನ ಬಸದಿಯು ಚಿಕ್ಕ-ಚೊಕ್ಕ ಚೈತ್ಯಾಲಯ. ಸದ್ಯ ಈ ಬಸದಿಯು ರೂಪಾಂತರಗೊಂಡು ಗೌಳೇಶ್ವರ ದೇವಾಲಯವಾಗಿದ್ದು ಧಾರ್ಮಿಕ ದತ್ತಿ ಇಲಾಖೆಯ ಸುಪರ್ಧಿಯಲ್ಲಿದೆ. ಪ್ರವೇಶ್ವದ್ವಾರದ ಲಲಾಟದಲ್ಲಿ ಜಿನಬಿಂಬ, ನವರಂಗದಲ್ಲಿ ನಂದಿ ವಿಗ್ರಹ, ಗರ್ಭಗೃಹದಲ್ಲಿ ಶಿವಲಿಂಗವಿದೆ. ಬಹುತೇಕ ಶಿಥಿಲಗೊಂಡ ದೇಗುಲವು ನವರಂಗ, ಅಂತರಾಳ, ಗರ್ಭಗುಡಿಗಳನ್ನು ಹೊಂದಿದೆ. ಮಾಳಿಗೆಯಲ್ಲಿ ಹುಲ್ಲು ಬೆಳೆದಿದ್ದು, ದೇಗುಲದ ಜಾಗೆಯನ್ನು ಒತ್ತುವರಿ ಮಾಡಲಾಗಿದೆ. ಆಯ್ಚಿಮಯ್ಯನ ಶಾಸನ ಕುಂಬಾರಗೇರಿಯಲ್ಲಿ ಇದ್ದು, ಶಾಸನ ಶಿಲ್ಪದಲ್ಲಿ ಇದ್ದ ಜಿನಬಿಂಬವನ್ನು ಕೆತ್ತಿ ತೆಗೆಯಲಾಗಿ ಅಲ್ಲಿ ಗೀರು ಆಕೃತಿಯ ಶಿವಲಿಂಗವನ್ನು ಚಿತ್ರಿಸಲಾಗಿದೆ.

ಮೋಟೆಬೆನ್ನೂರಿನ ಕುಂಬಾರಗೇರಿ, ಹೊಂಡ, ಸಿಬಾರ, ಹರಿಜನಕೇರಿ ಮುಂತಾದ ಪ್ರದೇಶಗಳಲ್ಲಿ ೦೭ ನಿಸಿಧಿಗಳು, ೦೧ ದಾನಶಾಸನ ಇವೆ. ಮೂಲಸಂಘ ಮತ್ತು ಯಾಪನೀಯ ಸಂಘಗಳ ಸಮನ್ವಯ ಕೇಂದ್ರವಾದ ಈ ಊರು ಸಲ್ಲೇಖನ ಕೇಂದ್ರವಾಗಿಯೂ ಮಾರ್ಪಟ್ಟಿತ್ತು. ಸ್ಥಳೀಯ ಹೊಂಡದಲ್ಲಿ ಸಾಕಷ್ಟು ನಿಸಿಧಿಗಳನ್ನು ಕಂಡದ್ದಾಗಿ ಗ್ರಾಮಸ್ಥರ ಅಂಬೋಣ. ಆಚ್ಚಿಮಯ್ಯ ಕಟ್ಟಿಸಿದ ಶಾನ್ತಿನಾಥ ಜಿನಾಲಯವನ್ನು ಹೊರತುಪಡಿಸಿ ಇಲ್ಲಿ ಇನ್ನೊಂದು ಬಸದಿ ಇದೆ. ೧೦ನೆಯ ಶತಮಾನದಲ್ಲಿ ರಚಿತವಾದ ಹರಿಜನಕೇರಿಯಲ್ಲಿರುವ ನಿಸಿಧಿಯೊಂದರಲ್ಲಿ ಬಸದಿಗೆ ಕೊಟ್ಟ ದಾನದ ಬಗ್ಗೆ ಉಲ್ಲೇಖಿಸಲಾಗಿದೆ.[೩೫೭] ಈ ಬಸದಿಯ ಅವಶೇಷಗಳು ಉಳಿದುಬಂದಿಲ್ಲ.

## ೧೯. ಹಿರೇಅಣಜಿ (ಬ್ಯಾಡಗಿ ತಾ).

ತಾಲ್ಲೂಕು ಕೇಂದ್ರ ಬ್ಯಾಡಗಿಯಿಂದ ನೈಋತ್ಯಕ್ಕೆ ೨೮ ಕಿ.ಮೀ.ದೂರ ಇರುವ ಒಂದು ಗ್ರಾಮ ಹಿರೇಅಣಜಿ. ಈ ಹಳ್ಳಿಯು ಪ್ರಾಚೀನ ಆಡಳಿತ ಘಟಕ ಬಾಸವೂರು ೧೪೦ರ ಭಾಗವಾಗಿತ್ತು. ೦೯ ನಿಸಿಧಿ ಶಾಸನಗಳು, ೦೨ ದಾನಶಾಸನಗಳು, ೦೧ ಮುಕ್ಕೊಡೆ ಕಲ್ಲು, ಒಂದು ಬಸದಿ ಉಲ್ಲೇಖಗಳನ್ನು ಗಮನಿಸಿದಾಗ ಹಿರೇ ಅಣಜಿ ಒಂದು ಜೈನ ಕೇಂದವಾಗಿತ್ತು ಎಂದೇ ಹೇಳಬಹುದು. ಇಲ್ಲಿರುವ ದಾನಶಾಸನಗಳು ಸೇವುಣ ದೊರೆ ಯಾದವ ರಾಮಚಂದ್ರನ ಕಾಲಕ್ಕೆ ಸೇರಿದವು. ಇದರಲ್ಲಿ ಕ್ರಿ.ಶ. ೧೨೯೨ರ ಒಂದು ಶಾಸನ ಊರಲ್ಲಿದ್ದ ನೇಮಿನಾಥ ಬಸದಿಗೆ ದಾನ ಬಿಟ್ಟ ವಿಚಾರವನ್ನು ಪ್ರಸ್ತಾಪಿಸುತ್ತದೆ. ಸದ್ಯ ಈ ಶಾಸನಗಳು ವೀರಭದ್ರ ದೇವಾಲಯದ ಪಕ್ಕದ ಗುಂಡಿಯಲ್ಲಿ ಸಿಲುಕಿ ಭೂಗತಗೊಂಡಿವೆ. ಅಪ್ರಕಟಿತ ಶಾಸನಗಳಿವು. ವೀರಭದ್ರ ದೇವಾಲಯ ಸುತ್ತಲಿರುವ ಜೈನ ಸ್ಮಾರಕಗಳನ್ನು ಗಮನಿಸಿದಾಗ ಈ ದೇಗುಲವೆ ನೇಮಿನಾಥ ಬಸದಿಯಾಗಿದ್ದಂತೆ ತೋರುತ್ತದೆ. ಸದ್ಯ ದೇವಾಲಯ ನವೀಕರಣಗೊಂಡಿದ್ದರಿಂದ ಇದುವೇ ಬಸದಿಯಾಗಿತ್ತು ಎಂಬುವುದಕ್ಕೆ ಕುರುಹುಗಳು ದೊರೆಯವು.

ಊರಿನ ಕೆರೆಯ ದಂಡೆಯ ಮೇಲೆ ಒಂದು ಮುಕ್ಕಾದ 'ಮುಕ್ಕೊಡೆ ಕಲ್ಲು' ಬಿದ್ದಿದೆ ಬಸದಿಗೆ ದಾನ ಕೊಟ್ಟ ಹೊಲದ ಮೇರೆಗೆ ಈ ತರದ ಕಲ್ಲುಗಳನ್ನು ನೆಡುತ್ತಿದ್ದರು. ಪ್ರಾಯಶಃ ನೇಮಿನಾಥ ಬಸದಿಯ ಹೊಲದ ಮೇರೆಗಲ್ಲಾಗಿ ಇದು ಬಳಕೆಯಾಗಿತ್ತು. ಗ್ರಾಮಸ್ಥರೊಬ್ಬರ ಮನೆಯ ಮೆಟ್ಟಿಲಾಗಿದ್ದ ಈ ಕಲ್ಲು ಸದ್ಯ ಕೆರೆಯ ಏರಿಯನ್ನು ಸೇರಿದೆ. ಈ ಕಲ್ಲಿನಲ್ಲಿ ಮುಕ್ಕೊಡೆ, ಚಾಮರ, ಖಡ್ಗದ ಗೀರು ಶಿಲ್ಪಗಳಿವೆ. ಖಡ್ಗವಿಲ್ಲಿ ಶಾಪಾಶಯದ ಸಂಕೇತ. ೧೨ನೆಯ ಶತಮಾನದವರೆಗೂ ಒಂದು ಜೈನ ಸಂಸ್ಕೃತಿಯ ತಾಣವಾಗಿದ್ದ ಹಿರೇಅಣಜಿಯಲ್ಲಿ ಈಗ ಸ್ಮಾರಕಗಳನ್ನು ಹೊರತುಪಡಿಸಿ ಜೈನರಾರೂ ಇಲ್ಲ.

## ೨೦. ಆಲದಗೆರೆ (ಹಿರೇಕೆರೂರು ತಾ).

ಆಲದಗೆರೆಯಲ್ಲಿ ಈಗಲೂ ಬಸದಿಯ ಬಣವೆಂದು ಕರೆಯಲ್ಪಡುವ ಜಾಗವಿದೆ. ಅಂತೆಯೇ ಇಲ್ಲಿ ಬಸದಿಯೊಂದು ಇತ್ತು. ಅದಕ್ಕಾಗಿಯೇ 'ಬಸದಿಯ ಬಣ' ಎಂಬ ನಾಮ ಈಗಲೂ ಮುಂದುವರೆದುಕೊಂಡು ಬಂದಿದೆ. ಸದ್ಯ ಬಸದಿಯು ನಾಶವಾಗಿದ್ದು, ಅವಶೇಷಗಳು ಇವೆ. ವಿತಾನದ ಶಿಲ್ಪ ಕಂಬಗಳು ಪ್ರಮುಖ ಅವಶೇಷಗಳು. ಬಸದಿಯ ಕೆಲವೊಂದು ಅವಶೇಷಗಳು ಊರ ಹೊಂಡದ ಮೆಟ್ಟಿಲುಗಳಾಗಿವೆ. ಈ ಜಾಗೆಯ ಅನತಿದೂರದಲ್ಲಿ ಮುಕ್ಕಾದ ಪಾರ್ಶ್ವನಾಥ ವಿಗ್ರಹ ಇದೆ. ಅಂತಾಗಿ ಇಲ್ಲೊಂದು ಪಾರ್ಶ್ವನಾಥ ಬಸದಿಯಿತ್ತು. ಊರ ಕರಿಯಮ್ಮನ ಗುಡಿಯ ಎದುರಿಗೆ ೧೩ನೆಯ ಶತಮಾನಕ್ಕೆ ಸಂಬಂಧಿಸಿದ ಎರಡು ನಿಸಿಧಿಗಳಿವೆ. ಒಂದು ನಯಕೀರ್ತಿ ಮುನಿಯ ಗುಡ್ಡಿ ಮಾಯಕ್ಕಳದ್ದು ಇನ್ನೊಂದು ಇದೇ ಮುನಿಯ ಗುಡ್ಡನೊಬ್ಬನ ನಿಸಿಧಿಯಾಗಿದೆ. ಕೆರೆಯ ಏರಿಯಲ್ಲಿ ನಿಲ್ಲಿಸಿರುವ ಕ್ರಿ.ಶ. ೧೨೬೭ರ ನಿಸಿಧಿಯೊಂದು ಜಯಕೀರ್ತಿ ಭಟ್ಟಾರಕರ ಶಿಷ್ಯ ಮಾಣಿಕದೇವ ಮತ್ತು ಬಾಳಚಂದ್ರ ತ್ರೈವಿದ್ಯಾ ದೇವನ ಗುಡ್ಡ ಮಲ್ಲಯರ ಸಮಾಧಿ ಮರಣದ ಬಗ್ಗೆ ಮಾಹಿತಿ ನೀಡುತ್ತದೆ. ಇದರ ಪಕ್ಕ ಇರುವ ಇನ್ನೊಂದು ನಿಸಿಧಿಯು ಸೂರಸ್ಥಗಣದ ನಾಗಚಂದ್ರ ಮುನಿಯ ಗುಡ್ಡನೊಬ್ಬನ ಸಮಾಧಿ ಮರಣವನ್ನು ಉಲ್ಲೇಖಿಸುತ್ತದೆ.[೩೫೮] ನಿಸಿಧಿಗಳು, ಬಸದಿಯ ಅವಶೇಷಗಳು, ಸಾಕಷ್ಟು ಮುನಿಗಳ ಸಂಚಾರದಿಂದ ಆಲದಗೆರೆ ಒಂದು ಜೈನಕೇಂದ್ರವೆಂಬುದು ದಿಟ.

## ೨೧. ಹಿರೇಕೋಣತಿ (ಹಿರೇಕೆರೂರು ತಾ).

ಊರಿನ ಹನುಮಂತ ದೇವಾಲಯ ಪಕ್ಕ ನೆಟ್ಟ ಕ್ರಿ.ಶ. ೧೨೭೧ರ ಸಿನಿಧಿಯಲ್ಲಿ "ಕೋಣವತ್ತಿಯ ನ ಪಾರ್ಶ್ವನಾಥ ದೇವರ ಶ್ರೀಪಾದ ಪದ್ಮಾರಾಧಕೆ"[೩೫೯] ಎಂಬ ಶಾಸನ ಒಕ್ಕಣೆ ಇದೆ. ಈ ಆಧಾರದಿಂದ ಶಾಸನೋಕ್ತ ಕೋಣವತ್ತಿಯಲ್ಲಿ ಒಂದು ಪಾರ್ಶ್ವನಾಥ ದೇವರ ಬಸದಿ ಇತ್ತು ಎಂದು ಖಚಿತವಾಗಿ ಹೇಳಬಹುದು. ಸದ್ಯ ಈ ಬಸದಿಯ ಕಟ್ಟಡ ಇದ್ದು, ನಾರಾಯಣ ದೇಗುಲವಾಗಿ ರೂಪಾಂತರಗೊಂಡಿವೆ. ಊರ ಸಮುದಾಯಭವನದ ಹಿಂದಿರುವ ಈ ದೇಗುಲ ನವರಂಗ, ಅಂತರಾಳ, ಗರ್ಭಗೃಹವನ್ನು ಹೊಂದಿದೆ. ಗರ್ಭಗುಡಿಯಲ್ಲಿ ಸಿಂಹಪೀಠದ ಮೇಲೆ ನಾರಾಯಣ ಮೂರ್ತಿ ಪ್ರತಿಷ್ಠಾಪಿಸಲಾಗಿದೆ. ಸಿಂಹಪೀಠವು ಸಾಮಾನ್ಯವಾಗಿ ತೀರ್ಥಂಕರ ಮೂರ್ತಿಗೆ ಬಳಸುತ್ತಾರೆ. ಈ ದೇಗುಲದ ಬಾಗಿಲುವಾಡದ ಮೇಲ್ಪಟ್ಟಿಕೆ ಶಿಥಿಲವಾಗಿ ಇಲ್ಲಿಯೇ ಬಿದ್ದಿದ್ದು, ಲಲಾಟದಲ್ಲಿ ಜಿನಬಿಂಬವಿದೆ.

ನಾರಾಯಣ ದೇಗುಲವಾಗಿ ಮಾರ್ಪಟ್ಟ ಪಾರ್ಶ್ವನಾಥ ಬಸದಿಯು ಇಂದು ಮುಜರಾಯಿ ಇಲಾಖೆಯ ಅಧೀನ. ಸಮುದಾಯ ಭವನವನ್ನು ಇದರ ಬಾಗಿಲಿಗೆ ಆನಿಸಿ ಕಟ್ಟಿದ್ದರಿಂದ ದೇಗುಲಕ್ಕೆ ಸಂದಿಯಲ್ಲಿ ಪ್ರವೇಶ ಮಾಡಬೇಕು ಒಳಗೆಲ್ಲ ಕತ್ತಲ ಹೆಚ್ಚಿರುವುದರಿಂದ ಬಾವಲಿಗಳು ವಾಸಿಸುತ್ತವೆ.

ದೇಗುಲದ ಒಳಪ್ರಾಕಾರ ಇನ್ನೂ ಗಟ್ಟಿಮುಟ್ಟಾಗಿದೆ; ಹೊರ ಪ್ರಾಕಾರವನ್ನು ಮಣ್ಣಿನಿಂದ ಮುಚ್ಚಲಾಗಿದೆ. ಇದೇ ದೇಗುಲದ ಅಕ್ಕಪಕ್ಕ ನಾಲ್ಕು ನಿಸಿಧಿಗಳಿವೆ. ಎರಡು ಲಿಪಿಸಹಿತ, ಇನ್ನೆರಡು ಲಿಪಿರಹಿತವಾದವು. ಲಿಪಿಸಹಿತ ಶಾಸನಗಳು ಕ್ರಿ.ಶ.೧೨೪೫ ಮತ್ತು ೧೨೬೩ರಲ್ಲಿ ರಚಿತವಾಗಿದ್ದು ಕಲ್ಯಾಣಕೀರ್ತಿ ಶಿಷ್ಯರ ನಿಸಿಧಿಗಳಾಗಿವೆ.[೩೬೦] ಅಲ್ಲದೆ ಹನುಮಂತ ದೇವಾಲಯದ ಅಕ್ಕಪಕ್ಕ ಕಾಮವೆ ಮತ್ತು ಸೇನಭಟ್ಟಾರಕರ ಗುಡ್ಡನ ನಿಸಿಧಿಗಳಿವೆ.[೩೬೧] ಇದೇ ದೇವಾಲಯದ ಎದುರಿಗೆ ಒಂದು ಕಂಭ ನಿಸಿಧಿ ಇದ್ದು, ಹಾವೇರಿ ಜಿಲ್ಲೆಯಲ್ಲಿ ದೊರೆಯುವ ಏಕೈಕ ಕಂಭ ನಿಸಿಧಿ ಎನಿಸಿದೆ. ಇದರಲ್ಲಿ ನಾಲ್ಕು ಕಡೆ ಶಿಲ್ಪವಿದ್ದು, ಮೂರು ಭಾಗದಲ್ಲಿ ಶಾಸನವಿದೆ. ನಾಲ್ಕು ಜನ ಶ್ರಾವಕರ ಸಮಾಧಿ ಮರಣವನ್ನು ಒಂದೇ ಕಂಭದಲ್ಲಿ ಚಿತ್ರಿಸಿರುವ ಅಪರೂಪದ ನಿಸಿಧಿ ಇದು. ಇದೇ ಊರ ಬ್ರಹ್ಮೇಶ್ವರ ದೇವಾಲಯ ಬಳಿ ಒಂದು ನಿಸಿಧಿ ಇದ್ದು, ಕ್ರಿ.ಶ. ೧೨೮೩ರಲ್ಲಿ ರಚಿತವಾಗಿದೆ. ಸೇನದೇವರ ಗುಡ್ಡಿಯು ಸನ್ಯಸನ ವಿಧಾನದಿಂದ ಸಮಾಧಿಯಾದುದರ ಬಗ್ಗೆ ಶಾಸನ ತಿಳಿಸುತ್ತದೆ. ಹೊಂಡದ ಬಳಿ ಇನ್ನೊಂದು ಲಿಪಿ ರಹಿತ ನಿಸಿಧಿ ಇದೆ. ಅಲ್ಲದೆ ಊರ ಕೆರೆಯಲ್ಲಿ ಇನ್ನೂ ಸಾಕಷ್ಟು ನಿಸಿಧಿಗಳಿರುವುದಾಗಿ ಗ್ರಾಮಸ್ಥರು ಹೇಳಿದರು. ಈ ಎಲ್ಲ ಅಂಶಗಳು ಹಿರೇಕೊಣತಿಯು ಒಂದು ದೊಡ್ಡ ಜೈನ ಕೇಂದ್ರವೆಂದು ಸಾಬೀತುಪಡಿಸುತ್ತವೆ.

### ೨೨. ಅಬ್ಬಲೂರು (ಹಿರೇಕೆರೂರು ತಾ).

ಅಬ್ಬಲೂರು ಒಂದು ಚಿಕ್ಕ ಗ್ರಾಮವಾದರೂ ಕರ್ನಾಟಕ ಇತಿಹಾಸದಲ್ಲಿ ದೊಡ್ಡ ಹೆಸರು. ಇಲ್ಲಿರುವ ಸೋಮೇಶ್ವರನ ದೇವಾಲಯದಲ್ಲಿ ೧೨ನೆಯ ಶತಮಾನ ಶಾಸನವೊಂದಿದೆ.[೩೬೨] ಶಿವಭಕ್ತ ಏಕಾಂತರಾಮಯ್ಯ ಮತ್ತು ಸ್ಥಳೀಯ ಜೈನರಿಗೆ ಧಾರ್ಮಿಕ ಯುದ್ಧ ನಡೆದು ಏಕಾಂತರಾಮಯ್ಯ ಗೆಲುವು ಸಾಧಿಸಿದ್ದು ಶಾಸನದ ಮುಖ್ಯಸಾರ. ಏಕಾಂತರಾಮಯ್ಯನ ಮೂಲಕ ಶಿವಪಾರಮ್ಯವನ್ನು ಉತ್ಕಿಕೀರ್ತಿಸುವಲ್ಲಿ ಶಾಸನ ಸಫಲವಾಗಿದೆ. ಜೊತೆ ಜೊತೆಗೆ ಜೈನರನ್ನು-ಜೈನಧರ್ಮವನ್ನು ಮುರಿದು ಮುಕ್ಕಿದ ಪ್ರತಿಬಿಂಬವು ಶಾಸನದಲ್ಲಿ ಎದ್ದು ತೋರುತ್ತದೆ.

ಗುಲ್ಬರ್ಗ ಜಿಲ್ಲೆಯ ಆಳಂದೆಯ ಪುರುಷೋತ್ತಮ ಸೀತಾದೇವಿ ದಂಪತಿಗಳ ಪುತ್ರ ರಾಮಯ್ಯ. ಇವನ ಹುಟ್ಟು ಕೈಲಾಸದಲ್ಲಿ ಶಿವನ ಅಣತಿಯಂತೆ ಆಯಿತು. ರಾಮಯ್ಯ ವೀರಭದ್ರನ ಸಂಜಾತ. ಶಿವನಲ್ಲಿ ಏಕಭಕ್ತಿ ಇಟ್ಟಿದ್ದರಿಂದ ರಾಮ ಏಕಾಂತರಾಮಯ್ಯನಾದ. ಬಹುದಿನಗಳ ನಂತರ ಏಕಾಂತರಾಮಯ್ಯ ಪುಲಿಗೆಱೆ (ಲಕ್ಷ್ಮೇಶ್ವರ)ಗೆ ಬರಲಾಗಿ ಅಲ್ಲಿನ ಸೋಮನಾಥ ಪ್ರತ್ಯಕ್ಷವಾಗಿ 'ಅಬಲೂರಲ್ಲಿ ಜೈನ ಪ್ರಾಬಲ್ಯವಿದ್ದು ನೀನು ಶಿವಧರ್ಮ ಶ್ರೇಷ್ಠವೆಂದು ಸಾರು ಎಂದು ಆದೇಶವಿತ್ತ'. ಅಂತೆಯೇ ಏಕಾಂತರಾಮಯ್ಯ ಅಬ್ಬಲೂರ ಬ್ರಹ್ಮೇಶ್ವರ ದೇವಾಲಯದಲ್ಲಿ ನೆಲೆಸಿದ. ಸಂಕಗಾವುಂಡನ ನೇತೃತ್ವದಲ್ಲಿ ಜೈನರು ಬಂದು ಏಕಾಂತರಾಮನಲ್ಲಿ ಜಿನನೆ ಶ್ರೇಷ್ಠ ಎಂಬ ವಾದವನ್ನು ಮಂಡಿಸಿದರು. ಏಕದೇವೋಪಾಸನೆಯ ರಾಮಯ್ಯ ಈ ವಾದವನ್ನು ಒಪ್ಪದೆ ಶಿವನೇ ಸರ್ವಶ್ರೇಷ್ಠ ಎನ್ನಲಾಗಿ,

ಶಿವಪಾರಮ್ಯವನ್ನು ಮೆರೆಯಲು ನಿನ್ನ ರುಂಡ ಕತ್ತರಿಸಿ ಮರಳಿ ಪಡೆದರೆ ನೀನೆ ನಿಜವಾದ ಶಿವಭಕ್ತ ಎಂದು ಜೈನರು ವಾದ ಮಂಡಿಸಿದರು. ಇದಕ್ಕೆ ಪ್ರತಿಯಾಗಿ ಜಿನಸ್ಥಾನದಲ್ಲಿ ಶಿವಮೂರ್ತಿ ಪ್ರತಿಷ್ಠಾನ ಗೈವೆವು ಎಂದು ಓಲೆ ಬರೆಯಲ್ಪಟ್ಟಿತು. ಏಕಾಂತರಾಮಯ್ಯ ತನ್ನ ರುಂಡ ಕತ್ತರಿಸಿಕೊಂಡು ಏಳು ದಿನಗಳ ನಂತರ ಮರಳಿ ಪ್ರಾಣ ಪಡೆದ. ತದನಂತರ ಏಕಾಂತರಾಮಯ್ಯ ಅಬ್ಬಲೂರು ಜೈನರ ಮೇಲೆ ಬಸದಿಯ ಮೇಲೆ ದಾಳಿ ಮಾಡಿದ. ಆ ದಾಳಿಯ ತೀವ್ರತೆ ಎಷ್ಟಿತ್ತೆಂದರೆ.

> ಬೆಱಗಾಗಿ ಜೈನರಲ್ಲಂ ಮಱುಗಿ ಜಿನಪ್ರಳಯವೆಂಬುದಂ
> ಮಾಡದಿರಿನ್ನೆಡರ್ಗೆ ಕಾಲ್ವಿಡಿಯೆ ಮಾಣದೆ ಬಱಸಿಡಿಲಂತೆಱಗಿ
> ಜಿನನ ತಲೆಯಂ ಮುರಿದಂ.

ಇಷ್ಟೇ ಅಲ್ಲದೇ ಬಾಳೆವನದಂತೆ ಜೈನಧರ್ಮಿಯರಿಂದ ಕಂಗೊಳಿಸುತ್ತಿದ್ದ ಅಬ್ಬಲೂರಿನಲ್ಲಿ ಏಕಾಂತರಾಮಯ್ಯ ಕಾಡಾನೆ ಹೊಕ್ಕಂತೆ ಹೊಕ್ಕು ಅಲ್ಲಿದ್ದ ಅರಸೊತ್ತಿಗೆಯ ಅಧಿಕಾರಿಗಳನ್ನು, ಜೈನರನ್ನು ತುಳಿದ. ಈ ದಾಳಿಗೆ ಹೆದರಿದ ಜೈನರು ಓಡಿಹೋಗಲು ಬಸದಿಯಲ್ಲಿದ್ದ ಜಿನನನ್ನು ಕಿತ್ತು ವೀರಸೊಮೇಶ್ವರನನ್ನು ಪ್ರತಿಷ್ಠಾಪಿಸಿದ.

> ಬಡಿಗೊಂಡೊರ್ಬನೆ ಸೊಕ್ಕಿ ಬಾಳೆವನಮಂ ಕಾಡಾನೆ ಪೊಕ್ಕಂತಿರು
> ಕ್ಕಡಗಲು ಕಾಪಿನ ವೀರರಂ ತುರಗಮಂ ಸಾಮಂತರಂ ತೊಳ್ದು ಮಾಮಾ
> ರ್ಪಡೆಗಳು ಜೈನರ ಮಾರಿಬಂದುದೆನುತುಂ ಬೆಂಗೊಟ್ಟು ಪೋಗಲು ಜಿನಂ
> ಕೆಡೆವನ್ನಂಬಡದಲ್ಲಿ ಕೈಕೊಳಿಸಿದಂ ಶ್ರೀವೀರಸೋಮೇಶನಂ.

ಈ ಅನ್ಯಾಯವನ್ನು ಜೈನರು ರಾಜನಾದ ಬಿಜ್ಜಣನಲ್ಲಿ ಹೇಳಲು ಏಕಾಂತರಾಮಯ್ಯನು ಒಪ್ಪಂದದ ಓಲೆ ತೋರಿಸಿ, ಆನೆಸೆಜ್ಜೆಯ ಬಸದಿ ಮುಖ್ಯವಾಗಿ ಬಸದಿಗಳನ್ನು ಪಣಕಿಟ್ಟರೆ ಮತ್ತೆ ತಲೆಯನರಿದು ಪಡೆವೆ ಎಂದಾಗ ಜೈನರು ಒಪ್ಪಲಿಲ್ಲ. ಅದಕ್ಕೆ ಪ್ರತಿಯಾಗಿ ಬಿಜ್ಜಣ ನೀವಿನ್ನುಸಿರದೆ ಪೋಗಿ ಸುಖದಿನಿರಿವೆಂದವರಂ ಕಳಿಸಿ ರಾಮಯ್ಯಂಗಳಿಗೆಲ್ಲರು ವಱಿಯೆ ಜಯಪತ್ರಮಂ ಕೊಟ್ಟ' ಅಷ್ಟೇ ಅಲ್ಲದೆ ಸೋಮೇಶ್ವರ ದೇವಾಲಯಕ್ಕೆ ಗೋಗಾವೆ ಎಂಬ ಗ್ರಾಮವನ್ನು ದಾನವಾಗಿ ನೀಡಿದ.

ಏಕಾಂತರಾಮಯ್ಯನ ಸಾಹಸ ಮೆಚ್ಚಿ ಚಾಳುಕ್ಯ ನಾಲ್ಕನೆಯ ಸೋಮೇಶ್ವರನು ಅಬ್ಬಲೂರನ್ನು, ಕದಂಬ ಕಾಮದೇವರಸ ಮಲ್ಲವಳ್ಳಿ ಎಂಬ ಗ್ರಾಮವನ್ನು ರಾಮಯ್ಯನ ಕಾಲಕರ್ಚ್ಚಿ ದೇವಾಲಯಕ್ಕೆ ಕೊಟ್ಟರು. ಇದಿಷ್ಟು ಶಾಸನದ ಸಾರ.

ಮೇಲಿನ ಶಾಸನದ ಅನುಗುಣವಾಗಿ ಸೋಮೇಶ್ವರ ದೇವಾಲಯದ ಜಾಲಂಧ್ರಗಳಲ್ಲಿ ಮತ್ತು ಅದರ ಕೆಳಗೆ, ಮಂಟಪದ ಹೊರ ಭಾಗದ ಶಿಲ್ಪಗಳಲ್ಲಿ ರಾಮಾಯಣದ ಕಥಾಸರಣಿಯನ್ನು ಚಿತ್ರಿಸಲಾಗಿದ್ದು, ಅಲ್ಲಲ್ಲಿ ಮುನಿಗಳನ್ನು ಕೊಲ್ಲುವ, ಜಿನನನ್ನು ಭಗ್ನಗೊಳಿಸಿದ ಶಿಲ್ಪಗಳಿವೆ. ಇಲ್ಲಿ ರಾಮಯ್ಯ ರಾಮನಾದರೆ ಜೈನರು ರಾವಣ ಪರಿವಾರದಂತೆ ಬಿಂಬಿತವಾಗಿದ್ದಾರೆ. ಈ ಕಥಾಸರಣಿಯಲ್ಲಿ ಶಿವಭಕ್ತನಾದ ಏಕಾಂತರಾಮಯ್ಯನನ್ನು ವಿಷ್ಣುವಿನ ಅಂಶವಾದ ರಾಮನಿಗೆ ಹೋಲಿಸಿರುವುದು ಒಂದು ವೈರುಧ್ಯ. ಇದು ವೈದಿಕ ಪ್ರಭಾವ ಇರಬಹುದು. ದೇವಾಲಯದ ಕಟ್ಟೆಯ ಗೋಡೆಯ ಬಲಗಡೆ ಏಕಾಂತರಾಮಯ್ಯ ಶಿವಲಿಂಗದ ಬಳಿ ತಲೆ ಕತ್ತರಿಸಿ ಇಟ್ಟಿದ್ದು, ಜೈನರ ಜೊತೆ ಯುದ್ಧ ಮಾಡುತ್ತಿರುವ ದೃಶ್ಯಗಳು ಮನೋಜ್ಞವಾಗಿವೆ. ಹಾಗೆಯೇ ಒಂದು ಧರ್ಮ ಇನ್ನೊಂದು ಧರ್ಮವನ್ನು ಸೆದೆಬಡಿಯುವ ಕರಾಳತೆಯೂ ಈ ಶಿಲ್ಪದಲ್ಲಡಗಿದೆ. ಮುನಿಸಮುದಾಯ ಯುದ್ಧವನ್ನು ನಿಲ್ಲಿಸು ಎಂದು ಏಕಾಂತರಾಮಯ್ಯನಲ್ಲಿ ಅಂಗಲಾಚಿದರೂ ಅವನು ಕೇಳಲಿಲ್ಲ. ಜೈನರನ್ನು ತುಳಿದ, ಮುರಿದ, ಮುಕ್ಕಿದ. ತದನಂತರ ಬಸದಿಯಲ್ಲಿರುವ ಜಿನನನ್ನು ಒಡೆದು ಸೋಮೇಶ್ವರನನ್ನು ಪ್ರತಿಷ್ಠಾಪಿಸಿದ. ಬಲ ಜಾಲಂಧ್ರದ ಕೆಳಗೆ ಜಿನಬಿಂಬವನ್ನು ಅಡ್ಡಲಾಗಿ ಕೆಡವಿ ಅದನ್ನು ಒಡೆಯುವ ಶಿಲ್ಪ ಮತ್ತು ಎಡ ಜಾಲಂಧ್ರದ ಕೆಳಗಡೆ ಯುದ್ಧದಲ್ಲಿ ಗೆದ್ದಾಗ ರಾಮಯ್ಯನಿಗೆ ಸಂಕಗಾವುಂಡ ಓಲೆಯನ್ನು (ಜಯಪತ್ರ) ಕೊಡುವ ಶಿಲ್ಪಗಳಿವೆ.

ಏಕಾಂತ ರಾಮಯ್ಯನ ಶಿರಸ್ಸುಪವಾಡದ ಸತ್ಯಾಸತ್ಯತೆ ಏನೇ ಇದ್ದರೂ ಅವನೊಬ್ಬ ಸಂಘಟಿತ ಶಕ್ತಿ. ಆ ಸಂಘಟನೆ ಹುಟ್ಟಿದ್ದೇ ಜೈನರ ಧರ್ಮದ ಪ್ರಭಾವವನ್ನು ತಗ್ಗಿಸಲು. ಇಲ್ಲಿ ಏಕಾಂತರಾಮಯ್ಯನೊಬ್ಬನಿಂದ ಅಬ್ಬಲೂರ ಜೈನರ ಜೊತೆ ಕದನ ಮಾಡಲು ಸಾಧ್ಯವೇ ಇಲ್ಲ. ಅವನ ಜೊತೆ ಶಸ್ತ್ರಸಜ್ಜಿತ ಒಂದು ಪಡೆಯೇ ಇತ್ತು. ಶಿಲ್ಪದಲ್ಲಿ ಈ ಪಡೆಯನ್ನು ಕಾಣಬಹುದು. ರಾಮಯ್ಯನಿಂದ ಅನ್ಯಾಯಕ್ಕೆ ಒಳಗಾದ ಜೈನರು ಬಿಜ್ಜಳನಲ್ಲಿ ದೂರಿದಾಗ ಅವನು ರಾಮಯ್ಯನ ಪರವಾಗಿಯೇ ನಿಂತ. ಏಕಾಂತರಾಮಯ್ಯನ ಸಂಘಟಿತ ಶಕ್ತಿಯ ರಭಸದ ವಿರುದ್ಧ ಬಿಜ್ಜಳ ಈಜಲು ತಯಾರಿರಲಿಲ್ಲ. ಅದರ ಜೊತೆಗೆ ಹೋಗುವ ಅನಿವಾರ್ಯತೆ ಮತ್ತು ಅವಶ್ಯಕತೆ ಅವನದಾಗಿತ್ತು. ಒಂದು ವೇಳೆ ಬಿಜ್ಜಳ ಜೈನರ ಪರವಾಗಿ ನಿಂತಿದ್ದರೆ ರಾಜಕೀಯ ಅಸ್ಥಿರತೆ ಉಂಟಾಗುವ ಸಾಧ್ಯತೆ ಇತ್ತು. ರಾಜಸತ್ತೆಯೇ ಏಕಾಂತರಾಮಯ್ಯನ ಪರವಾಗಿ ನಿಂತಿದ್ದು ಅವನಿಗೆ ಆನೆ ಬಲ ಬಂದಂತಾಗಿದ್ದಂತೂ ದಿಟ. ತದನಂತರ ಬಂದ ಚಾಳುಕ್ಯ ನಾಲ್ಕನೆಯ ಸೋಮೇಶ್ವರ, ಹಾನಗಲ್ಲು ಕದಂಬರ ಕಾಮದೇವ ಏಕಾಂತರಾಮಯ್ಯನಿಗೆ ದತ್ತಿಯನ್ನೀಯುವುದರ ಮೂಲಕ ನೇರವಾದ ಬೆಂಬಲವನ್ನೇ ಸೂಚಿಸಿದರು. ಅಬ್ಬಲೂರಿನ ಧಾರ್ಮಿಕ ಯುದ್ಧ ಇಡೀ ಹಾವೇರಿ ಪರಿಸರದ ಮೇಲೆ ಪ್ರಭಾವ ಬೀರಿ ಸುತ್ತಮುತ್ತಲಿನ ಜೈನಕೇಂದ್ರಗಳು ಅವಸಾನಗೊಂಡವು. ಆಲದಗೆರೆ, ಸುತಕೋಟೆ ಹಂಸಬಾವಿ, ನೇಸ್ವಿ, ಹಿರೇಅಣಜಿ, ಹಿರೇಕೋಣತಿ, ಮೇದೂರು, ನಾಗವಂದ, ಹಳ್ಳೂರು, ನದಿಹರಳಹಳ್ಳಿ, ಮಾಕನೂರು, ಹಾವೇರಿ, ಕನವಳ್ಳಿ, ಮೋಟೆಬೆನ್ನೂರು, ಮೇದೂರು, ತಿಳುವಳ್ಳಿ, ಸುಮ್ಮಸಗಿ ಹೀಗೆ ನೂರಕ್ಕೂ ಹೆಚ್ಚು ಹಾವೇರಿ ಪರಿಸರದ ಜೈನಕೇಂದ್ರಗಳು ಧಾರ್ಮಿಕ

ದಾಳಿಗೊಳಗಾಗಿ ಹಾನಿಗೊಳಗಾದು. ಈ ಎಲ್ಲ ಕೇಂದ್ರಗಳಲ್ಲಿಯೂ ಪರ ಧರ್ಮದ ದಾಳಿಯ ನೇರ ದಾಖಲೆಗಳು ಲಭ್ಯವಿಲ್ಲ. ಆದರೆ ಜನಪದ ಕತೆಗಳಲ್ಲಿ ಉಕ್ತವಾಗಿವೆ. ಅಬ್ಬಲೂರು ಸುತ್ತಮುತ್ತಲಿನ ಜೈನ ಕೇಂದ್ರಗಳಲ್ಲಿ ಮಾತ್ರ ಏಕಾಂತರಾಮಯ್ಯ ದಾಳಿ ಮಾಡಿದ ಎಂಬ ಐತಿಹ್ಯಗಳು ಲಭ್ಯ.

ಅಬ್ಬಲೂರಿನಲ್ಲಿ ಜೈನರ ಮೇಲೆ ನಡೆಸಿದ ಏಕಾಂತರಾಮಯ್ಯನ ದಾಳಿಯನ್ನು ಜೀವಂತವಾಗಿಡುವ ಪ್ರಕ್ರಿಯೆ ತದನಂತರದ ಶೈವ ಕವಿಗಳು ಮಾಡಿದರು. ವ್ಯಕ್ತಿಯನ್ನು ಹೆದರಿಸಲು ಹುಲಿಯೇ ಬರಬೇಕಾಗಿಲ್ಲ 'ಹುಲಿ ಬಂತು ಹುಲಿ' ಎಂದರೆ ಸಾಕು ಕ್ಷಣಕ್ಕಾದರೂ ಭಯವುಂಟಾಗುತ್ತದೆ. ಏಕಾಂತರಾಮಯ್ಯ ಜೈನರ ಮೇಲೆ ದಾಳಿ ಮಾಡಿ ೮೦೦ ವರ್ಷವಾದರೂ ಈಗಲೂ ಜನಪದರಲ್ಲಿ ಈ ಕಥೆ ಜೀವಂತ. ಮಧ್ಯಕಾಲೀನ ಕವಿಕಗಳಂತೂ ಈ ಕತೆಯನ್ನು ಇನ್ನೂ ರಸವತ್ತಾಗಿ ಹರಳುಗಟ್ಟಿಸಿದರು. ಅಂತೆಯೇ ಜೈನರು ಹೆದರುವ ಹಾಗೆ ಮಾಡಿದರು. ಶಾಸನದಲ್ಲಿ ನಿರೂಪಿತವಾದ ಏಕಾಂತರಾಮಯ್ಯನ ಶಿರಸ್ಸು ಪವಾಡ ಘಟನೆ ಮುಂದಿನ ಕವಿಗಳಿಗೆ ವೇದಿಕೆಯಾಯ್ತು. ಅದರಲ್ಲೂ ಹರಿಹರ ಕವಿಯು ಏಕಾಂತರಾಮಯ್ಯನ ಭಕ್ತಿಯ ಪರಾಕಾಷ್ಠೆಯಲ್ಲಿ ಸಿಲುಕಿ ಜೈನರನ್ನು ಜಿನಮುನಿಗಳನ್ನು ತನ್ನ 'ಏಕಾಂತರಾಮಿ ತಂದೆಗಳ ರಗಳೆ'ಯಲ್ಲಿ ಮೂದಲಿಸುತ್ತಾನೆ. ತೆಗಳುತ್ತಾನೆ.

ಕೆಯ್ಯ ಗುಂಡಿಗೆ ಮೋಟ ಕುಂಚದ ಥಱಿಿದ ತಟ್ಟು
ಮೆಯ್ಯ ಗೇಣುದ್ದದ ಮಲಂ ಹಱಿಿದ ತಲೆಕಟ್ಟು

ಮುಂಚದಲೆ ಹಡಿಕೆವಾಯ್ ಹಣೆ ಹಲ್ಲುಗಳ ಮೋೞ
ಸಂಚಿಸಿದ ಹಲವು ಮಲವೆತ್ತು ಹೊಲಸುಂ ನಾೞ

ಕುರುಡರುಂ ಕುಂಟರುಂ ಡಂಭರುಂ ಸೀತರುಂ
ಬರಡರುಂ ನಿಃರಡರುಂ ಜಿನವ ಹುಸಿಕರುಂ

ಕ್ಷುದ್ರರುಂ ವಾಚಾಳರುಂ ಕೆಟ್ಟ ಸವಣರುಂ
ನಿದ್ರೆಯಿಂದೆದ್ದು ಬಂದಂತಿಪ್ಪ ಜಾಡ್ಯರುಂ

ಬತ್ತಲೆಗರುಂ ಬಡಕರುಂ ವೀತರಾಗರುಂ
ಕತ್ತಲಿಪ ಮುಖದ ಭಾಗ್ಯದ ಭೋಗಹೀನರುಂ

ಮುತ್ತ ಮುದುನರಿಯಂತೆ ಬಳ್ಳುಗರೆವರ್ ಕೆಲರು
ಕತ್ತೆಯಂತಱಚಿ ಕಾಳ್ಗೆಡೆವುತಿರ್ಪರ್ ಕೆಲರು

ಗೂಗೆಯಂತಿರೆ ಮಿಗೆ ಪಲುಂಬುತಿರ್ಪರ್ ಕೆಲರು
ಕಾಗೆಯಂತಿರೆ ಕಾಕುಗೆಡೆಯುತಿರ್ಪರ್ ಕೆಲರು

ಉಮ್ಮಳಿಪ ಕಪಿಯಂತೆ ಸುಮ್ಮನಿರ್ಪರ್ ಕೆಲರು
ತಮ್ಮೊಳಗೆ ತಾವು ಗುಜುಗುಜುಗುಟ್ಟುವರ್ ಕೆಲರು

ಹೀಗೆ ಹರಿಹರ ಕವಿಯು ಜಿನಮುನಿಗಳನ್ನು ವಾಚಾಮಗೋಚರವಾಗಿ ನಿಂದಿಸುತ್ತಾನೆ. ಹರಿಹರನ ಜೈನಧರ್ಮ ಬಗೆಗಿದ್ದ ಈ ಮನೋಧರ್ಮ ಆ ಕಾಲದ ಜೈನಧರ್ಮದ ಪರಿಸ್ಥಿತಿಯನ್ನು ತೆರೆದಿಡುತ್ತದೆ. ಒಂದು ಧರ್ಮವನ್ನು ಮುರಿದು ಇನ್ನೊಂದು ಧರ್ಮವನ್ನು ಕಟ್ಟುವಾಗ ಹರಿಹರ ಮಾತುಗಳು ಇವು.

ಕಿತ್ತು ಬಿಸುಟರ್ ಜಿನಪ್ರತಿಮೆಗಳನಲ್ಲಿ
ಎತ್ತಿದರ್ ಬತ್ತಲೆಯ ಬೊಂಬೆಗಳನಲ್ಲಲ್ಲಿ

ನಾನಾವಿಧದ ಸಂತಸಂ ಸಾರ್ದ ಕೂಟಮಂ
ಏನೆಂಬೆನಾ ಭಕ್ತರಾನಂದದಾಟಮಂ

ನಲಿನಲಿದು ನೆಗೆನೆಗೆದು ನಿಂದು ನಿಂದಾಡುತಂ
ಉಲಿದುಲಿದು ಪರಿಪರಿದು ಮುರಿಮುರಿದು ಹಿಗ್ಗುತಂ[೨೬೨]

ಸ್ವಧರ್ಮದ ಮೋಹವೇ ಹಾಗೆ ಅದು ಅಧಿಷ್ಠಾನಗೊಳ್ಳುವಾಗ ಮರುವಕ್ಕವಿರುವ ಧರ್ಮದ ಆಚಾರ ವಿಚಾರಗಳು ಕ್ಷುದ್ರವೆನಿಸುತ್ತವೆ. ಹರಿಹರ ಕವಿಯ ಪ್ರಸ್ತುತ ರಗಳೆ ಈ ಅಂಶಕ್ಕೆ ಉದಾಹರಣೆಯಷ್ಟೆ.

ಏಕಾಂತರಾಮಯ್ಯನ ಕಥೆ ಒಟ್ಟು (ಅಬ್ಬಲೂರು ಶಾಸವನ್ನೂ ಒಳಗೊಂಡಂತೆ) [೧,೨] ಕೃತಿಯಲ್ಲಿ ಉಲ್ಲೇಖಗೊಂಡಿದೆ.

೧. ಅಬ್ಬಲೂರು ಸೋಮೇಶ್ವರ ದೇವಾಲಯದ ಶಾಸನ – ಕೇಶವರಾಜ ಚಮೂಪ.
೨. ಏಕಾಂತರಾಮಿ ತಂದೆಗಳ ರಗಳೆ – ಹರಿಹರ.

೩. ಬಸವಪುರಾಣ – ಭೀಮಕವಿ.

೪. ಶಿವತತ್ವ ಚಿಂತಾಮಣಿ – ಲಕ್ಕಣ ದಂಡೇಶ.

೫. ವೀರಶೈವಾಮೃತ ಮಹಾಪುರಾಣ – ಗುಬ್ಬಿಯ ಮಲ್ಲಣಾರ್ಯ.

೬. ಪಾಲ್ಕುರಿಕೆ ಸೋಮೇಶ್ವರ ಪುರಾಣ – ವಿರಕ್ತ ತೋಂಟದಾರ್ಯ.

೭. ಬಸವೇಶ್ವರ ಪುರಾಣದ ಕಥಾಸಾರ– ಬಸವಲಿಂಗ.

೮. ವೃಷಭೇಂದ್ರ ವಿಜಯ– ಷಡಕ್ಷರಿ.

೯. ಪ್ರಭುದೇವರ ಪುರಾಣ– ಹರೀಶ್ವರ.

೧೦. ಭೈರವೇಶ್ವರ ಕಾವ್ಯ–ಶಾಂತಲಿಂಗ.

೧೧. ತೆಲುಗು ಬಸವಪುರಾಣ– ಪಾಲ್ಕುರಿಕೆ ಸೋಮೇಶ್ವರ.

೧೨. ಅಬ್ಬಲೂರು ಚರಿತೆ–ಶಾಂತನಿರಂಜನ[೩೬೪]

ಮೇಲಿನ ಎಲ್ಲಾ ಕೃತಿಗಳು ಏಕಾಂತ ರಾಮಯ್ಯನ ಕಥೆಯನ್ನು ಕಾಲಕಾಲಕ್ಕೆ ಪುನರ್ ಪ್ರಸ್ತಾಪಿಸುತ್ತಾ ಶೈವ ಪ್ರಾಬಲ್ಯವನ್ನು ಉತ್ಕೀರ್ತಿಸಿದವು. ಅದರಲ್ಲೂ ಶಾಂತನಿರಂಜನ ಕವಿಯಂತೂ 'ಅಬ್ಬಲೂರು ಚರಿತೆ'ಯಲ್ಲಿ ಏಕಾಂತರಾಮಯ್ಯ ಜೈನರ ರಕ್ತ ಚಲ್ಲಾಡಿದ ರಣರಂಗದ ಚಿತ್ರಣವನ್ನು ಒಡಮೂಡಿಸುತ್ತಾನೆ. "ಧರ್ಮಯುದ್ಧದಲ್ಲಿ ಗೆದ್ದ ರಾಮಯ್ಯ ಶ್ರಮಣರನ್ನು ಮತ್ತು ಜೈನರನ್ನು ಹಿಡಿದು ತರಿಸಿ ಅವರನ್ನು ಕೊಂದನು. ಬಹುದಿನಗಳಿಂದಲೂ ಹಸಿದಿದ್ದ ಶಾಕಿನಿ–ಡಾಕಿನಿಯರು ನರಭಕ್ಷ ಒದಗಿಸಿದ್ದಕ್ಕೆ ಪ್ರಸಿದ್ಧರಾಮನನ್ನು ಹೊಗಳಿ ಕೊಂಡಾಡಿದರಂತೆ". ಅಷ್ಟೇ ಅಲ್ಲದೇ

ಎತ್ತ ನೋಡಲು ರಕ್ತ ಪಾನಗಳಿಲ್ಲದೆ
ತುತ್ತು ತುತ್ತಿಗೆ ಸತಿಸುತರ
ಮುತ್ತಿ ಹಿದಿವ ಪಿಶಾಚಿಗಳ ಬಯಕೆಯ
ಇತ್ತ ರಾಮಯ್ಯ ಪುಷ್ಕಳವ

ಬಟ್ಟೆ ಬಟ್ಟೆಯೊಳೆಲ್ಲ ಹರಿವ ರಕ್ತದ ತೊರೆ
ಅಟ್ಟೆ ಮುಂಡವು ತೇಲಿ ಮುಳುಗೆ
ಕಟ್ಟಳಿಲ್ಲದೆ ಪೆಣಗಳ ಕಂಡು ಶ್ರವಣರು
ಘಟ್ಟದ ಕೆಳಯಿಕೆ ಸರಿಯೆ[೩೬೫]

ಎಂಬ ಮಾತುಗಳು ಅಬ್ಬಲೂರು ಜೈನರ ಅವಸಾನದ ಕತೆಯನ್ನು ಬಿಚ್ಚಿಡುತ್ತವೆ. ಈ ಘಟನೆ ನಡೆದ ತರುವಾಯ ಹಾವೇರಿ ಪರಿಸರದಲ್ಲಿ ಜೈನಧರ್ಮದ ಜಂಘಾಬಲವೇ ಉಡಿಗಿದ್ದಂತೂ ಸತ್ಯ. ದಾರಿಯುದ್ದಕ್ಕೂ ಹರಿವ ರಕ್ತದ ಕೋಡಿ ಈ ಭಾಗದ ಶ್ರವಣರನ್ನು ಹೆದುರುವಂತೆ ಮಾಡಿದ್ದೂ ದಿಟ.

ಅಂತೆಯೇ ಜೈನಧರ್ಮ ಮಧ್ಯಕಾಲೀನ ಅವಧಿಯಲ್ಲಿ ಘಟ್ಟದ ಕೆಳಗೆ (ಕರಾವಳಿ ಪ್ರದೇಶ) ಮತ್ತು ಘಟ್ಟದ ಕೊನೆಯ ಪ್ರದೇಶಗಳಲ್ಲಿ ತನ್ನ ಅಸ್ಥಿತ್ವವನ್ನು ಸ್ಥಾಪಿಸಿದ್ದು ಐತಿಹಾಸಿಕ.

ಅಬ್ಬಲೂರು ಸೋಮೇಶ್ವರ ದೇವಾಲಯದ ಬಲಭಾಗಕ್ಕೆ ಯಕ್ಷ ಶಿಲ್ಪವೊಂದನ್ನು ಹೊರತು ಪಡಿಸಿದರೆ ಮತ್ಯಾವುದೇ ಜೈನ ಅವಶೇಷಗಳು ಲಭ್ಯವಿಲ್ಲ. ಶಾಸದಲ್ಲಿಯೇ ಹೇಳಿದಂತೆ ಇಂದಿನ ಸೋಮೇಶ್ವರ ದೇವಾಲಯ ಹಿಂದೆ ಬಸದಿಯಾಗಿತ್ತು. "ಬಿಜ್ಜಣ ದೇವನ ಕೈಯಲು ಜಯಪತ್ರವಂ ಪೂಜೆಸಹಿತ ಕೊಂಡುದುಮಂ ಜಿನನೊಡೆದು ಬಸದಿಯನಳಿದು ಬಿಸುಟು ನೆಲನಂ ಖಂಡಿಸಿ ವೀರಸೋಮನಾಥ ದೇವರಂ ಪ್ರತಿಷ್ಠೆ ಮಾಡಿ ಶಿವಾಗಮೋಕ್ತವಾಗಿ ಪರ್ಬ(ರ್ವ)ತ ಪ್ರಮಾಣದ ತ್ರಿಕೂಟವಾಗೆ ಮಾಡಿಸಿದ"[೩೬೬] ಎಂಬ ಮಾತುಗಳಲ್ಲಿ ಬಸದಿ ಶಿವಾಲಯವಾಗಿದ್ದನ್ನು ಮನಗಾಣಬಹುದು.

ಹಾವೇರಿ ಜೈನ ಸಂಸ್ಕೃತಿಯನ್ನು ಬಿಂಬಿಸುವಲ್ಲಿ ಮೇಲಿನ ಜೈನ ಕೇಂದ್ರಗಳ ಪಾತ್ರ ಅನನ್ಯ. ಇವಷ್ಟೇ ಅಲ್ಲದೇ ಜೈನ ಸ್ಮಾರಕಗಳಾದ ಶಾಸನ, ಮೂರ್ತಿಶಿಲ್ಪ ಬಸದಿ (ಅವಶೇಷ, ರೂಪಾಂತರ)ಗಳನ್ನು ಹೊಂದಿದ ಹತ್ತಾರು ಸ್ಥಳಗಳು ಈ ಪರಿಸರದಲ್ಲಿವೆ. ಇವುಗಳಲ್ಲಿ ಹುಲಗೂರು, ಕಾರಡಗಿ, ಚಿಲ್ಲೂರು (ಶಿತಾ)., ನೇಸ್ವೀ, ಸುತಕೋಟಿ, ಲಿಂಗದೇವರಕೊಪ್ಪ, ನಾಗವಂದ, ರಟ್ಟೀಹಳ್ಳಿ, ಕಡೂರು, ಸಾತೇನಹಳ್ಳಿ (ಹಿತಾ)., ಕನವಳ್ಳಿ, ಕರಜಗಿ, ಹೊಸರಿತ್ತಿ, ನೇರಲಗಿ, ಇಚ್ಚಂಗಿ (ಹಾತಾ)., ಹತ್ತಿಮತ್ತೂರು, ಹೂವ್ವಿನಶಿಗ್ಗಿ (ಸತಾ)., ರಾಣೆಬೆನ್ನೂರು, ಗುತ್ತಲ, ಮಾಕನೂರು, ಇಟಗಿ, ಕೂಲಿ ಹರಳಹಳ್ಳಿ (ರಾತಾ), ಕರಗುದರಿ, ಬಾಳೇಹಳ್ಳೀ, ಮಂತಗಿ, ಹೆರೂರು, ಹೀರೂರು, ಬಾಳಂಬಿಡ, ಹಾವಣಗಿ, ವೀರಾಪುರ, ಸಾವಿಕೆರೆ, ಕಲಕೇರಿ, ತಿಳವಳ್ಳಿ, ಸಮ್ಮಸಗಿ, ಬೆಳವತ್ತಿ, ಕೆರೆತ್ಯಾತನಹಳ್ಳಿ, ಬಾದಾಮಗಟ್ಟಿ, ಗುಡಗುಡಿ, ಕುಂಟನಹೊಸಳ್ಳಿ (ಹಾತಾ) ಇತ್ಯಾದಿ ಸ್ಥಳಗಳು ಪ್ರಮುಖವಾದವುಗಳು.

ಮೌರ್ಯರ ಕಾಲದಿಂದಲೂ ಹಾವೇರಿ ಭಾಗದಲ್ಲಿ ಪ್ರಸರಣವಿದ್ದ ಜೈನಧರ್ಮ ವಿಜಯನಗರ ಸಾಮ್ರಾಜ್ಯದವರೆಗೂ ಅನೇಕ ಏಳು-ಬೀಳುಗಳನ್ನು ಕಂಡು ಸಾಗಿಬಂದಿದೆ. ೧೫೦ ಶಾಸನಗಳು, ೧೦೦ ಕ್ಕೂ ಮಿಗಿಲಾದ ಜೈನ ಕ್ಷೇತ್ರಗಳು, ೨೦೦ ಕ್ಕೂ ಹೆಚ್ಚು ಸ್ಥಳಗಳಲ್ಲಿ ಚದುರಿಬಿದ್ದ ಅವಶೇಷಗಳು ಹಾವೇರಿ ಪರಿಸರದ ಪ್ರಾಚೀನ ಜೈನಧರ್ಮವನ್ನು ಅರಿಯುವಲ್ಲಿ ಮೂಲ ಆಧಾರಗಳಾಗಿ ನಿಲ್ಲುತ್ತದೆ. ಈ ಪರಿಸರ ಕೆಲವು ಭಾಗಗಳಲ್ಲಿ ಏಕಾಂತರಾಮಯ್ಯನ ಧಾರ್ಮಿಕ ದಾಳಿಯ ಪ್ರಭಾವ ಮತ್ತು ವೀರಗೊಗ್ಗಿದೇವನ (ಬೆಳ್ವಲು-೩೦೦ ರ ಪ್ರದೇಶದ ಹುಲಗೂರು, ಕಾರಡಗಿ, ಚಿಲ್ಲೂರು, ಹೂವಿನಶಿಗ್ಗಿ ಇತ್ಯಾದಿ) ಪ್ರದೇಶಗಳು ದಾಳಿಯ ತೀವ್ರತೆಯಿಂದ ಹಾವೇರಿ ಪರಿಸರದ ಜೈನಧರ್ಮಕ್ಕೆ ದೊಡ್ಡ ಆಘಾತವಾಗಿದ್ದೇನೋ ದಿಟ. ಆದರೆ ಅದು ತನ್ನ ಅಸ್ಮಿತೆಯನ್ನು ಕಳೆದುಕೊಳ್ಳದೆ ಇಂದಿಗೂ ಈ ಪರಿಸರದಲ್ಲಿ ಉಳಿದು ಬಂದಿವೆ.

## ಅಡಿ ಟಿಪ್ಪಣಿಗಳು.

೧.

ಕೇಶವಜಿನ ಬೌದ್ಧಾದಿಗ
ಳೀಶನ ಕಿಂಕರರು ಬೇಱದೇವತೆಯಲ್ಲೆಂ
ದಾ ಶಿವಮುದ್ದು ಬ್ರತಿಪ
ಮಹೇಶನನೊಲಿದಾಲಿಸಿದಂ ಜಗತ್ರಯಬುಯಲು

ಸೌ.ಇ.ಇ-೧೮, ನಂ-೨೪೪, ಚೌಡದಾನಪುರ ಕ್ರಿ.ಶ. ೧೨೬೨, ಪು ೩೨೨. ಶಿವಮುದ್ದುವಿನ 'ಮಹೇಶ್ವರ ಭಕ್ತಿ' ಪಾರಮ್ಯತೆಯನ್ನು ಸಾರುವಲ್ಲಿ ಚತುಸ್ಸಮಯ ಧರ್ಮಗಳು ಪ್ರಸ್ತಾಪವಾಗಿವೆ. ಇವು ಆ ಕಾಲದ ಹಾವೇರಿ ಪರಿಸರದಲ್ಲಿ ಪ್ರಚಲಿತವಿದ್ದುವು ಎಂದೇ ಅರ್ಥ. ಚೌಡದಾನಪುರದ ಹತ್ತಿರದಲ್ಲಿರುವ ಹರಳಹಳ್ಳಿಯಲ್ಲಿ ಕ್ಷೇತ್ರ ಕಾರ್ಯ ಮಾಡುವಾಗ ಇತ್ತೀಚಿಗೆ ಒಂದು ಭಗ್ನ ಜಿನಮೂರ್ತಿ ದೊರೆತಿದೆ. ಅಂತೆಯೇ ಇಲ್ಲಿನ ಪ್ರಾಚೀನ ಹೊಳೆದಂಡೆಯ ದೇವಾಲಯದ ಆವರಣವನ್ನು ಅಗೆಯುವಾಗ ಕೆಲಸಗಾರರಿಗೆ ಸುಮಾರು ೫ ಇಂಚಿನ ಬುದ್ಧನ ಮೂರ್ತಿ ಸಿಕ್ಕಿದೆ. ಕ್ಷೇತ್ರಕಾರ್ಯದಲ್ಲಿ ನಾನಿದನ್ನು ಗಮನಿಸಿದ್ದೇನೆ. ಈಗ ಅದು ಅಲ್ಲಿಲ್ಲ. ಹಾವೇರಿಯ ಹೆಗ್ಗೆರೆಯಲ್ಲಿಯೂ ಬುದ್ಧನ ಮೂರ್ತಿಯ ರುಂಡ ದೊರೆತಿದೆ. ಈ ಪರಿಸರದಲ್ಲಿ ಬೌದ್ಧಧರ್ಮವನ್ನು ಹೊರತುಪಡಿಸಿ ಉಳಿದ ಮೂರು ಧರ್ಮಗಳು ಜನಬಳಕೆಯಲ್ಲಿದ್ದವು. ಬನವಾಸಿ ಹಾವೇರಿ ಪರಿಸರದ ಹತ್ತಿರದ ಪ್ರದೇಶ. ಇಲ್ಲಿ ಬೌದ್ಧಬಿಕ್ಕುಗಳಿದ್ದರೆಂಬುದು ತಿಳಿದ ವಿಚಾರ.

೨. ಒಟ್ಟು ೧೫೦ ಜೈನಶಾಸನಗಳಲ್ಲಿ ೫೯ ಶಾಸನಗಳನ್ನು ನಾನು ಶೋಧಿಸಿದ್ದೇನೆ.

೩. ಎ.ಕ. ೦೭. ನಂ-೨೨೫ ಬಂದಳಿಕೆ ಕ್ರಿ.ಶ. ೧೨೦೪.

೪. ಮಿರ್ಜಿ ಅಣ್ಣಾರಾಯ-ಜೈನಧರ್ಮ. (ಮೂರನೆಯ ಮುದ್ರಣ) ಪು ೮೯.

೫. ಎ.ಕ.ಸಂ-೦೨. ನಂ-೩೪ (೩೨) ಶ್ರವಣಬೆಳಗೊಳ (ಚಿಕ್ಕಬೆಟ್ಟ), ಅತೇದಿ ಪು ೧೩.

ಶ್ರೀಭದ್ರವಾಹುಸ ಚನ್ದ್ರಗುಪ್ತಮುನೀನ್ದ್ರಯುಗ್ಮದಿನೊಪ್ಪೆವಲ್
ಭದ್ರಮಾಗಿದ ಧರ್ಮಮನ್ದುವಱಿಕ್ಕೆವನ್ದಿನಿಸಳ್ಕಲೋ
ವಿದ್ರುಮಾಧರ ಶಾನ್ತಿಸೇನಮುನೀಶನಾಕ್ಕಿಎ ವೆಳ್ಗೊಳ
ಅದ್ರಿಮೇಲಶನಾದಿವಿಟ್ಟ ಪುನರ್ಭವಕ್ಕೇಱ ಆಗಿ ॥ಮಲ್ಲಿಕಾಮಾಲೆ॥

೬. ಅದೇ, ನಂ ೭೭. ಕ್ರಿ.ಶ. ೧೧೨೯, ಪು ೪೩.

ವಣ್ಣ್ಯ:ಕಥನ್ನು ಮಹಿಮಾಭಣ ಭದ್ರಬಾಹೋರ್ಮ್ಮೋ
ಹೋರುಮಲ್ಲಮದಮರ್ದ್ದನವೃತ್ತಬಾಹೋ: ।ಯಚ್ಚಿಷ್ಯತಾಪ್ತ
ಸುಕೃತೇನ ಸ ಚಂದ್ರಗುಪ್ತಶ್ಶುಶ್ರೂಷ್ಯತೇ ಸ್ಮ ಸುಚಿರಂ ವನದೇವತಾಭಿ:॥

೭. ಮಿರ್ಜಿ ಅಣ್ಣಾರಾಯ, ಪೂರ್ವೋಕ್ತ, ಪು ೬೦.

೮. ಎ.ಕ.ಸಂ-೦೨ ಪೂರ್ವೋಕ್ತ, ನಂ-೦೧, ೬-೭ನೆಯ ಶ, ಪು ೩-೪.

೯. ಅಪ್ಪಣ್ಣ.ಎನ್. ಹಂಜೆ-ಸಮವಸರಣ, ಪು ೩೭-೩೮.

೧೦. ಅದೇ, ಪು ೪೦-೪೧.

೧೧. ಶಿವಕೋಟ್ಯಾಚಾರ್ಯ ವಿರಚಿತ ವಡ್ಡಾರಾಧನೆ : (ಸಂ) ಡಿ.ಎಲ್ ನರಸಿಂಹಾಚಾರ್, ಪು ೧೩೮.

೧೨. ಜೈನಧರ್ಮ ಉತ್ತರದಿಂದ ಬಂದದ್ದು ಎಂಬುದು ಚರ್ವಿತ ಚರ್ವಣ ಮಾತು. ಉತ್ತರದಲ್ಲಿ ಬರಗಾಲವಾದ ಕಾರಣ ಭದ್ರಬಾಹು, ಸಹಸ್ರಾರು ಮುನಿಗಳು ವಲಸೆ ಬಂದುದು ದಿಟ. ಆದರೆ ಜೈನಧರ್ಮ ಅವರು ಬರುವುದಕ್ಕೂ ಮೊದಲು ಇಲ್ಲಿತ್ತು. ಜೈನಮುನಿಗಳು ತಾವಾಗಿ ಅಡುಗೆ ಮಾಡಿ ಉಣ್ಣರು. ಅವರು ಗೃಹಸ್ಥರಿಂದ ಆಹಾರ ಪಡೆಯುತ್ತಾರೆ. ಬೃಹತ್ ಪ್ರಮಾಣದ ಮುನಿ ಸಂಘಕ್ಕೆ ಭಿಕ್ಷೆ ನೀಡಲು ಜೈನರು ದೊಡ್ಡ ಸಂಖ್ಯೆಯಲ್ಲಿ ಇಲ್ಲಿದ್ದರು. ತಮ್ಮ ತಪಸ್ಸಿಗೂ ಆಹಾರಕ್ಕೂ ಇಲ್ಲಿ ನಿರಾತಂಕವೆನಿಸಿ ನೆಲೆಸಿದರು. ಜೈನಧರ್ಮ ದ್ರಾವಿಡವೆಂದು ಕೊಂಡಕುಂದರೂ ಪೂಜ್ಯಪಾದರೂ ಪ್ರಾಕೃತ, ಸಂಸ್ಕೃತ ಕೃತಿಗಳಲ್ಲಿ ತಿಳಿಸಿದ್ದಾರೆ. ದ್ರಾವಿಡ ಸಂಘವೆಂಬ ಪ್ರಾಚೀನ ಜೈನ ಮುನಿ ಸಂಘವಿದೆ. ಆರ್ಯಪೂರ್ವ ಜೈನ ದ್ರಾವಿಡರು ದಕ್ಷಿಣ ಭಾರತದಲ್ಲಿ ಹಬ್ಬಿದ್ದರು. ತಮಿಳುನಾಡು ಕರ್ನಾಟಕ ಆಂಧ್ರ, ಕೇರಳದಲ್ಲಿ ಕ್ರಿ.ಪೂ. ನಾಲ್ಕನೆಯ ಶತಮಾನದಿಂದ ಕ್ರಿ.ಶ. ಎರಡನೆಯ ಶತಮಾನದವರೆಗೆ ೮೯ ಪ್ರಾಚೀನ ತಮಿಳು ಶಾಸನಗಳು ಸಿಕ್ಕಿವೆ. ಈ ೮೯ರಲ್ಲಿ ೮೫ ಜೈನ ಶಾಸನಗಳು. ಕ್ರಿ.ಪೂ. ಎರಡನೆಯ ಶತಮಾನದ ಶಾಸನಗಳಲ್ಲಿ ಕರ್ನಾಟಕ ಜೈನ ಸನ್ಯಾಸಿನಿಯರ ಪ್ರಭಾವವಿದೆ. ಈ ಬಗೆಯ ಆಧಾರಗಳು ಜೈನಧರ್ಮ ಹೊರಗಿನಿಂದ ವಲಸೆ ಬಂದುದಲ್ಲ, ಅದು ಇಲ್ಲಿಯೇ ಈ ನೆಲದಲ್ಲಿಯೇ ಇದ್ದು ಹಬ್ಬಿದ ಮೂಲ ದೇಸಿ ಧರ್ಮವೆಂದು ಸಾರುತ್ತಿದೆ. ಪ್ರೊ. ಹಂಪನಾ – ಕನ್ನಡಿಗರ ಮೊದಲ ಧರ್ಮ, ಪ್ರಜಾವಾಣಿ – ಶುಕ್ರವಾರ ೨೫ನೇ ಏಪ್ರಿಲ್–೨೦೧೪, ಪು ೬, ಸಂಪುಟ–೧೩; ಸಂಚಿಕೆ–೧೧೪. ಜೈನವು ಉತ್ತರ ಭಾರತದಿಂದ ಕರ್ನಾಟಕಕ್ಕೆ 'ವಲಸೆ ಬಂದಿದ್ದು' ಎಂಬಂತಹ ಮಾತುಗಳು ಅರ್ಥಹೀನ; 'ವ್ಯಾಪಿಸಿತು' ಎಂದು ಬೇಕಾದರೆ ಹೇಳಲಿ ನಾನು ದೆಹಲಿಗೆ ಹೋಗಿ ವಾಸಿಸಿದರೆ ಅದು ವಲಸೆ ಹೋದಂತಲ್ಲ; ಆದರೆ ಇಂಗ್ಲೆಂಡಿಗೆ ಹೋಗಿ ಅಲ್ಲಿ ನೆಲೆಸಿದರೆ ವಲಸೆ ಹೋದಂತೆ – ಎಂ. ಚಿದಾನಂದಮೂರ್ತಿ, ವೀರಶೈವ – ಲಿಂಗಾಯತ ಪ್ರತ್ಯೇಕ ಧರ್ಮಗಳಲ್ಲ – ಪ್ರಜಾವಾಣಿ, ಬುಧವಾರ ಮೇ ೭ ೨೦೧೪, ಸಂಪುಟ–೧೨, ಸಂಚಿಕೆ–೧೨೬, ಪು ೬.

೧೩. ಎಂ.ಜಿ. ಮಂಜುನಾಥ–ನಿಸಿಧಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು ೨೦.

೧೪. ರವಿಕುಮಾರ.ಕೆ.ನವಲಗುಂದ–ಉಪಸರ್ಗ್ಗ, ಪು ೨೭–೩೩.

೧೫. ಭೋಜರಾಜ ಪಾಟೀಲ–ಹಿರೇಕೆರೂರು ತಾಲ್ಲೂಕು ಗ್ರಾಮನಾಮ ಅಧ್ಯಯನ, ಪು ೬೩.

೧೬. ಹಂಪ.ನಾಗರಾಜಯ್ಯ–ಯಾಪನೀಯ ಸಂಘ, ಪು ೨೬.

೧೭. ಅದೇ, ಪು ೨೦.

೧೮. ಅದೇ, ಪು ೧೬.

೧೯. ಬಿ.ಆರ್. ಹಂದೂರ–ಬೆಳಗಾವಿ ಜಿಲ್ಲೆಯ ಜೈನ ಶಾಸಗಳು, ಪು ೩–೪.

೨೦. ಬಾ.ರಾ. ಗೋಪಾಲ–ಬನವಾಸಿ ಕದಂಬರು, ಪು ೬೨–೬೫.

೨೧. ಬಿ.ಆರ್. ಹಂದೂರ, ಪೂರ್ವೋಕ್ತ, ಪು ೦೧.

೨೨. ಅದೇ, ಪು ೦೨–೦೪.

೨೩. ಅದೇ, ಪು ೦೫–೦೬.

೨೪. ಅದೇ, ಪು ೧೦–೧೩.

೨೫. ಅದೇ, ಪು ೧೪–೧೫.

೨೬. ಹಂ.ಪ.ನಾಗರಾಜಯ್ಯ–ಸಾಂತರರು ಒಂದು ಅಧ್ಯಯನ, ಪು ೨೧೮.

೨೭. ತ್ರಿಪರ್ವತವನ್ನು ಗೋವಿಂದ ಪೈಗಳು ಉಚ್ಚಂಗಿ ಎಂದು, ಜಿ.ರಾಜಶೇಖರಪ್ಪನವರು ಚಂದ್ರವಳ್ಳಿ ಸಮೀಪದ ಧವಳಪ್ಪನ ಗುಡ್ಡವೆಂದು, ದೇವರಕೊಂಡಾರೆಡ್ಡಿಯವರು ಬೇಲೂರು ಎಂದು, ಎಂ.ಎಸ್. ನಾಗಭೂಷಣ ಅವರು ಬೆಳಗಾವಿ ಜಿಲ್ಲೆಯ ಮುರುಗೋಡ ಎಂದು ಅಭಿಪ್ರಾಯಪಟ್ಟಿದ್ದಾರೆ. – ಎಸ್.ಜಿ. ಸಾಮಕ್,

ಜಗದೀಶ, ಎಂ.ವ್ಹಿ. ರಮೇಶ ಜೋಯಿಸ್-ಕದಂಬರ ಅರೆತಲಗದ್ದೆಯ ಅಪೂರ್ವ ತಾಮ್ರ ಶಾಸನಗಳ ಭಂಡಾರ, ಪು ೩೬.

೨೮. ಬಾ.ರಾ. ಗೋಪಾಲ, ಪೂರ್ವೋಕ್ತ, ಪು ೬೪.

೨೯. ಅದೇ ಪು ೬೪.

೩೦. ಹಂಪನಾ-ಉಪಸರ್ಗ್ಗ ಕೃತಿಯ ಮುನ್ನುಡಿ. ರವಿಕುಮಾರ.ಕೆ.ನವಲಗುಂದ-ಉಪಸರ್ಗ್ಗ, ಪು ೧೧.

೩೧. ಸಂಕ್ಷಿಪ್ತ ಕನ್ನಡ ನಿಘಂಟು (ಪರಿಷ್ಕೃತ), ಕನ್ನಡ ಸಾಹಿತ್ಯ ಪರಿಷತ್ತು, ಪು ೭೨೯.

೩೨. ಸೌ.ಇ.ಇ. ೮, ನಂ-೨೦೮ ದೇವಗಿರಿ, ೮ನೆಯ ಶತಮಾನ ಪು ೪೧೫-೧೬.

೩೩. ಅದೇ, ನಂ-೧೦೫, ಕ್ರಿ.ಶ. ೧೧೦೨, ಪು ೧೧೫.

೩೪. ಬಾ.ರಾ. ಗೋಪಾಲ, ಪೂರ್ವೋಕ್ತ, ಪು ೧೬-೧೮.

೩೫. ಅದೇ, ಪು ೨೦.

೩೬. ಅದೇ, ಪು ೬೨-೬೪.

೩೭. ಅದೇ, ಪು ೬೨-೬೪.

೩೮. ಇದೊಂದು ಯಾಪನೀಯ ಸಂಘದ ಜಿನಮುನಿಗಣ.

೩೯. ಸೂರ್ಯನಾಥ ಕಾಮತ್-ಕರ್ನಾಟಕ ಸಂಕ್ಷಿಪ್ತ ಇತಿಹಾಸ (ಮರುಮುದ್ರಣ), ಪು ೫೮.

೪೦. ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ವಿಜಾಪುರ ಜಿಲ್ಲೆ [(ಬಾಗಲಕೋಟೆ ಜಿಲ್ಲೆಯೂ ಸೇರಿದಂತೆ) (ಪರಿಷ್ಕೃತ ಆವೃತ್ತಿ)] ಮು.ಸಂ. ಆರ್ ಮುನಿಸ್ವಾಮಿ, ಪು ೧೧೧೮.

೪೧. ಎ.ಇಂ. ೩೨, ನಂ-೩೮ ಚಾಲುಕ್ಯ ವಿಜಯಾದಿತ್ಯನ ಶಿಗ್ಗಾವಿ ತಾಮ್ರಪಟ, ಕ್ರಿ.ಶ. ೭೦೮, ಪು ೩೧೭-೨೪.

೪೨. ಕ.ಇ. ೦೧, ನಂ-೦೩ ಆಡೂರು, ಕ್ರಿ.ಶ. ೭೫೦, ಪು ೦೭-೦೮.

೪೩. ಎ.ಇಂ. ೩೨, ನಂ-೩೮, ಪೂರ್ವೋಕ್ತ, ಪು ೩೧೭-೨೪.

೪೪. ಕ.ಇ. ೦೧, ನಂ-೦೩ ಆಡೂರು, ಪೂರ್ವೋಕ್ತ, ಪು ೦೭-೦೮.

೪೫. ಸೂರ್ಯನಾಥ ಕಾಮತ್, ಪೂರ್ವೋಕ್ತ, ಪು ೮೧.

೪೬. ರಾಷ್ಟ್ರಕೂಟರ ಶಾಸನಗಳು ಸಂ-೦೧ ಮತ್ತು ೦೨.

೪೭. ಸಂಜಯ ಎನ್ ಹಂಜೆ – ಗೋಕಾಕ ಪರಿಸರದಲ್ಲಿ ಜೈನಧರ್ಮ, ಪು ೩೬.

೪೮. ರಾಷ್ಟ್ರಕೂಟರ ಶಾಸನಗಳು ೧ ನಂ-೪೬, ದೇವನೂರು ಕ್ರಿ.ಶ. ೮೦೮, ಪು ೭೪.

೪೯. ಅದೇ, ನಂ-೪೮ ಮಣ್ಣೆ (ನೆಲಮಂಗಲ ತಾ/ರಾಮನಗರ ಜಿ) ಕ್ರಿ.ಶ. ೮೧೪, ಪು ೭೮-೮೨.

೫೦. ಅದೇ, ನಂ-೧೦೩, ಕೊಣ್ಣೂರು ಕ್ರಿ.ಶ. ೮೬೦, ಪು ೨೩೫.

೫೧. ಕ.ಇ. ೦೪, ನಂ-೦೧, ಮೇದೂರು, ಕ್ರಿ.ಶ. ೭೯೩-೮೧೪, ಪು ೦೨.

೫೨. ಅದೇ, ಪು ೦೮.

೫೩. ಹನುಮಾಕ್ಷಿ ಗೋಗಿ – ಜಿನಸಮಯ, ಪು ೧೦೧.

೫೪. ಅದೇ ಪು ೧೦೧.

೫೫. ರಾಷ್ಟ್ರಕೂಟ ಶಾಸನಗಳು ೦೧. ನಂ-೮೧. ಶಿರಗಂಬಿ ೯ನೇ ಶ, ಪು ೧೯೫.

೫೬. ಅದೇ, ಪು ೧೯೫.

೫೭. ಷ.ಶೆಟ್ಟರ – ಹಳಗನ್ನಡ ಲಿಪಿ, ಲಿಪಿಕಾರ, ಲಿಪಿವ್ಯವಸಾಯ. ಪು ೨೯೫.

೫೮. ಕ.ಇ. ೦೪, ನಂ-೦೧. ಮೇದೂರು ಕ್ರಿ.ಶ. ೭೯೩-೮೧೪, ಪು ೦೨.

೫೯. ಸೌ.ಇ.ಇ. ಸಂ-೧೮, ನಂ-೩೧೫, ರಾಣೇಬೆನ್ನೂರು, ಕ್ರಿ.ಶ. ೮೪೯-೬೦, ಪು ೮೧೯-೨೦. ಕರ್ನಾಟಕ ರೀಸರ್ಚ್ ಇನ್ಸ್ಟ್ಯೂಟ್ (ಕನ್ನಡ ಸಂಶೋಧನಾ ಸಂಸ್ಥೆ) ಧಾರವಾಡ.

೬೦. ರಾಷ್ಟ್ರಕೂಟ ಶಾಸನಗಳು ೦೨. ಇಟಗಿ (ಹಾವೇರಿ ತಾ/ಜಿ) ೯ನೆಯ ಶ, ಪು ೯೬೪.

೬೧. ಹಂಪ ನಾಗರಾಜಯ್ಯ, ಶಾಸನಗಳಲ್ಲಿ ಜೈನ ತೀರ್ಥಗಳು, ೧೯೯೮, ಪು ೪೦.

೬೨. ಸೌ.ಇ.ಇ. ಸಂ–೨೦, ನಂ–೦೩, ಲಕ್ಷ್ಮೇಶ್ವರ ಕ್ರಿ.ಶ. ೬೩೦, ಪು ೦೨.

೬೩. ಅದೇ, ನಂ–೦೪, ಪು ೦೩–೦೪.

೬೪. ಅದೇ, ನಂ–೦೫, ಪು ೦೪–೦೫.

೬೫. ಅದೇ, ನಂ–೦೭, ಪು ೦೭–೦೮.

೬೬. ಅದೇ, ನಂ–೨೪೪, ಪು ೨೯೪–೯೫.

೬೭. ಸೌ.ಇ.ಇ. ೧೮, ನಂ–೩೮, ಕದರಮಂಡಲಗಿ, ೯–೧೦ನೆಯ ಪು ೨೪–೨೫.

೬೮. ರಾಷ್ಟ್ರಕೂಟರ ಶಾಸನಗಳು ೦೨, ನಂ–೪೯೩. ಕೋಳಿವಾಡ, ಪು ೭೭೩. ಇಲ್ಲಿ ಉಲ್ಲೇಖಿತ ಗ್ರಾಮನಾಮವು ಕೋಳಿವಾಡ ಎಂದು ತಪ್ಪಾಗಿ ಮುದ್ರಿತವಾಗಿದೆ. ಪ್ರಸ್ತುತ ಶಾಸನವು ಕೋಳಿವಾಡದಲ್ಲಿರದೆ ಅದು ಹಾವೇರಿ ತಾಲ್ಲೂಕಿನ ಕೋಳೂರಿನಲ್ಲಿದೆ. ಆದ್ದರಿಂದ ಕೋಳೂರಿನ ಹೆಸರನ್ನೇ ಇಲ್ಲಿ ಉಕ್ತಗೊಳಿಸಿದ್ದು, ಶಾಸನ ಸೂಚಿಯಲ್ಲಿಯೂ ಶಾಸನ ಸಂಪುಟಕಾರರು ಕೊಟ್ಟ ಕೋಳಿವಾಡ ಗ್ರಾಮ ನಾಮದ ಬದಲಾಗಿ ಕೋಳೂರನ್ನು ಹೆಸರಿಸಲಾಗಿದೆ.

೬೯. ಅದೇ, ನಂ–೩೨೭, ಮೋಟೆಬೆನ್ನೂರು , ೧೧ನೆಯ ಶ ಪು ೪೨೪–೪೨೫.

೭೦. ಅದೇ, ನಂ–೭೧ ಮೋಟೆಬೆನ್ನೂರು ಕ್ರಿ.ಶ. ೧೦೬೬, ಪು ೬೫–೬೭.

೭೧. ಚೆನ್ನಕ್ಕ ಎಲಿಗಾರ–ಬಂಕಾಪುರ ಶೋಧನ, ಪು ೧೪.

೭೨. ಅದೇ, ಪು ೧೪೦.

೭೩. ರಾಷ್ಟ್ರಕೂಟರ ಶಾಸನಗಳು ೦೧, ನಂ–೧೦೩. ಕೊಣ್ಣೂರು ಕ್ರಿ.ಶ. ೮೬೦, ಪು ೨೨೯–೩೬

೭೪. ಎ.ಕ.ಸಂ–೦೨ ನಂ–೪೭೬ (೩೪೫), ಶ್ರವಣಬೆಳಗೊಳ ಕ್ರಿ.ಶ. ೧೧೫೯, ಪು ೨೮೯.

೭೫. ಚೆನ್ನಕ್ಕ ಎಲಿಗಾರ, ಪೂರ್ವೋಕ್ತ ಪು ೧೨.

೭೬. ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ವಿಜಾಪುರ ಜಿಲ್ಲೆ, ಪೂರ್ವೋಕ್ತ, ಪು ೧೧೩೫.

೭೭. ಚಾಳುಕ್ಯರ ಮೂರನೆಯ ತೈಲಪ ಕ್ರಿ.ಶ. ೧೧೬೨ರಲ್ಲಿ ಮರಣ ಹೊಂದಿದ. ಇವರ ಅಧೀನನಾದ ಬಿಜ್ಜಳ–೨ ಸ್ವತಂತ್ರನಾದ. ಕ್ರಿ.ಶ. ೧೧೬೨ರಲ್ಲಿ ಪಟ್ಟಾಧಿಕಾರವೇರಿದ ೨ನೆಯ ಬಿಜ್ಜಳ ಕಳಚೂರ್ಯ ವಂಶದವನಾಗಿದ್ದು, ಮಂಗಳವಾಡದಿಂದ ಕಲ್ಯಾಣಕ್ಕೆ ರಾಜಧಾನಿಯನ್ನು ಬದಲಾಯಿಸಿದ. ಇವನ ನಂತರ ಸೋವಿದೇವ (ಕ್ರಿ.ಶ. ೧೧೬೭–೭೬), ಸಂಕಮ (ಕ್ರಿ.ಶ. ೧೧೭೬–೮೦) ಅಹವಮಲ್ಲ (ಕ್ರಿ.ಶ. ೧೧೮೦–೮೩), ಸಿಂಘಣ (ಕ್ರಿ.ಶ. ೧೧೮೩–೮೪) ಆಳಿದರು. ಒಟ್ಟು ೨೨ ವರ್ಷಗಳ ಕಾಲ ಕಳಚೂರ್ಯ ರಾಜರು ಚಾಳುಕ್ಯ ಸಾಮ್ರಾಜ್ಯವನ್ನು ಆಕ್ರಮಿಸಿ ಸ್ವತಂತ್ರ ರಾಜ್ಯಭಾರ ಮಾಡಿದರು. ಇವರ ರಾಜ್ಯ ಬಹುತೇಕ ಕರ್ನಾಟಕದ ಭಾಗವನ್ನಾವರಿಸಿತ್ತು. ತದನಂತರ ನಾಲ್ಕನೆಯ ಸೋಮೇಶ್ವರನ (ಕ್ರಿ.ಶ.೧೧೮೪–೧೯) ಕಾಲಕ್ಕೆ ಕಳಚೂರ್ಯ ರಾಜ್ಯ ಪ್ರದೇಶ ಚಾಳುಕ್ಯರ ಸಾಮ್ರಾಜ್ಯದಲ್ಲಿ ವಿಲೀನವಾಯ್ತು.

೭೮. ಸೂರ್ಯನಾಥ ಕಾಮತ್, ಪೂರ್ವೋಕ್ತ, ಪು ೧೦೦.

೭೯. ಹಂಪ ನಾಗರಾಜಯ್ಯ–ಚಂದ್ರಕೊಡೆ, ಪು ೪೯.

೮೦. ಹನುಮಾಕ್ಷಿ ಗೋಗಿ–ಕಲ್ಬುರ್ಗಿ ಜಿಲ್ಲೆಯ ಶಾಸನಗಳು, ಪು ೧೧೬

೮೧. ಶಾಸನ ಅಧ್ಯಯನ ಸಂ–೧, ಸಂಚಿಕೆ ೧, ಪು ೨೯.

೮೨. ಅಪ್ಪಣ್ಣ.ಎನ್.ಹಂಜೆ–ಅರಟಾಳದ ಪಾರ್ಶ್ವನಾಥ ಜಿನಾಲಯ ವಾಸ್ತು–ಶಿಲ್ಪ–ಶಾಸನ, ೨೦೦೫, ಪು ೧೫–೧೬.

೮೩. ಸೌ.ಇ.ಇ. ಸಂ–೧೮. ನಂ–೭೧ ಮೋಟೆಬೆನ್ನೂರು, ಕ್ರಿ.ಶ. ೧೦೬೬, ಪು ೬೫–೬೭.

೮೪. ಹನುಮಾಕ್ಷಿ ಗೋಗಿ–ಅನುಶಾಸನ– ಪು ೧೩೬.

೮೫. ಅದೇ, ಪು ೧೩೭.

೮೬. ರವಿಕುಮಾರ.ಕೆ.ನವಲಗುಂದ ಶೋಧಿಸಿದ ಅಪ್ರಕಟಿತ ಶಾಸನ.

೮೭. ಕ.ಇ. ಸಂ-೫, ನಂ-೯೨, ತಿಳವಳ್ಳಿ, ಕ್ರಿ.ಶ. ೧೧೦೩ ಪು ೨೮೯-೯೦.

೮೮. ಹನುಮಾಕ್ಷಿ ಗೋಗಿ-ಗದಗ ಜಿಲ್ಲೆ ಮುಂಡರಗಿ ತಾಲ್ಲೂಕಿನ ಹಮ್ಮಿಗಿಯ ಮತ್ತು ಹಾವೇರಿ ಜಿಲ್ಲೆ ಶಿಗ್ಗಾಂವ ತಾಲ್ಲೂಕಿನ ಅರಟಾಳದ ಅಪ್ರಕಟಿತ ಶಾಸನಗಳು ಇತಿಹಾಸ ದರ್ಶನ ಸಂ-೨೭, ೨೦೧೨, ಪು ೮೫-೮೬.

೮೯. ರವಿಕುಮಾರ.ಕೆ.ನವಲಗುಂದ-ಉಪಸರ್ಗ್ಗ, ಪು ೧೩-೧೪.

೯೦. ಧಾ.ಜಿ.ಶಾ.ಸೂ. ೧೯೭೫, ನಂ-೨೦೫, ಪು ೬೫. ಹನುಮಾಕ್ಷಿ ಗೋಗಿ – ಅನುಶಾಸನ ಅನುಬಂಧ ೦೮.

೯೧. ಹಂಪಾ ನಾಗರಾಜಯ್ಯ – ದಾನ ಚಿಂತಾಮಣಿ ಅತ್ತಿಮಬ್ಬೆ. ಪು ೧೬೨.

೯೨. ಸೂರ್ಯನಾಥ ಕಾಮತ್, ಪೂರ್ವೋಕ್ತ, ಪು ೯೪.

೯೩. ರವಿಕುಮಾರ.ಕೆ. ನವಲಗುಂದ ಪೂರ್ವೋಕ್ತ, ಪು ೧೭-೧೯.

೯೪. ಧಾ.ಜಿ.ಶಾ.ಸು. ೧೯೭೫. ನಂ- ೬೮ , ಪು ೬೦. .

೯೫. ಹನುಮಾಕ್ಷಿ ಗೋಗಿ-ಬಾಳೆಯಹಳ್ಳಿಯ ಶಾಸನಗಳು, ಶಾಸನ ಅಧ್ಯಯನ ಸಂ-೦೩, ಸಂಚಿಕೆ-೦೧, ೨೦೦೬, ಪು ೮೯-೯೨.

೯೬. ಕಲ್ಯಾಣ ಚಾಲುಕ್ಯರ ಶಾಸನಗಳು ಸಂ-೦೧, ೨೦೧೧, ಪು Vi.

೯೭. ಅದೇ, ಪು Vi.

೯೮. ಸೂರ್ಯನಾಥ ಕಾಮತ್, ಪೂರ್ವೋಕ್ತ, ಪು ೧೦೮.

೯೯. ಹನುಮಾಕ್ಷಿ ಗೋಗಿ-ಅನುಶಾಸನ, ೨೦೦೨, ಪು ೩೩೬-೨೪೦.

೧೦೦. ಸೌ.ಇ.ಇ. ಸಂ-೧೮. ನಂ-೧೫೧. ನೇರಲಿಗಿ ಕ್ರಿ.ಶ. ೧೧೪೮, ಪು ೧೯೯-೨೦೨.

೧೦೧. ಅದೇ, ಪು ೨೦೦.

೧೦೨. ಹಂಪ ನಾಗರಾಜಯ್ಯ, ಪೂರ್ವೋಕ್ತ, ಪುಟ-೨೬೯.

೧೦೩. ಎ.ಆರ್.ಎಸ್.ಐ.ಇ. ೧೯೪೪-೧೫, ನಂ-೩೨, ಪು ೨೮೬.

೧೦೪. ಈ ಶಾಸನ ಹುಲಗೂರ ಗರಡಿಯ ಮನೆಯಲ್ಲಿದ್ದು, ಒಳಗಿನ ಸುತ್ತು ಕಟ್ಟೆಯೊಂದಕ್ಕೆ ಜೋಡಿಸಲಾಗಿದೆ. ಅಪ್ರಕಟಿತ.

೧೦೫. ಸೌ.ಇ.ಇ. ಸಂ-೧೮. ನಂ-೩೪೫ ಕಾಗಿನೆಲ್ಲಿ ೧೧-೧೨ನೆಯ ಶ, ಪು ೩೪೪.

೧೦೬. ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ, ೨೦೦೬, ಪು ೨೨೨.

೧೦೭. ಸೌ.ಇ.ಇ. ಸಂ-೧೮. ನಂ-೨೯೮, ಗುತ್ತಲ ಕ್ರಿ.ಶ. ೧೧೯೧-೯೨, ಪು ೩೯೮.

೧೦೮. ಕನ್ನಡ ವಿಷಯ ವಿಶ್ವಕೋಶ, ಪೂರ್ವೋಕ್ತ, ಪು ೨೨೨-೨೨೩.

೧೦೯. ಅದೇ, ಪು ೨೨೩.

೧೧೦. ಸೌ.ಇ.ಇ. ಸಂ-೧೮, ನಂ-೨೯೩, ಗುತ್ತಲ, ಪೂರ್ವೋಕ್ತ, ಕ್ರಿ.ಶ. ೧೧೬೨, ಪು ೩೭೬-೭೭.

೧೧೧. ಹಂಪ ನಾಗರಾಜಯ್ಯ, ಪೂರ್ವೋಕ್ತ, ಪು ೫೨.

೧೧೨. ಇಂ.ಎ.ಸಂ-೦೫, ಅಬ್ಬಲೂರು ಕ್ರಿ.ಶ. ಸು-೧೨೦೦, ಪು ೨೩೭-೬೦.

೧೧೩. ಸೌ.ಇ.ಇ. ಸಂ-೧೮, ನಂ-೧೮೦, ನದಿಹರಳಹಳ್ಳಿ ಕ್ರಿ.ಶ. ೧೧೬೮, ಪು ೧೪೬-೨೪೯ (ತ್ರುಟಿತ) ರವಿಕುಮಾರ.ಕೆ.ನವಲಗುಂದ, ಪೂರ್ವೋಕ್ತ, ಪು ೧೦೨-೧೦೭ (ಪರಿಷ್ಕೃತ)

೧೧೪. ರವಿಕುಮಾರ.ಕೆ.ನವಲಗುಂದ, ಪೂರ್ವೋಕ್ತ, ಪು ೨೨.

೧೧೫. ಧಾ.ಜಿ.ಶಾ.ಸೂ. ೧೯೭೫ ನಂ-೨೩೨, ಪು ೬೬.

೧೧೬. ಸೌ.ಇ.ಇ. ಸಂ-೧೮, ನಂ-೧೮೩, ನದಿಹರಳಹಳ್ಳಿ, ಪೂರ್ವೋಕ್ತ ಕ್ರಿ.ಶ. ೧೧೭೨, ಪು ೨೫೨.

೧೧೭. ಅಪ್ಪಣ್ಣ.ಎನ್.ಹಂಜೆ, ಪೂರ್ವೋಕ್ತ, ಪು ೨೪.

೧೧೮. ಅದೇ ಪು ೨೪ ಮತ್ತು ೧೫-೧೬.

೧೧೯. ಅಪ್ಪಣ್ಣ.ಎನ್.ಹಂಜೆ-ಸಮವಸರಣ-೨೦೧೫, ಪು ೧೫೩.

೧೨೦. ಅದೇ, ಪು ೧೫೪

೧೨೧. ಧಾ.ಜಿ.ಶಾ.ಸೂ ಅದೇ ನಂ-೧೬೮, ಪು ೪೮.

೧೨೨. ಸೌ.ಇ.ಇ. ಸಂ-೧೮, ನಂ-೩೫೧, ಅಕ್ಕೂರು ೧೨ನೆಯ ಶ, ಪು ೪೪೩.

೧೨೩. ರವಿಕುಮಾರ.ಕೆ.ನವಲಗುಂದ ಪೂರ್ವೋಕ್ತ ಪು ೩೨ ಮತ್ತು ೩೦.

೧೨೪. ಕೆ.ಎಸ್. ಪಾಟೀಲ ಅವರು ಕೊಟ್ಟ ಶಾಸನ ಪಾಠ.

೧೨೫. ರವಿಕುಮಾರ.ಕೆ.ನವಲಗುಂದ, ಪೂರ್ವೋಕ್ತ, ಪುಟ-೩೬

೧೨೬. ಧಾ.ಜಿ.ಶಾ.ಸೂ ೧೯೭೫. ನಂ-೧೪೫, ಪು ೩೨.

೧೨೭. ಹನುಮಾಕ್ಷಿ ಗೋಗಿ-ಬಾಳೆಯಹಳ್ಳಿಯ ಶಾಸನಗಳು, ಶಾಸನ ಅಧ್ಯಯನ. ಸಂ-೦೩ ಸಂಚಿಕೆ-೦೧. ೨೦೦೬, ಪು ೯೬.

೧೨೮. ಹನುಮಾಕ್ಷಿ ಗೋಗಿ-ಅನುಶಾಸನ, ೨೦೦೨, ಪು ೫೭.

೧೨೯. ಹನುಮಾಕ್ಷಿ ಗೋಗಿ – ಜಿನಸಮಯ, ಪು ೧೦೪.

೧೩೦. ರವಿಕುಮಾರ.ಕೆ.ನವಲಗುಂದ ಪೂರ್ವೋಕ್ತ, ಪು ೨೪.

೧೩೧. ಅದೇ, ಪು ೨೭.

೧೩೨. ರವಿಕುಮಾರ.ಕೆ.ನವಲಗುಂದ, ಶೋಧಿಸಿದ ಅಪ್ರಕಟಿತ ಶಾಸನ.

೧೩೩. ರವಿಕುಮಾರ.ಕೆ.ನವಲಗುಂದ ಪೂರ್ವೋಕ್ತ, ಪು ೨೪.

೧೩೪. ಡಾ.ಜಗದೀಶ ಅವರು ಕೊಟ್ಟ ಶಾಸನ ಪಾಠ.

೧೩೫. ಮಿರ್ಜಿ ಅಣ್ಣಾರಾಯ, ಪೂರ್ವೋಕ್ತ, ಪು ೭೮೧.

೧೩೬. ಅದೇ, ಪು ೭೭೭.

೧೩೭. ಬಿ.ಆರ್ ಹಂದೂರ, ಪೂರ್ವೋಕ್ತ, ಪು ೧೨ ಮತ್ತು ೧೪.

೧೩೮. ಹಂಪ ನಾಗರಾಜಯ್ಯ, ಪೂರ್ವೋಕ್ತ, ಪು ೬೦೩.

೧೩೯. ರವಿಕುಮಾರ.ಕೆ.ನವಲಗುಂದ, ಪೂರ್ವೋಕ್ತ, ಪು ೧೦೭.

೧೪೦. ಸೌ.ಇ.ಇ.ಸಂ.೦೯ ಭಾಗ-೧, ನಂ-೩೪೬ ಮತ್ತು ೩೪೭ ಕೋಗಳಿ ಕ್ರಿ.ಶ. ೧೨೭೫ ಮತ್ತು ೧೨೭೬, ಪು ೩೬೯-೭೦.

೧೪೧. ಸೂರ್ಯನಾಥ ಕಾಮತ್, ಪೂರ್ವೋಕ್ತ, ಪು ೧೧೩.

೧೪೨. ಅದೇ, ಪು ೧೧೪.

೧೪೩. ಕ.ಇ. ಸಂ-೦೫, ನಂ-೪೭ ಬಾಳೂರು ಕ್ರಿ.ಶ. ೧೨೦೫, ಪು ೧೮೯-೯೦.

೧೪೪. ಕನ್ನಡ ವಿಷಯ ವಿಶ್ವಕೋಶ, ಪೂರ್ವೋಕ್ತ ಪು ೧೧೪೨.

೧೪೫. ಸೂರ್ಯನಾಥ ಕಾಮತ್, ಪೂರ್ವೋಕ್ತ, ಪು ೧೧೨.

೧೪೬. ಎ.ಕ. ಸಂ-೦೨, ನಂ-೧೬೨ (೧೩೨) ಶ್ರವಣಬೆಳಗೊಳ (ಚಿಕ್ಕಬೆಟ್ಟ) ಕ್ರಿ.ಶ. ೧೧೨೩, ಪು ೧೦೫.

೧೪೭. ಅದೇ, ನಂ-೧೭೬ (೧೪೩) ಕ್ರಿ.ಶ. ೧೧೩೧, ಪು ೧೩೧.

೧೪೮. ಎ.ವಿ. ನರಸಿಂಹಮೂರ್ತಿ-ಕರ್ನಾಟಕದ ಸೇವುಣರ ಇತಿಹಾಸ, ೨೦೧೦, ಪು ೧೧೬.

೧೪೯. ಅದೇ, ಪು ೧೧೬.

೧೫೦. ರವಿಕುಮಾರ.ಕೆ.ನವಲಗುಂದ, ಉಪಸರ್ಗ್ಗ, ಪು ೧೩-೧೪.

೧೫೧. ಸೌ.ಇ.ಇ. ಸಂ-೨೦. ನಂ-೨೦೨ ಕಲ್ಕೇರಿ ಕ್ರಿ.ಶ. ೧೨೪೪, ಪು ೨೫೪.

೧೫೨. ಅದೇ ನಂ-೨೦೫. ಲಕ್ಷ್ಮೇಶ್ವರ ಕ್ರಿ.ಶ. ೧೨೪೭ ಪು ೨೫೬-೨೫೮.

೧೫೩. ಅದೇ, ನಂ-೨೨೪, ಕ್ರಿ.ಶ. ೧೪೯೫, ಪು ೨೭೩-೨೭೩.

೧೫೪. ಎ.ವಿ. ನರಸಿಂಹಮೂರ್ತಿ, ಪೂರ್ವೋಕ್ತ, ಪು ೬೨-೬೩.

೧೫೫. ಸೂರ್ಯನಾಥ ಕಾಮತ್, ಪೂರ್ವೋಕ್ತ, ಪು ೧೨೮.

೧೫೬. ಅದೇ, ಪು ೧೨೯.

೧೫೭. ಸೂರ್ಯನಾಥ ಕಾಮತ್, ಪೂರ್ವೋಕ್ತ, ಪು ೧೩೫, ಎ.ವಿ. ನರಸಿಂಹಮೂರ್ತಿ ಪೂರ್ವೋಕ್ತ, ಪು ೬೮.

೧೫೮. ಎಂ.ಜಿ. ಮಂಜುನಾಥ.ಜಿ.ಕೆ. ದೇವರಾಜಸ್ವಾಮಿ, ಕನ್ನಡ ಲಿಪಿ ವಿಕಾಸ, ೨೦೧೧, ಪು ೨೧೪.

೧೫೯. ಸೌ.ಇ.ಇ. ಸ-೧೮, ನಂ-೨೦೬, ಹಾವೇರಿ ಕ್ರಿ.ಶ. ೧೨೨೭, ಪು ೨೮೫.

೧೬೦. ಅದೇ, ನಂ ೨೦೫ ಮತ್ತು ೨೦೭ ಪು ೨೮೫-೨೮೬.

೧೬೧. ರವಿಕುಮಾರ.ಕೆ.ನವಲಗುಂದ, ಪೂರ್ವೋಕ್ತ, ಪು ೩೮-೩೯.

೧೬೨. ಅದೇ, ಪು ೪೩.

೧೬೩. ಹನುಮಾಕ್ಷಿ ಗೋಗಿ, ಪೂರ್ವೋಕ್ತ, ಪು ೮೧.

೧೬೪. ರವಿಕುಮಾರ.ಕೆ. ನವಲಗುಂದ, ಪೂರ್ವೋಕ್ತ, ಪು ೪೬ ಮತ್ತು ೪೫.

೧೬೫. ಮಲ್ಲಿಕಾರ್ಜುನ.ಕೆ., ವಿ.ಎಸ್. ಮಾಳಿ, ಬಿ.ಎಸ್.ಬಿರಾದರ, ಅಶೋಕ ನರೋಡೆ, ಡಾ.ಬಿ.ಆರ್. ಹಿರೇಮಠರ ಶಾಸನ ಅಧ್ಯಯನ, ೨೦೧೨, ಪು ೪೫.

೧೬೬. ಎಂ.ಬಿ. ನೇಗಿನಹಾಳ-ನೇಗಿನಹಾಳ ಪ್ರಬಂಧಗಳು-೧೯೯೯, ಪು ೪೫೦

೧೬೭. ರವಿಕುಮಾರ.ಕೆ.ನವಲಗುಂದ ಶೋಧಿತ ಅಪ್ರಕಟಿತ ಶಾಸನ.

೧೬೮. ಶ್ರೀನಿವಾಸ ಪಾಡಿಗಾರ, ಶಿವಯೋಗಿ ಕೋರಿಶೆಟ್ಟರ-ಕರಜಗಿಯ ಜೈನಯಕ್ಷಿಯ ಅಪೂರ್ವ ಶಿಲ್ಪ-ಶಾಸನ, ಶಾಸನ ಅಧ್ಯಯನ ಸಂ-೦೬, ಸಂಚಿಕೆ ೧ ಮತ್ತು ೨, ೨೦೧೪, ಪು ೪೦.

೧೬೯. ಸೌ.ಇ.ಇ. ಸಂ-೧೮, ನಂ-೨೩೪. ನೆಗಳೂರು ಕ್ರಿ.ಶ. ೧೨೫೧, ಪು ೩೧೦-೩೧೧.

೧೭೦. ಕ.ಇ. ಸಂ-೦೫, ನಂ-೧೧೮, ಬಾಳೂರು ಕ್ರಿ.ಶ. ೧೨೬೨, ಪು ೩೦೯.

೧೭೧. ಮಲ್ಲಿಕಾರ್ಜುನ.ಕೆ, ವಿ.ಎಸ್. ಮಾಳಿ, ಬಿ.ಎಸ್. ಬಿರಾದರ, ಅಶೋಕ ನರೋಡೆ, ಪೂರ್ವೋಕ್ತ, ಪು ೫೫.

೧೭೨. ರವಿಕುಮಾರ.ಕೆ.ನವಲಗುಂದ ಶೋಧಿತ ಅಪ್ರಕಟಿತ ಶಾಸನ.

೧೭೩. ಎ.ವಿ. ನರಸಿಂಹಮೂರ್ತಿ, ಪೂರ್ವೋಕ್ತ, ಪು ೮೪.

೧೭೪. ಕ.ಇ. ಸಂ-೦೫, ನಂ-೪೩ ಬಾಳೂರು ಕ್ರಿ.ಶ. ೧೨೫೭, ಪು ೧೭೯-೧೮೦.

೧೭೫. ಎಂ.ಬಿ.ನೇಗಿನಹಾಳ, ಪೂರ್ವೋಕ್ತ ಪು ೪೫೩.

೧೭೬. ರವಿಕುಮಾರ.ಕೆ. ನವಲಗುಂದ, ಉಪಸರ್ಗ್ಗ, ಪು ೪೯.

೧೭೭. ಹನುಮಾಕ್ಷಿ ಗೋಗಿ – ಅನುಶಾಸನ ೨೦೦೨, ಪು ೧೫೧.

೧೭೮. ಸೌ.ಇ.ಇ. ಸಂ-೧೮, ನಂ-೨೫೦, ಹತ್ತಿಮತ್ತೂರು ಕ್ರಿ.ಶ. ೧೨೬೬, ಪು ೩೩೬.

೧೭೯. ರವಿಕುಮಾರ.ಕೆ.ನವಲಗುಂದ, ಪೂರ್ವೋಕ್ತ, ಪು ೫೧.

೧೮೦. ಹನುಮಾಕ್ಷಿ ಗೋಗಿ – ಜಿನಸಮಯ, ಪು ೯೬.

೧೮೧. ರವಿಕುಮಾರ.ಕೆ.ನವಲಗುಂದ, ಪೂರ್ವೋಕ್ತ, ಪು ೫೫

೧೮೨. ಸೌ.ಇ.ಇ. ಸಂ-೧೮, ನಂ-೨೫೨. ಸಂಗೂರು ಕ್ರಿ.ಶ. ೧೨೬೮-೬೯.

೧೮೩. ಸೌ.ಇ.ಇ. ಸಂ-೧೮, ನಂ-೨೫೨.

೧೮೪. ಹನುಮಾಕ್ಷಿ ಗೋಗಿ – ಪೂರ್ವೋಕ್ತ, ಪು ೧೦೮.

೧೮೫. ಕ.ಇ. ಸಂ–೦೬, ನಂ–೪೯, ಹಿರೇಕೋಣತಿ ಕ್ರಿ.ಶ. ೧೨೭೧, ಪು ೧೪೭–೪೮.

೧೮೬. ರವಿಕುಮಾರ.ಕೆ.ನವಲಗುಂದ, ಪೂರ್ವೋಕ್ತ, ಪು ೫೮.

೧೮೭. ಅದೇ, ಪು ೬೦.

೧೮೮. ರವಿಕುಮಾರ.ಕೆ.ನವಲಗುಂದ ಶೋಧಿತ ಅಪ್ರಕಟಿತ ಶಾಸನ.

೧೮೯. ಹನುಮಾಕ್ಷಿ ಗೋಗಿ – ಅನುಶಾಸನ, ೨೦೦೨, ಪು ೩೪೧.

೧೯೦. ಕ.ಇ. ಸಂ–೦೬, ನಂ–೫೦, ಹಿರೇಕೋಣತಿ ಕ್ರಿ.ಶ. ೧೨೭೮, ಪು ೧೪೮–೧೪೯.

೧೯೧. ಸೌ.ಇ.ಇ. ಸಂ–೧೮, ನಂ–೩೮೨, ಕಡಕೋಳ ಕ್ರಿ.ಶ. ೧೨೭೯, ಪು ೪೬೩.

೧೯೨. ಅದೇ, ನಂ –೨೫೮ ಕದರಮಂಡಲಗಿ ಕ್ರಿ.ಶ. ೨೮೧, ಪು ೩೪೧–೩೪೨.

೧೯೩. ರವಿಕುಮಾರ.ಕೆ.ನವಲಗುಂದ, ಉಪಸರ್ಗ್ಗ, ಪು ೬೨.

೧೯೪. ಅದೇ, ಪು ೬೪.

೧೯೫. ಸೌ.ಇ.ಇ. ಸಂ–೨೦, ನಂ–೨೨೩ ಕಲಕೇರಿ ಕ್ರಿ.ಶ. ೧೨೮೯, ಪು ೨೭೨.

೧೯೬. ಕ.ಇ. ಸಂ–೦೪, ನಂ–೦೯, ಸಾತೇನಹಳ್ಳಿ ಕ್ರಿ.ಶ. ೧೨೯೨, ಪು ೨೩–೨೪.

೧೯೭. ಎಂ.ಬಿ.ನೇಗಿನಹಾಳ, ಪೂರ್ವೋಕ್ತ, ಪು ೪೫೨–೪೫೩.

೧೯೮. ಅದೇ, ಪು ೪೫೩.

೧೯೯. ಧಾ.ಜಿ.ಶಾ.ಸೂ–೧೯೭೫, ನಂ–೧೦೬, ಪು, ೫೭

೨೦೦. ಅದೇ ನಂ–೧೦೫, ಪು ೫೭.

೨೦೧. ರವಿಕುಮಾರ.ಕೆ.ನವಲಗುಂದ, ಪೂರ್ವೋಕ್ತ, ಪು ೬೬.

೨೦೨. ಅದೇ, ಪು ೭೮.

೨೦೩. ಅದೇ, ಪು ೮೦.

೨೦೪. ಅದೇ, ಪು ೮೨.

೨೦೫. ಸೌ.ಇ.ಇ. ಸಂ–೧೮, ನಂ–೩೯೫ ಮೋಟೆಬೆನ್ನೂರು ೧೩ನೆಯ ಶತಮಾನ ಪು ೪೬೯–೪೭೦.

೨೦೬. ಅದೇ ನಂ–೩೭೫, ಮಾಕನೂರು ೧೨–೧೩ನೆಯ ಶತಮಾನ, ಪು ೪೫೭.

೨೦೭. ರವಿಕುಮಾರ.ಕೆ.ನವಲಗುಂದ, ಪೂರ್ವೋಕ್ತ ಪು ೮೭,೮೯,೯೧,೯೩,೯೫

೨೦೮. ಅದೇ, ಪು ೯೫–೯೬.

೨೦೯. ಎಂ.ಬಿ.ನೇಗಿನಹಾಳ, ಪೂರ್ವೋಕ್ತ ಪು ೪೫೦–೪೫೩.

೨೧೦. ಹನುಮಾಕ್ಷಿ ಗೋಗಿ – ಜಿನಸಮಯ, ಪು ೭೬.

೨೧೧. ಧಾ.ಜಿ.ಶಾ.ಸೂ, ೧೯೭೫, ನಂ–೧೬೦, ಪು ೬೩.

೨೧೨. ಅದೇ ನಂ–೧೯೩, ಪು ೬೪.

೨೧೩. ರವಿಕುಮಾರ.ಕೆ.ನವಲಗುಂದ, ಪೂರ್ವೋಕ್ತ ಪು ೯೭.

೨೧೪. ಹನುಮಾಕ್ಷಿ ಗೋಗಿ – ಪೂರ್ವೋಕ್ತ, ಪು ೯೩.

೨೧೫. ರವಿಕುಮಾರ.ಕೆ.ನವಲಗುಂದ, ಪೂರ್ವೋಕ್ತ ಪು ೬೮, ೭೦, ೭೨.

೨೧೬. ಅದೇ, ಪು ೭೬.

೨೧೭. ಭೋಜರಾಜ ಪಾಟೀಲ ನಾಗರಖಂಡ ೧೯೯೫, ಪು ೩೦೪.

೨೧೮. ಧಾ.ಜಿ.ಶಾ.ಸೂ.೧೯೭೫, ನಂ–೧೭೪, ಪುಟ–೬೪, ಅದೇ ನಂ–೦೯, ಪು ೨೭.

೨೧೯. ಸೌ.ಇ.ಇ. ಸಂ–೧೮, ನಂ–೩೯೦ ಹಾವೇರಿ ೧೩ನೆಯ ಶತಮಾನ ಪು ೪೬೮.

೨೨೦. ಎ.ಕ. ಸಂ–೦೨, ನಂ–೪೭೫ (೩೪೪) ಶ್ರವಣಬೆಳಗೊಳ ಕ್ರಿ.ಶ. ೧೩೬೮, ಪು ೨೮೫–೨೮೭.

೨೨೧. ಎ.ಕ.ಸಂ-೦೯ ನಂ-೧೮ ಕಲ್ಲೆಹ ಕ್ರಿ.ಶ. ೧೩೬೮, ಪು ೧೦೫-೧೦೬.

೨೨೨. ಕನ್ನಡ ವಿಷಯ ವಿಶ್ವಕೋಶ, ಪೂರ್ವೋಕ್ತ ಪು ೯೭೮.

೨೨೩. ಅಪ್ಪಣ್ಣ ಹಂಜೆ, ಪೂರ್ವೋಕ್ತ, ಪು ೯೧.

೨೨೪. ಎಸ್.ಗಂಗಾಂಬಿಕೆ-ವಿಜಯನಗರ ಕಾಲೀನ ಮಹಾಪ್ರಧಾನಿ ಬೈಚಯ ದಂಡನಾಯಕ ಮತ್ತು ಅವನ ವಂಶೀಯರು, ಶೋಧ-ಸಂ-೦೪, ಸಂಚಿಕೆ-೦೧, ಜುಲೈ-೨೦೧೪, ಪು ೪೮-೫೦.

೨೨೫. ರವಿಕುಮಾರ.ಕೆ.ನವಲಗುಂದ, ಪೂರ್ವೋಕ್ತ ಪು ೯೭.

೨೨೬. ಅದೇ, ಪು ೯೯.

೨೨೭. ಹನುಮಾಕ್ಷಿ ಗೋಗಿ – ಅನುಶಾಸನ, ೨೦೦೨, ಪು ೨೫೩-೨೫೪.

೨೨೮. ಸೌ.ಇ.ಇ. ಸಂ-೧೮, ನಂ-೨೭೪ ಸಂಗೂರು ಕ್ರಿ.ಶ. ೧೪೯೬, ಪು ೩೫೪-೩೫೭.

೨೨೯. ಹನುಮಾಕ್ಷಿ ಗೋಗಿ – ಪೂರ್ವೋಕ್ತ, ಪು ೨೫೨.

೨೩೦. ಹನುಮಾಕ್ಷಿ ಗೋಗಿ – ಜಿನಸಮಯ, ಪು ೧೦೨.

೨೩೧. ಅದೇ, ಪು ೭೮.

೨೩೨. ಅದೇ, ಪು ೯೦.

೨೩೩. ಅದೇ, ಪು ೧೧೦.

೨೩೪. ಅದೇ, ಪು ೧೦೯.

೨೩೫. ಧಾ.ಜಿ.ಶಾ.ಸೂ ೧೯೭೫, ನಂ-೧೦೭, ಪು ೫೭.

೨೩೬. ಅದೇ ನಂ-೧೦೮,೧೦೯ ಪು ೫೭.

೨೩೭. ಹನುಮಾಕ್ಷಿ ಗೋಗಿ – ಪೂರ್ವೋಕ್ತ, ಪು ೯೫.

೨೩೮. ರವಿಕುಮಾರ.ಕೆ.ನವಲಗುಂದ, ಪೂರ್ವೋಕ್ತ, ಪು ೧೦೧.

೨೩೯. ರವಿಕುಮಾರ.ಕೆ.ನವಲಗುಂದ ಶೋಧಿಸಿದ ಶಾಸನ.

೨೪೦. ಶಿವಕೋಟ್ಯಾಚಾರ್ಯ ವಿರಚಿತ ವಡ್ಡಾರಾಧನೆ, ಪೂರ್ವೋಕ್ತ ಪು ೧೩೫ ಗ್ರಾಮ (ನೂರಕ್ಕೆ ಕಡಿಮೆಯಾಗದೆ ಐನೂರಕ್ಕೆ ಹೆಚ್ಚಾಗದೆ ಕೃಷಿಕ ಕುಟುಂಬಗಳು ವಾಸಮಾಡುವ ಹಳ್ಳಿ), ನಗರ (ರಾಜಧಾನಿ ಪಟ್ಟಣ), ಖೇಡ (ಎತ್ತರವಾದ ಕೋಟೆಯುಳ್ಳ ಊರು), ಖರ್ವಡ (ಚಿಕ್ಕ ಪ್ರಾಕಾರವಿರುವ ಊರು), ಮಡಂಬ (ದೂರಸ್ಥಳ, ಸೀಮೆಯಲ್ಲಿರುವ ಪುರ/ಪಟ್ಟಣ) ಪತ್ತನ (ಬಂಡಿಗಳಲ್ಲಾಗಲಿ, ನಾವೆಗಳಲ್ಲಾಗಲಿ ಪ್ರಯಾಣ ಮಾಡಿ ಸೇರಬಹುದಾದ ಪುರ/ಪಟ್ಟಣ) ದ್ರೋಣಾಮುಖ (ಜಲಮಾರ್ಗ ಮತ್ತು ಸ್ಥಳಮಾರ್ಗ ಎರಡೂ ಇರುವ ಪುರ/ಪಟ್ಟಣ) ಅಪ್ಪಣ್ಣ.ಎನ್.ಹಂಜೆ: ಸಮವಸರಣ ೨೦೧೫, ಪು ೨೭.

೨೪೧. ಅದೇ, ಪು ೧೪೧-೧೪೩.

೨೪೨. ಮಿರ್ಜಿ ಅಣ್ಣಾರಾಯ, ಪೂರ್ವೋಕ್ತ, ಪು ೬೩.

೨೪೩. ಅದೇ, ಪು ೬೩-೬೪.

೨೪೪. ಎಂ.ಚಿದಾನಂದಮೂರ್ತಿ-ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಐದನೆಯ ಮುದ್ರಣ) ೨೦೧೧, ಪು ೯೫-೯೬.

೨೪೫. ಹಂಪ ನಾಗರಾಜಯ್ಯ-ಯಾಪನೀಯ ಸಂಘ, ೧೯೯೯, ಪು ೩೧.

೨೪೬. ಎಂ.ಜಿ. ಮಂಜುನಾಥ – ನಿಸಿದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ ೨೦೦೯, ಪು ೬೧.

೨೪೭. ಶಿವಕೋಟ್ಯಾಚಾರ್ಯ ವಿರಚಿತ ವಡ್ಡಾರಾಧನೆ, ಪೂರ್ವೋಕ್ತ ಪು ೧೪೨.

೨೪೮. ಹಂಪ. ನಾಗರಾಜಯ್ಯ ಪೂರ್ವೋಕ್ತ, ಪು ೦೫.

೨೪೯. ಮಿರ್ಜಿ ಅಣ್ಣಾರಾಯ ಪೂರ್ವೋಕ್ತ, ಪು ೭೩.

೨೫೦. ಎಂ. ಚಿದಾನಂದಮೂರ್ತಿ ಪೂರ್ವೋಕ್ತ, ಪು ೭೯-೮೦.

೨೫೧. ಹಂಪ. ನಾಗರಾಜಯ್ಯ, ಪೂರ್ವೋಕ್ತ, ಪು ೨೫-೨೬.

೨೫೨. ಬಾ.ರಾ.ಗೋಪಾಲ, ಪೂರ್ವೋಕ್ತ, ಪು ೧೮-೨೦.

೨೫೩. ಮಿರ್ಜಿ ಅಣ್ಣಾರಾಯ, ಪೂರ್ವೋಕ್ತ, ಪು ೭೭-೭೮.

೨೫೪. ಹಂಪ. ನಾಗರಾಜಯ್ಯ, ಪೂರ್ವೋಕ್ತ, ಪು ೧೮-೧೯.

೨೫೫. ಶಿವಕೋಟ್ಯಾಚಾರ್ಯ ವಿರಚಿತ ವಡ್ಡಾರಾಧನೆ, ಪೂರ್ವೋಕ್ತ, ಪು ೧೪೩.

೨೫೬. ಹಂಪ. ನಾಗರಾಜಯ್ಯ, ಪೂರ್ವೋಕ್ತ, ಪು ೨೫-೨೬.

೨೫೭. ಅದೇ, ಪು ೩೩-೪೩.

೨೫೮. ಹನುಮಾಕ್ಷಿ ಗೋಗಿ – ಲಕ್ಕುಂಡಿಯ ಶಾಸನಗಳು ೨೦೦೮ ಪು ೫೫-೫೭.

೨೫೯. ಅದೇ, ಪು ೫೬.

೨೬೦. ಎಂ.ಚಿದಾನಂದಮೂರ್ತಿ, ಪೂರ್ವೋಕ್ತ, ಪು ೮೧-೮೨.

೨೬೧. ಹಂಪ. ನಾಗರಾಜಯ್ಯ, ಪೂರ್ವೋಕ್ತ, ಪು ೦೬.

೨೬೨. ಎ.ಕ. ಸಂ-೦೮, ನಂ-೨೬೨, ಕಳಸವಳ್ಳಿ ಕ್ರಿ.ಶ. ೧೧೭೪, ಪು ೧೦೯-೧೧೧.

೨೬೩. ಅಪ್ಪಣ್ಣ.ಎನ್.ಹಂಜೆ-ಅರಟಾಳದ ಪಾರ್ಶ್ವನಾಥ ಜಿನಾಲಯ ವಾಸ್ತು-ಶಿಲ್ಪ-ಶಾಸನ, ೨೦೦೫, ಪು ೨೪.

೨೬೪. ರವಿಕುಮಾರ.ಕೆ.ನವಲಗುಂದ, ಪೂರ್ವೋಕ್ತ, ಪು ೬೬.

೨೬೫. ಅದೇ, ಪು ೧೦೫.

೨೬೬. ದೇವಚಂದ್ರ ಸಂಪುಟ ರಾಜಾವಳಿ ಕಥಾಸಾರ – (ಸಂ) ಎಚ್.ಜೆ.ಲಕ್ಕಪ್ಪಗೌಡ ೨೦೦೭, ಪು ೧೨೦-೧೨೧.

೨೬೭. ಎ.ಕ. ಸಂ-೦೨, ನಂ-೩೬೦ (೨೫೪) ಶ್ರವಣಬೆಳಗೊಳ ಕ್ರಿ.ಶ. ೧೩೯೮, ಪು ೨೧೬.

೨೬೮. ಹಂಪ. ನಾಗರಾಜಯ್ಯ-ಚಂದ್ರಕೊಡೆ, ೧೯೯೭, ಪು ೪೭೯.

೨೬೯. ಎಂ.ಜಿ. ಮಂಜುನಾಥ, ಪೂರ್ವೋಕ್ತ, ಪು ೧೩೨.

೨೭೦. ಚಾವುಂಡರಾಯ ವಿರಚಿತ ತ್ರಿಷಷ್ಟಿ ಶಲಾಕಾ ಪುರುಷ ಪುರಾಣಂ-(ಸಂ) ಬಿ.ಎಸ್. ಕುಲಕರ್ಣಿ, ೧೯೭೫, ಪು ೦೨.

೨೭೧. ಕ.ಇ. ಸಂ-೦೧, ನಂ-೦೩ ಆಡೂರು ಕ್ರಿ.ಶ. ೭೫೦, ಪು ೦೭-೦೮.

೨೭೨. ಅದೇ, ಪು ೦೮.

೨೭೩. ಕ.ಇ. ಸಂ-೦೪, ನಂ-೦೧ ಮೇದೂರು ಕ್ರಿ.ಶ. ೭೯೩-೮೧೪, ಪು ೦೨.

೨೭೪. ಎ.ಕ. ಸಂ-೦೨, ನಂ-೧೦ (೦೮) ಶ್ರವಣಬೆಳಗೊಳ ೮ನೆಯ ಶ ಪು ೦೬-೦೭.

೨೭೫. ಅದೇ, ಪು ೧೦.

೨೭೬. ಷ.ಶೆಟ್ಟರ್-ಹಳಗನ್ನಡ ಲಿಪಿ ಲಿಪಿಕಾರ ಲಿಪಿ ವ್ಯವಸಾಯ-೨೦೧೪, ಪು ೨೯೫.

೨೭೭. ಸೌ.ಇ.ಇ. ಸಂ-೧೮, ನಂ-೩೧೫, ರಾಣೆಬೆನ್ನೂರು ಕ್ರಿ.ಶ. ೮೫೯-೬೦, ಪು ೮೧೯-೨೦.

೨೭೮. ಷ.ಶೆಟ್ಟರ್, ಪೂರ್ವೋಕ್ತ, ಪು ೨೯೫.

೨೭೯. ಸೌ.ಇ.ಇ. ಪೂರ್ವೋಕ್ತ ನಂ-೩೮, ಕದರಮಂಡಲಗಿ ೯-೧೦ನೇ ಶ, ಪು ೨೪-೨೫.

೨೮೦. ಚೆನ್ನಕ್ಕ ಎಲಿಗಾರ, ಬಂಕಾಪುರ ಶೋಧನ, ೧೯೯೦, ಪು ೫೬.

೨೮೧. ಅಪ್ಪಣ್ಣ ಎನ್ ಹಂಜೆ-ಸಮವಸರಣ, ೨೦೧೫, ಪು ೧೪೩-೪೪.

೨೮೨. ಎ.ಕ. ಸಂ-೦೨, ನಂ-೩೬೦ (೨೫೪) ಶ್ರವಣಬೆಳಗೊಳ ಕ್ರಿ.ಶ. ೧೩೯೮, ಪು ೨೧೭.

೨೮೩. ಸೌ.ಇ.ಇ. ಸಂ-೦೨, ಭಾಗ-೧, ನಂ-೩೪ ಅಸ ಕ್ರಿ.ಶ. ೯೨೫ ಪು ೨೦ "ಬಙ್ಕಪುರದ ಧೋರಜಿನಾಲಯದ ಚನ್ದ್ರಪ್ರಭಭಟಾರರ್ಪ್ಪಸುಣ್ಡಿಯನಭ್ಯನ್ತರ ಸಿದ್ಧಿಯಾಳುತಿರೆ".

೨೮೪. ಎ.ಕ. ಸಂ–೦೨, ಪೂರ್ವೋಕ್ತ ನಂ–೭೯, ಪು ೫೮.

೨೮೫. ಪಂಪ ವಿರಚಿತ ಆದಿಪುರಾಣಂ–(ಸಂ) ಎಸ್.ಜಿ. ನರಸಿಂಹಾಚಾರ್ (ಪರಿಷ್ಕೃತ) ಟಿ.ವಿ. ವೆಂಕಟಾಚಲಶಾಸ್ತ್ರಿ ೧೯೯೫, ಪು ೦೧.

೨೮೬. ಅದೇ, ಪುಟ–೦೪.

೨೮೭. ಎ.ಕ. ಸಂ–೦೨, ಪೂರ್ವೋಕ್ತ, ನಂ–೭೯, ಪು ೫೯–೬೦.

೨೮೮. ರನ್ನ ಸಂಪುಟ ಅಜಿತತೀರ್ಥಕರ ಪುರಾಣ ತಿಲಕಂ ಸಾಹಸಭೀಮ ವಿಜಯಂ–(ಸಂ) ಹಂಪ. ನಾಗರಾಜಯ್ಯ, ೨೦೦೬, ಪು ೧೮.

೨೮೯. ಚಾವುಂಡರಾಯ ವಿರಚಿತ ತ್ರಿಷಷ್ಟಿ ಶಲಾಕಾ ಪುರುಷ ಪುರಾಣಂ, ಪೂರ್ವೋಕ್ತ, ಪು ೦೪.

೨೯೦. ಎ.ಕ. ಸಂ–೦೨, ಪೂರ್ವೋಕ್ತ, ನಂ–೧೫೦ (೧೨೧), ಪು ೮೮.

೨೯೧. ಅಪ್ಪಣ್ಣ.ಎನ್. ಹಂಜೆ, ಪೂರ್ವೋಕ್ತ, ಪು ೧೪೩.

೨೯೨. ಎ.ಕ. ಸಂ–೦೨ ಪೂರ್ವೋಕ್ತ, ನಂ–೬೪ (೫೯), ಪು ೨೩.

೨೯೩. ಚಾವುಂಡರಾಯ ವಿರಚಿತ ತ್ರಿಷಷ್ಟಿ ಶಲಾಕಾ ಪುರುಷ ಪುರಾಣಂ, ಪೂರ್ವೋಕ್ತ, ಪು ೧೮.

೨೯೪. ಹನುಮಾಕ್ಷಿ ಗೋಗಿ – ಗದಗ ಜಿಲ್ಲೆಯ ಮುಂಡರಗಿ ತಾಲ್ಲೂಕಿನ ಹಮ್ಮಿಗಿಯ ಮತ್ತು ಹಾವೇರಿ ಜಿಲ್ಲೆ ಶಿಗ್ಗಾಂವ ತಾಲ್ಲೂಕಿನ ಅರಟಾಳದ ಅಪ್ರಕಟಿತ ಶಾಸನಗಳು. ಇತಿಹಾಸ ದರ್ಶನ, ಸಂ–೨೭, ೨೦೧೨, ಪು ೮೫–೮೬.

೨೯೫. ಹಂಪ. ನಾಗರಾಜಯ್ಯ – ಸಾಂತರರು ಒಂದು ಅಧ್ಯಯನ, ಪುಟ ೩೬೫.

೨೯೬. ಅಪ್ಪಣ್ಣ.ಎನ್.ಹಂಜೆ–ಅರಟಾಳದ ಪಾರ್ಶ್ವನಾಥ ಜಿನಾಲಯ ವಾಸ್ತು–ಶಿಲ್ಪ–ಶಾಸನ–೨೦೦೫, ಪು ೧೬–೧೯.

೨೯೭. ಹನುಮಾಕ್ಷಿ ಗೋಗಿ–ಅನುಶಾಸನ, ೨೦೦೨, ಪುಟ–೩೩೬–೩೪೦, ಸೌ.ಇ.ಇ. ಸಂ–೧೮ ನಂ–೧೫೧, ನೇರಲಿಗಿ ಕ್ರಿ.ಶ. ೧೧೪೮, ಪು ೧೯೯–೨೦೨.

೨೯೮. ರವಿಕುಮಾರ.ಕೆ.ನವಲಗುಂದ, ಪೂರ್ವೋಕ್ತ, ಪು ೩೮.

೨೯೯. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೦೧, ಬಳ್ಳಾರಿ ಜಿಲ್ಲೆ – (ಸಂ) ದೇವರಕೊಂಡಾರೆಡ್ಡಿ, ೧೯೯೮, ಪು ೪೨೯–೪೩೩.

೩೦೦. ಸೌ.ಇ.ಇ. ಸಂ–೧೮, ನಂ–೧೫೧, ನೇರಲಿಗಿ, ಪೂರ್ವೋಕ್ತ, ಪು ೧೯೯–೨೦೨.

೩೦೧. ಹನುಮಾಕ್ಷಿ ಗೋಗಿ – ಬಾಳೆಹಳ್ಳಿಯ ಶಾಸನಗಳು, ಶಾಸನ ಅಧ್ಯಯನ ಸಂ–೦೩, ಸಂಚಿಕೆ–೦೧ ೨೦೦೬, ಪು ೮೯–೮೨., ಸೌ.ಇ.ಇ. ಸಂ–೧೮, ನಂ–೨೮೮ ಗುತ್ತಲ ಕ್ರಿ.ಶ. ೧೧೯೧–೯೨, ಪು ೩೯೮.

೩೦೨. ಪದ್ಮಪ್ರಭ ಮಲಧಾರಿದೇವ–ಎ.ಕ. ೧೨ ನಂ–೫೨ ನಿಡುಗಲ್ಲು, ಮಲಧಾರಿದೇವ–ಹುಣಸಿ ಹಡಗಲಿ, ಹನುಮಾಕ್ಷಿ ಗೋಗಿ–ಕಲ್ಬುರ್ಗಿ ಜಿಲ್ಲೆಯ ಶಾಸನಗಳು, ೧೯೯೯, ಪು ೨೩೧., ಮಲ್ಲಿಷೇಣಮಲಧಾರಿದೇವ–ಎ.ಕ. ಸಂ–೦೨, ನಂ–೭೭ (೬೭). ಶ್ರವಣಬೆಳಗೊಳ ಕ್ರಿ.ಶ. ೧೧೨೩, ಪು ೪೪.

೩೦೩. ಎ.ಕ. ಸಂ–೦೨, ನಂ–೪೮೪ (೩೫೧) ಶ್ರವಣಬೆಳಗೊಳ ಕ್ರಿ.ಶ. ೧೧೧೯, ಪು ೩೦೪.

೩೦೪. ಬ್ರಹ್ಮಶಿವ–ವೃತ್ತವಿಲಾಸ ಸಂಪುಟ, ಸಮಯ ಪರೀಕ್ಷೆ ಧರ್ಮಪರೀಕ್ಷೆ–(ಸಂ) ಟಿ.ವಿ. ವೆಂಕಟಾಚಲ ಶಾಸ್ತ್ರೀ, ಕೆ. ರಾಘವೇಂದ್ರರಾವ್, ೨೦೦೯, ಪು ೧೨೧.

ತುಱಿಸರ್ ಮಲಮಂ ಧರಿಯಿಪ
ರೊಱಗರ್ ಕುಕ್ಕುಟದ ತೆಱದೆ ಕುಳ್ಳಿರ್ಪರ್ ತಾ
ಮೊಱಗಿರ್ಪರೊಂದೆ ಮಗ್ಗುಲೊ
ಳುಱಿಶಾತ್ರಿಪ್ರತಿಮೆ ನಿಲ್ವರಾರ್ಹತಮುನಿಗಳ್.

೩೦೫. ರವಿಕುಮಾರ ಕೆ.ನವಲಗುಂದ–ಉಪಸರ್ಗ್ಗ, ಪು ೧೭–೧೯.
೩೦೬. ಎ.ಕ.ಸಂ–೦೨, ನಂ–೭೯(೬೯) ಚಿಕ್ಕಬೆಟ್ಟ (ಶ್ರವಣಬೆಳಗೊಳ) ೧೨ನೇ ಶ, ಪು ೫೯.
೩೦೭. ಜಿ. ಬ್ರಹ್ಮಪ್ಪ – ಶ್ರವಣಬೆಳಗೊಳದ ಶಾಸನಗಳು. ೧೯೯೮, ಪು ೨೨–೨೩.
೩೦೮. ಸೌ.ಇ.ಇ.ಸಂ–೧೮, ನಂ–೩೫೧ ಅಕ್ಕೂರು, ೧೨ನೆಯ ಶ, ಪು ೪೪೩.
೩೦೯. ಹನುಮಾಕ್ಷಿ ಗೋಗಿ – ಜಿನಸಮಯ, ಅನುಬಂಧ ಶಾಸನಗಳು ೦೯.
೩೧೦. ರವಿಕುಮಾರ ಕೆ. ನವಲಗುಂದ, ಪೂರ್ವೋಕ್ತ ಪು ೩೮–೩೯.
೩೧೧. ಸೌ.ಇ.ಇ.ಸಂ–೧೮, ನಂ–೧೫೧ ನೇರಲಗಿ ಕ್ರಿ.ಶ. ೧೧೪೮, ಪು. ೧೪೯–೨೦೨., ಹನುಮಾಕ್ಷಿ ಗೋಗಿ–ಅನುಶಾಸನ ೨೦೦೨ ಪು ೩೩೬–೩೪೦.
೩೧೨. ರವಿಕುಮಾರ ಕೆ. ನವಲಗುಂದ, ಪೂರ್ವೋಕ್ತ ಪು ೫೪.
೩೧೩. ಅದೇ, ಪು. ೭೧.
೩೧೪. ಅದೇ, ಪು. ೩೮ ಮತ್ತು ೭೦.
೩೧೫. ಧಾ.ಜಿ.ಶಾ.ಸೂ, ೧೯೭೫, ನಂ.–೨೦೭, ಪು.೬೬.
೩೧೬. ರವಿಕುಮಾರ ಕೆ. ನವಲಗುಂದ, ಪೂರ್ವೋಕ್ತ ಪು ೪೬.
೩೧೭. ಎಂ.ಬಿ.ನೇಗಿನಹಾಳ–ನೇಗಿನಹಾಳ ಪ್ರಬಂಧಗಳು, ೧೯೯೯, ಪು.೪೫೩.
೩೧೮. ಸಂಜಯ ಎನ್. ಹಂಜೆ–ಗೋಕಾಕ್ ಪರಿಸರದಲ್ಲಿ ಜೈನ ಧರ್ಮ, ೨೦೧೬, ಪು ೬೭.
೩೧೯. ರವಿಕುಮಾರ ಕೆ. ನವಲಗುಂದ, ಪೂರ್ವೋಕ್ತ, ಪು ೪೮–೪೯.
೩೨೦. ಎ.ಕ.ಸಂ–೦೨ ನಂ–೭೯ (೬೯) ಚಿಕ್ಕಬೆಟ್ಟ, (ಶ್ರವಣಬೆಳಗೊಳ), ೧೨ನೇ ಶ, ಪು. ೫೮–೫೯.
೩೨೧. ಡಾ.ಬಿ.ಆರ್.ಹಿರೇಮಠ ಶಾಸನ ಅಧ್ಯಯನ, ಪೂರ್ವೋಕ್ತ, ಪು.೫೪–೫೫.
೩೨೨. ಹನುಮಾಕ್ಷಿ ಗೋಗಿ – ಜಿನಸಮಯ, ಪು ೯೬.
೩೨೩. ರವಿಕುಮಾರ ಕೆ. ನವಲಗುಂದ, ಪೂರ್ವೋಕ್ತ, ಪು ೫೫.
೩೨೪. ಸೌ.ಇ.ಇ.ಸಂ–೧೮, ನಂ–೨೫೧ ಹತ್ತಿಮತ್ತೂರು ಕ್ರಿ.ಶ. ೧೫೬೮–೬೯, ಪು ೩೩೭.
೩೨೫. ಅದೇ, ನಂ–೩೭೫ ಮಾಕನೂರು ೧೨–೧೩ನೆಯ ಶ, ಪು. ೪೫೭.
೩೨೬. ರವಿಕುಮಾರ ಕೆ. ನವಲಗುಂದ, ಪೂರ್ವೋಕ್ತ, ಪು ೩೬.
೩೨೭. ಸೌ.ಇ.ಇ.ಸಂ–೧೮, ನಂ–೨೩೮ ನೆಗಳೂರು ಕ್ರಿ.ಶ. ೧೨೫೧, ಪು ೩೧೧.
೩೨೮. ಕ.ಇ. ೦೧, ನಂ–೦೩, ಆಡೂರು ಕ್ರಿ.ಶ. ೭೫೦, ಪು ೦೭–೦೮.
೩೨೯. ರವಿಕುಮಾರ ಕೆ. ನವಲಗುಂದ, ಪೂರ್ವೋಕ್ತ, ಪು ೧೮–೧೯.
೩೩೦. ಕ.ಇ.ಸಂ–೦೧, ನಂ–೦೩, ಆಡೂರು, ಪೂರ್ವೋಕ್ತ, ಪು ೦೭–೦೮.
೩೩೧. ಎಂ.ಬಿ.ನೇಗಿನಹಾಳ, ಪೂರ್ವೋಕ್ತ, ಪು ೪೫೦.
೩೩೨. ಅದೇ, ಪು ೪೫೦–೪೫೩.
೩೩೩. ಚೆನ್ನಕ್ಕ ಎಲಿಗಾರ–ಬಂಕಾಪುರ ಶೋಧನ, ೧೯೯೦, ಪು ೦೩.
೩೩೪. ಸೌ.ಇ.ಇ..ಸಂ–೧೧, ನಂ–೩೪ ಅಸುಂಡಿ ಕ್ರಿ.ಶ.೯೨೫, ಪು.೨೦.
೩೩೫. ಎ.ಕ.ಸಂ–೦೨, ನಂ–೪೭೬ (೩೪೫) ಶ್ರವಣಬೆಳಗೊಳ, ಕ್ರಿ.ಶ.೧೧೫೯, ಪು ೨೮೯.
೩೩೬. ಚೆನ್ನಕ್ಕ ಎಲಿಗಾರ, ಪೂರ್ವೋಕ್ತ, ಪು ೬೫.
೩೩೭. ಅಪ್ಪಣ್ಣ ಎನ್. ಹಂಜೆ–ಸಮವಸರಣ, ೨೦೧೫, ಪು ೧೫೧.
೩೩೮. ವಾಸುದೇವ ಬಡಿಗೇರ (ಸಂ)–ಹಾನಗಲ್ಲು, ೨೦೦೮, ೯೫
೩೩೯. ರವಿಕುಮಾರ ಕೆ. ನವಲಗುಂದ, ಪೂರ್ವೋಕ್ತ. ಪು ೮೨.
೩೪೦. ಧಾ.ಜಿ.ಶಾ.ಸೂ, ೧೯೭೫, ನಂ.–೨೧೪, ಪು.೪೮.
೩೪೧. ಸೌ.ಇ.ಇ.ಸಂ–೧೮, ನಂ–೩೯೦ ಹಾವೇರಿ ೧೩ನೇ ಶ., ಪು ೪೬೮.
೩೪೨. ಅದೇ, ನಂ–೨೭೪ ಸಂಗೂರು, ಕ್ರಿ.ಶ.೧೯೯೬ ಪು ೩೫೪–೩೫೭.
೩೪೩. ರವಿಕುಮಾರ ಕೆ. ನವಲಗುಂದ, ಪೂರ್ವೋಕ್ತ. ಪು ೮೦.
೩೪೪. ಸೌ.ಇ.ಇ.ಸಂ–೧೮, ನಂ–೨೩೮ ನೆಗಳೂರು ಕ್ರಿ.ಶ. ೧೨೫೧, ಪು ೩೧೧.
೩೪೫. ಅಪ್ಪಣ್ಣ ಎನ್. ಹಂಜೆ–ಅರಟಾಳದ ಪಾರ್ಶ್ವನಾಥ ಜಿನಾಲಯ ವಾಸ್ತು–ಶಿಲ್ಪ–ಶಾಸನ, ೨೦೦೫, ಪು ೧೫–೧೯.
೩೪೬. ಅದೇ ಪು ೨೪.
೩೪೭. ರವಿಕುಮಾರ ಕೆ. ನವಲಗುಂದ, ಪೂರ್ವೋಕ್ತ. ಪು ೩೬.
೩೪೮. ಗೋವಿಂದಮೂರ್ತಿ ದೇಸಾಯಿ–ಸವಣೂರು ನವಾಬರು, ೧೯೯೦, ಪು. ೦೯–೧೦
೩೪೯. ರವಿಕುಮಾರ ಕೆ. ನವಲಗುಂದ, ಪೂರ್ವೋಕ್ತ. ಪು ೪೩,೪೪,೫೫.
೩೫೦. ಸೌ.ಇ.ಇ.ಸಂ–೧೮, ನಂ–೧೨೪ ಹೊನ್ನತ್ತಿ ಕ್ರಿ.ಶ. ೧೧೨೪, ಪು ೧೫೨.

೩೫೧. ರವಿಕುಮಾರ ಕೆ. ನವಲಗುಂದ, ಪೂರ್ವೋಕ್ತ. ಪು ೩೮-೩೯.
೩೫೨. ಅದೇ, ಪು ೧೦೨-೧೦೭.
೩೫೩. ಸೌ.ಇ.ಇ.ಸಂ-೧೮, ನಂ-೧೮೩ ನದಿಹರಳಹಳ್ಳಿ ಕ್ರಿ.ಶ. ೧೧೭೨, ಪು ೨೫೧-೨೫೨.
೩೫೪. ದೇವಾಲಯ ಕೋಶ - ಹಾವೇರಿ ಜಿಲ್ಲೆ, ನದಿಹರಳಹಳ್ಳಿ, ಪು ೪೪.
೩೫೫. ಸೌ.ಇ.ಇ.ಸಂ-೧೮, ನಂ-೩೪೪ ಕಾಗಿನೆಲೆ ಕ್ರಿ.ಶ. ೧೦೬೬, ಪು ೬೫-೬೭.
೩೫೬. ಅದೇ. ನಂ-೭೧, ಮೋಟೆಬೆನ್ನೂರು, ಕ್ರಿ.ಶ.೧೦೬೬ ಪು ೬೫-೬೭.
೩೫೭. ಅದೇ. ನಂ-೩೨೭, ಮೋಟೆಬೆನ್ನೂರು, ೧೦ನೇ ಶ, ಪು ೪೨೪-೪೨೫.
೩೫೮. ರವಿಕುಮಾರ ಕೆ. ನವಲಗುಂದ, ಪೂರ್ವೋಕ್ತ. ಪು ೫೧,೬೮-೭೩.
೩೫೯. ಕ.ಇ.ಸಂ-೦೬ ನಂ-೪೯ ಹಿರೇಕೊಣತಿ ಕ್ರಿ.ಶ.೧೨೭೧, ಪು ೧೪೮.
೩೬೦. ರವಿಕುಮಾರ ಕೆ. ನವಲಗುಂದ, ಪೂರ್ವೋಕ್ತ. ಪು ೪೮-೪೯.
೩೬೧. ಕ.ಇ.ಸಂ-೦೬ ನಂ-೪೯ ಹಿರೇಕೊಣತಿ ಪೂರ್ವೋಕ್ತ. ಕ್ರಿ.ಶ.೧೨೭೧ ಪು.೧೪೮ ಮತ್ತು ಅದೇ ನಂ-೫೦ ಕ್ರಿ.ಶ.೧೨೭೮, ಪು ೧೪೯.
೩೬೨. ಎನ್.ಬಸವಾರಾಧ್ಯ (ಸಂ)-ಶಾಂತನಿರಂಜನ ವಿರಚಿತ ಅಬ್ಬಲೂರು ಚರಿತೆ, ೧೯೭೩ ಪು. ೧೧೪-೧೨೪.
೩೬೩. ಅದೇ, ಪು ೧೩೬.
೩೬೪. ನಾಗರಾಜ ಕೆ.ನವಲಗುಂದ-ಉತ್ತರ ಕರ್ನಾಟಕದ ಜೈನ ವಾಡೆಗಳು (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ೨೦೧೬, ಪು ೨೪೨.
೩೬೫. ಎನ್.ಬಸವಾರಾಧ್ಯ, ಪೂರ್ವೋಕ್ತ, ಪು ೯೩.
೩೬೬. ಅದೇ, ಪು ೧೨೧.

## ಅಧ್ಯಾಯ-೦೩.

## ಜೈನ ಶಾಸನಗಳ ಅಧ್ಯಯನ.

**ಅ. ಶಾಸನಗಳ ಪ್ರಸರಣ.**

೦೧. ಆರ್ಥಿಕತೆ. ೦೨. ರಾಜಕೀಯ. ೦೩. ಧಾರ್ಮಿಕತೆ. ೦೪. ನೈಸರ್ಗಿಕತೆ.

**ಆ.. ಶಾಸನಗಳ ವಿಂಗಡಣೆ.**

೦೧. ವಸ್ತು ಆಧಾರಿತ ವಿಂಗಡಣೆ.

೧.೧ ತಾಮ್ರ.೧.೨ ಶಿಲೆ.

೦೨. ವಂಶಾಧಾರಿತ ವಿಂಗಡಣೆ.

೦೩. ವಿಷಯಾಧಾರಿತ ವಿಂಗಡಣೆ.

೩.೧ ದಾನ.

೦೧. ಮುನಿಸಂಘಗಳಿಗೆ ದಾನ.

೦೨. ಆಹಾರ ದಾನ.

೦೩. ಶಾಸ್ತ್ರದಾನ.

೦೪. ಚೈತ್ಯ ದತ್ತಿ.

೦೫. ಅಂಗಭೋಗ ರಂಗಭೋಗ ದಾನ.

೦೬. ಇತರೆ ದಾನಗಳು.

೦೭. ಜಿನಾಲಯಗಳ ಜೀರ್ಣೋದ್ಧಾರಕ್ಕೆ ದಾನ.

೩.೨ ಮರಣ.

೩.೨.೧ ಸಾವನ್ನು ಆಹ್ವಾನಿಸುವ ವಿಧಾನಗಳು.

೦೧. ಅಷ್ಟವಿಧಾರ್ಚನೆ.

೦೨. ಪಂಚಪದ.

೦೩. ಸಂನ್ಯಸನ ವಿಧಾನ.

೦೪. ಸಮಾಧಿ ವಿಧಾನ.

**ಇ. ಶಾಸನಗಳ ಸಾಹಿತ್ಯ ಅಧ್ಯಯನ.**

೦೧. ವರ್ಣನೆಗಳು.

ಅ. ಪ್ರಕೃತಿ ವರ್ಣನೆ.

೦೧. ನೆಲ. ೦೨. ಜಲ. ೦೩. ಸಸ್ಯ.

೦೪. ಬೆಟ್ಟಗುಡ್ಡ, ಪರ್ವತ. ೦೫. ಇತರೆ.

ಬ. ವ್ಯಕ್ತಿವರ್ಣನೆ.

೦೧. ಸ್ತ್ರೀವರ್ಣನೆ. ೦೨. ಪುರುಷ ವರ್ಣನೆ.

ಕ. ಸ್ಥಳವರ್ಣನೆ.

೦೧. ದೇಶ. ೦೨. ನಾಡು. ೦೩. ಕಂಪಣ. ೦೪. ಗ್ರಾಮ ವರ್ಣನೆ.

೦೨. ಶಾಸನ ಛಂದಸ್ಸು.

ಅ. ಕಂದ.

ಬ. ಖ್ಯಾತ ಕರ್ಣಾಟಕ ವೃತ್ತಗಳು.

೦೧. ಚಂಪಕಮಾಲಾ ವೃತ್ತ. ೦೨. ಉತ್ಪಲಮಾಲಾ ವೃತ್ತ.

೦೩. ಮತ್ತೇಭ ವಿಕ್ರೀಢಿತ ವೃತ್ತ. ೦೪. ಮಹಾಸ್ರಗ್ಧರಾ ವೃತ್ತ.

ಕ. ಗದ್ಯ.

ಡ. ಪ್ರಾಸಗಳು.

ಗ. ಅಲಂಕಾರಗಳು.

೦೧. ರೂಪಕ ಅಲಂಕಾರಗಳು.

೦೨. ಉಪಮಾಲಂಕಾರ.

೨.೧ ಪೂರ್ಣೋಪಮಾಲಂಕಾರ. ೨.೨ ಲುಪ್ತೋಮಾಲಂಕಾರ.

೨.೩ ಶ್ಲೇಷಾಲಂಕಾರ.

೦೩. ಪ್ರಶಸ್ತಿ ಭಾಗ.

೦೧. ರಾಜಪ್ರಶಸ್ತಿ.

೦೪. ಕಾಲದ ಉಲ್ಲೇಖ.

೦೧. ಕಾಲಗಣನೆ. ೦೨. ಶಕವರ್ಷ. ೦೩. ಅಬ್ದ ಶಾಲಿವಾಹನ ಶಕೆ ವರ್ಷ.

೦೪. ಚಾಳುಕ್ಯ ವಿಕ್ರಮ ಶಕೆ. ೦೫. ಸೆವುಣರ ಶಾಸನಗಳ ಶಕವರ್ಷ.

೦೬. ಸಂವತ್ಸರಗಳು. ೦೭. ಮಾಸ. ೦೮. ಪಕ್ಷ. ೦೯. ಗ್ರಹಣ. ೧೦. ಅಮವಾಸೆ.

೧೧. ಹುಣ್ಣಿಮೆ. ೧೨. ಇತರೆ. ೧೩. ತಿಥಿ.

೦೫. ಶಾಪಾಶಯಗಳು.

೦೧. ಜೈನ ಶಾಪೋಕ್ತಿಗಳು.

೦೬. ಶಾಸನ ಕವಿಗಳು ಮತ್ತು ರೂವಾರಿಗಳು.

ಅ. ಕವಿಗಳು.

೦೧. ಧಾಮಕೀರ್ತಿ. ೦೨. ನರವರ. ೦೩. ಅನಾಮಿಕ ಕವಿ.

೦೪. ಮೂಕಣ್ಣರಿಷ್ವೇಣ. ೦೫. ಶಾಂತಿರಾಜ.

ಬ. ಲಿಪಕಾರರು.

೧. ಮಾದೋರ.

೨. ಕುನ್ದಮಯ್ಯ.

೩. ಸಾಕ್ಷರ ತಿಳಕ ಶಂಕಣಾರ್ಯ್ಯ.

೪. ಸಂಗರೇಂದ್ರ.

ಕ. ರೂವಾರಿಗಳು.

೦೧. ಕಿಱುಗುಡ್ಡ. ೦೨. ಬಮ್ಮೋಜ. ೦೩. ದೇವರಾಸಿ.

೦೪. ಗೋಸೋಜ. ೦೫. ಚೌಡೋಜ.

**ಈ. ಜೈನ ಶಾಸನಶಿಲ್ಪ.**

ಅ. ದಾನಶಾಸನಶಿಲ್ಪ.

೦೧. ರಾಜ್ಯಸ್ವ ಪ್ರಧಾನ ದಾನ ಶಾಸನಶಿಲ್ಪ.

೦೨. ಧಾರ್ಮಿಪ್ರಧಾನ ದಾನ ಶಾಸನಶಿಲ್ಪ.

೦೩. ಘಟನಾ ಪ್ರಧಾನ ದಾನ ಶಾಸನಶಿಲ್ಪ.

೦೪. ಲಾಂಛನ ಪ್ರಧಾನ ದಾನ ಶಾಸನಶಿಲ್ಪ.

ಬ. ನಿಸಿಧಿ ಶಾಸನಶಿಲ್ಪ.

೦೧. ಪಾದಗಳ ವಿನ್ಯಾಸ ನಿಸಿಧಿಗಳು.

೦೨. ಫಲಕದ ಆಕಾರದ ನಿಸಿಧಿಗಳು.

ಅ. ಒಂದು ಹಂತಗಳ ನಿಸಿಧಿಶಿಲ್ಪ.

೦೧. ಮುನಿಗಳ ನಿಸಿಧಿಶಿಲ್ಪ. ೦೨. ಶ್ರಾವಕರ ನಿಸಿಧಿಶಿಲ್ಪ.

ಆ. ಎರಡು ಹಂತಗಳ ನಿಸಿಧಿಶಿಲ್ಪ.

೦೧. ಮುನಿ ನಿಸಿಧಿಶಿಲ್ಪ. ೦೨. ಶ್ರಾವಕರ ನಿಸಿಧಿಶಿಲ್ಪ.

ಇ. ಮೂರು ಹಂತಗಳ ನಿಸಿಧಿಶಿಲ್ಪ.

೦೧. ಕಂಭದ ಆಕಾರದ ನಿಸಿಧಿಶಿಲ್ಪಗಳು. ೦೨. ವೀರಗಲ್ಲುಗಳು ಹಾಗೂ ಇತರೆ ಸ್ಮಾರಕ ಶಿಲ್ಪಗಳು.

# ಅಧ್ಯಾಯ-೦೩.

## ಜೈನ ಶಾಸನಗಳ ಅಧ್ಯಯನ.

ಸಂಶೋಧನೆ ಎಂಬುವುದು ಹಲವು ಆಯಾಮಗಳ ಜ್ಞಾನ ಗ್ರಹಿಕೆಯ ದಾಖಲಿಕರಣ. ಬೌದ್ಧಿಕ ಮತ್ತು ಭೌತಿಕ ಎಂಬ ಎರಡು ಕವಲುಗಳಲ್ಲಿ ಇದು ಸಾಗುತ್ತದೆ. ಸೃಜನಪರಂಪರೆಯ ಬರೆಹಗಳು ಬೌದ್ಧಿಕ ಅಧ್ಯಯನದ ಫಲಶೃತಿಗಳಾದರೆ; ಪ್ರಾಚೀನ ಸ್ಮಾರಕಗಳಾದ ಕೋಟೆಗಳು, ಶಿಲ್ಪಗಳು, ದೇವತಾ ತಾಣಗಳು, ನಾಣ್ಯಗಳು, ಸಮಾಧಿಗಳು, ಅರಮನೆಗಳು, ಅವಶೇಷಗಳು, ಶಾಸನಗಳು ಇತ್ಯಾದಿಗಳು ಭೌತಿಕ ಅಧ್ಯಯನದ ಫಲಿತಗಳು. ಈ ಎರಡೂ ಜ್ಞಾನ ಪರಂಪರೆಯ ವಿಸ್ತೀರ್ಣ ದೊಡ್ಡದು. ಇವುಗಳ ಬಗ್ಗೆ ಇದುವರೆಗೂ ಸಾಕಷ್ಟು ಅಧ್ಯಯನ ನಡೆದಿವೆ. ಕಳೆದ ನಾಲ್ಕು ದಶಕಗಳಿಂದ ಶಾಸನಗಳ ಬಗ್ಗೆ ಹೆಚ್ಚು ಅಧ್ಯಯನಗಳು ಹೊರಬರುತ್ತಿರುವುದು ಗಮನಾರ್ಹ. ಭೌತಿಕ ಪರಂಪರೆಯ ಶಾಸನಗಳು ಬೌದ್ಧಿಕ ರಚನೆಗಳೆಂಬುದರಲ್ಲಿ ಅನುಮಾನವಿಲ್ಲ. ಬೌದ್ಧಿಕ ವಿಕಸನದ ಫಲಿತಗಳೇ ಶಾಸನಗಳು. ಕನ್ನಡ ಸಂಸ್ಕೃತಿಯನ್ನು ಕಟ್ಟಿಕೊಡುವಲ್ಲಿ ಇವುಗಳ ಪಾತ್ರ ಅನನ್ಯ.

ಶಾಸನಗಳು ಆಯಾ ಪ್ರಾದೇಶಿಕ ಪರಿಸರದ ತಾಯ್‌ಬೇರುಗಳು. ಇದು ಇಡೀ ಕನ್ನಡ ಸಂಸ್ಕೃತಿಗೂ ಅನ್ವಯವಾಗುತ್ತದೆ. ಒಂದು ಸಂಸ್ಕೃತಿಯ ಆರಂಭದ ಚರಿತ್ರೆ ಕಟ್ಟಿಕೊಡುವಲ್ಲಿ ಮೊದಲ ಸ್ಥಾನ ಮೌಖಿಕ ಪರಂಪರೆ (ಜನಪದ ಸಾಹಿತ್ಯ)ಗೆ ಲಭ್ಯವಾದರೆ; ನಂತರದ ಸ್ಥಾನವನ್ನು ಶಾಸನಗಳು ಪಡೆದುಕೊಳ್ಳುತ್ತವೆ. ಬೌದ್ಧಿಕ ಪರಂಪರೆ ಭೌತಿಕ ರೂಪಗಳಾದ ಶಾಸನಗಳನ್ನು ಲಿಖಿತ ಪರಂಪರೆಯ ಮೊದಲ ಆಕರಗಳೆಂದೇ ಪರಿಗಣಿಸಬೇಕು. ಕರ್ನಾಟಕದಲ್ಲಿ ಕನ್ನಡ ಕಾವ್ಯ ಕೃತಿಗಳು ಮೈದಾಳುವ ಮುನ್ನವೇ ಶಾಸನಗಳು ಒಡಮೂಡಿದ್ದವು. ಕ್ರಿ.ಶ. ೪೫೦ರ ಹಲ್ಮಿಡಿ ಶಾಸನದಲ್ಲಿ ಪುಟ್ಟದಾಗಿಟ್ಟ ಕನ್ನಡ ಪದಪುಂಜಗಳು ಕನ್ನಡ ಲಿಖಿತ ಪರಂಪರೆಗೆ ಮುನ್ನೆಲೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಸದ್ಯ ಈ ಕೀರ್ತಿಯನ್ನು ಸು ೩೫೦-೪೫೦ರ ಅವಧಿಯಲ್ಲಿ ರಚಿತವಾಗಿತ್ತು ಎನ್ನಲಾದ ತಾಳಗುಂದದ ಸಿಂಹ ಕಟಾಂಜನ ಶಾಸನ ಪಡೆಯುವ ಸ್ಪಷ್ಟ ಲಕ್ಷಣಗಳು ಎದ್ದು ತೋರುತ್ತಿವೆ. ಈ ಹಿಂದೆ ಇದ್ದ ಮತ್ತು ಪ್ರಚಲಿತದಲ್ಲಿದ್ದ ಪ್ರಾಕೃತ ಮತ್ತು ಸಂಸ್ಕೃತ ಬರಹದ ಭಾಷಾ ಸಂಸ್ಕೃತಿಯ ನಡುವಣ ಕನ್ನಡ ಬರೆಹ ಉಗಮಗೊಂಡಿದ್ದು ಆ ಭಾಷೆಗಿರುವ ಅಂತಸತ್ವದಿಂದ ಎಂಬುದನ್ನು ಮನಗಾಣಬೇಕು.

ಮೌರ್ಯ ವಂಶದ ಸಾಮ್ರಾಟ ಅಶೋಕ ಹಾಕಿಸಿದ ಧಮ್ಮ ಬರೆಹಗಳು ಕನ್ನಡ ಪರಿಸರದ ಮೊದಲ ಶಾಸನಗಳು. ಇವುಗಳ ಭಾಷೆ ಪ್ರಾಕೃತವಾದರೆ; ಲಿಪಿ ಬ್ರಾಹ್ಮಿ. ಕ್ರಿ.ಪೂ. ೩ನೆಯ ಶತಮಾನದ ಕೊಪ್ಪಳದ ಗವಿಮಠ ಶಾಸನ, ಬ್ರಹ್ಮಗಿರಿಯ ಶಾಸನಗಳಲ್ಲಿ ಈ ವೈವಿಧ್ಯತೆಯನ್ನು ಕಾಣಬಹುದು. ಅಶೋಕ ಕರ್ನಾಟಕಕ್ಕೆ ಕೊಟ್ಟ ದೊಡ್ಡ ಕೊಡುಗೆಯೇ ಬ್ರಾಹ್ಮಿ ಲಿಪಿ. ಈ ಲಿಪಿಯಿಂದಲೇ ಕನ್ನಡ ಭಾಷೆ ತನಗೊಂದು ಸ್ವತಂತ್ರ ಕನ್ನಡ ಲಿಪಿಯನ್ನು ಕಂಡುಕೊಂಡಿತು. ಕನ್ನಡ

ಲಿಪಿಯು ಸಂಸ್ಕೃತ ಶಾಸನಗಳಲ್ಲೂ ಬಳಕೆಯಾಗಿ ಬನವಾಸಿ ಕದಂಬರ ಕಾಲಕ್ಕೆ ಕನ್ನಡ ಭಾಷೆಯನ್ನು ತನ್ನೊಡಲಲ್ಲಿ ಹುದುಗಿಸಿಕೊಂಡಿತು. ಹಲ್ಮಿಡಿ ಶಾಸನದಲ್ಲಿ ಬಳಕೆಯಾದ ಬಾಳ್ಗಚ್ಚು, ಕೊಟಾರ್, ಇರ್ವ್ವರುಂ, ವಿಟ್ಟಾರ್ ಇತ್ಯಾದಿ ಪದಗಳು ಕನ್ನಡ ರೂಪಗಳು. ತದನಂತರದಲ್ಲಿ ಕದಂಬರು, ಚಲುಕ್ಯ, ರಾಷ್ಟ್ರಕೂಟರ ಸಂಸ್ಕೃತ ಶಾಸನಗಳಲ್ಲಿ ಕಾಣಿಸಿಕೊಳ್ಳತೊಡಗಿದ ಕನ್ನಡ ಭಾಷೆ ಕಲ್ಯಾಣ ಚಾಳುಕ್ಯರ ಕಾಲಾವಧಿಯಲ್ಲಿ ಶ್ಲೋಕ ಶಾಪಾಶಯಗಳನ್ನು ಹೊರತುಪಡಿಸಿ ಪೂರ್ಣ ಪ್ರಮಾಣದ ಶಾಸನಭಾಷೆಯಾಗತೊಡಗಿತು. ಹೊಯ್ಸಳ, ಸೇವುಣ, ವಿಜಯನಗರ, ಮೈಸೂರು ಅರಸರ ಶಾಸನಗಳಲ್ಲಂತೂ ಕನ್ನಡದ್ದೇ ಪಾರುಪತ್ಯ.

ಆರಂಭದಲ್ಲಿ ರಾಜರ ಆಜ್ಞೆಗಳಾಗಿದ್ದ ಶಾಸನಗಳು ಕ್ರಮೇಣ ತಮ್ಮ ಕಾರ್ಯಭೂಮಿಕೆಯನ್ನು ವಿಸ್ತರಿಸಿಕೊಳ್ಳತೊಡಗಿದವು. ದೇವತಾ ಸ್ಮಾರಕಗಳನ್ನು ನಿರ್ಮಿಸಿದ ಕುರುಹಾಗಿ, ದಾನ ಕೊಟ್ಟಿದ್ದರ ಗುರುತಾಗಿ, ಯುದ್ಧದಲ್ಲಿ ಹೋರಾಡಿ ಗೆದ್ದ ಮಡಿದ ವೀರರ ಕೀರ್ತಿ ಪತಾಕೆಯ ಬೀರಗಲ್ಲುಗಳಾಗಿ, ಧಾರ್ಮಿಕ ವಿಧಿ-ವಿಧಾನಗಳ ಮೂಲಕ ಪ್ರಾಣತ್ಯಾಗ ಮಾಡಿದವರ ನಿಸಿಧಿಗಳಾಗಿ ಹೀಗೆ ವಿವಿಧ ವಿಷಯಗಳ ನಿರೂಪಗಲ್ಲಾಗಿ ಕರ್ನಾಟಕದ ಉದ್ದಗಲಕ್ಕೂ ಶಾಸನಗಳು ಹರಡಿಕೊಂಡಿವೆ. ನಾಗರೀಕತೆ ಹಬ್ಬಿದಂತೆ ಶಾಸನಗಳ ವಿಷಯಖಂಡಿಕೆ ಬದಲಾದದ್ದೂ ಸಹಜ. ಅಂತೆಯೇ ಶಾಸನಗಳಲ್ಲಿ ವೈವಿಧ್ಯತೆಯನ್ನು ಕಾಣುತ್ತೇವೆ. ಲಿಪಿ ವಿಕಾಸ, ಭಾಷೆ, ಸಾಹಿತ್ಯ, ವಿಷಯ ನಿರೂಪಣೆ, ಸಂಸ್ಕೃತಿಯ ಅನಾವರಣ, ಶಾಸನಕ್ಕೆ ಬಳಸಿದ ಕಲ್ಲುಗಳು, ಅಕ್ಷರ ಅರಿಯದವರಿಗೆ ಶಿಲ್ಪಗಳ ಕೆತ್ತನೆ ಹೀಗೆ ಒಂದು ದೊಡ್ಡ ಸಂಸ್ಕೃತಿಯ ಅನಾವರಣ ಎಂಬಂತೆ ಶಾಸನಗಳು ಬಿಂಬಿತವಾಗತೊಡಗಿದುವು. ರಾಜಾವಳಿ, ಪ್ರಶಸ್ತಿ, ದಂಡಯಾತ್ರೆ, ಸಾಹಸ, ಪುರಾಣ, ಐತಿಹ್ಯ, ಧರ್ಮ, ಸಾವು, ವೀರ, ತ್ಯಾಗ, ಸಾಹಿತ್ಯ, ಸಮಕಾಲೀನ ಸಂಸ್ಕೃತಿ, ವ್ಯಾಪಾರ, ನಾಣ್ಯ, ಅಳತೆ, ಕೃಷಿ, ತೋಟ, ಗದ್ದೆ, ಗೃಹ ಕೈಗಾರಿಕೆ, ಧರ್ಮಕಲಹ, ದೇವತಾ ಸ್ಮಾರಕಗಳ ನಿರ್ಮಿತಿ, ದಾನ, ದಿಕ್ಕು, ಶಾಪ, ಪುಣ್ಯಕ್ಷೇತ್ರಗಳು, ನದಿಗಳು, ಪ್ರಕೃತಿ, ಗಡಿಗಳು, ಗ್ರಾಮಗಳು, ಕ್ರಿಮಿ, ಹೂ, ಕೆರೆ, ಕಟ್ಟೆ, ಸುಂಕ, ಧಾನ್ಯ, ಅಧಿಕಾರಿವರ್ಗ, ಗೌಡ, ಮುನಿ, ಕಾಲ, ವಾರ, ಮಾಸ, ತಿಥಿ, ಪಕ್ಷ, ಗ್ರಹಣ ಇತ್ಯಾದಿ ಅಂಶಗಳನ್ನು ಹೊತ್ತ ಶಾಸಗಳು ಒಂದು ನಾಡಿನ ಸಂಸ್ಕೃತಿಯ ಬಹುದೊಡ್ಡ ರಾಯಭಾರಿಗಳು ಎಂಬುದರಲ್ಲಿ ಸಂದೇಹವೇ ಇಲ್ಲ. ಆದ್ದರಿಂದಲೇ ನಾಡಿನ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಶಾಸನಗಳು ಮೂಲ ಮತ್ತು ನಿಖರ ಆಧಾರಗಳಾಗುತ್ತವೆ.

ಶಾಸನಗಳಲ್ಲಿ ಕೆಲವೊಂದು ತಪ್ಪುಗಳು, ಸುಳ್ಳುಗಳು, ಐತಿಹ್ಯಗಳು, ಪುರಾಣಗಳು, ಅತಿಶಯಗಳೂ ನುಸುಳಿದ್ದುಂಟು, ಮುಖ್ಯವಾಗಿ ರಾಜಸತ್ತೆಯ ಆನುಪೂರ್ವಿಗಳ ಚರಿತ್ರೆಯಲ್ಲಿ ಈ ಪ್ರಮಾದಗಳು ಎದ್ದು ತೋರುತ್ತವೆ. ಬಾದಾಮಿಯ ಚಲುಕ್ಯರು, ಹೊಯ್ಸಳರು, ಗುತ್ತಲದ ಗುತ್ತರು ತಾವು ಔತ್ತರೇಯದವರು ಎಂದು ಶಾಸನಗಳಲ್ಲಿ ಬಿಂಬಿಸಿಕೊಳ್ಳುತ್ತಾರೆ. ಗುತ್ತರಂತೂ ತಮ್ಮನ್ನು "ಉಜ್ಜೀನೀ ಮಹಾಕಾಳ ದೇವತಾಲಬ್ಧವರಪ್ರಸಾದ"ರು, 'ಚಂದ್ರಗುಪ್ತಾನ್ವಯ'[೧೧]ದವರೆಂದೇ

ಕರೆದುಕೊಳ್ಳುತ್ತಾರೆ. ಇವರು ಗುಪ್ತರ ವಂಶಸ್ಥರು, ಚಂದ್ರಗುಪ್ತ ಮೌರ್ಯನ ವಂಶಸ್ಥರು ಎಂಬಿತ್ಯಾದಿ ಚರ್ಚೆಗಳೂ ಆಗಿವೆ.[೦೨] ಆದರೆ ಇವರೊಬ್ಬ ಸ್ಥಳೀಯ ಅರಸರೆಂಬುದೆ ದಿಟವಾಗುತ್ತದೆ. ಇನ್ನು ಸ್ಥಳೀಯ ಜನಾಂಗಕ್ಕೆ ಸೇರಿದ ಚಲುಕ್ಯರು ತಾವು ಅಯೋಧ್ಯೆಯಿಂದ ಬಂದವರು ಎಂಬುದು ತದನಂತರ ಸೇರಿದ ದಂತಕತೆ. ರಾಜಾಧೀನನಾದ ಶಾಸನಕವಿ ಅವರ ಆದೇಶದ ಮೇರೆಗೆ ಈ ರೀತಿ ಕಥೆ ಹೆಣೆದಿರಬಹುದು. ಅಥವಾ ಬಹುಮಾನ ಆಸೆಗಾಗಿಯೋ, ಹೊಗಳಿಕೆಗಾಗಿಯೋ ಕವಿ ಮಾಡಿದ ತಂತ್ರಗಾರಿಕೆಯೂ ನುಸುಳಿರಬಹುದು. ಉತ್ತರ ಕರ್ನಾಟಕದಲ್ಲಿ ಈಗಲೂ ಹೇಳುವವರು (ಹೆಳವರು) ಎಂಬ ಜನಾಂಗವೊಂದಿದೆ. ಇವರು ಒಂದು ಇಡೀ ಮನೆತನದ ವಂಶಾವಳಿಯನ್ನು ಜತನದಿಂದ ಕಾಪಾಡಿಕೊಂಡು ಬಂದಿರುತ್ತಾರೆ. ಒಂದು ಮನೆತನದ ಮೂಲವನ್ನು ಕೇಳಿದಾಗ "ನೀವು ರಾಜನಮನೆತನಕ್ಕೆ ಸೇರಿದವರು ಮುಸಲ್ಮಾನರ ದಾಳಿಯಿಂದ ತಪ್ಪಿಸಿಕೊಂಡು ಬಂದು ಈ ಊರು ಸೇರಿದ್ದೀರಿ ಎನ್ನುವರು" ಹೇಳವರ ದಾಖಲೆಗಳಲ್ಲಿ ಪ್ರತಿಯೊಂದು ಮನೆತನದ ಮೂಲ ರಾಜತ್ವದಿಂದ ಶುರುವಾಗುತ್ತದೆ. ಯಜಮಾನ ತಮ್ಮ ಆನುಪೂರ್ವಿಗಳ ಬಗ್ಗೆ ಹೆಮ್ಮೆಗೊಂಡು ತಮಗೆ ಬಹುಮಾನ ಕೊಡುವರು ಎಂದು ಹೀಗೆ ಮಾಡಲಾಗಿರುತ್ತದೆ. ಇದು ಕೇವಲ ಉತ್ಪ್ರೇಕ್ಷೆಯಷ್ಟೇ. ಮೂಲ ಕಥೆಯನ್ನು ಹೊರತುಪಡಿಸಿದರೆ ಉಳಿದ ಹೆಳವರ ದಾಖಲೆಗಳ ನೈಜವಾಗಿರುತ್ತವೆ. ಹೀಗೆಯೇ ಶಾಸನ ಕವಿಗಳು ರಾಜಾವಳಿ ಆನುಪೂರ್ವಿಗಳನ್ನು ಉತ್ತರಕ್ಕೆ ಅಂಟಿಸಿದ್ದು ಸಹಜವೇ ಆಗಿದೆ. "ದಕ್ಷಿಣ ಭಾರತದ ರಾಜವಂಶಗಳಿಗೆ ಔತ್ತರೇಯ ಮೂಲವನ್ನು ಸೂಚಿಸುವ ಕತೆಗಳನ್ನು ಕಟ್ಟಿಸುವುದು ಒಂದು ಚಟವಾಗಿತ್ತು"[೦೩]

ಶಾಸನಗಳಲ್ಲಿ ಐತಿಹ್ಯಗಳು ನುಸುಳಿದ್ದು ಸಹ ಕಂಡುಬರುತ್ತವೆ. ಸ್ಥಳೀಯ ಪರಿಸರದ ಇತಿಹಾಸವನ್ನು 'ರಾಮಾಯಣ', 'ಮಹಾಭಾರತ' ದ ಕಥೆಗೆ ತಗಳ್ಚುವ ಪ್ರಕ್ರಿಯೆ ಅಲ್ಲಲ್ಲಿ ಪ್ರಚಲಿತದಲ್ಲಿವೆ. ಈ ಮೂಲಕ ತಮ್ಮ ಊರು ಈ ಎರಡು ಮಹಾಕಾವ್ಯಗಳಷ್ಟು ಹಳೆಯದೆಂಬ ಪ್ರತಿಷ್ಠೆ ಇಂಥಹ ಕೆಲಸ ಮಾಡಿಸಿರುತ್ತದೆ. "ಹರಿವ ನೀರ್ಗ್ಗೆಯಡ್ಡಂ ಬರಲುರಗಂ ಕಂಡು ನಳನದಂ ಕಟ್ಟಿಸೆ ನಿರ್ಬ್ಭರದಿಂ ಹಾವೇರಿಯೆನಲು ಪರಮಾರ್ತ್ಥಂ ನಾಮಮಾದುದಾ ಕ್ರಿತಯುಗದೊಳು ಅನ್ತು ನಳಚಕ್ರವರ್ತ್ತಿ ಮಾಡಿದ ಹಿರಿಯ ಕೆಱಗೆ"[೦೪] ಎಂಬಲ್ಲಿ ಹಾವೇರಿ ಎಂಬ ನಾಮವನ್ನು ನಳಚಕ್ರವರ್ತಿ ಇಟ್ಟ ಎಂದು ಒಕ್ಕಾಣಿಸಲಾಗಿದೆ. ನಳಚಕ್ರವರ್ತ್ತಿ ಇಲ್ಲಿ ಬಂದಿದ್ದಕ್ಕೆ ಯಾವ ಆಧಾರಗಳು ದೊರೆಯವು. ಇದು ಒಂದು ಐತಿಹ್ಯವಷ್ಟೆ. ಅತೀಯಾದ ರಾಜಸ್ವದ ವರ್ಣನೆ, ಐತಿಹ್ಯ ಪುರಾಣಗಳ ವಿಲೀನತೆಯನ್ನು ಹೊರತುಪಡಿಸಿದರೆ ಶಾಸನಗಳ ಸಂಸ್ಕೃತಿಯ ಮೂಲಾಧಾರಗಳು ಎನ್ನುವುದರಲ್ಲಿ ಅನುಮಾನವಿಲ್ಲ. ಹಲ್ಮಿಡಿ ಶಾಸನ, ಆಂಧ್ರದ ಜಿನವಲ್ಲಭನ ಶಾಸನ, ಬಾದಾಮಿಯ ಕಪ್ಪೆ ಅರಭಟ್ಟನ ಶಾಸನ ಇತ್ಯಾದಿಗಳು ಭಾಷೆ ಮತ್ತು ಸಾಹಿತ್ಯ, ಇತಿಹಾಸ ದೃಷ್ಟಿಯಿಂದ ಮಹತ್ತರವಾದವುಗಳು.

ಶಾಸನಗಳೆಂದರೆ ರಾಜರ ಇತಿಹಾಸವನ್ನು, ಸಾಹಸಗಳನ್ನು ಗುಣಗಾನಿಸುವ ಒಂದು ಮಾಧ್ಯಮ ಎನ್ನುವ ಕಾಲವೊಂದಿತ್ತು. ಕೇವಲ ಇತಿಹಾಸದ ವಿದ್ಯಾರ್ಥಿಗಳಷ್ಟೇ ಶಾಸನಗಳು

ಅಧ್ಯಯನಕ್ಕೆ ಸೀಮಿತವಾಗಿದ್ದವು. ಈ ಕಲ್ಪನೆ ದೂರವಾಗಿ ಶಾಸನಗಳು ಸಾಹಿತ್ಯದ ಒಂದು ಮುಖ ಎಂದು ತೋರಿಸಿಕೊಟ್ಟವರು ಸಾಹಿತ್ಯದ ವಿದ್ಯಾರ್ಥಿಗಳು. ಹಾಗೆ ನೋಡಿದರೆ ಇತಿಹಾಸ ಮತ್ತು ಸಾಹಿತ್ಯ ಒಂದೇ ನಾಣ್ಯದ ಎರಡು ಮುಖಗಳು. ಪರಸ್ಪರ ಅನುಸಂಧಾನ ಎರಡೂ ವಲಯಗಳಲ್ಲಿದೆ. ವರ್ಣನೆ, ಛಂದಸ್ಸು, ಅಲಂಕಾರ, ಪ್ರಾಸ, ನವರಸಗಳ ವರ್ಣನೆಗಳನ್ನು ಲಯಬದ್ಧವಾಗಿ ಬಹುತೇಕ ಶಾಸನಗಳಲ್ಲಿ ಅಳವಡಿಸಿಕೊಳ್ಳಲಾಗಿದೆ. ಇವೆಲ್ಲ ಸಾಹಿತ್ಯದ ಅಂಗಗಳು. ಈ ವಿಚಾರಗಳನ್ನು ತೋರಿಸಿಕೊಟ್ಟವರು ಸಾಹಿತ್ಯದ ವಿದ್ಯಾರ್ಥಿಗಳು. ಶಾಸನಗಳನ್ನು ಧಾರ್ಮಿಕವಾಗಿ, ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ಅಧ್ಯಯನ ಮಾಡಬಹುದೆಂಬುದನ್ನು ಶೃತಪಡಿಸಿದವರೂ ಸಾಹಿತ್ಯದ ಅಭ್ಯಾಸಿಗಳೇ. ಎಂ. ಚಿದಾನಂದಮೂರ್ತಿಯವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಸಿ.ಯು. ಮಂಜುನಾಥರವರ 'ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ' ಎಂಬ ಅಧ್ಯಯನಗಳು ಇದಕ್ಕೆ ಸ್ಪಷ್ಟ ಉದಾಹರಣೆ.

ಶಾಸನಗಳು ವಿವಿಧ ಆಯಾಮಗಳ ಅಧ್ಯಯನಕ್ಕೆ ಒಡ್ಡಿಕೊಳ್ಳುವ ಭೂಮಿಕೆ. ಸ್ಥಳೀಯ ಚರಿತ್ರೆ, ಚಿತ್ರಣಗಳ ಜೊತೆಗೆ ರಾಷ್ಟ್ರಿಯತೆಯತ್ತ ಮುಖಾಮುಖಿಯಾಗುವ ಗುಣ ಅವುಗಳಲ್ಲಿದೆ. ಧಾರ್ಮಿಕವಾಗಿ ಒಂದು ಅಂಶವನ್ನು ಈ ಹೇಳಿಕೆಗೆ ಪರಿಗಣನೆಗೆ ತೆಗೆದುಕೊಳ್ಳಬಹುದು. ಕ್ರಿ.ಶ. ಸುಮಾರು ೬೦೦ರ ಕಟ್ವಪ್ಪು (ಶ್ರವಣಬೆಳಗೊಳದ ಚಿಕ್ಕಬೆಟ್ಟ)ವಿನ ಶಾಸನ ಭದ್ರಬಾಹುವಿನ ಕುರಿತಾಗಿ ಹೇಳುತ್ತದೆ.[೦೫] ವಡ್ಡಾರಾಧನೆಯಲ್ಲಿ ಭದ್ರಬಾಹು ಮುನಿಯು ಕಟ್ವಪ್ಪುನಲ್ಲಿಯೇ ಸಂನ್ಯಸನ ವಿಧಾನದಿಂದ ಪ್ರಾಣತ್ಯಾಗ ಮಾಡಿದ ಉಲ್ಲೇಖವಿದೆ. ಇವೆರಡೂ ಆಧಾರದಿಂದ ಭದ್ರಬಾಹು ಒಬ್ಬ ಮುನಿಯಾಗಿ ಸಲ್ಲೇಖನ ತೆಗೆದುಕೊಂಡಿದ್ದು ಪ್ರಾದೇಶಿಕ ಚಿತ್ರಣವಾದರೆ; ಭದ್ರಬಾಹುವಿನ ಪೂರ್ವಚರಿತ್ರೆಯ ಘಟನಾವಳಿಗಳು ರಾಷ್ಟ್ರೀಯತೆಯತ್ತ ಮುಖಾಮುಖಿಯಾಗುತ್ತವೆ. ಅಂತೆಯೇ ಈ ಅಂಶವು ಧರ್ಮದ ತಳಹದಿಯಲ್ಲಿ ಅಧ್ಯಯನಕ್ಕೆ ಒಳಪಟ್ಟಾಗ ಜೈನಧರ್ಮದ ಔತ್ತರೇಯ-ದಾಕ್ಷಿಣಾತ್ಯ ಚುಂಬಕಗಳವರೆಗೂ ವಿಸ್ತರಿಸಿತ್ತು ಎಂಬ ಅಂಶ ದಿಟವಾಗುತ್ತದೆ. ಆದ್ದರಿಂದ ಶಾಸನಗಳ ಅಧ್ಯಯನ ಗತಕಾಲದ ಸಂಸ್ಕೃತಿ ತಿಳಿಯುವಲ್ಲಿ ಮುಂಚೂಣಿಯಲ್ಲಿ ನಿಲ್ಲುತ್ತದೆ. ಪ್ರಸ್ತುತ ಅಧ್ಯಾಯವು ಜೈನಧರ್ಮದ ಶಾಸನಗಳ ಅಧ್ಯಯನವಾಗಿದ್ದು, ಹಾವೇರಿ ಜಿಲ್ಲೆಗೆ ಕೇಂದ್ರಿಕರಿಸಲಾಗಿದೆ. ಬಿಡಿ ಬಿಡಿಯಾದ ಅಧ್ಯಯನ ಇಡಿಯಾದ ಸಂಸ್ಕೃತಿ ಚಿತ್ರಣವನ್ನು ಕಟ್ಟಿಕೊಡಬಲ್ಲದು ಎಂಬ ಸದಾಶಯ ಈ ಅಧ್ಯಾಯದಲ್ಲಿದೆ.

ಭಾರತದ ಪ್ರಾಚೀನ ಧರ್ಮಗಳಲ್ಲಿ ಜೈನಧರ್ಮವೂ ಒಂದು ಎಂಬುದು ತಿಳಿದ ವಿಚಾರ. ಅಂತೆಯೇ ಕರ್ನಾಟಕದಲ್ಲಿಯೂ ಇದು ಪ್ರಾಚೀನ ಧರ್ಮಗಳಲ್ಲೊಂದು. ಆರಂಭಿಕ ಕನ್ನಡ ಸಾಹಿತ್ಯ ಜೈನ ಸಾಹಿತ್ಯವಾಗಿದೆ ಎಂಬ ಮಾತು ಆ ಧರ್ಮ ಸ್ಥಳೀಯ ಭಾಷೆಗೆ ಪ್ರಧಾನತೆಯನ್ನು ಕೊಟ್ಟ ಗುಣವನ್ನು ಬಿಂಬಿಸುತ್ತದೆ. ಕನ್ನಡದ ರಾಜಸತ್ತೆಗಳು ಜೈನಧರ್ಮವನ್ನು, ಜೈನರನ್ನು ಪೋಷಿಸಿದ್ದರಿಂದ ಈ ಕೀರ್ತಿ ಸಿದ್ದಿಸಿತು. ಕನ್ನಡ ಸಾಹಿತ್ಯದ ಆರಂಭಿಕ ಕವಿಗಳಲ್ಲಿ ಪಂಪ, ಪೊನ್ನ,

ರನ್ನರು ಅಗ್ರಗಣ್ಯರೆನಿಸಿದರು. ರಾಜಾಶ್ರಯದಿಂದ ಜೈನ ಸಂಸ್ಕೃತಿ ಕನ್ನಡ ನಾಡಿನಾದ್ಯಂತ ತನ್ನ ವೃಕ್ಷ ಶಾಖೆಗಳನ್ನು ಹರಡಿತು ಎಂಬುದರಲ್ಲಿ ಎರಡು ಮಾತಿಲ್ಲ. ಜೈನರ ಬಾಹುಳ್ಯದಿಂದ ಅರಸೊತ್ತಿಗೆಯ ಕೇಂದ್ರ ಸಹಿತ ಕುಗ್ರಾಮಗಳವರೆಗೂ ಅವರ ಸಂಸ್ಕೃತಿ ಹರಡಿ ಹಬ್ಬಿತು. ಅಂತೆಯೇ ನಾಡಿನಾದ್ಯಂತ ಜಿನಮುನಿಗಳು ವಿಹರಿಸತೊಡಗಿದರು. ಶ್ರಾವಕರು, ಜೈನ ವರ್ತಕರು, ಅಧಿಕಾರಿಗಳು, ನಾಳ್ಗಾವುಂಡರು, ಗಾವುಂಡರು ಸಹಜವಾಗಿಯೇ ಜಿನಮುನಿಗಳನ್ನು ತಾವಿರುವ ಪ್ರದೇಶಕ್ಕೆ ಸ್ವಾಗತಿಸಿದರು. ಮುನಿಗಳ ಧರ್ಮೋಪದೇಶ ಮತ್ತು ಪ್ರೇರಣೆಯ ಫಲವಾಗಿ ಆರ್ಥಿಕವಾಗಿ ಸಬಲರಿದ್ದ ಇವರು ಬಸದಿಗಳನ್ನೆತ್ತಿಸಿದರು. ಇಂಥಹ ದಾನಿಗರ ಮತ್ತು ಅವರ ಮೇಲೆ ಪ್ರಭಾವ ಬೀರಿದ ಮುನಿಯ ಗುಣಾವಳಿಯನ್ನು, ಹೆಗ್ಗಳಿಯನ್ನು ಶಾಸನಗಳು ಉತ್ಕೀರ್ತಿಸಿವೆ. ಪ್ರಸ್ತುತ ಅಧ್ಯಾಯದಲ್ಲಿ ಹಾವೇರಿ ಪರಿಸರದ ಜೈನಶಾಸನಗಳನ್ನು ವಿವಿಧ ಆಯಾಮಗಳ ಅಧ್ಯಯನಕ್ಕೆ ಒಳಪಡಿಸಲಾಗಿದೆ.

## ಅ. ಶಾಸನಗಳ ಪ್ರಸರಣ.

ಪ್ರಾಚೀನ ರಾಜಸತ್ತೆಯ ಆಡಳಿತ ಘಟಕಗಳಾದ ಬನವಾಸಿ ೧೨೦೦೦, ಹಾನಗಲ್ಲು-೫೦೦, ಪುಲಿಗೆರೆ-೩೦೦ ವಿಭಾಗಗಳಲ್ಲಿ ಹಂಚಿಹೋಗಿದ್ದ ಹಾವೇರಿ ಪರಿಸರದ ಭೂಪ್ರದೇಶವು ಇಂದು ಸ್ವತಂತ್ರ ಜಿಲ್ಲೆಯಾಗಿದೆ. ಕ್ರಿ.ಶ. ೧೯೯೭ ಆಗಸ್ಟ್ ೨೪ರಂದು ಕರ್ನಾಟಕದ ೨೬ನೆಯ ಜಿಲ್ಲೆಯಾಗಿ ಅಸ್ತಿತ್ವಕ್ಕೆ ಬಂದ ಹಾವೇರಿ ಜಿಲ್ಲೆಯು ಪೂರ್ವದಲ್ಲಿ ಧಾರವಾಡ ಜಿಲ್ಲೆಗೆ ಸೇರಿತ್ತು. ಬ್ಯಾಡಗಿ, ರಾಣೆಬೆನ್ನೂರು, ಶಿಗ್ಗಾವಿ, ಸವಣೂರು, ಹಾನಗಲ್ಲು, ಹಾವೇರಿ, ಹಿರೇಕೆರೂರು ಎಂಬ ಏಳು ತಾಲ್ಲೂಕುಗಳು ಈ ಜಿಲ್ಲೆಯಲ್ಲಿವೆ. ಜಿಲ್ಲೆಯು ಒಟ್ಟು ೭೩೫ ಗ್ರಾಮಗಳನ್ನು (ನಗರಗಳೂ ಸೇರಿದಂತೆ) ಹೊಂದಿದ್ದು, ೪೮೫೧ ಚದುರ ಕಿ.ಮೀ ಭೂ ಪ್ರದೇಶದಲ್ಲಿ ಹರಡಿಕೊಂಡಿದೆ. ಪ್ರಾಚೀನ ಸಂಸ್ಕೃತಿಯ ಭಾಗವಾದ ಹಾವೇರಿ ಜಿಲ್ಲೆಯಲ್ಲಿ ೫೦೦ಕ್ಕೂ ಹೆಚ್ಚು ದೇವತಾ ಸ್ಮಾರಕಗಳು, ೩೦೦೦ಕ್ಕೂ ಹೆಚ್ಚು ಶಾಸನಗಳನ್ನು ಈಗಲೂ ಕಾಣಬಹುದು. ಇವುಗಳಲ್ಲಿ ಜೈನ ಸ್ಮಾರಕಗಳ ಪಾಲೂ ಇದೆ. ಇಲ್ಲಿರುವ ೯೦ ಗ್ರಾಮಗಳಲ್ಲಿ ಜೈನ ಸ್ಮಾರಕಗಳು, ೬೫ ಶಾಸನೋಕ್ತ ಬಸದಿಗಳು, ೨೫ ಮತಾಂತರಗೊಂಡ ಜಿನಾಲಯಗಳು, ೧೫೦ ಜೈನ ಶಾಸನಗಳನ್ನು ಕಾಣಬಹುದು ಪ್ರಸ್ತುತ ಇಡೀ ಜಿಲ್ಲೆಯಾದ್ಯಂತ ಹರಡಿಕೊಂಡಿರುವ ಜೈನ ಶಾಸನಗಳ ಪ್ರಸರಣ ಸಂಖ್ಯಾ ಸೂಚಿಯನ್ನು ತಾಲ್ಲೂಕುವಾರು ಹೀಗೆ ಪಟ್ಟಿಮಾಡಲಾಗಿದೆ.

| ಕ್ರಸಂ. | ತಾಲ್ಲೂಕು | ಶಾಸನಗಳ ಸಂಖ್ಯೆ |
|---|---|---|
| ೦೧ | ಬ್ಯಾಡಗಿ | ೨೦ |
| ೦೨ | ರಾಣೆಬೆನ್ನೂರು | ೧೦ |
| ೦೩ | ಶಿಗ್ಗಾವಿ | ೧೩ |
| ೦೪ | ಸವಣೂರು | ೦೮ |

| ೦೫ | ಹಾನಗಲ್ಲು | ೫೯ |
|---|---|---|
| ೦೬ | ಹಾವೇರಿ | ೧೮ |
| ೦೭ | ಹಿರೇಕೆರೂರು | ೨೨ |
| | **ಒಟ್ಟು** | ೧೫೦ |

ಜಿಲ್ಲೆಯಾದ್ಯಂತ ಹರಡಿಕೊಂಡಿರುವ ೧೫೦ ಜೈನಶಾಸನಗಳ ಪ್ರಸರಣವನ್ನು ವಿವಿಧ ದೃಷ್ಟಿಕೋನಗಳಿಂದ ನೋಡುವ ಅಗತ್ಯವಿದೆ. ಬಹುಮುಖ್ಯವಾಗಿ ಇಲ್ಲಿನ ಶಾಸನಗಳು ಆರ್ಥಿಕತೆ, ರಾಜಕೀಯ, ಧಾರ್ಮಿಕ ಮತ್ತು ನೈಸರ್ಗಿಕ ಆಧಾರದ ನೆಲೆಗಟ್ಟಿನಲ್ಲಿ ಪ್ರಸಾರಗೊಂಡಿದ್ದು ಕಂಡುಬರುತ್ತದೆ.

## ೦೧. ಆರ್ಥಿಕತೆ.

ಜೈನರು ಮೂಲತ: ಕ್ಷತ್ರಿಯರು. ಈ ಧರ್ಮದ ಪ್ರವರ್ತಕರಾದ ೨೪ ತೀರ್ಥಂಕರುಗಳು ಕ್ಷತ್ರಿಯರೇ ಆಗಿದ್ದರು. ಸಾಂದರ್ಭಿಕ ಬಿಕ್ಕಟ್ಟುಗಳು ಇವರನ್ನು ರಾಜತ್ವ ತೊರೆಯುವಂತೆ ಮಾಡಿದುವು. ಧರ್ಮ ಬೋಧೆಯ ಜೊತೆಗೆ ಕೇವಲಜ್ಞಾನ ಪಡೆಯುವುದು ಇವರ ಗುರಿಯಾಯಿತು. ಸರ್ವಸಂಘ ಪರಿತ್ಯಾಗಿಗಳಾದ ತೀರ್ಥಂಕರರು ಬೋಧಿಸಿದ ಬಹುದೊಡ್ಡ ಮೌಲ್ಯ ಎಂದರೆ 'ಅಹಿಂಸೆ'. ಅಹಿಂಸೆಯನ್ನು ಸ್ವಗತಗೊಳಿಸುವುದರ ಜೊತೆಗೆ ಅನುಯಾಯಿಗಳಿಗೂ ಇದನ್ನೇ ಬೋಧಿಸಿದರು. ತದನಂತರ ಅಹಿಂಸಾವ್ರತ ಒಂದು ಮೌಲ್ಯವಾಗಿ ಕಟ್ಟುಪಾಡಾಯಿತು. ಜೈನಧರ್ಮ ಅಹಿಂಸೆಯ ಕಟ್ಟುಪಾಡಿನ ತಳಹದಿಯಲ್ಲಿ ಊರ್ಧ್ವಗೊಂಡಿದ್ದನ್ನು ಬಹುಮುಖ್ಯವಾಗಿ ಗಮನದಲ್ಲಿಡಬೇಕಾದ ವಿಚಾರ. ಅಂತೆಯೇ ಈ ಧರ್ಮಪಾಲಕರು ಹಿಂಸೆಯಲ್ಲದ ವೃತ್ತಿಗಳ ಕಡೆ ಮುಖಮಾಡಿದರು. ಕೃಷಿ ಮತ್ತು ರಾಜ್ಯಾಡಳಿತದಲ್ಲಾಗುವ ಹಿಂಸೆ ಉದ್ದೇಶಪೂರ್ವವಲ್ಲದ್ದರಿಂದ ಆ ವೃತ್ತಿಗಳನ್ನು ಅನುಸರಿಸಬಹುದೆಂಬ ಧರ್ಮ ಸಮ್ಮತಿ ದೊರೆತರೂ ಜೈನರು ವ್ಯಾಪಾರದಕಡೆಗೆ ವಾಲಿದರು. ಗೃಹೋಪಯೋಗಿ ವಸ್ತುಗಳು, ಬಟ್ಟೆ, ವಾಣಿಜ್ಯ ಬೆಳೆಗಳು, ಸರಕು, ಸಗಟು ಮಾರಾಟ, ಬಳೆಗಾರಿಕೆ ಹಿಂಸೆಯಲ್ಲದ ಇನ್ನೂ ಮುಂತಾದ ವ್ಯಾಪಾರವನ್ನು ಅನುಸರಣೆ ಮಾಡತೊಡಗಿದರು. ಶಕ್ತಿಕವಿ ರನ್ನನ ಕುಟುಂಬದ ವೃತ್ತಿ ಬಳೆಗಾರಿಕೆಯಾಗಿತ್ತು ಎಂಬುದನ್ನು ನೆನೆಯಬಹುದು. ಗೇರುಸೊಪ್ಪೆಯ ಪ್ರಭುತ್ವದ ಜೈನ ರಾಜರು ರಾಜ್ಯಭಾರದ ಜೊತೆಗೆ ಸಾಂಬಾರಾದಿ ಪದಾರ್ಥಗಳ ವ್ಯಾಪಾರ ಮಾಡುತಿದ್ದುದನ್ನು ಗಮನಿಸಿದಾಗ ಜೈನರು ವ್ಯಾಪಾರವನ್ನು ತಮ್ಮ ಕುಲಕಸುಬಾಗಿ ಅಳವಸಿಕೊಂಡಿದ್ದರೆಂಬುದು ದಿಟವಾಗುತ್ತದೆ. ಮಂತಗೆಯ ಶಾಸನವೊಂದು ಕಲಿದೇವಸೆಟ್ಟಿ ಎಂಬ ವಡ್ಡವ್ಯವಹಾರಿ ಕುಂಕುಮ, ಕಸ್ತೂರಿ, ಕಾಳಾಗರು, ಹರಿಚಂದನಾದಿ ಭೋಗಯೋಕ್ರಯ ವಿಕ್ರಯ ಮಾಡುತ್ತಿದ್ದ ಎಂದು ತಿಳಿಸಿದ್ದಲ್ಲದೇ ಅವನು ವಾಣಿಜ್ಯದಲ್ಲಿ ವಿಖ್ಯಾತಿಯನ್ನು ಪಡೆದಿದ್ದ ಎನ್ನುತ್ತದೆ. ಇವನೊಬ್ಬ ರತ್ನ ವ್ಯಾಪರಿಯೂ ಹೌದು.[೬]

ಶ್ರೇಷ್ಠಿ, ವಡ್ಡವ್ಯವಹಾರಿ, ಮಹಾವಡ್ಡ ವ್ಯವಹಾರಿ ಎಂಬ ವಿಶೇಷಣದ ಜೈನ ವರ್ತಕರನ್ನು ಶಾಸನಗಳು ಹೆಸರಿಸಿವೆ. ಇವರು ರಾಜಸ್ವದ ಕೇಂದ್ರ ಘಟಕ, ಉಪ ಘಟಕಗಳಲ್ಲಿ ವ್ಯಾಪಾರ ಮಾಡುತ್ತಿದ್ದರು. ಕಾಲಕಾಲಕ್ಕೆ ಇವರಿಂದ ತೆರಿಗೆ ಬರುತ್ತಿದ್ದರಿಂದ ರಾಜನೂ ಇವರ ವ್ಯಾಪಾರಕ್ಕೆ ಮಾನ್ಯ ಮಾಡುತ್ತಿದ್ದ. ಅಂತೆಯೇ ಇವರು 'ರಾಜಪೂಜಿತ'[೦೭]ರೂ ಆಗಿದ್ದರು. ಅಲ್ಲದೇ ಇವರು ವ್ಯಾಪಾರದಿಂದ 'ಪಟ್ಟಣಸ್ವಾಮಿ'[೦೮]ಯಾಗುವ ಪ್ರಾಬಲ್ಯಗಳಿಸಿದ್ದು ವ್ಯಾಪಾರದಿಂದಲೇ. ವ್ಯಾಪಾರದಿಂದ ಸಹಜ ಶ್ರೀಮಂತರಾದ ಜೈನರು ಧರ್ಮವನ್ನು ಮೀರಲಿಲ್ಲ. ಅಂತೆಯೇ ಅವರು ಬಸದಿಗಳನ್ನೆತ್ತಿಸಿದರು. ಆರ್ಥಿಕವಾಗಿ ಬಲಿಷ್ಠರಾದ ಇವರಿಗೆ ಇದು ಸಹಜವೇ ಎಂಬಂತಿತ್ತು. ಮೇಲಾಗಿ ವ್ಯಾಪಾರದಲ್ಲಿ ಅಂಟಿದ 'ಕರ್ಮ'ವನ್ನು ಬಸದಿ ನಿರ್ಮಿಸುವುದರ ಮೂಲಕ ಕ್ಷಯಿಸಿಕೊಳ್ಳುತ್ತಿದ್ದರು. " 'ಹಿಂಸೆಯಾಗುವುದು', 'ಹಿಂಸೆ ಮಾಡುವುದು' ಇವುಗಳಲ್ಲಿ ಬಹಳ ಅಂತರ ಇದೆ. ಒಕ್ಕಲುತನ, ವ್ಯಾಪಾರ ಮೊದಲಾದ ಜೀವನೋಪಯೋಗಿ ಉದ್ಯೋಗಗಳಲ್ಲಿ ಸ್ವಾಭಾವಿಕವಾಗಿ ಹಿಂಸೆಯಾಗುವುದುಂಟು. ಇದರಲ್ಲಿ ಜನರು ಬುದ್ಧಿಪೂರ್ವಕವಾಗಿ ಹಿಂಸೆಯನ್ನು ಮಾಡುವ ಗೊಡವೆಗೆ ಹೋಗುವುದಿಲ್ಲ. ಆದರೂ ಇಂಥ ಪ್ರಸಂಗಗಳಲ್ಲಿ ಆಗುವ ಹಿಂಸೆಗೆ ಉದ್ಯೋಗೀಹಿಂಸೆಯೆನ್ನುವರು".[೦೯] ಈ ರೀತಿ ಉಂಟಾದ ಹಿಂಸೆಯನ್ನು ಕ್ಷಯಿಸಿಕೊಳ್ಳಲು ಜೈನರು ದಾನಧರ್ಮಾಧಿ ಕಾರ್ಯಗಳಲ್ಲಿ ಭಾಗಿಯಾದರು. ಆಡಳಿತ ಘಟಕಗಳಲ್ಲಿ ಮುನಿಗಳ ಪ್ರೇರಣೆಯಂತೆ ಬಸದಿಗಳನೆತ್ತಸಿ ಶಾಸನಗಳನ್ನು ನೆಡೆಸಿದ್ದಾರೆ. ಬಹುವಿಧ ವ್ಯವಹಾರ ಚತುರನಾದ ಪಾನ್ಥಿಪುರದ ಪಟ್ಟಣಸ್ವಾಮಿಯಾದ ಕಲಿದೇವಸೆಟ್ಟಿಯು ಜಿನಭಕ್ತನಾಗಿದ್ದ. ಇವನು ಆಹಾರಾಭಯಭೈಷಜ್ಯ ಶಾಸ್ತ್ರದಾನದ ಜೊತೆಜೊತೆಗೆ ಭೂಮಿ, ಕನ್ಯಾ, ಸುವರ್ಣ್ನ, ವಸ್ತ್ರಾಭರಣ, ಗೋಮಹಿಷ್ಯಾದಿಗಳನ್ನು ದಾನಮಾಡುತ್ತಿದ್ದ. ವೈಶ್ಯರಕ್ಷಾಮಣಿಯಾದ ಇವನು ಗ್ರಾಮಗಳಲ್ಲಿ ಜಿನಬಿಂಬಗಳನ್ನು ಪ್ರತಿಷ್ಠಾಪಿಸುತ್ತಿದ್ದ.[೧೦] ಅಂತೆಯೇ ಕರಗುದರೆಯಲ್ಲಿ ವಿಜಯಪಾರ್ಶ್ವ ಜಿನಾಲಯವನ್ನು, ಮಂತಗೆಯಲ್ಲಿ ಚತುರ್ವಿಂಶತಿ ತೀರ್ಥಂಕರುಗಳ ಬಸದಿಗಳನ್ನು ನಿರ್ಮಿಸಿದ. ಇವನ ಗುರು ನಾಗಚಂದ್ರ ಭಟ್ಟಾರಕ. ಹೀಗೆ ಹಾನಗಲ್ಲು-೫೦೦ ಆಡಳಿತ ಘಟಕದ ಸುತ್ತ ಬಸದಿ ಕಟ್ಟಿದ್ದರ, ದಾನ ಮಾಡಿದ ನಿಮಿತ್ತವಾಗಿ ಶಾಸನಗಳು ಪ್ರಸರಣಗೊಂಡಿರುವುದನ್ನು ಸ್ಥಳೀಯ ಕ್ಷೇತ್ರದ ಒಂದು ಉದಾಹರಣೆಯಾಗಿ ತೆಗೆದುಕೊಳ್ಳಬಹುದು.

ಈ ರೀತಿಯಾಗಿ ವ್ಯಾಪಾರಿಗಳಾದ ನಾಗಿಸೆಟ್ಟಿ ಎಂಬುವನು ಕುಂಟನಹೊಸಳ್ಳಿಯ ಬಸದಿಗೆ ಭೂದಾನ ನೀಡಿದ, ಬೊಮ್ಮಿಸೆಟ್ಟಿ ಎಂಬುವನು ಬಾಳೆಯ ಹಳ್ಳಿಯಲ್ಲಿ ಪಾರ್ಶ್ವ ತೀರ್ಥಂಕರರ ಜಿನಾಲಯವನ್ನೆತ್ತಿಸಿ ಅದಕ್ಕೆ ಭೂದಾನ ನೀಡಿದ.[೧೧] ಮಾದಿಸೆಟ್ಟಿ, ಬೋಗಿಸೆಟ್ಟಿ ಎಂಬುವರು ಸಮ್ಮಸಗಿಯಲ್ಲಿ ಪಾರ್ಶ್ವನಾಥ ಜಿನೇಂದ್ರಾಲಯವನ್ನು ಕಟ್ಟಿಸಿದರು.[೧೨] ಹೀಗೆ ಆರ್ಥಿಕವಾಗಿ ಪ್ರಬಲರಿದ್ದ ಜೈನರು ಅಲ್ಲಲ್ಲಿ ಬಸದಿಗಳನ್ನು ಕಟ್ಟಿಸಿ ಶಾಸನಗಳು ಹರಡಲು ಕಾರಣರಾದರು.

## ೦೨. ರಾಜಕೀಯ.

'ರಾಜಃ ಪ್ರತ್ಯಕ್ಷ ದೇವತಾಃ' ಎಂಬ ಉಕ್ತಿಯಂತೆ ರಾಜನು ಪ್ರಜೆಗಳಿಗೆ ದೇವರಿದ್ದಂತೆ. ಅವನು ಯಾವುದೇ ಧರ್ಮಕ್ಕೆ ಸೇರಿರಲಿ ತನ್ನ ರಾಜ್ಯದಲ್ಲಿರುವ ಎಲ್ಲಾ ಧರ್ಮದವರನ್ನು ಸಮಾನ ರೀತಿಯಲ್ಲಿ ಕಾಣಬೇಕಾಗುತ್ತದೆ. ಆದ್ದರಿಂದಲೇ ಅವನು ತನ್ನ ರಾಜ್ಯದ ಸರ್ವಧರ್ಮಗಳಿಗೂ ಸಮಾನ ಮಾನ್ಯತೆ ನೀಡುತ್ತಿದ್ದ. ಅಂತೆಯೇ ಎಲ್ಲ ಧರ್ಮದ ದೇವತಾ ಸ್ಮಾರಕಗಳಿಗೆ ದಾನ–ದತ್ತಿಗಳನ್ನು ಕೊಟ್ಟಿದ್ದು ಶಾಸನಗಳಲ್ಲಿ ದಾಖಲಾಗಿದೆ. ಪ್ರಾಚೀನ ಸಂಸ್ಕೃತಿಯಲ್ಲಿ ಧರ್ಮ ಒಂದು ಬಹುಮುಖ್ಯ ಅಂಗವಾಗಿದ್ದರಿಂದ ರಾಜಸತ್ತೆಯೂ ಈ ಅಂಶವನ್ನು ಪಾಲನೆ ಮಾಡುತ್ತಿತ್ತು. ರಾಜ, ಸಾಮಂತರು, ಮಾಂಡಳಿಕರು, ನಾಳ್ಗಾವುಂಡರು, ಗಾವುಂಡರು ಆಡಳಿತ ಘಟಕದ ಮುಖ್ಯಸ್ಥರಾದ್ದರಿಂದ ಸಹಜವಾಗಿಯೇ ಧರ್ಮಕಾರ್ಯದಲ್ಲಿ ಪಾಲ್ಗೊಳ್ಳುತ್ತಿದ್ದರು. ತತ್ಫಲವಾಗಿ ಜೈನ ಶಾಸನಗಳನ್ನೂ ಬರೆಯಿಸಿದರು. ರಾಜಧಾನಿ, ಉಪರಾಜಧಾನಿ, ಕಂಪಣ, ಗ್ರಾಮಗಳಲ್ಲಿ ಜೈನ ಶಾಸನಗಳು ಪ್ರಸರಣಗೊಂಡವು.

ಬನವಾಸಿ ಕದಂಬರ ಒಂದು ಉಪರಾಜಧಾನಿಯಾದ ಪರಲೂರಿ(ದೇವಗಿರಿ)ನ ಜಿನೇಂದ್ರಾಲಯಕ್ಕೆ ಮತ್ತು ಇಲ್ಲಿರುವ ಜೈನಧರ್ಮದ ವಿವಿಧ ಸಂಘಗಳಿಗೆ ದಾನ ಸಂದಿವೆ. ಈ ದಾನವನ್ನು ಕದಂಬ ರಾಜರಾದ ಮೃಗೇಶವರ್ಮ, ವಿಜಯಶಿವಮೃಗೇಶವರ್ಮ, ಯುವರಾಜ ದೇವವರ್ಮ ಕೊಟ್ಟಿದ್ದಾಗಿ ಇಲ್ಲಿನ ಶಾಸನಗಳು ತಿಳಿಸುತ್ತವೆ.[೧೩] ಅಳುಪ ರಾಜನಾದ ಮತ್ತು ಬಾದಾಮಿ ಚಾಳುಕ್ಯರ ಮಾಂಡಳಿಕನೂ ಆದ ಚಿತ್ರವಾಹನನು ತನ್ನ ಹೆಂಡತಿ ಕಟ್ಟಿಸಿದ ಪುರಿಗೆರೆ ಬಸದಿಗೆ ಚಕ್ರವರ್ತಿ ವಿಜಯಾದಿತ್ಯನಲ್ಲಿ ವಿನಂತಿಸಿಕೊಂಡು ಗುಡ್ಡಿಗೆರೆ ಗ್ರಾಮವನ್ನು ದತ್ತಿ ಕೊಡಿಸಿರುವುದಾಗಿ ಶಿಗ್ಗಾವಿಯ ತಾಮ್ರಶಾಸನ ತಿಳಿಸುತ್ತದೆ.[೧೪] ಬಾಸವೂರು–೧೪೦ರ ಕಂಪಣಾಧಿಕಾರಿಯಾದ ಕಲಿಯಮರಸ ದೇವಗಿರಿಯಲ್ಲೊಂದು ಶಾಂತಿನಾಥ ಜಿನಾಲಯವನ್ನೆತ್ತಿಸಿ ದತ್ತಿ ಬಿಟ್ಟಿದ್ದಾಗಿ ಕ್ರಿ.ಶ. ೧೧೫೯ರ ದೇವಗಿರಿ ಶಾಸನ ತಿಳಿಸಿದರೆ,[೧೫] ನಾಳ್ಪ್ರಭುವಾದ ಮಲ್ಲಗಾವುಣ್ಡನು ನೇರಲಗೆಯಲ್ಲೊಂದು ಮಲ್ಲಿನಾಥ ಬಸದಿಯನ್ನು ಎತ್ತಿಸಿದ್ದು ಕ್ರಿ.ಶ. ೧೧೪೮ರ ಅದೇ ಊರ ಶಾಸನ ಉತ್ಕೀರ್ತಿಸುತ್ತದೆ.[೧೬] ಇನ್ನು ಊರ ಗಾವುಂಡರಾದ ಆದಿತ್ಯವರ್ಮ ಎಂಬುವನು ಕಾಗಿನೆಲೆ (ಬ್ಯಾತಾ)ಯಲ್ಲಿ ಒಂದು ಮೇಷಪಾಷಾಣಗಚ್ಛದ ಬಸದಿಯನ್ನು ಮತ್ತು ನಾಗಗಾವುಂಡನು ಗೊಟ್ಟಗಡಿ (ನದಿಹರಳಹಳ್ಳಿ, ರಾತಾ)ಯಲ್ಲಿ ವೃಷಭ ಜಿನೇಂದ್ರಾಲಯವನ್ನು[೧೭] ಹೀಗೆ ಗ್ರಾಮ ಸಮುದಾಯ ಆಡಳಿತ ಘಟಕದಿಂದ ರಾಜಧಾನಿಯವರೆಗೂ ಆಡಳಿತಗಾರರು ಹಾಕಿಸಿದ ಜೈನ ಶಾಸನಗಳ ಹಾವೇರಿ ಪರಿಸರದಲ್ಲಿ ಹಬ್ಬಿಕೊಂಡಿವೆ.

## ೦೩. ಧಾರ್ಮಿಕತೆ.

ಜೈನ ಧಾರ್ಮಿಕ ಶ್ರದ್ಧಾಕೇಂದ್ರಗಳಲ್ಲಿ ಮತ್ತು ಅದರ ಪ್ರಭಾವಲಯ ಸುತ್ತ ಇರುವ ಇತರೆ ಗ್ರಾಮಗಳಲ್ಲಿ ಜೈನಶಾಸನಗಳು ಹಾವೇರಿ ಪರಿಸರದಲ್ಲಿ ಪ್ರಸರಣಗೊಂಡಿವೆ. ಕರ್ನಾಟಕದ ಗಣ್ಯಮಾನ್ಯ

ಜೈನ ಶ್ರದ್ಧಾಕೇಂದ್ರಗಳಾದ ಶ್ರವಣಬೆಳಗೊಳ ಮತ್ತು ಕೊಪ್ಪಳದಂತೆ ಮಧ್ಯಕರ್ನಾಟಕದಲ್ಲಿ ಹಾವೇರಿ ಪರಿಸರದ ದೇವಗಿರಿ ಮತ್ತು ಬಂಕಾಪುರಗಳು ಕಂಗೊಳಿಸಿದುವು. ಮೊದಲ ಸಹಸ್ರಮಾನದ ಪೂರ್ವಾರ್ಧದಲ್ಲಿ ಪರಲೂರು (ದೇವಗಿರಿ) ಜಿನಧರ್ಮದ ಚುಂಬಕ ನೆಲೆಯಾಗಿದ್ದರೆ, ಇದೇ ಸಹಸ್ರಮಾನದ ಉತ್ತರಾರ್ಧದಲ್ಲಿ ಬಂಕಾಪುರ ಆ ಧರ್ಮದ ಕೀರ್ತಿಕಳಶವಾಯಿತು.

ದೇವಗಿರಿ ಬನವಾಸಿ ಕದಂಬರ ಅಗ್ರಮಾನ್ಯ ಜೈನಕೇಂದ್ರ. ಅಂತೆಯೇ ಜಿನಸಂಘಗಳಾದ ನಿರ್ಗ್ರಂಥ ಶ್ರಮಣ ಸಂಘ, ಶ್ವೇತಪಟ ಮಹಾಸಂಘ, ಯಾಪನೀಯ ಸಂಘ ಬಂದು ನೆಲಸಿದ್ದವು. ಈ ಊರಿನದ್ದೇ ಆದ ಪರಲೂರು ಮನಿಗಣವೂ ಇಲ್ಲಿತ್ತು. ತತ್ಪರಿಣಾಮವಾಗಿ ಕದಂಬ ಅರಸರು ಇಲ್ಲಿನ ಜಿನಾಲಯಕ್ಕೆ, ಮುನಿಸಂಘಗಳಿಗೆ ದಾನ ನೀಡಿ ಶಾಸನಗಳನ್ನು ಬರೆಯಿಸಿದ್ದಾರೆ. ಆಡೂರು ಚೈತ್ಯಾಲಯಕ್ಕೆ ದತ್ತಿ ಸಂದಿದ್ದು ಪರಲೂರಲ್ಲಿ ಎಂಬುದು ಗಮನಿಸಬೇಕು.[೧೮] ಪರಲೂರಿನ ಮಹತ್ವದಿಂದ ಈ ಕಾರ್ಯಗಳು ನಡೆಯುತ್ತಿದ್ದವು. ಇದರ ಪ್ರಭಾವಲಯದಲ್ಲಿ ಇರುವ ಆಡೂರು, ಶಿಗ್ಗಾವಿ, ಹುಲಗೂರುಗಳಲ್ಲಿ ಜೈನಶಾಸನಗಳು ಹರಡಿಕೊಂಡಿವೆ.

ದೇವಗಿರಿಯ ಅನಂತರ ಬಂಕಾಪುರ ಜೈನ ಧರ್ಮದ ಪ್ರವರ್ಧಮಾನ ಶ್ರದ್ಧಾಕೇಂದ್ರವಾಯಿತು. ಪೂಜ್ಯಪಾದ, ದೇವೇಂದ್ರಮುನಿ, ಅಜಿತಸೇನಾಚಾರ್ಯರ ಕರ್ಮಭೂಮಿಯಾಗಿ, ಪಂಪ, ರನ್ನರ ಜ್ಞಾನಕೇಂದ್ರವಾಗಿ, ಅತ್ತಿಮಬ್ಬೆ, ಚಾವುಂಡರಾಯ, ಗಂಗ ಮಾರಸಿಂಹರ ಆಡುಬಲ್ಲಜಾಗವಾಗಿ, ಬಸದಿಗಳ ಸಮುಚ್ಚಯದ ತಾಣವಾಗಿ ಬಂಕಾಪುರ ಬೆಳೆದು ನಿಂತಿತು. ಬಂಕಾಪುರದ ಪ್ರಸಿದ್ಧತೆಗೆ ಬಹುಮುಖ್ಯ ಕಾರಣ ರಾಷ್ಟ್ರಕೂಟ ಸಾಮಂತರಾದ ಚಲ್ಲಕೇತನರು. ಸದ್ಯ ಈ ಊರಲ್ಲಿ ಯಾವುದೇ ಜೈನಶಾಸನಗಳಿಲ್ಲ. ಇದೊಂದು ಆಡಳಿತ ಘಟಕವಾದ್ದರಿಂದ ಶತ್ರುಗಳ ದಾಳಿಗಳ ಸಹಜತೆಗೆ ಜಿನಧರ್ಮ ನೆಲೆ ಕಳೆದುಕೊಂಡಿತು. ಆದರೆ ಬಂಕಾಪುರ ತನ್ನ ಸುತ್ತ ಸಾಕಷ್ಟು ಜೈನಕೇಂದ್ರಗಳನ್ನು ಬೆಳೆಸಿತೆಂಬುದು ದಿಟ. ಅರಟಾಳ, ಶೀಲವಂತ, ಸೋಮಾಪುರ, ಮಡ್ಲಿ, ಕಲ್ಲಣ, ಬಾಡ, ಶಿಗ್ಗಾವಿ, ಹುಲಗೂರು, ತಡಸ ಮುಂತಾದ ಊರುಗಳಲ್ಲಿ ಜೈನ ಶಾಸನಗಳು ಹರಡಿಕೊಂಡಿವೆ.

ಕದಂಬರ ಕಾಲದಲ್ಲಿ ಒಂದು ಸಣ್ಣ ಕೇಂದ್ರವಾಗಿದ್ದ ಆಡೂರು (ಹಾನತಾ) ಸೇವುಣರ ಕಾಲಕ್ಕೆ ಸಲ್ಲೇಖನ ಕೇಂದ್ರವಾಗಿ ಮಾರ್ಪಟ್ಟಿತು. ಈ ಕೇಂದ್ರದ ಪಾವಿತ್ರ್ಯತೆ ಅರಿತ ಶ್ರಾವಕ, ಶ್ರಾವಿಕೆ, ನಾಳ್ಗಾವುಂಡರು, ದಂಡನಾಯಕರು ಸಾವನ್ನು ಆಹ್ವಾನಿಸಿದ್ದಾರೆ. ಸ್ವತ: ಬಂಕಾಪುರದ ಪಡೆವಳನಾದ ಚಟ್ಟಯ್ಯನ ಹೆಂಡತಿ ಭಾಗವ್ವೆ ಇಲ್ಲಿ ಬಂದು ಸಲ್ಲೇಖನ ಸ್ವೀಕರಿಸುತ್ತಾಳೆ.[೧೯] ಅಂದರೆ ಈ ಕಾಲಕ್ಕೆ ಬಂಕಾಪುರದಲ್ಲಿ ಜೈನಧರ್ಮ ಇಳಿಮುಖಗೊಂಡು ಅದರ ಪ್ರಸರಣ ಆಡೂರು ಭಾಗದಲ್ಲಿ ಪಸರಿಸಿತ್ತು. ಅಂತೆಯೇ ಇಲ್ಲಿ ಆರು ಜನ ಸಲ್ಲೇಖನ ತೆಗೆದುಕೊಂಡಿದ್ದಾರೆ.[೨೦] ಹಾವಣಗಿ, ಸಂಗೂರು, ವಿರಾಪುರ, ಯಳವಟ್ಟಿ, ಬಾಳಂಬಿಡ, ಕರಿಗುದರೆ, ಬಾದಾಮಗಟ್ಟಿ, ಹೆರೂರು, ಹಿರೂರು

ಆಡೂರು ಪ್ರಭಾವಲಯದ ಜೈನಕೇಂದ್ರಗಳು. ಇಲ್ಲಿಯೂ ಜಿನಶಾಸನಗಳು ಪ್ರಸರಣಗೊಂಡಿವೆ. ಆಡೂರಂತೆಯೇ ೧೨ನೆಯ ಶತಮಾನ ಇನ್ನೆರಡು ಜೈನ ಧಾರ್ಮಿಕ ಕೇಂದ್ರಗಳು ಹಿರೇಅಣಜಿ (ಬ್ಯಾತಾ) ಮತ್ತು ಹಿರೇಕೋಣತಿ (ಹಿತಾ). ಹಿರೇಅಣಜಿಯಲ್ಲಿ ೦೭, ಹಿರೇಕೋಣತಿಯಲ್ಲಿ ೦೯ ನಿಸಿಧಿ ಶಾಸನಗಳು ಇವೆ., ಇವುಗಳ ಪ್ರಭಾವಲಯದ ಆಲದಗೆರೆ-೦೪, ಸುಣಕಲ್ಲಬಿದರೆ-೦೧, ಸುತಕೋಟೆ-೦೩, ಸಾತೇನಹಳ್ಳಿ-೦೧, ಚಿನ್ನಮುಳುಗುಂದ-೦೧, ಲಿಂಗದೇವರಕೊಪ್ಪ-೦೧, ಕುಂಚೂರು-೦೩ ಜಿನಶಾಸನಗಳು ಹರಡಿಕೊಂಡಿವೆ. ಹೀಗೆ ಪ್ರಮುಖ ಜೈನ ಕ್ಷೇತ್ರ ಮತ್ತು ಅದರ ಸುತ್ತಲೂ ಇರುವ ಜಿನಕೇಂದ್ರಗಳಲ್ಲಿ ಶಾಸನಗಳು ಹರಡಿಕೊಂಡಿರುವುದು ಈ ಪರಿಸರದಲ್ಲಿ ಕಂಡುಬರುವ ಮುಖ್ಯ ಲಕ್ಷಣ.

ಕರ್ನಾಟಕದ ಜೈನಧರ್ಮವು ಪ್ರಸರಣಗೊಳ್ಳಲು ಆ ಧರ್ಮದ ಅಸಂಖ್ಯಾತ ಮುನಿಗಳು ಮಹತ್ತರ ಪಾತ್ರವಹಿಸಿದ್ದಾರೆ. ನಿತ್ಯ ಸಂಚಾರಿಗಳಾಗಿದ್ದ ಇವರು ದಾರಿಯುದ್ದಕ್ಕೂ ಭೇಟಿಯಾಗುವ ಜೈನಬಾಹುಳ್ಯವಿರುವ ಗ್ರಾಮಗಳಿಗೆ ತೆರಳಿ ಅಲ್ಲಿ ಬಸದಿಗಳು ಮತ್ತು ಶಾಸನಗಳು ನಿರ್ಮಾಣವಾಗಲು ಕಾರಣರಾಗಿದ್ದಾರೆ. ಅಂತೆಯೇ ಸಲ್ಲೇಖನ ಬೋಧಿಸಿ ನಿಸಿಧಿ ಶಾಸನಗಳು ರಚನೆಯಾಗಲು ಇವರ ಪ್ರಭಾವ ಇಲ್ಲದಿಲ್ಲ. ಧರ್ಮ ಪ್ರಭಾವನೆ ಬೀರುವ ನೋಂಪಿ ಆಚರಣೆಗಳನ್ನು ಇವರು ಪ್ರೇರೇಪಿಸಿದರು. ಹಾನಗಲ್ಲು ಬಸದಿಗೆ ಮೂಲಸಂಘ ಸೂರಸ್ಥಗಣದ ನಂದಿಭಟ್ಟಾರಕದೇವರ ಗುಡ್ಡಿ ಲಖ್ಖವೆ ಅಣತಿ ನೋಂಪಿಯ ಉದ್ಯಾಪನೆ ನಿಮಿತ್ತ ೨೪ ತೀರ್ಥಂಕರರ ಮಾಡಿಸಿಕೊಟ್ಟಿದ್ದನ್ನು ಇಲ್ಲಿ ಸ್ಮರಿಸಬಹುದು.[೨೧]

ಹರಿಯುವಿಕೆ ಹೇಗೆ ನೀರಿನ ಲಕ್ಷಣವೋ, ಹಾಗೆಯೇ ನಿತ್ಯ ನಡಿಗೆ ಜಿನಮುನಿಯ ಆಚರಣೆ. ಅಂತೆಯೇ ಅವರು ಗ್ರಾಮ, ನಗರ, ಖೇಡ, ಖರ್ವಡ, ಮಡಂಬ, ಪತ್ತನ, ದ್ರೋಣಮುಖವಾಗಿ ಸಂಚರಿಸಬೇಕು.[೨೨] ಇದು ನಿತ್ಯ ನಿಯಮವೂ ಆಯಿತು. ಒಂದೇ ಕಡೆ ನೆಲೆನಿಂತರೆ ವ್ಯಕ್ತಿಗಳ ಮೇಲೆ, ಸ್ಥಳದ ಮೇಲೆ ಮೋಹ ಹುಟ್ಟಿ ಮುನಿಧರ್ಮಕ್ಕೆ ಭಂಗವಾಗಬಾರದು ಎಂಬುದಕ್ಕೆ ಈ ನಿಯಮ. ಗ್ರಾಮಗಳಲ್ಲಿ ಒಂದು ದಿನ, ನಗರಗಳಲ್ಲಿ ಐದು ದಿನ, ಅಡವಿಯಲ್ಲಿ ಹತ್ತು ದಿನ ಮುನಿಗಳು ತಂಗಬೇಕು ಎಂಬ ಕಟ್ಟುಪಾಡು ಈಗಲೂ ಇದೆ. ಮುನಿಯ ಈ ತಂಗುವಿಕೆ ಶ್ರಾವಕರಿಗೆ ಧರ್ಮೋಪದೇಶದ ಜೊತೆಗೆ ಆತ್ಮೋನ್ನತಿ ಕಂಡುಕೊಳ್ಳುವುದೂ ಆಗಿತ್ತು. ಮುನಿ ಸಂಚಾರ ಸಾಮಾನ್ಯವಾಗಿ ಸ್ಥಳೀಯ ಪರಿಸರದ ಗಣ್ಯ ಜೈನತೀರ್ಥಕ್ಷೇತ್ರದೆಡೆಗೆ ಮುಖಮಾಡಿರುತ್ತದೆ. ಮಾರ್ಗಮಧ್ಯ ಬರುವ ಚಿಕ್ಕಪುಟ್ಟ ಮತ್ತು ಮಹತ್ವ ಜೈನತೀರ್ಥಕ್ಷೇತ್ರಗಳ ಸಂದರ್ಶನವು ಈ ಪಥಕ್ರಮಣದ ಭಾಗವಾಗಿರುತ್ತದೆ. ಕರ್ನಾಟಕ ಸ್ಥಳೀಯ ಪರಿಸರದಲ್ಲಿ ಶ್ರವಣಬೆಳಗೊಳ ಜೈನಮಹಾಕ್ಷೇತ್ರ. ಅಂತೆಯೇ ಇದು ಕರ್ನಾಟಕದ ಸಮ್ಮೇದನವೂ ಹೌದು. ಸಮ್ಮೇದನದಲ್ಲಿ ತೀರ್ಥಂಕರರು ನಿರ್ವಾಣವಾದರೆ; ಕಳ್ವಪ್ಪುವಿನಲ್ಲಿ ಅಸಂಖ್ಯಾತ ಮುನಿಗಳು ಸ್ವಾವನ್ನು ಆಹ್ವಾನಿಸಿದರು. ಎರಡೂ ಕ್ಷೇತ್ರಗಳು ಧಾರ್ಮಿಕ ಸಾವಿನ ಶಿಖರಗಳೆ. ಇಂಥಹ ಪುಣ್ಯ ಭೂಮಿಯ ದರ್ಶನ ಮುನಿ

ನಿಯಮಗಳಲ್ಲೊಂದು ಅಂತೆಯೇ ಅವರು ಕಳ್ವಪ್ಪುವಿಗೆ ಭೇಟಿಯಿಡುತ್ತಿದ್ದರು. ಈ ಕ್ಷೇತ್ರಕ್ಕೆ ಬರುವ ಉತ್ತರದ ಭಾಗದ ಮುನಿಗಳು ಹಾವೇರಿ ಪರಿಸರದ ಮೂಲಕ ಕ್ರಮಿಸಿ ಹೋಗಿದ್ದಾರೆ. ಮುನಿಗಳು ಹಾಗೆ ಸಂಚರಿಸುವಾಗ ಸ್ಥಳೀಯವಾಗಿ ಜೈನಧರ್ಮವನ್ನು ಉಚ್ಛ್ರಾಯ ಹಂತಕ್ಕೆ ಕೊಂಡೊಯ್ದಿದ್ದಾರೆ. ಧರ್ಮಬೋಧೆಯ ಜೊತೆ ಜೊತೆಗೆ ಸಲ್ಲೇಖನ ವ್ರತವನ್ನು ಬೋಧಿಸುವ ನಿರ್ಯಾಪಕಾಚಾರ್ಯರೂ ಆಗಿದ್ದಾರೆ. ಅಂತೆಯೇ ಗುರುತಾಗಿ ಶಾಸನಗಳೆದ್ದಿವೆ. ಮುನಿಗಳ ಸಂಚಾರವೂ ಹಾವೇರಿ ಪರಿಸರದಲ್ಲಿ ಶಾಸನಗಳ ಪ್ರಸರಣದಲ್ಲಿ ಮಹತ್ವದ ಪಾತ್ರವಹಿಸಿದೆ.

ಹಾವೇರಿ ಪರಿಸರದಿಂದ ಕಳ್ವಪ್ಪು (ಶ್ರವಣಬೆಳಗೊಳ)ವಿಗೆ ಕ್ರಮಿಸುವ ಮುಖ್ಯ ಮುನಿಮಾರ್ಗ ಬಂಕಾಪುರ – ಹಾನಗಲ್ಲು – ಕುಂಚೂರು ಮುಖಾಂತರ ಶಿವಮೊಗ್ಗೆ ಪರಿಸರಕ್ಕೆ ಹೋಗುವುದಾಗಿದೆ. ಅಲ್ಲಿಂದ ಮುಂದೆ ಚಿಕ್ಕಮಗಳೂರು – ಹಾಸನ ಪರಿಸರಗಳ ಹಾಯ್ದು ಶ್ರವಣಬೆಳಗೊಳ ತಲುಪುತ್ತಿದ್ದರು. ಈ ಮಾರ್ಗ ಮಧ್ಯ ಊರ್ಜಿತಗೊಂಡ ಹಾವೇರಿ ಪರಿಸರದ ಜೈನನೆಲೆಗಳನ್ನು ಈ ರೀತಿಯಾಗಿ ಗುರುತಿಸಬಹುದು. ಧಾರವಾಡದ ಪರಿಸರದ ಅಂಚಿಗೆ ಹೊಂದಿಕೊಂಡಿರುವ ತಡಸ (ಶಿತಾ)ದಿಂದ ಪ್ರಾರಂಭವಾಗುವ ಈ ಮಾರ್ಗ ಅರಟಾಳ → ಶೀಲವಂತ ಸೋಮಾಪುರ → ಯಳವಟ್ಟಿ → ಬೆಳವತ್ತಿ → ಕರಗುದರೆ → ಬಾದಾಮಗಟ್ಟಿ → ಹಾನಗಲ್ಲು → ಬಾಳೂರು → ಹಾವಣಗಿ → ವೀರಾಪುರ → ಹೇರೂರು → ತಿಳವಳ್ಳಿ → ಹಿರೇಕೋಣತಿ → ಚಿನ್ನಮುಳುಗುಂದ → ಸುತಕೋಟೆ → ಆಲದಗೆರೆ → ಸುಣಕಲ್ಲಬಿದರೆ → ಲಿಂಗದೇವರ ಕೊಪ್ಪ → ಕುಂಚೂರು → ನೇಸ್ವಿ → ರಟ್ಟಿಹಳ್ಳಿ → ಕಡೂರು → ಮೇದೂರು → ನಾಗವಂದಕ್ಕೆ ಕೊನೆಗೊಂಡು ಹೊನ್ನಾಳಿ ಪರಿಸರದಿಂದ ಶಿವಮೊಗ್ಗೆ ಪ್ರವೇಶ ಪಡೆಯುತ್ತದೆ. ಮನ್ಡಳಾಚಾರ್ಯನಾದ ನಾಗಚಂದ್ರ ಮುನಿಪ ಈ ಮಾರ್ಗದ ಮೂಲಕ ಬೆಳಗೊಳಕ್ಕೆ ಹೋಗುವಾಗ ಹಾವೇರಿ ಪರಿಸರದ ಈ ಮಾರ್ಗದ ಕೆಲವು ಸ್ಥಳಗಳಿಗೆ ಭೇಟಿ ನೀಡಿದ್ದಾರೆ. ಕರಗುದರೆ (ಹಾನತಾ)ಗೆ ಕ್ರಿ.ಶ. ೧೧೪೮ರಲ್ಲಿ[೨೩] ಕ್ರಿ.ಶ. ೧೨೨೬ರಲ್ಲಿ ಸುಣಕಲ್ಲಬಿದರೆ (ರಾತಾ)ಗೆ ಭೇಟಿಯಿತ್ತಿದ್ದಾರೆ.[೨೪] ಈ ಮಾರ್ಗ ಮಧ್ಯದ ಇನ್ನೊಂದು ಊರು ಆಲದಗೆರೆ (ಹಿತಾ)ಯಲ್ಲಿಯೂ ಇವರ ಉಲ್ಲೇಖಗಳು ದೊರೆಯುತ್ತವೆ.

ಶ್ರವಣಬೆಳಗೊಳ ಅಲ್ಲದೆ ಈ ಹಾವೇರಿ ಪರಿಸರದಿಂದ ಲಕ್ಕುಂಡಿಗೆ, ಬನವಾಸಿಗೆ ಬಂಕಾಪುರಕ್ಕೆ ಮುಂತಾದ ಸ್ಥಳಗಳಿಗೆ ಆಗಮಿಸುವ ಮತ್ತು ಹೋಗುವ ಮುನಿಗಳ ಉಲ್ಲೇಖಗಳ ಈ ಭಾಗದಲ್ಲಿ ದೊರೆತಿವೆ. ಇಡೀ ಒಂದು ಮುನಿ ಪರಂಪರೆ ಈ ಪರಿಸರದ ವಿವಿಧ ಪ್ರದೇಶಗಳಿಗೆ ಭೇಟಿಯಿತ್ತು ಧರ್ಮಸಂವರ್ಧನೆ ಕೈಗೊಂಡಿದೆ. ಮೂಲಸಂಘ ಸೂರಸ್ಥಗಣ ಚಿತ್ರಕೂಟಗಚ್ಛ ಪೂಜ್ಯಪಾದಾನ್ವಯದ ಹರಿಣಂದಿ ಬ್ರತಿನಾಥ, ನಾಗಚಂದ್ರ, ನಂದಿಭಟ್ಟಾರಕ, ಜಯಕೀರ್ತಿ, ಮಾಣಿಕದೇವ, ಬಾಳಚಂದ್ರ ತ್ರೈವಿದ್ಯಾದೇವ ಮತ್ತು ಚಂದ್ರಮತಿ ಅವ್ವೆಯರು ಬಸದಿ ನಿರ್ಮಾಣ, ದಾನ, ಸಮಾಧಿ ಮರಣದಂತಹ ಧಾರ್ಮಿಕ ಚಟುವಟಿಕೆಗಳು ನಡೆವಲ್ಲಿ ಪ್ರೇರೇಪಿಸಲು ತಮ್ಮನ್ನು

ತೊಡಗಿಸಿಕೊಂಡಿದ್ದು ಕಂಡುಬರುತ್ತದೆ. ಕರಗದರಿ (ಹಾನತಾ), ನೇರಲಗಿ (ಹಾತಾ), ಸುಣಕಲ್ಲಬಿದರಿ (ರಾತಾ), ಆಲದಗೆರೆ (ಹಿತಾ), ಸೆಡಗುಪ್ಪೆ (ಹಾನತಾ), ಕಡಕುಳ (ಸತಾ), ಹೆರೂರು (ಹಾನತಾ), ಹತ್ತಿಮತ್ತೂರು (ಸತಾ), ಮಾಕನೂರು (ರಾತಾ) ಇತ್ಯಾದಿ ಊರುಗಳ ಶಾಸನಗಳಲ್ಲಿ ಇವರುಗಳ ಉಲ್ಲೇಖಗಳಿವೆ.

ಮುನಿಗಣಗಳಾದ ಸೂರಸ್ಥಗಣ, ದೇಸಿಗಣ, ಕಾಣೂರುಗಣ, ಬಳಗಾರ ಗಣ, ದೇವಗಣ, ಸಗರಗಣ, ಪರಲೂರು ಗಣ, ಸಿಂಹಗಣ, ದೇವಗಣ, ಭದ್ರಗಣಗಳ ಮುನಿಸಂಚಾರವು ಹಾವೇರಿ ಪರಿಸರದಲ್ಲಿ ಸಾಂಗವಾಗಿ ಜರುಗಿದ್ದು ಅವರ ಸ್ಥಳಭೇಟಿಯ ಪರಿಣಾಮವಾಗಿ ಶಾಸನಗಳೆದ್ದಿವೆ. ಅಂತೆಯೇ ಈ ಪರಿಸರದ ಎಂಟು ದಿಕ್ಕುಗಳಲ್ಲೂ ಜೈನಶಾಸನಗಳು ಪ್ರಸರಣಗೊಂಡಿವೆ.

## ೦೪. ನೈಸರ್ಗಿಕತೆ.

ಪ್ರಪಂಚದ ಬಹುತೇಕ ನಾಗರೀಕತೆಗಳು ಉಗಮವಾದದ್ದು ನೀರಿನ ಆವಾಸದ ಬಳಿ. ನೀರು ಮನುಷ್ಯನ ಮೂಲಭೂತ ಅವಶ್ಯಕತೆಗಳಲ್ಲಿ ಒಂದು. ಆದ್ದರಿಂದಲೇ ಮಾನವ ತೊರೆ, ಜರಿ, ಹಳ್ಳ, ಕೊಳ್ಳ, ಕೆರೆ, ನದಿ ಮುಂತಾದ ಜೀವಸೆಲೆಗಳ ಬಳಿ ವಾಸಮಾಡುತ್ತಾ ಬಂದಿದ್ದಾನೆ. ಭೈರಾಗಿಗಳಾದರೂ ಜಿನಮುನಿಗಳಿಗೆ ನೀರಿನ ಅವಶ್ಯಕತೆ ಉಂಟು. ಅಂತೆಯೇ ಅವರ ಸಂಚಾರದ ತಂಗುವಿಕೆ ನೀರಿನ ಆವಾಸದ ಬಳಿ ಆಗುತ್ತಿತ್ತು. ತಪ-ಧ್ಯಾನ, ಮೌನಾದಿಗಳಿಗೆ ನಿರ್ಬಯಲು ಪ್ರಶಸ್ತವಾದ ಸ್ಥಳವೂ ಹೌದು. ಅಂತೆಯೇ ಈ ಎಲ್ಲಾ ಸೌಲಭ್ಯ ಹೊಂದಿದ್ದರಿಂದ ಕಳ್ವಪ್ಪು ಮುನಿಗಳ ತಂಗುದಾಣವಾಯ್ತು. ಸಾವನ್ನು ಆಹ್ವಾನಿಸುವ ಕೇಂದ್ರವಾಯ್ತು. ಮುಂದೆ ಅದು ಧಾರ್ಮಿಕ ಶ್ರದ್ಧಾಕೇಂದ್ರವೂ ಆಗಿ ಧಾರ್ಮಿಕ ಕೈಂಕುರ್ಯಗಳು ಏರ್ಪಟ್ಟಿದ್ದನ್ನು ಅಲ್ಲಿನ ಶಾಸನಗಳು ಸಾರಿ ಹೇಳುತ್ತವೆ.

ಹಾವೇರಿ ಪರಿಸರದಲ್ಲಿ ನೈಸರ್ಗಿಕವಾಗಿ ಹರಿವ ನದಿಯ ಬಳಿ ಜಿನ ಮುನಿಗಳು ಹೆಚ್ಚು ವಿಶ್ರಮಿಸಿದ್ದಾರೆ. ಈ ತಂಗುವಿಕೆಯ ಪರಿಣಾಮವಾಗಿ ಜೈನ ಆವಾಸಗಳು ನಿರ್ಮಾಣಗೊಂಡವು. ಧರ್ಮವೂ ಪ್ರಸರಣಗೊಂಡಿತು. ಶಾಸನಗಳು ಪ್ರಸರಣಗೊಂಡವು. ತುಂಗಭದ್ರಾ, ವರದಾ, ಧರ್ಮಾನದಿ ಪಾತ್ರಗಳಲ್ಲಿ ಜೈನ ನೆಲೆಗಳು-ಶಾಸನಗಳು ಹಾವೇರಿ ಪರಿಸರದಲ್ಲಿ ಹೆಚ್ಚು ಪ್ರಸರಣಗೊಂಡಿವೆ. ತುಂಗಭದ್ರಾ ನದಿಯ ಎಡದಂಡೆಗೆ ಹೊಂದಿಕೊಂಡು ಹಳ್ಳೂರು, ಮಾಕನೂರು, ನದಿಹರಳಹಳ್ಳಿ, ಗುತ್ತಲ, ಹರಳಹಳ್ಳಿ, ವರದಾ ನದಿ ಅಕ್ಕಪಕ್ಕ ತಿಳವಳ್ಳಿ, ಹೆರೂರು, ಆಡೂರು, ಸಂಗೂರು, ದೇವಗಿರಿ, ಹಾವೇರಿ, ಕರಜಗಿ, ಹೊಸರಿತ್ತಿ, ಅಕ್ಕೂರು, ನೇರಲಗಿ, ಧರ್ಮಾನದಿಗೆ ಹೊಂದಿಕೊಂಡು ಮಂತಗಿ, ಹಾನಗಲ್ಲು, ಕರಗದರೆ ಎಂಬ ಜೈನ ನೆಲೆಗಳಲ್ಲಿ ಒಟ್ಟು ೪೦ ಜೈನ ಶಾಸನಗಳು ಪ್ರಸರಣಗೊಂಡಿವೆ.

ಹಾವೇರಿಯ ಏಳೂ ತಾಲ್ಲೂಕುಗಳಲ್ಲಿ ಜೈನಶಾಸನಗಳು ಹೆಚ್ಚು ಪ್ರಸರಣಗೊಂಡಿದ್ದು ಹಾನಗಲ್ಲು ತಾಲ್ಲೂಕಿನಲ್ಲಿ. ಇಲ್ಲಿ ಒಟ್ಟು ೫೯ ಲಿಪಿಸಹಿತ ಜೈನಶಾಸನಗಳಿವೆ. ಇಷ್ಟೊಂದು ಪ್ರಮಾಣದ ಶಾಸನಗಳು ಹರಡಲು ಬಹುಮುಖ್ಯ ಕಾರಣ ಈ ಪರಿಸರವು. ಅರೆ ಮಲೆನಾಡಿನಿಂದ ಕೂಡಿದ್ದಾಗಿದ್ದು, ಜಿನಮುನಿಗಳಿಗೆ ಇಂಥಹ ಪರಿಸರ ಅಪ್ಯಾಯಮಾನವಾದುದು. ಮುನಿ ನಿಯಮದ ಪ್ರಕಾರ ತಿಂಗಳಲ್ಲಿ ಹೆಚ್ಚು ಕಾಲ ಅಂದರೆ ಹತ್ತು ದಿನ ಅರಣ್ಯವಾಸ ಮಾಡಬೇಕಾದ್ದರಿಂದ ಈ ಪರಿಸರ ಅವರಿಗೆ ಹಿಡಿಸಿತು. ಉಳಿದ ದಿನಗಳು ನಾಡಿನ ಸಂಚಾರದ ಕಡೆ. ಆದ್ದರಿಂದ ಅಂಥಹ ಸಂದರ್ಭದಲ್ಲಿ ಧರ್ಮಪ್ರಭಾವನೆಯಿಂದ ಜೈನಶಾಸನಗಳೆದ್ದಿವೆ, ಈಗಲೂ 'ಪುಣ್ಯಸಾಗರ' ಮಹಾಮುನಿಗಳು 'ಜಂಗಲ್‌ವಾಲೆ ಬಾಬಾ' ಇಂಥಹ ನಿಯಮಗಳನ್ನು ಅನುಸರಿಸುತ್ತಿರುವುದನ್ನು ಗಮನಿಸಿದ್ದೇನೆ.

### ಆ. ಶಾಸನಗಳ ವಿಂಗಡನೆ.

ಹಾವೇರಿ ಪರಿಸರದ ಜೈನಶಾಸನಗಳ ಬೌದ್ಧಿಕ ಮತ್ತು ಭೌತಿಕ ಸ್ವರೂಪಗಳನ್ನು ಆಧರಿಸಿ ಅಧ್ಯಯನ ಮಾಡಲು ಅವಕಾಶವಿದೆ. ಈ ಹಿಂದೆ ಹೇಳಿದಂತೆ ಶಾಸನಗಳು ಶಾಸನಗಳು ಬಹುಶಿಸ್ತೀಯ ಅಧ್ಯಯನಕ್ಕೆ ಒಳಪಡುವ ಆಯಾಮವನ್ನು ಹೊಂದಿವೆ. ಅವು ಎತ್ತ ಸವಿದರೂ ಬೆಲ್ಲದಚ್ಚುಗಳಾಗಿವೆ. ಇವುಗಳ ಸ್ವರೂಪಗಳನ್ನು ಆಧರಿಸಿ ೧. ವಸ್ತು ಆಧಾರಿತ, ೨. ವಂಶಾಧಾರಿತ ಮತ್ತು ೩. ವಿಷಯಾಧಾರಿತವಾಗಿ ಅಧ್ಯಯನ ಮಾಡಬಹುದು.

### ೦೧. ವಸ್ತು ಆಧಾರಿತ ವಿಂಗಡಣೆ.

ಶಾಸನಗಳು ವಿಷಯಗಳ ನಿರೂಪಕ ಮಾಧ್ಯಮಗಳಾಗಿದ್ದರೂ ಅವುಗಳ ಹಿನ್ನೆಲೆ ಅಥವಾ ನೆಲೆಗಟ್ಟು (ಪಿಚ್)ವಿಗೆ ಒಂದು ದೀರ್ಘ ಇತಿಹಾಸವಿದೆ. ಸುಟ್ಟ ಮಣ್ಣಿನ ಫಲಕಗಳಿಂದ ಆರಂಭವಾಗುವ ಇವುಗಳ ಚರಿತೆ ಕಲ್ಲು, ತಾಮ್ರ, ಮರ, ಚಿನ್ನ, ಬೆಳ್ಳಿ, ಕಬ್ಬಿಣ, ಕಂಚು, ಹಿತ್ತಾಳೆ, ಸ್ಪಟಿಕ, ಶಂಕು ಹೀಗೆ ವಿವಿಧ ಮಾಧ್ಯಮಗಳ ಮೇಲೆ ಸ್ಥಾಪಿತವಾಗಿದೆ. ಕಲ್ಲು ಮತ್ತು ತಾಮ್ರ ಇವುಗಳಲ್ಲಿ ಹೆಚ್ಚು ಬಳಕೆಯಾಗಿವೆ. ಪ್ರಸ್ತುತ ಹಾವೇರಿ ಪರಿಸರದ ಜೈನಶಾಸನಗಳನ್ನು ಆಧರಿಸಿ ಶಾಸನಗಳ ಮಾಧ್ಯಮವನ್ನು ಇಲ್ಲಿ ವಿಂಗಡಿಸಲಾಗಿದೆ.

### ೧.೧ ತಾಮ್ರ.

ತಾಮ್ರವು ಕಾಯಿಸಿದಾಗ ಸುಲಭವಾಗಿ ಹಿಗ್ಗಿಕೊಳ್ಳುವ ಒಂದು ಲೋಹ. ಗಟ್ಟಿತನ, ಕಾಯಿಸಿದಾಗ ಉಂಟಾಗುವ ಮೃದುತ್ವ ಮತ್ತು ಆಳವಾದ ಅಕ್ಷರಗೆತ್ತನೆಗೆ ಸಹಕರಿಸುವ ಗುಣ, ಯಥೇಚ್ಛವಾಗಿ ದೊರೆಯುವ ಕಾರಣವಾಗಿ ಈ ಲೋಹವನ್ನು ಶಾಸನಗಳನ್ನು ಕೊರೆಯಲಿಕ್ಕೆ ಬಳಸುತ್ತಿದ್ದರು. ಆದ್ದರಿಂದಲೇ ಇವುಗಳಿಗೆ ತಾಮ್ರಪತ್ರ, ತಾಮ್ರಪಟ, ತಾಮ್ರಶಾಸನಗಳು ಎಂದು

ಕರೆಯುವ ವಾಡಿಕೆ ಬಂದಿರಲಿಕ್ಕೆ ಸಾಕು. ಶಾಸನದ ವಿಷಯಕ್ಕೆ ತಕ್ಕಂತೆ ತಾಮ್ರದ ಪಟ್ಟಿ ಅಥವಾ ಹಲಗೆ (ಪ್ಲೇಟ್)ಗಳನ್ನು ನಿರ್ಮಿಸಿಕೊಂಡು ಮುಂಬದಿ, ಹಿಂದಿಯಲ್ಲಿ ಶಾಸನವನ್ನು ಕೊರೆಯಲಾಗುತ್ತದೆ. ಒಂದು ವೇಳೆ ಒಂದಕ್ಕಿಂತ ಹೆಚ್ಚು ತಾಮ್ರದ ಹಲಗೆಗಳಿದ್ದರೆ ಅವುಗಳು ಕಳೆಯದಿರಲಿ ಎಂಬ ಮುನ್ನೆಚ್ಚರಿಕೆಯ ಕ್ರಮವಾಗಿ ತಾಮ್ರದ ಬಳೆಯನ್ನು ಬಳಸಿ ಕ್ರಮವಾಗಿ ಬಂಧಿಸಲಾಗಿರುತ್ತದೆ. ಜೊತೆಗೆ ಬಳೆಯ ಕೊಂಡಿಗಳಿಗೆ ವೃತ್ತಾಕಾರದ ಆಯತಾ ಮುದ್ರಿಕೆ ಮಾಡಿ ಅದರಲ್ಲಿ ರಾಜಲಾಂಛನಗಳನ್ನು ಕೆತ್ತಲಾಗಿರುತ್ತದೆ. ಗಂಗರ ಶಾಸನಗಳಲ್ಲಿರುವ 'ಗಂಗಕನ್ದರ್ಪ' ಎಂಬ ರಾಜನ ಸಹಿ ಆಕರ್ಷಣೀಯವಾದವುಗಳಾಗಿವೆ.

ಹಾವೇರಿ ಪರಿಸರದ ದೇವಗಿರಿ (ಪರಲೂರು)ಯಲ್ಲಿ ಬನವಾಸಿ ಕದಂಬರ ಮೂರು ಜೈನ ತಾಮ್ರಶಾಸನಗಳು ದೊರೆತಿವೆ. ಮೃಗೇಶವರ್ಮ, ವಿಜಯಶಿವಮೃಗೇಶವರ್ಮ, ಯುವರಾಜ ದೇವವರ್ಮರ ಈ ಶಾಸನಗಳು ಪರಲೂರಲ್ಲಿದ್ದ ಜಿನೇಂದ್ರಾಲಯಕ್ಕೆ ನಿರ್ಗ್ರಂಥ, ಶ್ವೇತಪಟ, ಯಾಪನೀಯ ಸಂಘಗಳಿಗೆ ದತ್ತಿ ಬಿಟ್ಟ ವಿಷಯವಾಗಿ ರಚಿತವಾಗಿವೆ. ಮೃಗೇಶವರ್ಮನ ಶಾಸನ ಮೂರು, ವಿಜಯ ಶಿವಮೃಗೇಶವರ್ಮನ ಶಾಸನ ನಾಲ್ಕು, ದೇವವರ್ಮನ ಶಾಸನವು ಮೂರು ತಾಮ್ರದ ಹಲಗೆಗಳನ್ನು ಹೊಂದಿವೆ. ಇವುಗಳಲ್ಲಿ ಕೊನೆಯ ಶಾಸನ ವಿಶೇಷವಾದುದು.

ದೇವವರ್ಮನ ಶಾಸನ ತಾಮ್ರದ ಹಲಗೆಗಳನ್ನು ಬಂಧಿಸಲು ತಾಮ್ರದ ಬಳೆಯನ್ನು ಅಳವಡಿಸಲಾಗಿದ್ದು. "ಬಳೆಗೆ ಕೂಡಿಸಲಾದ ದೀರ್ಘವೃತ್ತಾಕಾರದ ಮುದ್ರೆಯಲ್ಲಿ ಬಲಮುಖವಾಗಿ ನಿಂತಿರುವ ಯಾವುದೋ ಒಂದು ಪ್ರಾಣಿ ತನ್ನ ತಲೆಯನ್ನು ಎಡಕ್ಕೆ ಬಳಸಿದಂತಿದ್ದು ಅದರ ಮೇಲೆ ಕುಳಿತಂತೆ ಅಥವಾ ಅದಕ್ಕೆ ಒರಗಿದಂತೆ ದೇವತೆಯ ಅಥವಾ ಮನುಷ್ಯನ ಚಿತ್ರವನ್ನು ಕೆತ್ತಲಾಗಿದೆ. ಎಂಬ ವಿವರಣೆಯನ್ನು ಶಾಸನ ಸಂಪಾದಕರು ತಿಳಿಸಿದ್ದಾರೆ ಅಡಿ ಟಿಪ್ಪಣಿಯಲ್ಲಿ ಚಿತ್ರದಲ್ಲಿ ತಲೆಯ ಭಾಗ ಮಾತ್ರವೇ ಸ್ಪಷ್ಟವಾಗಿ ಕಾಣುವಂತಿದ್ದು ಅದು ಬಹುಮಟ್ಟಿಗೆ ಸಣ್ಣಕೊಂಬುಗಳ ಜಿಂಕೆಯಂತೆ ನನಗೆ ತೋರುತ್ತದೆ ಎಂದು ಸಹ ಸೂಚಿಸಲಾಗಿದೆ."[೨೫] ಇಲ್ಲಿರುವ ಜಿಂಕೆಯು ಕದಂಬರ ರಾಜಲಾಂಛನವಲ್ಲ ಮೇಲಾಗಿ ಅವರ ಲಾಂಛನ ಒಂದು ಕಾಲನ್ನೆತ್ತಿದ ಸಿಂಹ ಎಂದು ಅಂದುಕೊಳ್ಳಲಾಗಿದೆ. ಇವರ ನಾಣ್ಯಗಳಲ್ಲೂ ರಾಜ ಲಾಂಛನವಿಲ್ಲದೆ ಅಷ್ಟದಳದ ಪದ್ಮದ ಚಿಹ್ನೆಯನ್ನು ಉಪಯೋಗಿಸಿದ್ದಾರೆ.[೨೬] ಅಂತಾಗಿ ಇಲ್ಲಿರುವ ಜಿಂಕೆಯ ಮುದ್ರಿಕೆಯನ್ನು ಮತ್ತು ಅಲ್ಲಿರುವ ದೇವತೆಯ ಆಕೃತಿಯನ್ನು ಜೈನ ಹಿನ್ನೆಲೆಯಲ್ಲಿಯೇ ಅರ್ಥೈಯಿಸಕೊಳ್ಳಬೇಕು.

ಮುದ್ರೆಯಲ್ಲಿರುವ ದೇವತೆ ೧೬ನೆಯ ತೀರ್ಥಂಕರ ಶಾಂತಿನಾಥ ಮತ್ತು ಹಿನ್ನೆಲೆಯಲ್ಲಿರುವ ಜಿಂಕೆ ಅವನ ಲಾಂಛನವಾಗಿದೆ. ಬೃಹತ್‌ಪರಲೂರ (ಪರಲೂರು > ದೇವಗಿರಿ)ಲ್ಲಿದ್ದ ಅರ್ಹತ್: ಭಗವಂತ ಚೈತ್ಯಾಲಯ ಇದ್ದುದಾಗಿ ಇಲ್ಲಿರುವ ಕದಂಬ ಶಾಸನಗಳೇ ಉಲ್ಲೇಖಿಸಿವೆ. ಅದು ಯಾವ ತೀರ್ಥಂಕರನದ್ದೆಂದು ಹೇಳಿಲ್ಲ. ಆದರೆ ದೇವವರ್ಮನ ಶಾಸನದಲ್ಲಿರುವ ಮುದ್ರಿಕೆ ಇದು ಚೈತ್ಯಾಲಯ

ಎಂದು ತೋರಿಸಿಕೊಟ್ಟಿದೆ. ಇದು ಹೊಸ ವಿಷಯ. ದೇವಚಂದ್ರ ಶಾಂತಿನಾಥನ ಕಥಾಸಾರದಲ್ಲಿ ಪೂಜ್ಯಪಾದರು ಕಳೆದುಹೋದ ದೃಷ್ಟಿಯನ್ನು ಶಾಂತಿನಾಥರಿಗೆ ವಂದಿಸಿ ಮರಳಿಪಡೆದಿದ್ದು ಬಂಕಾಪುರದಲ್ಲಿ ಎಂದು ಹೇಳಿದ್ದಾನೆ.[೨೭] ಈ ಕ್ರಿಯೆ ಬಂಕಾಪುರದಲ್ಲಿ ಅಲ್ಲ ಅದು ತ್ರೀಪರ್ವತದಲ್ಲಿ ನಡೆದದ್ದು ಎಂದು ಅರ್ಥೈಯಿಸಿಕೊಳ್ಳಬೇಕಾಗುತ್ತದೆ. ಯಾಕೆಂದರೆ ಪೂಜ್ಯಪಾದರ ಕಾಲ ಐದನೆಯ ಶತಮಾನವೆಂದು ವಿದ್ವಾಂಸರು ಗುರುತಿಸಿದ್ದಾರೆ.[೨೮] ಈ ಕಾಲಾವಧಿಯ ಬಂಕಾಪುರದಲ್ಲಿ ಯಾವುದೇ ಜೈನ ಅವಶೇಷಗಳು ಲಭ್ಯವಿಲ್ಲ. ಅದೇ ತ್ರೀಪರ್ವತದಲ್ಲಿ ಚೈತ್ಯಾಲಯವಿದ್ದು ಕದಂಬರಿಂದ ಅದಕ್ಕೆ ದತ್ತಿ ಸಂದಿವೆ. ಮೇಲಾಗಿ ಅದು ಶಾಂತಿನಾಥ ಜಿನಾಲಯವಾದ್ದರಿಂದ ಪೂಜ್ಯಪಾದರು ಇಲ್ಲಿರುವ ಜಿನಾಲಯದಲ್ಲಿಯೇ 'ಶಾಂತ್ಯಾಷ್ಟಕ'ವನ್ನು ಬರೆದು ದೃಷ್ಟಿಯನ್ನು ಹಿಂಪಡೆದರು ಎಂದು ವ್ಯಾಖ್ಯಾನಿಸಿಕೊಳ್ಳಬೇಕಾಗುತ್ತದೆ.

ಹಾವೇರಿ ಪರಿಸರದಲ್ಲಿ ಇದುವರೆಗೂ ದೊರೆತ ಜೈನ ತಾಮ್ರ ಶಾಸನಗಳಲ್ಲಿ ಕೊನೆಯದ್ದು ಬಾದಾಮಿ ಚಲುಕ್ಯರ ಕಾಲದ್ದು. ಅಳುಪರ ರಾಜ ಕ್ರಿ.ಶ. ೭೦೭ರಲ್ಲಿ ಚಕ್ರವರ್ತಿ ವಿನಯಾದಿತ್ಯನಲ್ಲಿ ವಿನಂತಿಸಿಕೊಂಡು ಕುಂಕುಮದೇವಿ ಕಟ್ಟಿಸಿ ಬಸದಿಗೆ ಗುಡ್ಡಿಗೆರೆ ಗ್ರಾಮವನ್ನು ದತ್ತಿ ಕೊಡಿಸಿದ್ದು ಶಾಸನಸಾರ.[೨೯] ಎಂಟು ತಾಮ್ರದ ಹಲಗೆಯುಳ್ಳ ಈ ಶಾಸನ ಏಳು ಬದಿಯಲ್ಲಿ ಬರವಣಿಗೆಯನ್ನು ಹೊಂದಿದೆ. ಎಲ್ಲ ಹಲಗೆಗಳನ್ನು ವೃತ್ತಾಕಾರದ ತಾಮ್ರದ ಬಳೆಯಿಂದ ಬಂಧಿಸಲಾಗಿದ್ದು, ವೃತ್ತಾಕಾರದ ಮೊಹರಿನೊಂದಿಗೆ ಬೆಸೆಯಲಾಗಿದೆ. ಇದರಲ್ಲಿ ಚಲುಕ್ಯರ ರಾಜಲಾಂಛನವಾದ ವರಹ (ಹಂದಿ)ವನ್ನು ಶಿಲ್ಪಿಸಲಾಗಿದೆ. ರಾಜಲಾಂಛನವು ಸ್ಪಷ್ಟವಾಗಿ ತಾಮ್ರಶಾಸನದಲ್ಲಿ ಬಿಂಬಿತವಾಗಿದ್ದು ಚಲುಕ್ಯರಲ್ಲಿ ಮೊದಲಾದಂತೆ ತೋರುತ್ತದೆ. ಬನವಾಸಿ ಕದಂಬರ ಲಾಂಛನವು ಸಿಂಹವಾದರೂ ಅದು ಕ್ವಚಿತ್ತಾಗಿ ಬಂದಿಲ್ಲ.

ಶಾಸನಗಳು ಕಲ್ಲಿನ ಮೇಲೆ ಕೆತ್ತನೆಗಳಾಗುತ್ತಿದ್ದರೂ ತಾಮ್ರದ ಬಳಕೆ ನಿಲ್ಲಲಿಲ್ಲ. ದಾನವನ್ನು ಪಡೆದುಕೊಂಡ ದೇಗುಲ, ವ್ಯಕ್ತಿ ತಮ್ಮ ಹಕ್ಕು ಸ್ವಾಮ್ಯತೆ ಕಾಪಾಡಿಕೊಳ್ಳಲು ರಾಜರೇ ಈ ನಡಾವಳಿ ತಂದಂತೆ ಕಾಣುತ್ತದೆ. ತಾಮ್ರಶಾಸನ ಗಾತ್ರದಲ್ಲಿ ಸಣ್ಣವು, ರಕ್ಷಿಸಿ ಇಟ್ಟುಕೊಳ್ಳುವುದು ಸುಲಭ ಆದ್ದರಿಂದ ಇವುಗಳ ಬಳಕೆ ಎಲ್ಲ ರಾಜಸತ್ತೆಯ ಕಾಲದಲ್ಲೂ ನಡೆದುಕೊಂಡು ಬಂದಿದೆ. ಕೆಲವೊಂದು ಸಾರಿ ದಾನ ಕೊಟ್ಟ ನಿಮಿತ್ತ ನೆಟ್ಟ ಶಿಲಾಶಾಸನಗಳನ್ನು ಧ್ವಂಸ ಮಾಡಿರಬಹುದು ಎಂಬ ಅರಿವಿನಿಂದ ಪ್ರತಿರೂಪಗಳಾದ ತಾಮ್ರಶಾಸನಗಳು ಉದಯಿಸಿದವು. ದಾನವನ್ನು ಕಬಳಿಸುತ್ತಿದ್ದರಿಂದಲೇ ಶಾಪಾಶಯಗಳು ಶಾಸನಗಳಲ್ಲಿ ಒಡಮೂಡಿದವು. ತಾಮ್ರ ಶಾಸನಗಳು ಅಭಿರಕ್ಷೆಯಲ್ಲಿ ಇರುತ್ತಿದ್ದರಿಂದ ಯಾರೂ ದಾನಭೂಮಿಯನ್ನು ಕಬಳಿಸಲು ಸಾಧ್ಯವಾಗುತ್ತಿರಲಿಲ್ಲ. ಆದರೂ ಇದರಲ್ಲಿ ಕೂಟ ಶಾಸನಗಳು ರಚಿತವಾಗಿದ್ದು ತಿಳಿಯದ ವಿಷಯವೇನಲ್ಲ. ಅಂತಾಗಿ ಅರಸರು ತಾಮ್ರ ಶಾಸನಗಳಲ್ಲಿ ತಮ್ಮ ಸಹಿಯನ್ನು ಹಾಕತೊಡಗಿದರು ವಿಜಯನಗರ ರಾಜರಲ್ಲಿ ಈ

ವಾಡಿಕೆ ಹೆಚ್ಚಾಗಿ ಕಂಡುಬರುತ್ತದೆ. ಹಾವೇರಿ ಪರಿಸರದ ಜೈನಶಾಸನಗಳಲ್ಲಿ ತಾಮ್ರದ ಬಳಕೆ ಹೊರತುಪಡಿಸಿ ಮತ್ತಾವುದೇ ಲೋಹಗಳ ಬಳಕೆ ಇದುವರೆಗೂ ಕಂಡುಬಂದಿಲ್ಲ.

## ೧.೨ ಶಿಲೆ.

ಸುಲಭ, ಯಥೇಚ್ಛವಾಗಿ ಸಿಗುವ, ಧೀರ್ಘಕಾಲ ಬಾಳಿಕೆ ಮತ್ತು ತಾಳಿಕೆ ಬರುವ ಸಾಧನ ಕಲ್ಲು. ಆದ್ದರಿಂದಲೇ ಕನ್ನಡ ನಾಡಿನ ಶಾಸನಗಳು ಶೇಕಡಾ ೯೦ರಷ್ಟು ಕಲ್ಲಿನ ಮೇಲೆ ಮುದ್ರಿತಗೊಂಡಿವೆ. ಅಶೋಕನ ಶಾಸನಗಳಿಂದ ಹಿಡಿದು ಇತ್ತೀಚಿನವರೆಗೂ ಶಾಸನ ಕೊರೆಯುವಲ್ಲಿ ಇವುಗಳ ಬಳಕೆ ಅನನ್ಯ. ಹಾವೇರಿ ಪರಿಸರದ ೧೫೦ ಜೈನ ಶಾಸನಗಳಲ್ಲಿ ೧೪೬ ಶಿಲೆಯಲ್ಲಿಯೇ ರಚಿತವಾಗಿವೆ. ದಾನಿಗ ತಾನು ಕೊಟ್ಟ ದಾನದ ಒಕ್ಕಣಿಕೆ ಬಹುಕಾಲ ಉಳಿಯಲೆಂದೋ, ಕೊಟ್ಟ ದಾನ ಪರರಿಗೆ ತಿಳಿಯಲೆಂದೋ, ದಾನಕೊಟ್ಟ ಭೂಮಿಯ ಗುರುತಿಗಾಗಿಯೋ ಶಾಸನಗಳನ್ನು ಕಲ್ಲುಗಳಲ್ಲಿ ಬರೆಸುವುದು ರೂಢಿಯಾಯ್ತು. ಈ ಶಾಸನ ಕಲ್ಲುಗಳಲ್ಲಿ ವಿವಿಧ ವೈಲಕ್ಷಣ ಕಲ್ಲುಗಳನ್ನು ಬಳಸಿಕೊಳ್ಳಲಾಗಿದೆ. ಸಾಮಾನ್ಯ ಕರಿಕಲ್ಲು, ಬಳಪದ ಕಲ್ಲು, ಅಮೃತಶಿಲೆ ಇವುಗಳಲ್ಲಿ ಪ್ರಮುಖವಾದವುಗಳು.

ಕಪ್ಪುಕಲ್ಲನ್ನು ಚಲುಕ್ಯ, ರಾಷ್ಟ್ರಕೂಟರು ಉಳಿದ ಮೂರು ಕಲ್ಲುಗಳ ಮಾದರಿಗಳನ್ನು ಚಾಳುಕ್ಯರು, ಕಳಚೂರ್ಯರು, ಸೇವುಣರು ಹಾವೇರಿ ಭಾಗದ ಶಾಸನಗೆತ್ತನೆಗೆ ಬಳಸಿಕೊಂಡಿದ್ದಾರೆ. ಫಲಕದ ಆಕೃತಿಯ ಕಲ್ಲುಗಳಲ್ಲಿ, ಬಸದಿಯ ನವರಂಗದ ತೊಲೆಯಲ್ಲಿ, ತೀರ್ಥಂಕರ ಮೂರ್ತಿಯ ಪಾದಪೀಠದಲ್ಲಿ ಸಾಣೇಕಲ್ಲಿನಲ್ಲಿ, ಗಡಿಕಲ್ಲುಗಳಲ್ಲಿ ಜೈನಶಾಸನಗಳನ್ನು ಕೆತ್ತಿರುವುದು ಈ ಭಾಗದಲ್ಲಿ ಗಮನಿಸಬಹುದು.

ಸಾಮಾನ್ಯ ಕಪ್ಪುಕಲ್ಲಿನಲ್ಲಿಯೂ ತಕ್ಕಮಟ್ಟಿಕೆ ನಯವಂತಿಕೆಯನ್ನು ಹೊಂದಿದ ಶಾಸನ ಆಡೂರಿನದು. ಕ್ರಿ.ಶ. ೭೦೭ರಲ್ಲಿ ರಚಿತವಾದ ಈ ಶಾಸನ ಬಾದಾಮಿ ಚಲುಕ್ಯ ರಾಜಸ್ವಕ್ಕೆ ಒಳಪಟ್ಟ ರಚನೆ.[೩೦] ಅಕ್ಷರಗಳು ಆಳವಲ್ಲದಿದ್ದರು ಸ್ಪುಟವಾಗಿವೆ. ಸಾಮಾನ್ಯ ಕಲ್ಲಿನಲ್ಲಿಯ ಗೀರು ಆಕೃತಿಯ 'ಪುಷ್ಕರ' ಶಾಸನ ಶಿಲ್ಪವನ್ನು ಒಡಮೂಡಿಸಿದ್ದು ಶಿಲ್ಪಿಯ ಮನೋಜ್ಞತೆ ಪ್ರತಿರೂಪ. ಹಾವೇರಿ ಪರಿಸರದ ಇಡೀ ಜೈನಶಾಸನಗಳಲ್ಲಿಯೇ ಅತ್ಯಂತ ಸುಂದರ, ಸ್ಪಷ್ಟ, ಆಳವಾದ, ಸ್ಪುಟವಾದ ಅಕ್ಷರಗಳನ್ನು ಹೊಂದಿದ್ದು ನದಿಹರಳಹಳ್ಳಿಯ ಕಲ್ಯಾಣ ಕಳಚೂರ್ಯ ಕಾಲದ ಜೈನಶಾಸನ.[೩೧] ಅಮೃತಶಿಲೆಯನ್ನು ಈ ಶಾಸನ ರಚನೆಯಲ್ಲಿ ಬಳಸಿದ್ದು ಅಕ್ಷರಗಳು ಮುತ್ತು ಪೋಣಿಸಿದಂತಿವೆ. ಶಿಲ್ಪದ ನಯವಂತಿಕೆ ಅರಿತ ಶಿಲ್ಪಿ ಶಾಸನ ಮೇಲೆ ವೃಷಭ ತೀರ್ಥಂಕರ ಅವನ ಲಾಂಛನ ವೃಷಭ, ಯಕ್ಷಿ ಕೂಷ್ಮಾಂಡಿನಿಯ ಉಬ್ಬುಶಿಲ್ಪಗಳನ್ನು ಕೆತ್ತಲು ಸಾರ್ಥಕ್ಯಗೊಳಿಸಿಕೊಂಡಿದ್ದಾನೆ. ಸಾಮಾನ್ಯ ಕಲ್ಲಿನಲ್ಲಿಯೂ ಶಾಸನವನ್ನು ಅಂದವಾಗಿ ಕೆತ್ತಬಹುದು ಎಂಬುದನ್ನು ಕಂಡರಣೆಕಾರ ಹಾವೇರಿಯ ಆದಿನಾಥ ಬಸದಿಯಲ್ಲಿ ತೋರಿಸಿಕೊಟ್ಟಿದ್ದಾನೆ.[೩೨] ನವರಂಗದ ತೊಲೆಯಲ್ಲಿರುವ ಈ ಶಾಸನ

ಒಂದು ಇಂಚು ಗಾತ್ರದ ಅಕ್ಷರಗಳನ್ನು ಅಂದವಾಗಿ ಆಳವಾಗಿ ಕೊರೆಯಲಾಗಿದೆ. ಸದ್ಯ ಈ ಬಸದಿ ವೀರಭದ್ರ ದೇವಾಲಯವಾಗಿದೆ. ಇನ್ನು ಅರಟಾಳದ ಪಾರ್ಶ್ವನಾಥ ಬಸದಿಯಲ್ಲಿ ಇತ್ತೀಚಿಗೆ ಶೋಧಿಸಿದ ಗಂಧ ತೇಯುವ ಸಾಣೆಕಲ್ಲಿನಲ್ಲಿ ಶಾಸನವಿರುವುದು ಉಲ್ಲೇಖನೀಯ.[೩೩] ಹೊಸೂರು ಕಾಂನಂಣ ಎಂಬುವನು ಈ ಕಲ್ಲನ್ನು ಮಾಡಿಸಿಕೊಟ್ಟನೆಂಬ ಬರಹವಿದೆ.

### ೦೨. ವಂಶಾಧಾರಿತ ವಿಂಗಡಣೆ.

ಹಾವೇರಿ ಪರಿಸರದ ಭಾಗವನ್ನು ಕರ್ನಾಟಕದ ಮುಖ್ಯ ಅರಸು ಮನೆತನಗಳಾದ ಬನವಾಸಿ ಕದಂಬ, ಬಾದಾಮಿ ಚಲುಕ್ಯ, ರಾಷ್ಟ್ರಕೂಟ, ಕಲ್ಯಾಣ ಚಾಳುಕ್ಯ, ಕಳಚೂರ್ಯ ಸೇವುಣ ರಾಜವಂಶಗಳು ಆಳಿವೆ. ಈ ಆಧಾರದ ಮೇಲೆ ಇಲ್ಲಿನ ಜೈನ ಶಾಸನಗಳನ್ನು ವಿಂಗಡಿಸಿ ಅಧ್ಯಯನಕ್ಕೊಳಪಡಿಸಬಹುದು. ಎರಡನೆಯ ಅಧ್ಯಾಯದ 'ಶಾಸನ ಆಧಾರಿತ ಹಿನ್ನೋಟ'ದಲ್ಲಿ ಈ ಕ್ರಮವನ್ನೇ ಅಳವಡಿಸಿಕೊಳ್ಳಲಾಗಿದೆ. ರಾಜವಂಶಗಳ ಹಿನ್ನೆಲೆಯಲ್ಲಿ ದೊರೆಯುವ ಹಾವೇರಿ ಪರಿಸರದ ಜೈನ ಶಾಸನಗಳ ಅಂಕಿ ಅಂಶಗಳನ್ನು ಈ ರೀತಿಯಾಗಿ ವಿಂಗಡಿಸಬಹುದು.

| ಕ್ರಸಂ. | ರಾಜವಂಶ | ದೊರೆತ ಶಾಸನಗಳ ಸಂಖ್ಯೆ | ಬಳಸಿದ ಮಾಧ್ಯಮ |
|---|---|---|---|
| ೦೧ | ಬನವಾಸಿ ಕದಂಬರು | ೦೩ | ತಾಮ್ರ |
| ೦೨ | ಬಾದಾಮಿ ಚಲುಕ್ಯರು | ೦೨ | ೦೧ ತಾಮ್ರ, ೦೧ ಶಿಲೆ |
| ೦೩ | ರಾಷ್ಟ್ರಕೂಟರು | ೧೦ | ಶಿಲೆ |
| ೦೪ | ಕಲ್ಯಾಣ ಚಾಳುಕ್ಯರು | ೩೯ | ಶಿಲೆ |
| ೦೫ | ಗುತ್ತರು | ೦೧ | ಶಿಲೆ |
| ೦೬ | ಕಳಚೂರ್ಯರು | ೦೫ | ಶಿಲೆ |
| ೦೭ | ಹೊಯ್ಸಳರು | ೦೧ | ಶಿಲೆ |
| ೦೮ | ಸೇವುಣರು | ೭೧ | ಶಿಲೆ |
| ೦೯ | ವಿಜಯನಗರ ಅರಸರು | ೧೬ | ಶಿಲೆ |
| ೧೦ | ಇತರೆ | ೦೨ | ಶಿಲೆ |
| | ಒಟ್ಟು | ೧೫೦ | |

### ೦೩. ವಿಷಯಾಧಾರಿತ ವಿಂಗಡಣೆ.

ಒಂದು ನಿರ್ದಿಷ್ಟ ಉದ್ದೇಶವಿರದೆ ಶಾಸನ ರಚಿತವಾಗಲಾರದು. ಶಾಸನಗಳಲ್ಲಿರುವ ಮುಖ್ಯ ವಿಷಯ ಖಂಡಿಕೆಯನ್ನು ಗಮನದಲ್ಲಿರಿಸಿಕೊಂಡು ಅಭ್ಯಸಿಸಬಹುದಾಗಿದೆ. ಕನ್ನಡ ಕಲ್ಬರೆಹಗಳಲ್ಲಿ ಬಹುಮುಖ್ಯವಾಗಿ ಎರಡು ಅಂಶಗಳ ಉದ್ದೇಶ ವ್ಯಾಪಕವಾಗಿದೆ. ಒಂದನೆಯದು ದಾನ ಪ್ರಕ್ರಿಯೆ;

ಇನ್ನೊಂದು ಮರಣದ ಪ್ರಸ್ತಾಪ. ಈ ಎರಡೂ ಅಂಶಗಳು ಜೈನಧರ್ಮಕ್ಕೆ ಹೊರತಾದವಲ್ಲ ಅಂತೆಯೇ ಈ ಸಂಸ್ಕೃತಿ ಶಾಸನಗಳಲ್ಲಿಯೂ ಒಡಮೂಡಿದೆ.

## ೩.೧ ದಾನ.

ದಾನವು ಜೈನಧರ್ಮದ ಒಂದು ಪ್ರಧಾನ ಅಂಗ. ಪ್ರತಿಯೊಬ್ಬ ಶ್ರಾವಕನೂ ತನ್ನ ಆದಾಯದ ನಿರ್ದಿಷ್ಟ ಭಾಗವನ್ನು ದಾನ ಮಾಡುವುದು ಕಡ್ಡಾಯ. ಜೈನ ಗೃಹಸ್ಥ ನಿತ್ಯ ಪಾಲಿಸುವ ದೇವಪೂಜೆ, ಗುರುಸೇವೆ, ಸ್ವಾಧ್ಯಾಯ, ಸಂಯಮ, ತಪಸ್ಸು, ದಾನ ಎಂಬ ಷಟ್ಕರ್ಮಗಳಲ್ಲಿ ದಾನವೂ ಸ್ಥಾನ ಪಡೆದುಕೊಂಡಿದೆ. "ದಾನ, ಪೂಜೆ, ಶೀಲ, ಉಪವಾಸ ಎಂಬ ನಾಲ್ಕು ತೆರನಾದ ಕ್ರಿಯಾ ವಿಧಿಗಳನ್ನು ಅನುಸರಿಸುವುದೇ ಧರ್ಮ" ಎಂದು ಬಂಧುವರ್ಮ ತನ್ನ 'ಹರಿವಂಶ್ಯಾಭ್ಯೂದಯಂ' ಕಾವ್ಯದಲ್ಲಿ ಹೇಳುತ್ತಾನೆ.[೩೪] ಈ ಕ್ರಿಯೆಗಳ ಸ್ವರೂಪವನ್ನು ವಿಸ್ತರಿಸುತ್ತ ದಾನ ಎಂದರೆ ಪಾತ್ರ ವಿಶೇಷತೆ ಅರಿತು ಕೊಡುವುದು ಇವುಗಳಲ್ಲಿ ಮುಖ್ಯವಾಗಿ ಆಹಾರದಾನ, ಅಭಯದಾನ, ಶಾಸ್ತ್ರದಾನ, ಭೈಷಜ್ಯದಾನ ಎಂದು ಬಂಧುವರ್ಮ ಉಲ್ಲೇಖಿಸಿದ್ದಾನೆ.[೩೫] ಈ ನಾಲ್ಕು ತೆರನಾದ ದಾನದ ವಿಧಗಳನ್ನು ಬಂಧುವರ್ಮ ಮರು ಒಕ್ಕಾಣಿಸಿದ್ದಾನಷ್ಟೆ. ಈ ದಾನವಿಧಿಗಳು ಬಹುಹಿಂದಿನಿಂದಲೂ ಜೈನರಲ್ಲಿ ಅನುಸರಣೆಗೊಳ್ಳುತ್ತಿದ್ದ ಪದ್ಧತಿಗಳಾಗಿವೆ.

ಜೈನ ಮತವು 'ದಾನ'ಕ್ಕೆ ವಿಶೇಷ ಮಹತ್ವ ಕಲ್ಪಿಸಿರುವುದರ ಔಚಿತ್ಯವನ್ನು ಗಮನಿಸಿದರೆ, ಜೈನ ಸಮಾಜವು ಧರ್ಮ ಪ್ರಭಾವನೆಯಲ್ಲಿ ತೊಡಗಿದ ಯತಿಗಳಿಗೆ ಮತ್ತು ಆರ್ಯಿಕೆಯರಿಗೆ ಅನುವಾಗಲೆಂದು ಈ ವಿಧಿಯನ್ನು ರೂಪಿಸಿದಂತಿದೆ. ಇದರಂತೆ ಅಹಿಂಸಾವ್ರತಿಗಳಾದ ಅವರಿಗೆ ಮಳೆಗಾಲದಲ್ಲಿ ಸಂಚಾರ ನಿಷಿದ್ಧವಿದ್ದು ತಂಗಲು ವಸತಿಗಳನ್ನು ಕಲ್ಪಿಸುವುದೇ ಅಭಯದಾನದ ವಿಧಾನವಾಗಿದೆ. ವೃದ್ಧರಿಗೆ, ರೋಗಪೀಡಿತರಿಗೆ ಸಾಂತ್ವಾನ ನೀಡಿ ಹಿಂಸೆಯನ್ನು ಪರಿಹರಿಸುವ ಭೈಷಜ್ಯದಾನವು ಶ್ರೇಷ್ಠವೆನ್ನಿಸಿದರೆ, ಧರ್ಮಪ್ರಭಾವನೆಗೆ ಮತ್ತು ಸ್ವಾಧ್ಯಾಯಕ್ಕೆ ನೆರವಾಗುವ ಶಾಸ್ತ್ರದಾನವು ಅತ್ಯುತ್ತಮವೆನ್ನಿಸಿತ್ತು. ಹೀಗೆ ಜೈನಮತದಲ್ಲಿ 'ದಾನ'ವು 'ಪೂಜೆಯಷ್ಟೇ ಶ್ರೇಷ್ಠವಾದ ನಿತ್ಯವಿಧಿಯಾಗಿ ಪರಿಣಮಿಸಿತು.[೩೬]

ಹಾವೇರಿ ಪರಿಸರದ ಜೈನ ಶಾಸನಗಳಲ್ಲಿ ದಾನಕೊಡುವ ಪ್ರಕ್ರಿಯೆಗಳು ಅವ್ಯಾಹತವಾಗಿದ್ದು, ಶ್ರಾವಕರು, ಗಾವುಂಡರು, ನಾಳ್ಗಾವುಂಡರು, ವಡ್ಡವ್ಯವಹಾರಿಗಳು, ಮಹಾವಡ್ಡವ್ಯವಹಾರಿಗಳು ರಾಜರು, ಸಾಮಂತರು ದಾನ ಕೊಡುವ ಪ್ರಕ್ರಿಯೆಯಲ್ಲಿ ಪಾಲ್ಗೊಂಡಿದ್ದಾರೆ. ಇಲ್ಲಿ ಒಟ್ಟು ೩೭ ದಾನ ಶಾಸನಗಳಿದ್ದು ವಿವಿಧ ರೀತಿಯ ದಾನದ ಬಹುಮುಖಗಳನ್ನು ಒಳಗೊಂಡಿವೆ ಅವುಗಳನ್ನು ಸಂಕ್ಷಿಪ್ತಗೊಳಿಸಿ ಈ ರೀತಿಯಾಗಿ ಅಭ್ಯಸಿಸಬಹುದು.

## ೦೧. ಮುನಿಸಂಘಗಳಿಗೆ ದಾನ.

ಜೈನಧರ್ಮದ ವ್ಯಾಪಕತೆ ಹರಡಲು ಮುನಿಸಂಘಗಳ ಪಾತ್ರ ಅನನ್ಯ. ಈ ಧರ್ಮದ ನಿರ್ಗ್ರನ್ಥ ಮಹಾಶ್ರಮಣ ಸಂಘ, ಶ್ವೇತಪಟ ಮಹಾಸಂಘ ಮತ್ತು ಯಾಪನೀಯ ಸಂಘಗಳ ಶ್ರೇಯೋಭೀವೃದ್ಧಿಗಾಗಿ ಮತ್ತು ಉಪಭೋಗಕ್ಕಾಗಿ ಕಾಲವಙ್ಗಾ ಎಂಬ ಗ್ರಾಮದ ಒಂದು ಭಾಗವನ್ನು, ೧೨ ನಿವರ್ತನ ಭೂಮಿಯನ್ನು ಕದಂಬ ರಾಜರಾದ ವಿಜಯಶಿವಮೃಗೇಶವರ್ಮ ಮತ್ತು ಯುವರಾಜ ದೇವವರ್ಮ ತ್ರೀಪರ್ವತದಲ್ಲಿ ಕೊಟ್ಟರು.[೩೭]

## ೦೨. ಆಹಾರದಾನ.

'ದಾನದೊಳನ್ನಮೆ ಸಾರಂ'[೩೮] ಎನ್ನುವ ಶಾಸನದ ಒಕ್ಕಣಿಯಂತೆ ದಾನಗಳಲ್ಲಿ ಶ್ರೇಷ್ಠವಾದ ದಾನ ಆಹಾರದಾನವಾಗಿದೆ. ಜೈನರಲ್ಲಿ ಪ್ರಥಮ ತೀರ್ಥಂಕರ ಆದಿನಾಥನ ಕಾಲದಿಂದಲೂ ಆಹಾರದಾನ ಕೊಡುವ ಪದ್ಧತಿ ಬೆಳೆದುಕೊಂಡುಬಂದಿದೆ. ಹಸ್ತಿನಾಪುರದ ಶ್ರೇಯಾಂಸಕುಮಾರನೆಂಬುವನು ವೈಶಾಖ ಶುಕ್ಲಪಕ್ಷ ತೃತಿಯ ದಿನದಂದು ಸನ್ಯಾಸ ಸ್ವೀಕರಿಸಿದ ಆದಿನಾಥರಿಗೆ ಪ್ರಥಮವಾಗಿ ಕಬ್ಬಿನರಸವನ್ನು ಆಹಾರವಾಗಿ ಕೊಟ್ಟ. ಈ ದಿನವನ್ನು ಜೈನರು ಅಕ್ಷಯ ತೃತೀಯ ಹಬ್ಬವನ್ನಾಗಿ ಈಗಲೂ ಆಚರಿಸುತ್ತಾರೆ. ಈ ಸಂಬಂಧಿ ಸ್ಮಾರಕಗಳು ಪ್ರಸ್ತುತ ಬಿಹಾರದಲ್ಲಿವೆ. ಆದಿನಾಥನಿಂದಲೇ ಜೈನಧರ್ಮದಲ್ಲಿ ಮುನಿಪರಂಪರೆ ಬೆಳೆದುಕೊಂಡು ಬಂದಿತು. ಸಕಲವನ್ನೂ ತ್ಯಾಗ ಮಾಡಿದ ಜಿನಮುನಿಗಳು ತಾವು ಅಡುಗೆ ತಯಾರಿಸರು. ಶ್ರಾವಕರೇ ಅವರಿಗೆ ಆಹಾರ ನೀಡುವರು. ಇದನ್ನು ಶಾಸನಗಳಲ್ಲಿ ಆಹಾರ ದಾನ ಎಂದೇ ಬಣ್ಣಿಸಲಾಗಿದೆ. ಮುನಿ ಆಹಾರ ಪದ್ಧತಿಗೆ 'ಚರಿಗೆ' ಎನ್ನುವರು. ಕರಿಗುದರೆ (ಹಾತಾ) ಶಾಸನದಲ್ಲಿ ಈ ಪದ ಉಕ್ತವಾಗಿದೆ. ಊರಿಗೆ, ಬಸದಿಗೆ ಬರುವ ನಿತ್ಯ ಸಂಚಾರಿ ಮುನಿಗಳ ಮತ್ತು ಕಂತಿಯರ ಆಹಾರಕ್ಕಾಗಿಯೇ ಹಣ, ಗದ್ದೆ, ತೋಟ, ಭೂಮಿಯನ್ನು ದಾನಬಿಟ್ಟ ಉಲ್ಲೇಖಗಳು ಹಾವೇರಿ ಪರಿಸರದ ಅರಟಾಳ, ಬಾಳೇಹಳ್ಳಿ, ನೇರಲಗಿ, ಗುತ್ತಲ, ನದಿಹರಳಹಳ್ಳಿ ಮುಂತಾದ ಶಾಸನಗಳಲ್ಲಿವೆ.

"ರಿಷಯರಾಹಾರದಾನಕ್ಕಮೆಂದು ಬಿಟ್ಟ ಕೆಯ್ಯ"[೩೯]
"ರಿಶಿಯರ್ಕ್ಗಳಾಹಾರದಾನಕ್ಕಂ ವೆಂದು . . . . ಬಿಟ್ಟ ಗಙ್ದೆ ಕಮ್ಮ. . ."[೪೦]
"ರಿಷಿಯರ್ಗ್ಗಾಹಾರದಾನಕ್ಕಂ. ."[೪೧]
"ರಿಷಿಯರಾಹಾರ ದಾನಕ್ಕಂ ಅಜ್ಜಿಯರಾಹಾರದಾನಕ್ಕಂ. . . ಅಡಕೆಯ ಮರ ನಾಲ್ನೂಱು . . ."[೪೨]
"ರಿಷಿಯರಾಹಾರ ದಾನಕ್ಕಂ ಅಂಗಡಿಯಲು ಹಾಗವೆರಡು. . ."[೪೩]

## ೦೩. ಶಾಸ್ತ್ರದಾನ.

ಶ್ರಾವಕರಿಗೆ, ಮುನಿಯರಿಗೆ, ಕಂತಿಯರಿಗೆ ನಿತ್ಯ ಸ್ವಾಧ್ಯಾಯಕ್ಕೆ ಅನುವಾಗಲೆಂದು ಜೈನ ಶಾಸ್ತ್ರಕೃತಿಗಳನ್ನು ಕಾವ್ಯಕೃತಿಗಳನ್ನು ಬರೆಯಿಸಿ ಪ್ರತಿಮಾಡಿಸಿ ಕೊಡುವ ಪದ್ಧತಿ ಬಹುಹಿಂದಿನಿಂದಲೇ

ಇದೆ. ೧೧ನೆಯ ಶತಮಾನಕ್ಕೆ ಸಲ್ಲುವ ದಾನಚಿಂತಾಮಣಿ ಅತ್ತಿಮಬ್ಬೆ ಈ ಕ್ರಿಯೆಗೆ ಸ್ಪಷ್ಟ ಉದಾಹರಣೆ. ಇವಳು ಪೊನ್ನ ಕವಿಯ 'ಶಾಂತಿಪುರಾಣ'ವನ್ನು ಪ್ರತಿಮಾಡಿ ಜ್ಞಾನದಾಹಿಗಳಿಗೆ ಹಂಚಿದಳು ಜೊತೆಗೆ ರನ್ನನಿಂದ 'ಅಜಿತತೀರ್ಥಂಕರ ಪುರಾಣ'ವನ್ನೂ ಬರೆಯಿಸಿದಳು. ಹಾವೇರಿ ಪರಿಸರದ ಕರಗುದರೆ ಶಾಸನದಲ್ಲೂ ಶಾಸ್ತ್ರದಾನದ ಪ್ರಸ್ತಾಪವಾಗಿದೆ. ಮಹಾವಡ್ಡಬ್ಯವಹಾರಿ ಕಲಿದೇವಶೆಟ್ಟಿ ವಿವಿಧ ದಾನಗಳ ಜೊತೆ ಶಾಸ್ತ್ರದಾನವನ್ನು ಮಾಡಿದ ಎಂದು ವರ್ಣಿಸಿದ್ದಾನೆ.[೪೪] ಯಾವ ಶಾಸ್ತ್ರಕೃತಿಯೆಂದು ಹೇಳಿಲ್ಲ.

## ೦೪. ಚೈತ್ಯದತ್ತಿ.

ಚೈತ್ಯ, ಚೈತ್ಯಾಲಯ, ಜಿನಾಲಯ, ಜಿನಾಗಾರ, ಜಿನೇಂದ್ರಭವನ, ಜಿನಗೇಹ, ವಸತಿ, ಬಸದಿ ಇವು ಪರಸ್ಪರ ಒಂದೇ ಅರ್ಥವುಳ್ಳ ಜ್ಞಾತಿ ರೂಪಗಳು. ಈ ಎಲ್ಲ ಪದಗಳ ಏಕಾರ್ಥ ಜೈನಧರ್ಮಿಯರ ಆರಾಧನಾ ಶ್ರದ್ಧಾಕೇಂದ್ರ ಎಂದಾಗುತ್ತದೆ. ಬಿಂಬ ರೂಪದ ತೀರ್ಥಂಕರಯುಕ್ತ ಕಟ್ಟಡವೆ ಜಿನಮಂದಿರ. ಇವುಗಳಲ್ಲಿ ಏಕಕೂಟ, ದ್ವಿಕೂಟ, ತ್ರಿಕೂಟ, ಪಂಚಕೂಟ ಬಸದಿಗಳ ಮಾದರಿಗಳು ಕರ್ನಾಟಕ ಪ್ರದೇಶದಲ್ಲಿ ಕಾಣಸಿಗುತ್ತವೆ. "ಪ್ರಪ್ರಾಚೀನ ಜೈನಾಗಮ ಗ್ರಂಥಗಳಲ್ಲಿ ಜಿನಬಿಂಬಗಳ ಜಿನಾಲಯಗಳ ಉಲ್ಲೇಖಗಳು ಅಪರೂಪ. ಜೈನಧರ್ಮದ ಪ್ರಾರಂಭದ ಘಟ್ಟಗಳಲ್ಲಿ ಬಸದಿ ಕಟ್ಟಿಸುವ, ಜಿನಮೂರ್ತಿಗಳನ್ನು ಮಾಡಿಸುವ ಪದ್ಧತಿ ಇರಲಿಲ್ಲ. ತೀರ್ಥಂಕರರ ಮೂರ್ತಿಗಳನ್ನು ಮಾಡಿಸುವ, ಬಸದಿಗಳನ್ನು ಕಟ್ಟಿಸುವ ಈ ಪದ್ಧತಿಯು ಆಗಮೋತ್ತರಕಾಲೀನದಲ್ಲಿ ಬೆಳೆದ ಸಂಪ್ರದಾಯ"[೪೫] ಕರ್ನಾಟಕದಲ್ಲಿ ಗಂಗರು ಮತ್ತು ಬನವಾಸಿ ಕದಂಬರ ಕಾಲದಲ್ಲಿ ಬಸದಿ ಕಟ್ಟಿಸುವ ಕ್ರಿಯೆ ಆರಂಭವಾಯಿತು. ತದನಂತರ ಸಾವಿರಾರು ಬಸದಿಗಳು ಇಲ್ಲಿ ನಿರ್ಮಿತಿಗೊಂಡಿವೆ. ಪ್ರಭುತ್ವ ವರ್ಗದಿಂದ ತಾವು ಕಟ್ಟಿಸಿದ ಚೈತ್ಯಾಲಯಗಳ ಸಂರಕ್ಷಣೆಗಾಗಿ ಹೊಲ-ನೆಲಗಳ ದಾನ ನೀಡಿದ್ದಾರೆ. ಹಿಂದೆ ನಿರ್ಮಿತಿಗೊಂಡ ಜಿನಾಲಯಗಳಿಗೂ ಗ್ರಾಮಗಳನ್ನು ದತ್ತಿ ನೀಡುವ ಪ್ರಕ್ರಿಯೆ ರಾಜರಲ್ಲಿ ಇದ್ದದ್ದು ಹಾವೇರಿ ಪರಿಸರದ ಜೈನ ಶಾಸನಗಳಲ್ಲಿ ಕಂಡುಬರುತ್ತದೆ.

ಕದಂಬ ಮೃಗೇಶವರ್ಮ ಬೃಹತ್‌ಪರಲೂರ (ದೇವಗಿರಿ)ಲ್ಲಿದ್ದ ಚೈತ್ಯಾಲಯಕ್ಕೆ ಒಟ್ಟು ೪೫ ನಿವರ್ತನ ಭೂಮಿಯನ್ನು, ತದನಂತರ ಬಂದ ವಿಜಯಶಿವಮೃಗೇಶವರ್ಮನು ಇದೇ ಊರ ಅರ್ಹಚ್ಛಾಲೆಗೆ ಕಾಲವಜ್ಞೂ ಎಂಬ ಗ್ರಾಮ ಆದಾಯದ ಮೂರನೆ ಒಂದು ಭಾಗವನ್ನು ದತ್ತಿ ಬಿಟ್ಟರು. ಪುಲಿಗೆರೆಯ ಆನೆಸೆಜ್ಜೆಯ ಬಸದಿಗೆ ಅಳುಪರ ಚಿತ್ರವಾಹನ ರಾಜನು ಚಲುಕ್ಯ ಚಕ್ರವರ್ತಿ ವಿನಯಾದಿತ್ಯನಿಂದ ಗುಡ್ಡಿಗೆರೆ ಗ್ರಾಮವನ್ನು ಕೊಡಿಸಿ ಜೈನಪ್ರೀತಿಯನ್ನು ತೋರಿದ.[೪೬] ಇವಿಷ್ಟು ಜಿನಾಲಯಗಳಿಗೆ ರಾಜರುಕೊಟ್ಟ ದಾನ-ದತ್ತಿಗಳು.

ಜೈನರ ಮೂಲ ಕಸುಬು ವ್ಯಾಪಾರ. ಇದರ ಜೊತೆ ಜೊತೆಗೆ ಅಥವಾ ಸಂಪೂರ್ಣವಾಗಿ ಕೃಷಿಯತ್ತ ಮುಖಮಾಡಿದ ಕುರುಹುಗಳು ಹಾವೇರಿ ಪರಿಸರದಲ್ಲಿ ೯ನೆಯ ಶತಮಾನದಿಂದ

ಶಾಸನಗಳಲ್ಲಿ ಗೋಚರವಾಗುತ್ತವೆ. ವಿವಿಧ ಗಾಮುಣ್ಡರು ಮೇಜವೂರ (ಮೇದೂರು) 'ದೇಮಲ್ಲವೆ ವಸದಿ'ಗೆ ೧೨ ಮತ್ತರು ಭೂಮಿಯನ್ನು,[೪೭] ರಾಣೆಬೆನ್ನೂರ 'ನಾಗುಳರ ಪೊಲ್ಲಪ್ಪೆ' ಮಾಡಿಸಿದ ಬಸದಿಗೆ ಮಣ್ಣು (ಭೂಮಿ)[೪೮] ದತ್ತಿಯಾಗಿ ಕೊಟ್ಟಿದ್ದರಿಂದ ಈ ಅಂಶ ಖಚಿತವಾಗುತ್ತದೆ. ಕೃಷಿಭೂಮಿಯನ್ನು ಹೊಂದಿದಾಗ ಅದನ್ನು ದಾನ ಮಾಡಲು ಸಾಧ್ಯ ಅಂತಹ ಭೂಮಿಯನ್ನು ದಾನಮಾಡಲಾಗಿದೆ ಎಂದರೆ ಜೈನರು ಕೃಷಿಪದ್ಧತಿಯನ್ನು ಅಳವಡಿಸಿಕೊಂಡಿದ್ದರೆಂದೇ ಅರ್ಥ. ಕೃಷಿ ಭೂಮಿಯನ್ನು ಕೊಂಡು ದಾನ ಮಾಡಬಹುದಾದ ಸಾಧ್ಯತೆ ಇದ್ದರು ಅಂತಹ ಉಲ್ಲೇಖಗಳು ಈ ಭಾಗದ ಶಾಸನಗಳಲ್ಲಿ ಅಲಭ್ಯ. ಕೃಷಿ ಪದದ ಬಳಕೆ ಪಂಪನ ಆದಿಪುರಾಣದಲ್ಲಿಯೂ ಬಂದಿದೆ.[೪೯] ಇದೇ ರೀತಿಯಾಗಿ ಕದರಮಂಡಲಗಿಯ 'ಸಕ್ಕಿ ಬಸದಿ'ಗೆ, ಮೋಟೆಬೆನ್ನೂರು ಬಸದಿಗೆ, ಅದೇ ಊರ 'ಆಚ್ಚಿಮಯ್ಯನಾಯಕನ ಬಸದಿ'ಗೆ ಬಾಳೇಯಹಳ್ಳಿಯ 'ಪಾರ್ಶ್ವನಾಥ ಬಸದಿ'ಗೆ ಕರಗುದರೆಯ 'ವಿಜಯಪಾರ್ಶ್ವನಾಥ ಜಿನಾಲಯ'ಕ್ಕೆ ನೇರಲಗೆಯ 'ಮಲ್ಲಿನಾಥ ಜಿನಾಲಯ'ಕ್ಕೆ, ನದಿಹರಳಹಳ್ಳಿ (ಗೊಟ್ಟಗಡಿ) 'ವೃಷಭಜಿನೇಂದ್ರಭವನ'ಕ್ಕೆ, ಬೆಳವಂತಿಯ 'ಬ್ರಹ್ಮಜಿನಾಲಯ'ಕ್ಕೆ, ಮಂತಗಿಯ 'ಚತುರ್ವಿಂಶತಿ ಜಿನಾಲಯ'ಕ್ಕೆ ಹೀಗೆ ಮುಂತಾದ ಜಿನಾಲಯಗಳಿಗೆ ಬಸದಿ ಕಟ್ಟಿಸಿದ ನಿಮಿತ್ತ, ಪುಣ್ಯಪ್ರಾಪ್ತಿಯ ನಿಮಿತ್ತವಾಗಿ ತೋಂಟ, ನೀರ್ಮಣ್ಣು (ಗದ್ದೆ) ಭೂಮಿ, ಹಣ, ಎಣ್ಣೆ ಇತ್ಯಾದಿಗಳು ದಾನವಾಗಿ ಅರ್ಪಣೆಗೊಂಡಿವೆ.

ಜೈನಧರ್ಮದಲ್ಲಿ ಸಾವು ಪವಿತ್ರವಾಗಿರಲೆಂದು ಸಮಾಧಿ ಮರಣ ಆಚರಣೆ ಪದ್ಧತಿ ಜಾರಿಗೊಂಡಿತು. ಈ ರೀತಿಯಾಗಿ ಮರಣವನ್ನು ಆಹ್ವಾನಿಸಿದ ಶ್ರಾವಕ-ಶ್ರಾವಕಿಯರಿಗೆ ಪುಣ್ಯಪ್ರಾಪ್ತಿಯಾಗಲೆಂದು ಬಸದಿಗಳಿಗೆ ದಾನಕೊಟ್ಟ ಪದ್ಧತಿ ಹಾವೇರಿ ಪರಿಸರದ ನಿಸಿಧಿ ಶಾಸನಗಳಲ್ಲಿ ಕಂಡುಬರುತ್ತದೆ. ಕಡಕುಳದ ಸಾವಂತ ಸಿರಿಯಮಗೌಡನ ಹೆಂಡತಿ ಚಂದಿಗೌಡಿ ಸಮಾಧಿಯಾದ ಪ್ರಯುಕ್ತ ಆಕೆಯ ಮನೆತನದವರು ಹನ್ನೆರಡು ಹಿಟ್ಟುಗಳು (ವಿವಿಧ ಕುಲಕಸುಬುದಾರರು) ಸಮಸ್ತ ಪ್ರಜೆಗಳು ಬಸದಿಗೆ ಯರೆ ಮತ್ತರ ೧ನ್ನು ಕೊಟ್ಟರು.[೫೦] ಪೊಂನವರ್ತ್ತಿಯ ಅನಾಮಧೇಯ ಸ್ತ್ರೀಯೊಬ್ಬಳು ಸಮಾಧಿಯಾದ ಸ್ಮರಣಾರ್ಥ ಇಲ್ಲಿನ 'ನಗರ ಜಿನಾಲಯ'ಕ್ಕೆ ಸಿದ್ಧಗೌಡನ ಹರಿಯಪ್ಪ ಮತ್ತು ಹಲವರು ದಾನ ನೀಡಿದರು.[೫೧] ಚಂಗೂರ (ಸಂಗೂರು) ನೇಮಂಣ ಎಂಬುವನು ತಂನ ಪಿತೃಪಿತಾಮಹ ಪ್ರಪಿತಾಮಹಾದಿಗಳ್ಗೆ ಸುಕೃತಾಭಿವೃದ್ಧಿ ಪರಿಪ್ರಾಪ್ತಿಯಾಗಲು ಈ ಊರ ಪಾರ್ಶ್ವನಾಥಸ್ವಾಮಿ ಜಿನಾಲಯಕ್ಕೆ ನೆಲ್ಲಗದ್ದೆಯನ್ನು, ನಿಸಿಧಿ ಪೂಜಾರ್ಥವಾಗಿ ನೆಲ್ಲಗದ್ದೆ ಕೊಳಗ ೫ನ್ನು ಅದೇ ಊರ ಶಂಭವನಾಥಸ್ವಾಮಿ ಬಸದಿಗೆ ಹಾಡೂರ (ಆಡೂರು)ಲ್ಲಿ ಕರಿಯ ಕೆಯಿಕೊಳಗ ೨೦ನ್ನು ದಾನ ಮಾಡಿದನು.[೫೨] ಮರಣವನ್ನು ಆಹ್ವಾನಿಸುವ ವ್ಯಕ್ತಿಗಳು ಈ ಹಿಂದೆ ದಾನಕೊಟ್ಟಿದ್ದಿದೆ. ಸಾತಿಸೆಟ್ಟಿಯ ಮಗ ಆಹಾರ ಅಭಯಶಾಸ್ತ್ರಭೇಷಜ್ಯ ದಾನ ಕೊಟ್ಟು ದಾನಚಿಂತಾಮಣಿ ಎನಿಸಿದ್ದ.[೫೩]

## ೧೫. ಅಂಗಭೋಗ-ರಂಗಭೋಗ ದಾನ.

ಬಸದಿಯ ಮೂಲಮೂರ್ತಿಯನ್ನು ನಿತ್ಯಶುಚಿಗೊಳಿಸುವ ಕ್ರಿಯಾವಿಧಾನಗಳಿದ್ದರೂ 'ಅಂಗಭೋಗ' ಪರಿಕಲ್ಪನೆ ಜೈನಧರ್ಮದಲ್ಲಿಲ್ಲ. ತೀರ್ಥಂಕರರೆಲ್ಲರೂ ದಿಗಂಬರರು ಅಂತಾಗಿ ಅವರ ಪ್ರತಿರೂಪವಾದ ಮೂರ್ತಿಗಳಲ್ಲೂ ಅದು ಅನುಷ್ಠಾನಗೊಂಡಿತು. ಮೂರ್ತಿಗಳಿಗೆ ಅಲಂಕರಣ ಇಲ್ಲ, ಅಂತೆಯೇ ಅಂಗಭೋಗವು ಸಲ್ಲ. ಅಂಗಭೋಗ ಎಂದರೆ ಮೂರ್ತಿಗಳ ಅಂಗಕ್ಕೆ ಸಲ್ಲುವ ಭೋಗ. ವಸ್ತ್ರ, ಆಭರಣಗಳು, ಕೌಸ್ತುಭ, ಕಿರೀಟಗಳ ಅಲಂಕರಣ ನೆಲೆಯಲ್ಲಿ ಇದು ಸಾಗುತ್ತದೆ. ಶೈವ, ವೈಷ್ಣವ ಮೂರ್ತಿಗಳಿಗೆ ಅಂಗಭೋಗ ಸಲ್ಲಿಸುವ ಪದ್ಧತಿ ಇತ್ತು. ಈ ಪ್ರಭಾವ ಬಸದಿಗಳ ಮೇಲೂ ಆಯ್ತು. ಮುಖ್ಯವಾಗಿ ಅನ್ಯಧರ್ಮದವರು ಜಿನಾಲಯಕ್ಕೆ ದತ್ತಿಯಿತ್ತಾಗ ಈ ಪದ ಜೈನಶಾಸನಗಳಲ್ಲಿ ಸೇರತೊಡಗಿತು. ಕ್ರಿ.ಶ. ೧೦೭೬-೧೧೨೫ರ ಮಧ್ಯಾವಧಿಯ ಆರನೆಯ ವಿಕ್ರಮಾದಿತ್ಯನ ಬೆಳವಂತಿ ಶಾಸನದಲ್ಲಿ ಈ ಪ್ರಕ್ರಿಯೆಯನ್ನು ಕಾಣಬಹುದು.

> ಶ್ರೀಸ್ವಯಂಭೂ ಗೋಕುಳೇಶ್ವರ ದಿವ್ಯ ಶ್ರೀಪಾದಪದ್ಮಾರಾಧಕರುಮಪ್ಪ
> ಬಳಸಾಧಕರುಮಪ್ಪ ಶ್ರೀಮಜ್ಜನಮೇಜಯ ದತ್ತಿಯ ಮಹಾಸ್ಥಾನಂ
> ಶ್ರೀಮದಗ್ರಹಾರ ಬೆಳ್ವಂತಿಯ ಮಹಾಜನ ಮೂನೂರ್ವ್ವರುಂ ಸರ್ವ್ವಮಾ
> ಸವಿತ್ಥಾಣದೊಳಿಳ್ದಲ್ಲಿಯವರಂ ಪ್ರಸಾದಿಸಿ ಶ್ರೀಮತ್ಸವಣೂರ ಬಮ್ಮಿಸೆಟ್ಟಿಯರ್ತ್ತಮ್ಮ
> ಮಾಡಿಸಿದ ಬ್ರಹ್ಮಜಿನಾಲಯ ದೇವರ ಅಂಗಭೋಗಕ್ಕೆ ಸ್ನಾನ ನಿವೇದ್ಯಕ್ಕಮಹಾ
> ರದಾನಕ್ಕ ಮಾಚಂದ್ರಾರ್ಕ್ಕತಾರಂ ನಡೆವಂತಾಗಿಯೂರಿಂ[೫೪]

ಪರಧರ್ಮಸಹಿಷ್ಣುಗಳ ದಾನ ವಿಧಾನದಿಂದ ಅಂಗಭೋಗ ಎಂಬ ಸೇವೆಯು ತದನಂತರದ ಜೈನಶಾಸನಗಳಲ್ಲೂ ಬಳಕೆಯಾಗತೊಡಗಿತು. ನೇರಲಗೆಯ "ಶ್ರೀಮನ್ನಾಳ್ಪ್ರಭು ಮಲ್ಲಗಾವುಣ್ಡಂ ತನ್ನ ಮಾಡಿಸಿದ ಮಲ್ಲಿನಾಥಜಿನೇಶ್ವರಂಗಂಗಭೋಗಕ್ಕೆ"[೫೫] ಎನ್ನುವಲ್ಲಿ ಅಂಗಭೋಗ ಪ್ರಯೋಗವಾಗಿದೆ. ಹಾಗಾದರೆ ಬಸದಿಯ ಮೂಲಮೂರ್ತಿಗೆ ಅಂಗಭೋಗಾಧಿಗಳ ಸೇವಾಪದ್ಧತಿಯು ಇರಲಿಲ್ಲವೆ? ಇತ್ತು. ಅನ್ಯಧರ್ಮದ ರೀತಿ ಇರಲಿಲ್ಲ. ತೀರ್ಥಂಕರರು ಸಕಲವನ್ನು ತ್ಯಜಿಸಿದ್ದರಿಂದ ಅವರ ಮೂರ್ತಿಗಳಿಗೆ ಅದನ್ನು 'ದೇವಭೋಗ'ವೆಂದು ನಿರ್ದೇಶಿಸಿದಂತೆ ತೋರುತ್ತದೆ.[೫೬] ತೀರ್ಥಂಕರರು ಸಕಲವನ್ನು ತ್ಯಜಿಸಿದ್ದರಿಂದ ಅವರ ಮೂರ್ತಿಗಳಿಗೆ ವೈಭೋಗಗಳಿಲ್ಲ ಜಲಧಾರೆ, ಕ್ಷೀರಧಾರೆ, ಗಂಧ, ಕುಂಕುಮ, ಅರಿಸಿನ ಇತ್ಯಾದಿ ಅಭಿಷೇಕಗಳು, ಜಲ, ಗಂಧ, ಅಕ್ಷತೆ, ಪುಷ್ಪ, ಚರು, ದೀಪ, ಧೂಪ, ಫಲ ಎಂಬ ಎಂಟು ದ್ರವ್ಯಗಳ ಅಷ್ಟವಿಧಾರ್ಚನೆಯನ್ನು ಈ ಮೂರ್ತಿಗಳಿಗೆ ಮಾಡುತ್ತಿದ್ದರು. ೮ನೆಯ ಶತಮಾನ ಹಾವೇರಿ ಪರಿಸರದ ಜೈನಶಾಸನಗಳಲ್ಲಿ ಈ ಪದ್ಧತಿ ಕಾಣಸಿಗುವುದು. ಪಾಣ್ಡಿವೂರು (ಆಡೂರು) ಜಿನಾಲಯಕ್ಕೆ 'ಹವಿರಕ್ಷತ ಗನ್ಧಪುಷ್ಪಾದಿಗಳ್ಗೆ' ಎಂಬಲ್ಲಿ ಗಂಧ, ಪುಷ್ಪ ಸೇವೆ ಮಾತ್ರ ನಡೆಯುತ್ತಿದ್ದಂತೆ ಕಾಣುತ್ತದೆ.[೫೭] ತದನಂತರದ ಜೈನಶಾಸನಗಳಲ್ಲಿ ಅಷ್ಟವಿಧಾರ್ಚನೆಯ ಪದ್ಧತಿ ಮುಂಚೂಣಿಗೆ ಬರುತ್ತದೆ. ಮಂತಗೆ ಅರಟಾಳ, ಬಾಳೆಯಹಳ್ಳಿ, ಜೈನಶಾಸನಗಳಲ್ಲಿ ಈ

ವಿಧಾನ ಕಂಡುಬರುತ್ತದೆ. ಅಷ್ಟವಿಧಾರ್ಚನೆಯ ಪೂಜಾಪದ್ಧತಿ ಅದೆಷ್ಟು ಪ್ರಭಾವಿ ಎಂದರೆ 'ಭವಸೇನ ದೇವರ ಗುಡ್ಡಿಯೂ ಬೆಳ್ಳಿಸೆಟ್ಟಿಯ ಹೆಂಡತಿಯೂ ಆದ ಸೋಮವೆ' ಸಮಾಧಿ ಮರಣವನ್ನು ಆಹ್ವಾನಿಸುವ ಮುನ್ನ ತೀರ್ಥಂಕರ ಮೂರ್ತಿಗೆ ಅಷ್ಟವಿಧಾರ್ಚನೆ ಸಲ್ಲಿಸುತ್ತಾಳೆ.[೫೮] ಶ್ರವಣಬೆಳಗೊಳ ಗೊಮ್ಮಟನಿಗೆ ೧೨ ವರ್ಷಗಳಿಗೊಮ್ಮೆ ಸಲ್ಲುವ ಮಹಾಮಸ್ತಕಾಭಿಷೇಕದಂತೆ 'ಮಹಾಭಿಷೇಕ' ನಡೆದದ್ದಾಗಿ ಮಂತಗೆಯ ಜಿನಶಾಸನವೊಂದು ತಿಳಿಸುತ್ತದೆ. ಮುಕ್ಕುಣ್ದಿದೇವರ ಪ್ರತಿಬದ್ಧವಾದ ಕೊನ್ತಿ ಮಹಾದೇವಿ ಬಸದಿಯಲ್ಲಿ ಕದಂಬ ಹರಿಕಾನ್ತದೇವ (ಬಂಕಾಪುರ) ತೀರ್ಥದಲ್ಲಿ ಈ ಮಹಾಭಿಷೇಕವನ್ನು ಮಾಡಿದ ಬಂಕಾಪುರದಲ್ಲಿನ 'ಮಹಾ ಅಭಿಷೇಕ'[೫೯] ಅಂದಿನ ಶ್ರವಣಬೆಳಗೊಳದ ಗೊಮ್ಮಟನ ಮಸ್ತಕಾಭಿಷೇಕಕ್ಕೆ ಸರಿಸಮಾನವಾಗಿ ನಡೆದಂತೆ ತೋರುತ್ತದೆ. ಹಾಗಾದರೆ ಕೊನ್ತಿ ಮಹಾದೇವಿ ಬಸದಿಯಲ್ಲಿದ್ದುದ್ದು ಬಾಹುಬಲಿ ಮೂರ್ತಿಯೇ? ಸ್ಪಷ್ಟ ಆಧಾರಗಳು ಅಲಭ್ಯ.

ಅಂಗಭೋಗದಂತೆ ರಂಗಭೋಗವು ಜೈನಧರ್ಮದ ಪದ್ಧತಿಯಲ್ಲ. ಇದು ಅನ್ಯಧರ್ಮದಿಂದ ರೂಢಿಸಿಕೊಂಡ ಒಡಂಬಡಿಕೆ. ದೇವಾಲಯದ ರಂಗಮಂಟಪದಲ್ಲಿ ನಡೆಯುವ ವಿವಿಧ ಕಲೆಗಳ ಅನಾವರಣವೇ ರಂಗಭೋಗ. ಬಸದಿಯಲ್ಲಿ ಈ ಪದ್ಧತಿ ಆರಂಭಿಕದಲ್ಲಿ ಇರದಿದ್ದರೂ ಸಮಕಾಲೀನ ಪ್ರಭಾವಕ್ಕೆ ಒಳಗಾಗಿ ಬಂದಂತೆ ತೋರುತ್ತದೆ. ಬಸದಿಯಲ್ಲಿ ನೋಂಪಿ, ಜೀವದಯಾಷ್ಟಮಿ, ಶೃತಪಂಚಮಿ, ಅಷ್ಟಾಹ್ನಿಕ ಕಾರ್ಯಕ್ರಮಗಳೇನೋ ಜರುಗುತ್ತಿದ್ದವು. ಆದರೆ ಈ ಕಾರ್ಯಕ್ರಮಗಳಲ್ಲಿ ನೃತ್ಯ ಸಂಗೀತಾದಿ ಉತ್ಸವಗಳು ನಡೆದಂತೆ ಕಂಡುಬರುವುದಿಲ್ಲ. ಕದರಮಂಡಲಗಿಯ ಶಾಸನದ ಮೂರನೆಯ ಒಂದು ಭಾಗ ದಾನವನ್ನು ಬಸದಿಯ 'ಮುಂದಾಡುವೋರ್ಗ್ಗೆ'[೬೦] ಕೊಟ್ಟಿದ್ದನ್ನು ಗಮನಿಸಿದರೆ ಬಸದಿಗಳಲ್ಲೂ ರಂಗಭೋಗ ಇದ್ದಂತೆ ತೋರುತ್ತದೆ. ಮುಂದೆ + ಆಡುವವರು ಎಂದರೆ ವಿವಿಧ ರೀತಿಯ ಕಲೆಯನ್ನು ಪ್ರದರ್ಶಿಸುವವರು ಎಂದೇ ಅರ್ಥೈಸಿಕೊಳ್ಳಬೇಕು. ವಾದ್ಯಗಾರರು, ಸಂಗೀತಗಾರರು ಎನ್ನಲಡ್ಡಿಯಿಲ್ಲ. "ಮದುವೆ ಮಾಣಿಯಲು ದೀಪಾವಳಿ ಬಾದುಂಬೆ ಕಾರಪುಣ್ಣಿಮೆಯೆಂಬೀ ಮಹಪರ್ವ್ವಗಳೊಳ್ ಬಸದಿಗೆ ಮುನ್ನ ಬಂದು ಶೇಷೆಯಂ ಕೊಳ್ಬದಿದು ಬಸದಿ . . ."[೬೧] ಎಂಬಲ್ಲಿ ಬಸದಿಯ ಮುಂದೆ ಉತ್ಸವಗಳು ನಡೆಯುತ್ತಿದ್ದವೆಂದೆನಿಸುತ್ತದೆ. ಬೆಳವಂತಿಯ ಬ್ರಹ್ಮಜಿನಾಲಯ ಮತ್ತು ನೀರಲಗಿಯ ಮಲ್ಲಿನಾಥ ಜಿನೇಶ್ವರ ಬಸದಿಗಳಿಗೆ ರಂಗಭೋಗ ಸೇವೆ ಸಂದಿರುವುದು ಗಮನಿಸಬೇಕಾದ ವಿಚಾರ. ಈ ಪದವೂ ಅನ್ಯಧರ್ಮಿಯರ ದಾನ ಪದ್ಧತಿಯಿಂದ ಬಂದದ್ದು.

## ೦೬. ಇತರೆ ದಾನಗಳು.

ದಾನಕ್ಕೆ ಬಹುಮುಖ. ಅಗತ್ಯ ಪಾತ್ರರಿಗೆ ಕೊಡುವ ಪ್ರತಿಯೊಂದು ವಸ್ತುವು ದಾನ ಎನ್ನಿಸುತ್ತದೆ. 'ಅಭಯಾಹಾರಭೈಷಜ್ಯಶಾಸ್ತ್ರ' ದಾನಗಳ ಹೊರತಾಗಿ ಇನ್ನೂ ಅನೇಕ ರೀತಿಯ ದಾನಕೊಟ್ಟ ಪ್ರಸ್ತಾಪಗಳು ಹಾವೇರಿ ಪರಿಸರದ ಜೈನಶಾಸನಗಲ್ಲಿ ಕಂಡುಬರುತ್ತವೆ. ಕರಗುದರೆ ಮತ್ತು

ಮಂತಗೆಯಲ್ಲಿ ಬಸದಿಗಳನ್ನು ನಿರ್ಮಿಸಿದ ಕಲಿದೇವ ಸೆಟ್ಟಿ ಎಂಬುವವನು ತೋಯ (ನೀರು) ದಾನವನ್ನು, ಗೃಹದಾನವನ್ನು, ಕನ್ಯಾವಸ್ತ್ರಾಭರಣ ದಾನಗಳನ್ನು ಮಾಡಿದ್ದಾನೆ. ಇವುಗಳಲ್ಲದೆ ಮುನಿಗಳ 'ಚರಿಗೆ'ಗೆ ಮೃಷ್ಟಾನ ದಾನ,[೬೨] ಬಸದಿಯಲ್ಲಿ ದೇವರ ಪೂಜಿಸುವ ಕನ್ತಿಯರಿಗೆ ದಾನ,[೬೩] ಬಸದಿಗೆ ಬರುವ ಅಭ್ಯಾಗತ (ಅತಿಥಿ)ರ[೬೪] ಉಪಚಾರಕ್ಕೆ ದಾನ ಬಿಟ್ಟ ಉದಾಹರಣೆಗಳು ಈ ಭಾಗದ ಜಿನಶಾಸನಗಳಲ್ಲಿ ದೊರೆಯುತ್ತವೆ.

## ೦೭. ಜಿನಾಲಯಗಳ ಜೀರ್ಣೋದ್ಧಾರಕ್ಕೆ ದಾನ.

ನಮ್ಮ ಪ್ರಾಚೀನರು ಬಸದಿಗಳನ್ನು ಕೇವಲ ಕಟ್ಟಡಗಳನ್ನಾಗಿ ನೋಡದೆ ಅವುಗಳನ್ನು ಧಾರ್ಮಿಕ ಸಂಪತ್ತಾಗಿ ಪರಿಭಾವಿಸಿದ್ದರು. ಅಂತೆಯೇ ಅವು ಶ್ರದ್ಧಾಕೇಂದ್ರಗಳು ಹೌದು. ಬಸದಿಗಳು ಸುಸ್ಥಿತಿಯಲ್ಲಿದ್ದರೆ ಸಂಸ್ಕೃತಿ, ಆಚಾರ–ವಿಚಾರಗಳು, ನೀತಿ–ಸಂಪ್ರದಾಯಗಳು ಮುಂದುವರೆದುಕೊಂಡು ಹೋಗುತ್ತವೆ ಎಂಬ ಸ್ಪಷ್ಟ ಪ್ರಜ್ಞೆ ಪ್ರಾಚೀನರಿಗಿತ್ತು. ಅಂತೆಯೇ ಅವುಗಳನ್ನು ಜತನದಿಂದ ಸಂರಕ್ಷಿಸಿಕೊಂಡು ಬಂದರು. ಆ ಕಟ್ಟಡಗಳು ಶಿಥಿಲಗೊಂಡಾಗ ಜೀರ್ಣೋದ್ಧಾರಗೊಳಿಸಲು ಹಣದ ರೂಪದಲ್ಲಿ, ಭೂಮಿಯ ರೂಪದಲ್ಲಿ ಪುದುವಟ್ಟು ಇಟ್ಟದ್ದು ಹಾವೇರಿ ಪರಿಸರದ ಜೈನದಾನಶಾಸನಗಳಲ್ಲಿ ಕಂಡುಬರುತ್ತದೆ.

ಚೈತ್ಯಾಲಯಗಳು ಭಗ್ನಗೊಂಡಾಗ ದುರಸ್ತಿಕಾರ್ಯಕ್ಕೆ ದಾನ ನೀಡುವ ಪರಿಪಾಠ ಬನವಾಸಿ ಕದಂಬರ ಕಾಲದಿಂದಲೂ ನಡೆದುಕೊಂಡು ಬಂದಿದೆ. ಈ ದಾನಕ್ಕೆ ಅವರ ಶಾಸನಗಳಲ್ಲಿ 'ಭಗ್ನಸಂಸ್ಕಾರ' ಎಂಬ ಪದಬಳಕೆಯಾಗಿದೆ. ಬೃಹತ್ಪರಲೂರು (ದೇವಗಿರಿ)ಲ್ಲಿರುವ ಚೈತ್ಯಾಲಯ 'ಸಂಮಾರ್ಜ್ಜನೋಪಲೇಪನಾಭ್ಯರ್ಚನಭಗ್ನಸಂಸ್ಕಾರ'ಕ್ಕೆ ಮೃಗೇಶವರ್ಮನು ೪೦ ನಿವರ್ತನ ಕಪ್ಪು ಭೂಮಿ ಕೊಟ್ಟ. ಇದೇ ಊರ ಅರ್ಹತಃ ಭಗವತಃ ಚೈತ್ಯಾಲಯಕ್ಕೆ ಯುವರಾಜ ದೇವರ್ಮ 'ಭಗ್ನಸಂಸ್ಕಾರಾರ್ಚನ ಮಹಿಮಾರ್ತ್ಥ'ವಾಗಿ ಭೂಮಿಯನ್ನು ಕೊಟ್ಟ.[೬೫] ಬಾದಾಮಿ ಚಲುಕ್ಯರ ಕಾಲಕ್ಕೆ ಜೀರ್ಣೋದ್ಧಾರ ಪದ 'ಖಣ್ಡಸ್ಫುಟಿತ' ಎಂಬ ಅರ್ಥರೂಪ ಪಡೆಯಿತು. ಖಂಡಸ್ಫುಟಿತ ಎಂದರೆ ಭಗ್ನಗೊಳ್ಳುವಿಕೆ. ಸಂಸ್ಕಾರ ಎಂದರೆ ಸರಿಪಡಿಸು. ಒಟ್ಟಿನಲ್ಲಿ ಭಗ್ನಗೊಂಡ ಭಾಗಗಳ ಸರಿಪಡಿಸುವಿಕೆ ಎಂದರೂ ಸರಿ. ಕುಂಕುಮದೇವಿ ಕಟ್ಟಿಸಿದ ಪಲಿಗೆಜ಼' ಬಸದಿಗೆ ಈ ರೀತಿಯ ದಾನ ಬಿಡಲಾಗುತ್ತದೆ.[೬೬] ರಾಷ್ಟ್ರಕೂಟರ ಕಾಲದಲ್ಲಿ ಈ ಪದವನ್ನು ಕದರಮಂಡಲಗಿಯ ಸಕ್ಕಿಬಸದಿಗೆ ದಾನ ಬಿಡುವಾಗ 'ಖಂಡಸ್ಫುಟಿತಕ್ಕಂ'[೬೭] ಎಂದು ಬಳಸಲಾಗಿದೆ. ಕಲ್ಯಾಣ ಚಾಳುಕ್ಯರ ಕಾಲದ ಹರಿತಾಣ (ಅರಟಾಳ)ದ ಹರಿಯಬ್ಬೆಯ ಬಸದಿಗೆ 'ಖಣ್ಡಿಸ್ಫುಟಿತ ಜೀರ್ಣೋದ್ಧಾರಣಂಕ್ಕಂ'[೬೮] ಸಂಪತ್ತನ್ನು ದಾನಬಿಡಲಾಗಿದೆ. ಇದು ಒಂದು ದ್ವಿರುಕ್ತಿ ಪದ. ಇವರದೇ ಕಾಲಾವಧಿಯ ಬಾಳೇಹಳ್ಳಿಯ ಶಾಸನದಲ್ಲಿ ಇಲ್ಲಿ ಪಾರ್ಶ್ವನಾಥ ಬಸದಿಯ 'ಜೀರ್ಣೋದ್ಧಾರಕ್ಕೆ ಹೊಲ–ನೆಲೆ ಬಿಡಲಾಗಿದೆ'.[೬೯] ಬಸದಿಯ ಬೇರೆ ಬೇರೆ ಭಾಗಗಳಿಗೆ ದಾನ ಬಿಡುವ ಪ್ರವೃತ್ತಿಯೂ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಉಂಟು. ನೇರಲಗಿಯ ಮಲ್ಲಿನಾಥ ಜಿನೇಶ್ವರ ಬಸದಿಯ 'ಮಾಟಕೂಟ ಪ್ರಸಾದ'ಕ್ಕೆ ಭೂದಾನ

ಬಿಡಲಾಗಿದೆ.[೨೦] ಈ ಪದ ಜೀರ್ಣೋದ್ಧಾರದ ಇನ್ನೊಂದು ಜ್ಞಾತಿರೂಪ. ತದನಂತರ ಖಣ್ಡಿಸ್ಫುಟಿತ ಜೀರ್ಣೋದ್ಧಾರ ಪದ ಹಾಗೆ ಉಳಿದುಕೊಂಡು ಬಂದಂತೆ ತೋರುತ್ತದೆ. ಈ ರೀತಿಯ ದಾನವನ್ನು ಗುತ್ತಲದ ಪಾರ್ಶ್ವನಾಥ ಬಸದಿಗೆ[೨೧] ಮತ್ತು ಗೊಟ್ಟಗಡಿ (ನದಿಹರಳಹಳ್ಳಿ) ವೃಷಭಜಿನೇಂದ್ರ ಬಸದಿಗೆ ಬಿಡಲಾಗಿದೆ.[೨೨] ಹೀಗೆ ದಾನವು ಜೈನಧರ್ಮದಲ್ಲಿ ಬಹುಮುಖಿ ಸಂಸ್ಕೃತಿಯಾಗಿ ಹಾವೇರಿ ಭಾಗದ ಸಂಸ್ಕೃತಿಯಾಗಿ ಬೆಳೆದುಬಂತು.

## ೩.೨ ಮರಣ.

'ಪ್ರಾಣಗ್ರಹಣ'ವು ಜನನ, 'ಪ್ರಾಣಾಧಾರಣ'ವು ಜೀವನವೆನಿಸಿದರೆ 'ಪ್ರಾಣತ್ಯಾಗ'ವು ಮರಣವೆನಿಸಿದೆ.[೨೩] ಮರಣದಲ್ಲಿ ಎರಡು ಬಗೆ. ಒಂದನೆಯದು ಸಾವು ವ್ಯಕ್ತಿಯನ್ನು ಅರಸಿಬರುವುದು; ಇನ್ನೊಂದು ವ್ಯಕ್ತಿಯೇ ಸಾವನ್ನು ಬರಮಾಡಿಕೊಳ್ಳುವುದು.[೨೪] ಮೊದಲನೆಯದು ಸಹಜ ಸಾವು; ಎರಡನೆಯದು ಧಾರ್ಮಿಕ ಸಾವು. ಮಹಾಸತಿಯ ಸಾವು ಎರಡನೆಯ ಗುಂಪಿಗೆ ಸೇರಿಸಬಹುದಾಗಿದ್ದರೂ ಕೆಲವು ಸಮಯಗಳಲ್ಲಿ ಅದು ಬಲವಂತದ ಮರಣವೆನಿಸುತ್ತದೆ.[೨೫] ಅಂತೆಯೇ ಅದು ಅಸಹಜ ಸಾವಿನ ಗುಂಪಿಗೆ ಸೇರಿಕೊಳ್ಳುತ್ತದೆ. ಪ್ರಾಣ ತ್ಯಾಗವನ್ನು 'ಧರ್ಮದ ಅಂಗವಾಗಿ ಮಾಡಿದವರು ಜೈನರು'[೨೬] ಧಾರ್ಮಿಕ ಚೌಕಟ್ಟಿಗೆ ಅನುಗುಣವಾಗಿ ಪ್ರಾಣತ್ಯಾಗ ಮಾಡುವ ಪ್ರಕ್ರಿಯೆಯನ್ನು ಈ ಧರ್ಮ ಅನಾದಿಕಾಲದಿಂದಲೂ ನಡೆಸಿಕೊಂಡು ಬಂದಿದೆ. ಮುನಿಗಳು, ಕಂತಿಯರು, ಆಳರಸರು, ಮಹಾರಾಣಿಯರು, ಕವಿಗಳು, ದಂಡನಾಯಕರು, ನಾಳ್ಗಾವುಂಡ, ಗಾವುಂಡರು, ವ್ಯಾಪಾರಿಗಳು, ಶ್ರಾವಕ-ಶ್ರಾವಿಕೆಯರಾದಿಗಳಾಗಿ ಧಾರ್ಮಿಕ ವಿಧಿ-ವಿಧಾನಗಳ ಮೂಲಕ ಶ್ರೇಷ್ಠ ಮರಣವನ್ನು ಆಹ್ವಾನಿಸಿದ್ದಾರೆ. ಇಂಥಹ ಮರಣಕ್ಕೆ 'ಸಲ್ಲೇಖನ' ಎನ್ನುವರು.

ಸಲ್ಲೇಖನ ಎನ್ನುವುದು ಸಾವನ್ನು ಆಹ್ವಾನಿಸುವಾಗ ಕೈಗೊಳ್ಳುವ ಒಂದು ವ್ರತ. ಇದರಂತೆ ಸಮಾಧಿ, ಸನ್ಯಸನ, ಆರಾಧನ, ಅಷ್ಟವಿಧಾರ್ಚನ, ಪಂಡಿತ, ಪೌಗ್ಗಮಣ, ಪಂಚಪದ ವ್ರತಗಳೂ ಸಹ ಸಾವನ್ನು ಕರೆಯುವ ವಿಧಾನಗಳು. ಆದರೆ ಇವೆಲ್ಲ ವಿಧಿಗಳಿಗಿಂತ 'ಸಲ್ಲೇಖನ' ಎಂಬ ಪದ ಬಹುಪ್ರಚಾರದಲ್ಲಿದೆ. ಸಾಧಕನ ಗುರಿ ಪ್ರಾಣತ್ಯಾಗ ಮಾಡುವುದೇ ಅಂತಿಮ ಗುರಿಯಾಗಿದ್ದರೂ, ಗುರಿ ತಲುಪುವ ಮಾರ್ಗ ಬೇರೆ ಬೇರೆಯಾಗಿರುತ್ತಿತ್ತು. ಅಂತೆಯೇ ಮೇಲೆ ಉದಾಹರಿಸಿದ ಸಾವನ್ನು ಆಹ್ವಾನಿಸುವ ವಿಧಿಗಳು ಬೇರೆ ಬೇರೆ ಮಾರ್ಗಗಳಾಗಿದ್ದವು. ಧಾರ್ಮಿಕ ವಿಧಾನಗಳ ಮೂಲಕ ಸಾವನ್ನು ಆಹ್ವಾನಿಸಿದವರ ಸ್ಮರಣಿಕೆಗಳಿಗೆ ನಿಸಿಧಿಗಳು ಎನ್ನುವರು. ನಿಸಿದಿ, ನಿಸಿಧಿ, ನಿಶಿಧಿ, ನಿಶಿದ್ಧಿ, ನಿಷೇಧಿಕಾ, ನಿಷಿದ್ಯಾಲಯ, ನಿಷಧಿ, ನಿಸುದಿ, ನಿಸ್ತಿಕೆ, ನಿಸಿದಿಗೆ ಇತ್ಯಾದಿ ಪದಗಳು ನಿಸಿಧಿಯ ಜ್ಞಾತಿರೂಪಗಳು. ಹಾವೇರಿ[೨೭] ಪರಿಸರದಲ್ಲಿ ನಿಸಿಧಿಗಳ ಪ್ರಸರಣವಿದ್ದು ಜಿಲ್ಲೆಯಾದ್ಯಂತ ಹರಡಿಕೊಂಡಿವೆ. ಇಲ್ಲಿ ಒಟ್ಟು ಶಾಸನಸಹಿತ ೯೧ ನಿಸಿಧಿಗಳಿದ್ದು ೧೦೫ ವ್ಯಕ್ತಿಗಳ ಮರಣವನ್ನು ಸೂಚಿಸುತ್ತವೆ. ಅದರಲ್ಲಿ ಮೂರು ಜನ ಮುನಿಗಳು, ಒಬ್ಬ ಕಂತಿ, ೭೦ ಶ್ರಾವಕರು ೩೧

ಶ್ರಾವಕಿಯರು ಒಟ್ಟು ೧೦೫ ವ್ಯಕ್ತಿಗಳು ಸ್ವಾವನ್ನು ಆಹ್ವಾನಿಸಿದ್ದಾರೆ. ಇವಲ್ಲದೇ ಇನ್ನೂ ೪೨ ಲಿಪಿರಹಿತ ನಿಸಿಧಿಗಲ್ಲುಗಳು ಈ ಜಿಲ್ಲೆಯಲ್ಲಿವೆ.

ಇಲ್ಲಿರುವ ನಿಸಿಧಿಗಳನ್ನು ಕಾಲ, ರಾಜಸ್ವ, ರಾಜ, ಸಾವನ್ನು ಆಹ್ವಾನಿಸಿದ ವ್ಯಕ್ತಿಗಳು (ಮುನಿ, ಕಂತಿ, ವ್ಯಾಪಾರಿ, ರಾಜ, ರಾಣಿ, ದಂಡನಾಯಕ, ನಾಳ್ಗಾವುಂಡ, ಗಾವುಂಡ, ಶ್ರಾವಕರು, ಶ್ರಾವಕಿಯರು ಇತ್ಯಾದಿ) ವರ್ಣನೆ, ಸಾಹಿತ್ಯ, ಛಂದಸ್ಸು ಯಾಪಕಾಚಾರ್ಯ, ಸಂಘ, ಗಣ, ಗಚ್ಛ, ಬಳಿ, ಅನ್ವಯ ಇತ್ಯಾದಿ ದೃಷ್ಟಿಕೋನಗಳಿಂದ ಅಧ್ಯಯನಕ್ಕೆ ಒಳಪಡಿಸಬಹುದು. ಈ ಅಂಶಗಳು ಮಹಾಪ್ರಬಂಧದ ಅಧ್ಯಯನದ ಭಾಗಗಳಾದ್ದರಿಂದ ಅಲ್ಲಲ್ಲಿ ಅಧ್ಯಯನಕ್ಕೊಳಪಟ್ಟಿವೆ. ಪ್ರಸ್ತುತ ಸಾವನ್ನು ಆಹ್ವಾನಿಸುವ ವಿಧಾನಗಳ ಬಗ್ಗೆ ಸಂಕ್ಷಿಪ್ತ ಅಧ್ಯಯನ ಮುಖ್ಯವೆನಿಸಿದೆ.

### ೩.೨.೧ ಸಾವನ್ನು ಆಹ್ವಾನಿಸುವ ವಿಧಾನಗಳು.

ಹಾವೇರಿ ಪರಿಸರದ ನಿಸಿಧಿ ಶಾಸನಗಳಲ್ಲಿ ಪಂಚಪದ, ಅಷ್ಟವಿಧಾರ್ಚನೆ, ಸನ್ಯಸನ, ಸಮಾಧಿ ಎಂಬ ಸಾವನ್ನು ಆಹ್ವಾನಿಸುವ ಪದಗಳು ಪ್ರಯೋಗಗೊಂಡಿವೆ. ಇವುಗಳಲ್ಲಿ ಸಮಾಧಿ ವಿಧಾನವು ಅಗ್ರಗಣ್ಯವೆನಿಸಿ ೫೦ ಶಾಸನಗಳಲ್ಲಿ ಬಳಕೆಗೊಂಡಿದೆ. ಸಂನ್ಯಸನ ೧೧, ಇವೆರಡೂ ಸಂಯುಕ್ತವಾಗಿ ೦೫ ಕಡೆ, ಪಂಚಪದ ಮತ್ತು ಅಷ್ಟವಿಧಾರ್ಚನೆ ಒಂದೊಂದರಂತೆ ಪ್ರಯೋಗಗೊಂಡಿವೆ. ಆರಾಧನ, ಸಲ್ಲೇಖನ, ಪಂಡಿತ, ಪೌಗ್ಗಮಣ ಆಚರಣೆಯ ಸಾವಿನ ನಿದರ್ಶನಗಳು ಈ ಭಾಗದಲ್ಲಿ ದೊರೆಯವು. ೦೯ನೆಯ ಶತಮಾನದಿಂದ ಆರಂಭಗೊಳ್ಳುವ ಸಾವಿನ ಪ್ರಕ್ರಿಯೆ ೧೪ನೆಯ ಶತಮಾನದವರೆಗೂ ಮುಂದುವರೆದಿದೆ. ಸಾವನ್ನು ಆಹ್ವಾನಿಸುವ ಆಚಾರ ಪದಗಳ ಪ್ರಾಮುಖ್ಯತೆಯನ್ನು ಈ ರೀತಿಯಾಗಿ ಗಮನಿಸಬಹುದು.

"(ಅ) ಗ್ರಂಥ ಜ್ಞಾನಕ್ಕೆ ಪ್ರಾಧಾನ್ಯತೆ ನೀಡುವ 'ಆರಾಧನಾ'.
(ಆ) ಮೂಲಮಂತ್ರಗಳಿಗೆ ಪ್ರಾಮುಖ್ಯತೆ ಕೊಡುವ 'ಪಂಚಪದ',
(ಇ) ವಿರಕ್ತಿಗೆ ಮತ್ತು ಭೋಗವರ್ಜನೆಗೆ ಒತ್ತು ನೀಡುವ 'ಸನ್ಯಸನ'.
(ಈ) ನಿರಸನಕ್ಕೆ ಅಗ್ರಸ್ಥಾನವಿತ್ತಿರುವ 'ಸಲ್ಲೇಖನಾ'.
(ಉ) ಧ್ಯಾನಕ್ಕೆ ಮಹತ್ವವಿತ್ತ 'ಸಮಾಧಿ'.
(ಊ) ಸಮ್ಯಕ್ ಜ್ಞಾನಕ್ಕೆ ಪ್ರಾಮುಖ್ಯತೆ ಕೊಡುವ 'ಪಂಡಿತ'.
(ಋ) ದೇಹದಂಡನೆಗೆ ಪ್ರಾಧಾನ್ಯತೆ ಕೊಟ್ಟಿರುವ 'ಪೌಗ್ಗಮಣ'."[೭೮]

### ೦೧. ಅಷ್ಟವಿಧಾರ್ಚನೆ.

ಅಕ್ಷತೆ, ಜಲ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲ ಎಂಬ ಎಂಟು ವಿವಿಧ ಪರಿಕರಗಳಿಂದ ತೀರ್ಥಂಕರರಿಗೆ ಅರ್ಚಿಸುವುದೇ ಅಷ್ಟವಿಧಾರ್ಚನೆ ಎನ್ನಿಸುತ್ತದೆ. ಸಾಮಾನ್ಯವಾಗಿ

ಬಸದಿಯಲ್ಲಿ ನಿತ್ಯ ನಡೆಯುವ ಪ್ರಕ್ರಿಯೆ ಇದು. ಸಾವನ್ನು ಆಹ್ವಾನಿಸುವಾಗಲೂ ಈ ವಿಧಾನ ವಿಶೇಷವಾಗಿ ಬಳಕೆಯಾಗಿದೆ. ಚಿನ್ನಮುಳಗುಂದದ ಬೆಳಿ(ಳ್ಳಿ)ಸೆಟ್ಟಿಯ ಹೆಂಡತಿ ಮತ್ತು ಮೂಲಸಂಘ ದೇವಗಣ ಭವಸೇನದೇವರ ಗುಡ್ಡಿಯೂ ಆದ ಸೋಮವೆ ಅಷ್ಟವಿಧಾರ್ಚನೆಯ ಮೂಲಕ ಪ್ರಾಣತ್ಯಾಗ ಮಾಡುತ್ತಾಳೆ. ಜಿನಾರಾಧನೆಗೆ ಒತ್ತುಕೊಡುವ ಈ ಆಚಾರಪದ ಸಾವನ್ನು ಆಹ್ವಾನಿಸುವಾಗ ಬಳಕೆಗೊಂಡಿದ್ದು ವಿರಳ.

## ೦೨. ಪಂಚಪದ.

ಜೈನರ ಪವಿತ್ರ ಮಂತ್ರ ಪಂಚಪದ. ಣಮೋಕಾರ ಮಹಾಮಂತ್ರ, ಪಂಚನಮಸ್ಕಾರ ಇತ್ಯಾದಿ ನಾಮಗಳ ಈ ಪದ ಪಂಚಪರಮೇಷ್ಠಿಗಳನ್ನು ಸ್ಮರಿಸುವುದಾಗಿದೆ. "ಮೂಲಾಧಾರವಾದ ಐವರು ಜಿನಗುರುವರ್ಯರೇ ಪಂಚಪರಮೇಷ್ಠಿಗಳು. ಅವರು ಅರ್ಹಂತ (ಸರ್ವಜ್ಞಾನಿ), ಸಿದ್ಧ (ಪರಿಪೂರ್ಣ), ಉಪಾಧ್ಯಾಯ (ಗುರು), ಆಚಾರ್ಯ (ಜ್ಞಾನಿ) ಮತ್ತು ಸಾಧು (ಮುನಿ) ಇವರನ್ನು ಪ್ರಾರ್ಥಿಸುವುದು ವಿಧಿಕ್ರಿಯೆಯ ಮಹತ್ವದ ಅಂಗ. ದೈನಂದಿನ ಜೀವನದಲ್ಲಿ ಸಮಸ್ಯೆಗಳನ್ನು ಎದುರಿಸಲು ಶ್ರಾವಕರಿಗೆ ಅಗತ್ಯವಿರುವಷ್ಟೇ ಅದು ದೇಹದಂಡಿಸುವ ಮುನಿಗಳ ಮೋಕ್ಷಪ್ರಾಪ್ತಿಗೂ ಅಗತ್ಯವೆನಿಸಿದೆ"[೭೯] ಅಂತೆಯೇ ಶ್ರಾವಕ-ಶ್ರಾವಿಕೆಯರ ಪ್ರಾಣತ್ಯಾಗದಲ್ಲೂ ಈ ಕ್ರಿಯೆ ರೂಢಿಗೊಂಡಿತು.

ಸಾವನ್ನು ಆಹ್ವಾನಿಸಿದ ವ್ರತಧಾರಿ ಪಂಚಪದಗಳನ್ನು ಪಠಿಸುವುದು ಕಡ್ಡಾಯ. ಆಹಾರ, ಅನ್ನ ಪಾನಾದಿಗಳನ್ನು ತ್ಯಜಿಸಿದಾಗಲೂ ಪಠಣ ಮುಂದುವರೆಯಬೇಕು.

> "ಖರಪಾನಹಾಪನಾಮಪಿ ಕೃತ್ವಾಕೃತ್ವೋಪವಾಸಮಪಿ ಶಕ್ತ್ಯಾ ।
> ಪಂಚನಮಸ್ಕಾರ ಮನಾಸ್ತನುಂ ತ್ಯಜೇತ್ಸರ್ವಯತ್ನೇನ ॥"[೮೦]

ಸಾವು ಸಂಭವ. ಅದು ಸಮೀಪಿಸಿದಂತೆ ವ್ಯಕ್ತಿಯು ಬಿಸಿ ನೀರನ್ನು ತ್ಯಾಗ ಮಾಡಿ ಸಂಪೂರ್ಣ ಉಪವಾಸಮಾಡಿ ಪಂಚನಮಸ್ಕಾರ ಮಂತ್ರವನ್ನು ಮನದಲ್ಲಿಯೇ ಪಠಿಸಿ ಶರೀರವನ್ನು ತ್ಯಾಗ ಮಾಡಬೇಕೆನ್ನುತ್ತದೆ ರತ್ನಕರಂಡಕಶ್ರಾವಕಾಚಾರ. ಪಂಚನಮೋಕಾರ ಸರ್ವಪಾಪವಿನಾಶ ಮಾಡುವಂತದ್ದು, ಮಂಗಳಕರವಾದದ್ದು ಎಂದು ಜೈನರು ನಂಬುತ್ತಾರೆ. ತೇರದಾಳದ ಮಾಂಡಳಿಕನಾದ ಗೊಂಕದೇವರಸನಿಗೆ ಒಮ್ಮೆ ಹಾವು ಕಚ್ಚಿದಾಗ ಅವನು ಮಂತ್ರ-ತಂತ್ರದ ಮೊರೆಹೋಗದೆ ದಿಟ್ಟತನದಿಂದ ಪಂಚಪದಗಳನ್ನು ಪಠಿಸುತ್ತಾ ಕುಳಿತನಂತೆ. ಪರಿಣಾಮವಾಗಿ ಅವನಿಗೆ ವಿಷಯವೆಲ್ಲವೂ ಇಳಿದು ಅವನು ಗುಣವಾದನ್ನೆನ್ನುತ್ತದೆ ಇದೇ ಊರ ಶಾಸನ.[೮೧] ಲೌಖಿಕ ವ್ಯಾಮೋಹ ತ್ಯಜಿಸಿ ಪಂಚ ನಮಸ್ಕಾರವನ್ನು ಆಲಿಸುತ್ತ, ಓದುತ್ತಾ ತಾನೇ ದೇವನೆಂದ ಪರಿಭಾವಿಸಿ ಸಮಾಧಿ ವಿಧಾನದಿಂದ ದೇಹವನ್ನು ಬಿಟ್ಟವನಿಗೆ ಸ್ವರ್ಗ ಸಿಗುವುದೆನ್ನುತ್ತಾನೆ ಬ್ರಹ್ಮಶಿವ.[೮೨]

ಹಾವೇರಿ ಪರಿಸರದಲ್ಲಿ ಪಂಚಪದ ನೆನೆಯುತ್ತ ದೇಹತ್ಯಾಗ ಮಾಡಿದ ವ್ಯಕ್ತಿಗಳ ಎರಡು ಉದಾಹರಣೆಗಳು ನಮಗೆ ದೊರೆಯುತ್ತವೆ. ಬಿದಿರೆ (ಸುಣಕಲ್ಲಬಿದಿರೆ)ಯ ಬೊಪ್ಪಿಸೆಟ್ಟಿ ಎಂಬುವನು ಮರಣದ ಅಂತ್ಯದ ಸಮಯದಲ್ಲಿ ಪಂಚಪದವನ್ನು ನೆನೆಯುತ್ತ, ಓದುತ್ತ, ಕೇಳುತ್ತ ಸುಖಸಾಧನೆಗೈದ ಬಗ್ಗೆ ಅಲ್ಲಿನ ನಿಸಿಧಿ ಶಾಸನ ಹಾಡಿ ಹೊಗಳಿದೆ.

> ಸದಮಳ ಚಿತ್ತಪದ್ಮದಳದೊಳು ವರ ನಿರ್ಮ್ಮಳ ಜೈನಬಿಂಬಮಂ
> ಮುದದೊಳೆ ತಾಳ್ದಿ ಪಂಚಪದಮುಮಂ ನೆನೆದೊದುತಮೊಲ್ದು ಕೇಳುತಂ
> ಬಿದಿರೆಯ ಬೊಪ್ಪಿಸೆಟ್ಟಿ ಸುಖಸಾಧನೆಯೊಳು ಚಲದಂಕ ರಾಮನೆಂ
> ಬದಟನೆನಂನಿ ಮಾಡಿ ಭರದಿಂದಳನಿಂದ್ರಲೋಕಮಂ.[೮೩]

ಬಾಳೂರಿನ ಚಾಕಿಗೌಡಿಯಂತೂ ಣಮೋಕಾರ ಮಹಾಮಂತ್ರವನ್ನು ಉಚ್ಚರಿಸುತ್ತಲೇ ಪ್ರಾಣತ್ಯಾಗ ಮಾಡಿದಳು. ಕುರುಹಾಗಿ ಇವಳ ನಿಸಿಧಿಯಲ್ಲಿ ಈ ಮಂತ್ರದ ಪೂರ್ಣ ಖಂಡರಣೆ ಎರಡು ಬಾರಿ ಆಗಿದೆ. ಕರ್ನಾಟಕದಲ್ಲಷ್ಟೇ ಅಲ್ಲ ಇಡೀ ಭಾರತೀಯ ಶಾಸನಗಳಲ್ಲಿ ಇದೊಂದು ಅಪರೂಪದ ಶಾಸನ.

### ೦೩. ಸಂನ್ಯಸನ ವಿಧಾನ.

ಸಂನ್ಯಸನ ಎಂಬುದು ಒಂದು ಮರಣ ಪ್ರಭೇದ. ಇದಕ್ಕೆ ವಿರಕ್ತಿ ಮರಣವೂ ಎನ್ನುತ್ತಾರೆ. ವ್ಯಕ್ತಿಯು ಭವಬಂಧನಗಳಿಂದ ಬಿಡುಗಡೆಗೊಂಡು ಕೈಗೊಳ್ಳುವ ಇಚ್ಛಾಮರಣವೇ ಸನ್ಯಸನ. ಸನ್ಯಸನವೆಂಬುದು ವೈರಾಗ್ಯ. ಮುನಿ, ಕಂತಿ, ಗೃಹಸ್ಥಾಶ್ರಮ ತ್ಯಜಿಸಿದ, ಸನ್ಯಾಸಿಗಳಾದ ಶ್ರಾವಕ–ಶ್ರಾವಕೆಯರು ವೈರಾಗ್ಯದೆಡೆಗೆ ಮುಖಮಾಡಿ ಸನ್ಯಾಸಿ ಬಾಳನ್ನು ಅನುಸರಿಸುತ್ತ ಜೀವ ತ್ಯಾಗ ಮಾಡುವುದೇ ಸಂನ್ಯಸನ ಮರಣ.

ಹಾವೇರಿ ಪರಿಸರದಲ್ಲಿ ಒಟ್ಟು ೦೯ ಸಂನ್ಯಸನ ಮರಣದ ನಿದರ್ಶನಗಳಿವೆ. ಇದರಲ್ಲಿ ಮೂರು ಜನ ಮುನಿಗಳು, ನಾಲ್ಕು ಜನ ಶ್ರಾವಕರು, ಇಬ್ಬರು ಶ್ರಾವಿಕೆಯರು. ಮಲಧಾರಿ ನರೇಂದ್ರ, ಸಕಳಚಂದ್ರ, ಮಾಣಿಕದೇವ ಮುನಿಗಳು, ಸಕಳ ಸಂನ್ಯಸನ ವಿಧಾನದಿಂದ ಮಡಿದರೆ,[೮೪] ಉಳಿದವರು 'ಸಂನ್ಯಾಸಪೂರ್ವಕಂ' 'ಸನ್ಯಸನಂ ತಳೆದು', 'ಸನ್ಯಸನಂ ಕಯಿಕೊಂಡು', ಸಾವನ್ನು ಆಹ್ವಾನಿಸಿದ್ದಾರೆ.

ಸನ್ಯಸನ ಒಂದು ವಿಧಿ ಮತ್ತು ವಿಧಾನ. ಶಿವಕೋಟ್ಯಾಚಾರ್ಯ, ಚಾವುಂಡರಾಯ ಮುಂತಾದವರು ಈ ವಿಧಾನವನ್ನು ಮೇಲಿಂದ ಮೇಲೆ ಪ್ರಸ್ತಾಪಿಸಿದರೂ ಇದರ ಸ್ಫುಟವಾದ ವ್ಯಾಖ್ಯಾನ ದೊರೆಯುವುದು ಪಾರ್ಶ್ವಪಂಡಿತನಿಂದ. ಇತರ ವ್ರತಗಳನ್ನು ಆಚರಿಸಲು ಸಮಯಪಿಲ್ಲದವರು ಇದನ್ನು ಆಯ್ದುಕೊಳ್ಳುತ್ತಿದ್ದರೆಂದು ಬಂಧುವರ್ಮ ಸೂಚಿಸುವಂತಿದೆ. ಬಹುಶಃ

ಈ ಕಾರಣಗಳಿಂದಾಗಿ ಮಹಾಭಾರತದ ಕರ್ಣನು ಜೀವಿತದ ಒಂದೇ ಒಂದು ಯಾಮ ಉಳಿದಾಗ, ಯುದ್ಧಭೂಮಿಯಲ್ಲಿಯೇ ಈ ವ್ರತ ದೀಕ್ಷೆಯನ್ನು ಪಡೆದುಕೊಳ್ಳಬೇಕಾಯಿತೆಂದು ತೋರುವುದು.[೮೫]

ಸಂನ್ಯಸನವನ್ನು ಮತ್ತು ಸಮಾಧಿ ವಿಧಾನವನ್ನು ಒಟ್ಟೊಟ್ಟಿಗೆ ಆಚರಿಸಿದ ನಿದರ್ಶನಗಳು ಹಾವೇರಿ ಪರಿಸರದಲ್ಲಿ ಲಭ್ಯವಿವೆ.

> “ಸನ್ಯಸನಪ್ಪುವಸರಂ ಸಮಾಧಿ ವಿಧಿಯಂ ಮುಡಿಪದಳು . . . ಕಾಳಿಗಾವುಣ್ಡಿ”.
> “ಬಮ್ಮಯ್ಯನು ಯೇಕಚಿತ್ತದೆ ನಿಯತನಾಗಿ ಸಂನ್ಯಸನ ಸಮಾಧಿಯಂ ಕೆಯಿಕೊಂಡು”.
> “ಸಂನ್ಯಸನಂ ಕಯಿಕೊಂಡು . . . . ಸಮಾಧಿಂ ಮುಡಿಪಿ”.[೮೬]

### ೦೪. ಸಮಾಧಿ ವಿಧಾನ.

ಸಮಾಧಿ ತಂತ್ರದ ಇಚ್ಛಾಮರಣ ಧ್ಯಾನಸ್ಥಿತಿಯಿಂದ ಲಭಿಸುವಂತದ್ದು. ವ್ರತಧಾರಿ ತನ್ನ ಮನಸ್ಸನ್ನು ಊರ್ಧ್ವಮುಗಿಗೊಳಿಸಿ ನಿರ್ಲಿಪ್ತಭಾವವನ್ನು ತಾಳಿ, ಸಾವನ್ನು ಆಹ್ವಾನಿಸುವ ಕ್ರಿಯೆಯೇ ಸಮಾಧಿಮರಣವಾಗುತ್ತದೆ. ಮನಸ್ಸು ಮತ್ತು ದೇಹಗಳ ಹಿಡಿತದಿಂದ ಸಮಾಧಿ ಮರಣವನ್ನು ಹೊಂದಲು ಸಾಧ್ಯ. ಸಮಾಧಿ ಎಂದರೆ ನಿರ್ಜೀವ. ಜೀವ ಇರುವಾಗಲೇ ನಿರ್ಜೀವ ಹಂತ ತಲುಪಿ ಆತ್ಮವನ್ನು ದೇಹದಿಂದ ಬಿಡುಗಡೆಗೊಳಿಸಿ ಕಲ್ಯಾಣದತ್ತ ಕೊಂಡೊಯ್ಯುವುದೇ ಸಮಾಧಿಮರಣ ಎಂದೆನಿಸುತ್ತದೆ. ಶ್ರುತಮುನಿಯ ಸಮಾಧಿ ಮರಣ ಇದಕ್ಕೊಂದು ಅತ್ಯುತ್ತಮ ನಿದರ್ಶನ. “ಲೌಕಿಕ ಸ್ವರೂಪವನ್ನು, ಇದರ ನಶ್ವರತೆಯನ್ನು ಚಿಂತಿಸಿ ಈ ಯತಿಗಳು ಸಮಚಿತ್ತರಾಗಿ ಅರೆಗಣ್ ಮುಚ್ಚಿ ಆತ್ಮಧ್ಯಾನದಲ್ಲಿ ತನ್ಮಯರಾಗಿ, ಅಚಲರಾಗಿ ಸಮಾಧಿಸ್ಥರಾದರು. ಹೃದಯ ಕಮಲದಲ್ಲಿ ಸಿದ್ಧನನ್ನು ಆವಾಹನೆಮಾಡಿ, ಅಮೃತಧಾರೆಯಂಥ ಮೂಲಮಂತ್ರವನ್ನು ಜಪಿಸುತ್ತ ದೇಹವನ್ನು ತೊರೆಯುವಾಗ ಮುನಿ ವೃಂದವೆಲ್ಲ ಇವರನ್ನು ಕೊಂಡಾಡಿತು.”[೮೭] ಎನ್ನುವ ಶಾಸನ ವಾಕ್ಕುಗಳು ಸಮಾಧಿ ಸಾಧನೆಗೆ ಹಿಡಿದ ಕನ್ನಡಿ.

> ಅಂತಕ್ರಿಯಾಧಿಕರಣಂ ತಪಂಫಲ ಸಕಲದರ್ಶಿನ:ಸ್ತುವತೇ ।
> ತಸ್ಮಾದ್ಯಾವದ್ವಿಭವಂ ಸಮಾಧಿಮರಣೇ ಪ್ರಯತಿತವ್ಯಮ್ ॥.[೮೮]

ಎಂದು ರತ್ನಕರಂಡಕ ಶ್ರಾವಕಾಚಾರವು ವ್ಯಕ್ತಿಯು ತನ್ನ ಅಂತ್ಯ ಸಮಯದಲ್ಲಿ ಯಥಾ ಶಕ್ತಿಯಿಂದ ಸಮಾಧಿ ಮರಣವನ್ನು ಅನುಸರಿಸಬೇಕೆಂದು ಹೇಳುತ್ತದೆ. ಹಾವೇರಿ ಪರಿಸರದಲ್ಲಿ ಸಮಾಧಿ ಮರಣದಿಂದ ಒಟ್ಟು ೫೦ ಶ್ರಾವಕರು ತಮ್ಮ ಜೀವನವನ್ನು ಅಂತ್ಯಗೊಳಿಸಿದ್ದಾರೆ. ಇವುಗಳಲ್ಲಿ ಒಬ್ಬ ಕಂತಿ ೨೬ ಪುರುಷರು, ೨೩ ಸ್ತ್ರೀಯರಿದ್ದಾರೆ. ‘ಸಮಾಧಿ ವಿಧಿಯಿಂ’ ‘ಸಮಾಧಿಯಿಂ’ ‘ಸಮಾಧಿ ವಿಧಾನದಿನೆಯ್ದೆ’ ‘ಸಮಾಧಿವಡದು’ ‘ಸಮಾಧಿವಡಿದು’ ‘ಸಮಾಧಿಇಂ’

'ಸಮಾಧಿವಿಧ್ಥಿಯಿಂ' ಮಡಿದಿದ್ದಾಗಿ ಇಲ್ಲಿ ಶಾಸನಗಳು ತಿಳಿಸುತ್ತವೆ. ಗಂಗರ ಮಾರಸಿಂಹ ಬಂಕಾಪುರದಲ್ಲಿ ಸಮಾಧಿವಿಧಾನದಿಂದಲೇ ಮುಡಿಪಿದ್ದು[೪೯] ಈ ಪ್ರದೇಶದ ದೊಡ್ಡ ಕುರುಹು.

ಹೀಗೆ ನಿಸಿಧಿ ಶಾಸನಗಳಲ್ಲಿ ವ್ಯಕ್ತವಾದ ಮರಣ ಪ್ರಭೇದಗಳನ್ನು ಗಣನೆಗೆ ತೆಗೆದುಕೊಂಡು ಅಧ್ಯಯನ ಮಾಡಬಹುದಾಗಿದೆ. ಅವುಗಳಲ್ಲಿ ವ್ಯಕ್ತವಾದ ಶಿಲ್ಪ ವಿನ್ಯಾಸಗಳ ಬಗ್ಗೆಯೂ ಅಧ್ಯಯನಕ್ಕೆ ಅವಕಾಶ ಉಂಟು. ಅದನ್ನು ಶಾಸನ ಶಿಲ್ಪದ ವಿಭಾಗದಲ್ಲಿ ಚರ್ಚಿಸಲಾಗಿದೆ.

## ಇ. ಶಾಸನಗಳ ಸಾಹಿತ್ಯ ಅಧ್ಯಯನ.

ಸಾಹಿತ್ಯ ಮತ್ತು ಇತಿಹಾಸ ಒಂದೇ ನಾಣ್ಯದ ಎರಡು ಮುಖಗಳು. ಅವು ಒಂದನ್ನೊಂದು ಬಿಟ್ಟು ಇರವು. ಇತಿಹಾಸದ ಅಂಗಗಳಾದ ಶಾಸನಗಳು ಕೇವಲ ಆಜ್ಞೆ, ಒಕ್ಕಣಿಕೆ, ಆಗಿರದೇ ಸಾಹಿತ್ಯದ ಭಂಡಾರಗಳೂ ಹೌದು. ರಾಜನ ಕುರಿತಾಗಿ ಹೇಳುವು ಇತಿಹಾಸವಾದರೆ ಅವನನ್ನು ವರ್ಣಿಸುವ ಪದಪುಂಜಗಳು ಸಾಹಿತ್ಯ ಎನ್ನಿಸುತ್ತದೆ. ರಾಜನವರ್ಣನೆ, ಪ್ರಕೃತಿವರ್ಣನೆ, ಸ್ಥಳವರ್ಣನೆ, ವರ್ಣನೆಗೆ ಬಳಸಿದ ಛಂದಸ್ಸು ಪ್ರಶಸ್ತಿ, ಕಾಲದ ಉಲ್ಲೇಖ, ಕವಿಗಳು ಇವೆಲ್ಲವೂ ಸಾಹಿತ್ಯದ ರಾಯಭಾರಿಗಳಂತೆನಿಸುತ್ತವೆ.

## ೦೧. ವರ್ಣನೆಗಳು.

ವರ್ಣನೆ ಮಾಡುವುದು ಮನುಷ್ಯನ ಹುಟ್ಟುಗುಣ. ಶಾಸನಕಾರರು ತಾವು ಕಂಡ ತಮ್ಮ ನಾಡಿನ ನೆಲ, ಜಲ, ಸಸ್ಯ, ಬೆಟ್ಟ, ಗುಡ್ಡ, ವ್ಯಕ್ತಿಗಳನ್ನು, ದೇಶ ನಾಡು ಸೀಮೆ ಇತ್ಯಾದಿಗಳನ್ನು ಅಕ್ಷರ ರೂಪದಲ್ಲಿ ಸೆರೆ ಹಿಡಿದು ಶಾಸನಗಳಲ್ಲಿ ಒಡಮೂಡಿಸಿದ್ದಾರೆ.

### ಅ. ಪ್ರಕೃತಿ ವರ್ಣನೆ.

ಮನುಷ್ಯ, ಪ್ರಕೃತಿಯ ಕೂಸು. ಅವನು ತನ್ನ ಜೀವನವನ್ನು ಪ್ರಕೃತಿಯೆ ಒಡನಾಟದಲ್ಲಿಯೇ ಕಳೆಯಬೇಕು. ಅಂತೆಯೇ ತನ್ನ ನೆಲ, ಜಲ, ಸಸ್ಯ, ಬೆಟ್ಟ ಗುಡ್ಡಗಳನ್ನು ತನ್ನ ಕಲ್ಪನಾ ಮೂಸೆಯಲ್ಲಿ ಚಿತ್ರಿಸುತ್ತಹೋದ. ಯಾರಾದರೂ ಕಥೆಯನ್ನು ಹೇಳುತ್ತಿದ್ದರೆ ಅದರಲ್ಲಿ ಬರುವ ಪ್ರಕೃತಿಯನ್ನು ನಾವು ನೋಡಿದ ಪರಿಸರಕ್ಕೆ ತಗಳ್ಚುವುದು ಸಹಜಕ್ರಿಯೆ. ಅಷ್ಟರಮಟ್ಟಿಗೆ ಸ್ಥಳೀಯ ಪರಿಸರ ನಮ್ಮ ಮೇಲೆ ಪ್ರಭಾವ ಬೀರಿರುತ್ತದೆ. ಪಂಪ ತನ್ನ 'ವಿಕ್ರಮಾರ್ಜುನ ವಿಜಯ'ದಲ್ಲಿ ಬನವಾಸಿ ಪರಿಸರವನ್ನು ವರ್ಣಿಸಿದ್ದು ಈ ಹಿನ್ನೆಲೆಯಲ್ಲಿಯೇ. ಪ್ರಕೃತಿಯ ವರ್ಣನೆ ಕಾವ್ಯದ ಒಂದು ಭಾಗವೂ ಹೌದು. ಶಾಸನಕವಿಗಳೂ ಸಹ ಕಡಿಮೆಯೇನಲ್ಲ. ಅವರೂ ಸಹ ತಮ್ಮ ಸುತ್ತಮುತ್ತಲ ಪರಿಸರವನ್ನು ಶಾಸನಗಳಲ್ಲಿ ಉತ್ಕೀರ್ತಿಸಿದರು ಅಂತಹ ಹಲವಾರು ನಿದರ್ಶನಗಳು ಹಾವೇರಿ ಪರಿಸರದಲ್ಲೂ ಲಭ್ಯವಿವೆ.

## ೦೧. ನೆಲ.

ಮನುಷ್ಯನಿಗೆ ತಾಯಿ ಮತ್ತು ತಾಯ್ನೆಲ ಎರಡೂ ಪರಮ ಜೀವನ ಮೌಲ್ಯಗಳು. ಅವನು ತಾಯಿಯಷ್ಟೆ ತನ್ನ ಇರುವಿಕೆಯ ಭಾಗಕ್ಕೆ ಅಂದರೆ ನೆಲಕ್ಕೆ ಅಷ್ಟೇ ಗೌರವ ಕೊಟ್ಟಿದ್ದಾನೆ, ಆರಾಧಿಸಿದ್ದಾನೆ, ಪ್ರೀತಿಸಿದ್ದಾನೆ, ವರ್ಣ್ಣಿಸಿದ್ದಾನೆ. ಕೆಲವೊಮ್ಮೆ ವರ್ಣಿಸಲಾಗದಿದ್ದರೂ ತನ್ನ ಪರಿಸರದ ಹೆಸರನ್ನಾದರೂ ಸೂಚಿಸಲು ಮರೆತಿಲ್ಲ. ಬನವಾಸಿ ಕದಂಬರ ಶಾಸನಗಳಲ್ಲಿ ಈ ಕ್ರಮವನ್ನು ಕಾಣಬಹುದು. ದೇವಗಿರಿಯಲ್ಲಿ ದೊರೆತ ಇವರ ತಾಮ್ರಶಾಸನಗಳಲ್ಲಿ 'ವೈಜಯಂತಿ' ರಾಜ್ಯವನ್ನು ಹೆಸರಿಸಿದ್ದು ದಾನಕೊಟ್ಟ ಊರನ್ನು 'ಬೃಹತ್ಪರಲೂರು' 'ತ್ರಿಪರ್ವತ' ಎಂದು ಹೆಸರಿಸಲಾಗಿದೆ. ಈ ಎರಡೂ ಹೆಸರು ಈಗಿನ ದೇವಗಿರಿಯವು.

ಬಾದಾಮಿ ಚಲುಕ್ಯರ ಶಿಗ್ಗಾವಿಯ ತಾಮ್ರಶಾಸನದಲ್ಲೂ ಸಹ 'ದಕ್ಷಿಣ ಪಥ' (ದ್ರಾವಿಡ ದೇಶಗಳು) ಕಿಸುವೊಟಲು, ವನವಾಸಿ, ಪುರಿಗೆಱೆ (ಲಕ್ಷ್ಮೇಶ್ವರ), ಗುಡ್ಡಿಗೆರೆ ಸ್ಥಳಗಳ ನಾಮಸೂಚಕಗಳಿವೆ. ಈ ಕ್ರಮ ರಾಷ್ಟ್ರಕೂಟರಲ್ಲೂ ಮುಂದುವರೆದು ಕದರಮಂಡಲಗಿಯ ಶಾಸನದಲ್ಲಿ 'ವನವಾಸಿ' 'ಸತ್ತಳಿಗೆ'ಯ ಉಲ್ಲೇಖಗಳಿವೆ. ಹಾವೇರಿ ಪರಿಸರದ ಜೈನಶಾಸನಗಳಲ್ಲಿ ಸ್ಥಳವರ್ಣನೆಯ ಪ್ರಕ್ರಿಯೇ ಆರಂಭವಾಗಿದ್ದು ಕಲ್ಯಾಣ ಚಾಳುಕ್ಯರ ಕಾಲದಲ್ಲಿ. ಬಹುಶ: ಇವರ ಕಾಲಕ್ಕೆ ಸಾಹಿತ್ಯ ಕೃತಿಗಳ ಕೃಷಿಯ ಫಲವಾಗಿ ಶಾಸನ ಕೃತಿಗಳಲ್ಲೂ ವರ್ಣನೆಗಳು ಪದಾರ್ಪಣೆ ಮಾಡಿದುವು. ಆರಂಭದಲ್ಲಿ ಚಾಳುಕ್ಯರು ಹಿಂದಿನ ರಾಜರಂತೆ ಊರ ಹೆಸರನ್ನಷ್ಟೇ ಸೂಚಿಸುತ್ತಿದ್ದದ್ದು ಕ್ರಿ.ಶ. ೧೦೬೧ರ ಅರಟಾಳ, ಕ್ರಿ.ಶ. ೧೦೬೬ರ ಮೋಟೆಬೆನ್ನೂರು, ಕ್ರಿ.ಶ. ೧೧೨೨ರ ಅರಟಾಳ ಶಾಸನಗಳಲ್ಲಿ ಕಂಡುಬರುತ್ತದೆ. 'ಇನ್ತು ಪೊಗರ್ತೆಗಂ ನೆಗರ್ತೆಗಂ ನೆಲೆಯಾಗಿ ಬೆಳ್ವಂತಿಯೊಳೀ ಬ್ರಹ್ಮ ಜಿನಾಳಯಮಂ'[೧೦] ಎಂದು ಬೆಳವತ್ತಿಯ ಬ್ರಹ್ಮಜಿನಾಲಯವನ್ನು ವರ್ಣನೆ ಮಾಡಿದ್ದು ಪರೋಕ್ಷವಾಗಿ ಬೆಳ್ವಂತಿಯ ವರ್ಣನೆ ಮಾಡಿದಂತಿದೆ.

ಹಾವೇರಿ ಪರಿಸರದ ಜೈನಶಾಸನಗಳಲ್ಲಿ ಮೊಟ್ಟಮೊದಲ ಬಾರಿಗೆ ಸ್ಥಳವರ್ಣನೆಯ ಸುಂದರ ಚಿತ್ರಣ ಬಾಳೇಹಳ್ಳಿಯ ಶಾಸನದಲ್ಲಿ ಕಂಡುಬರುತ್ತದೆ. ದೇಸಿ ಪಟ್ಟಣವಾದ ಬಾಳೆಹಳ್ಳಿಯು

> ಬಳಸಿದ ಕೋಟೆಯಿ . . . . . ಳಿನೊಪ್ಪುವ ಪೂಗೊಳಂಗಳಿಂ
> ಬೆಳದೇಱಿಗಿರ್ದ್ದ ಶ್ಯಾಳಿವನದಿಂದೆಲೆ ದೋಂಟ ದಿನಿಕ್ಷುವಾಟಿಯಿಂ
> ಕುಳಿರ್ವ್ವ . . . . . . ನಂದನ ನಂದನದೊಳು ನಿರಂತರಂ
> ಸುಳಿವ ಸುಗಂಧ ಗಂಧವಹನಿಂದೆ ವಸಂತಮದಾವ ಕಾಲಮುಂ.[೧೧]

ಊರ ಸುತ್ತಲು ಕೋಟೆ, ಹೂವಿನ ಕೊಳಗಳು, ವನ, ಎಲೆಯ ತೋಟಗಳ, ಕಬ್ಬಿನ ಗದ್ದೆಗಳು, ಸದಾ ತಂಪು ಹರಡುವ ಉದ್ಯಾನವನಗಳು, ನಿರಂತರ ಸುಳಿವ ಪರಿಮಳಭರಿತ

ಸುವಾಸನೆಯಿಂದ ವರ್ಷದ ಎಲ್ಲಾ ಕಾಲವೂ ವಸಂತ ಕಾಲದಂತ್ತಿತ್ತು ಎಂಬ ವರ್ಣನೆ ಕವಿ ಪ್ರತಿಭೆಯ ಕನ್ನಡಿ. ಅಲ್ಲದೇ ಇದೇ ಬಾಳೆಯಹಳ್ಳಿಯು ಚೋಳ, ಗೂರ್ಜರು, ಮಾಳವ ರಾಜ್ಯದಿಂದಲೂ ದೇಸಿಪಟ್ಟವಾಗಿತ್ತೆಂದು ಕವಿ ತನ್ನೂರ ಬಗ್ಗೆ ಹೆಮ್ಮೆಯಿಂದ ಹೇಳಿಕೊಳ್ಳುತ್ತಾನೆ.

ಬಾಳೇಹಳ್ಳಿಗಿಂತ ಗೊಟ್ಟಗಡಿ (ನದಿಹರಳಹಳ್ಳಿ) ಏನು ಕಮ್ಮಿಯಿಲ್ಲ ಎಂಬಂತೆ ಶಾಂತಿರಾಜ ಈ ಊರ ಚೆಲುವನ್ನು ಸೊಗಸಾಗಿ ಕಟ್ಟಿಕೊಟ್ಟಿದ್ದಾನೆ.

> ವಿವಿಧ ತಡಾ(ಟಾ)ಗ(ಕ) ಕೂಪ ಸರಸೀ ಸರಸೀರುಹ ಷಂಡಮಂಡಿತಂ
> ನವ ನವಮಾಳೀಕಾಮಳ ಯಜಾರ್ಜ್ಜುನ ಭೂರ್ಜ್ಜಲವಂಗಲುಂ ಗೃಭಂ
> ಗವನ ವಿರಾಜಿತಂ ಚಳಚಕೋರ ಮಯೂರ ಮರಾಳ ಷಟ್ಪದೀ
> ರವ್ಯವತಮಪ್ಪ ಗೊಟ್ಟಗಡಿಗೇಂ ಪಡಿಯೆಕ್ಕುಮೆ ಭೋಗ ಭೂಮಿಯುಂ॥[೨]

ಕೆರೆ, ಬಾವಿ, ಕೊಳ, ಸರೋವರಗಳ ಸಮೂಹದಿಂದ ಅಲಂಕೃತವೂ, ಭೂರ್ಜಪತ್ರಮರಗಳು, ಲವಂಗ ವನಗಳು, ವನಗಳಿಂದ ಕಂಗೊಳಿಸುವ, ಜೊನ್ನವಕ್ಕಿ, ನವಿಲು, ಹಂಸ, ಹೆಣ್ಣುದುಂಬಿಗಳಿಂದ ಆವೃತವಾದ ಗೊಟ್ಟಗಡಿಯಂಥ ಭೋಗ ಭೂಮಿಯ ಮಾದರಿ ಮತ್ತೊಂದು ಉಂಟೆ ಎಂದು ಕವಿ ಹೆಮ್ಮೆಯಿಂದ ಬೀಗುತ್ತಾನೆ. ಇಷ್ಟೊಂದು ಸೊಗಸಾಗಿ ತನ್ನ ನೆಲವನ್ನು ಕೊಂಡಾಡುವ ಕವಿ ನುಡಿಗಳು ಪಂಪನ ಬನವಾಸಿ ವರ್ಣನೆಯನ್ನು ನೆನಪಿಸುತ್ತವೆ. ಜೊತೆಗೆ ಕವಿಗಿರುವ ತನ್ನ ನೆಲದ ಅದಮ್ಯ ಉತ್ಸಾಹ ಪ್ರೀತಿಯನ್ನು ತೋರಿಸುತ್ತದೆ.

## ೦೨. ಜಲ.

ಶಾಸನಗಳಲ್ಲಿ ಕೆರೆ-ಕಟ್ಟೆಗಳ, ನದ-ನದಿಗಳ ವರ್ಣನೆಗಳ ಉಲ್ಲೇಖಗಳು ಹಾವೇರಿ ಪರಿಸರದ ಜೈನಶಾಸನಗಳಲ್ಲಿ ಬಂದಿವೆ. ಬಹುತೇಕ ಶಾಸನಗಳಲ್ಲಿ ಅವುಗಳನ್ನು ಕೇವಲ ಹೆಸರಿಸಿದ್ದು ವರ್ಣಿಸಲು ಹೋಗಿಲ್ಲ. ಶಾಪಾಶಯಗಳಲ್ಲಿ ಔತ್ತರೇಯ ಮೂಲದ ಗಂಗಾ, ಯಮುನಾ ನದಿಗಳ ಪ್ರಸ್ಥಾಪವಿದೆ.[೩] ಇವೆರಡೂ ನದಿಗಳು ಹಿಂದೂ ಧರ್ಮದ ಪ್ರಕಾರ ಪವಿತ್ರ ನದಿಗಳಾಗಿದ್ದು ಇಲ್ಲಿ ಸ್ನಾನ ಮಾಡುವುದರಿಂದ, ಈ ನದಿ ಸಂಗಮದ ಸ್ಥಳದಲ್ಲಿ ದಾನಕೊಟ್ಟರೆ ಪುಣ್ಯ ಬರುತ್ತದೆ ಎಂಬ ನಂಬಿಕೆಯಿದೆ. ಇನ್ನು ಚಾಳುಕ್ಯರ ಕಾಲದಲ್ಲಿಯೇ ದಾನಕೊಟ್ಟ ಭೂಮಿಯ ಮೇರೆಯನ್ನು ಗುರುತಿಸುವಾಗ ಕುಪ್ಪೇರ ತಟಾಕ, ಕೋಡಿ ತಟಾಕ, ತಪಾವಿ ತಟಾಕ, ಪುಲಿಯೂರು ತಟಾಕ, ಅರಸಿ ತಟಾಕ, ಕುರುಹಕೆಲ್ಲ ತಟಾಕ ಎಂಬ ವಿವಿಧ ಕೆರೆಗಳನ್ನು ಗುರುತಿಸಲಾಗಿದೆ.[೪] ರಾಷ್ಟ್ರಕೂಟರ ಕಾಲಾವಧಿಯಲ್ಲೂ ಬಾವಿ, ಪಡುವ ಕೆರೆ, ಬಡಗ ಕೆರೆಗಳ ಉಲ್ಲೇಖವಿದೆ.[೫] ಇವು ಕೇವಲ ಜಲನೆಲೆಯ ಗುರುತುಗಳಾಗಿರದೆ ಉಲ್ಲೇಖಿಸುವವರ ಸ್ಮೃತಿಪಟಲದಲ್ಲಿ ಅವುಗಳ ಸೌಂದರ್ಯ ಹಾಯ್ದುಹೋಗಿರುವುದನ್ನು ಅಲ್ಲಗಳೆಯುವಂತಿಲ್ಲ.

ಒಂದು ರಾಜಸ್ವದ ಎಲ್ಲೆಯನ್ನು ಗುರುತಿಸುವಲ್ಲಿ ನದಿಗಳ ಪಾತ್ರ ಅನನ್ಯ. ಕನ್ನಡದ ಮೊದಲ ಅರಸು ಮನೆತನ ಬನವಾಸಿ ಕದಂಬರದ್ದು. ಬನವಾಸಿ ೧೨೦೦೦ ಜನವಸತಿ ನೆಲೆಗಳ ರಾಜ್ಯವಾಗಿತ್ತು. ಇದರ ಎಲ್ಲೆಯನ್ನು ತುಂಗಭದ್ರೆ ಮತ್ತು ವರದೆಯ ಮಧ್ಯದಲ್ಲಿತ್ತು ಎಂದು ಗೊಟ್ಟಗಡಿ (ನದಿಹರಳಹಳ್ಳಿ) ಶಾಸನದಲ್ಲಿ ಉಲ್ಲೇಖಿಸಲಾಗಿದೆ.

ದೊರೆವೆತ್ತು ತುಂಗಭದ್ರೆಯ
ವರದೇಳೆ ಮಧ್ಯಪ್ರದೇಶದೊಳ್ಸೊಗಯಿಸುಗುಂ
ಸಿರಿಯ ತವರ್ಮ್ಮನೆ ಸೌಖ್ಯಾ
ಕರಮೆನೆ ಬನವಾಸಿದೇಶ ವತುಳ ವಿಳಾಸಂ॥

ಕರ್ನಾಟಕದ ಪಶ್ಚಿಮಘಟ್ಟದ ಉತ್ತರ ಕನ್ನಡ ಜಿಲ್ಲೆಯಲ್ಲಿ ಹುಟ್ಟಿ ವಾಯುವ್ಯ ದಿಕ್ಕಿನೆಡೆ ಮುಖಮಾಡಿ ಹರಿವ 'ವರದಾನದಿ' ಬನವಾಸಿ ದೇಶದ ಜೀವನದಿ. ಪಂಪ ಈ ನದಿಯನ್ನು 'ವರದಾ ಪುಣ್ಯಾಂಬು' ಎಂದಿದ್ದಾನೆ.[೬] ಈ ನದಿಯು ದಕ್ಷಿಣದಲ್ಲಿ ಹುಟ್ಟಿ ಉತ್ತರಾಭಿಮುಖವಾಗಿ ಹರಿವ ತುಂಗಭದ್ರೆಯನ್ನು ಸೇರುತ್ತದೆ. ಈ ಎರಡೂ ನದಿಗಳ ಮಧ್ಯದ ಪಾತ್ರಭೂಮಿ ಬನವಾಸಿದೇಶ ಎಂದು ಕೊಂಡಾಡಿದ್ದಾನೆ ಕವಿ. 'ಮಧ್ಯಪ್ರದೇಶದೊಳ್ ಸೊಗಯಿಸುಗುಂ' ಎಂಬ ಮಾತಿನಿಂದ ಬನವಾಸಿ ದೇಶ ಕ್ರಿ.ಶ. ೧೧೬೮ರ ಹೊತ್ತಿಗೆ ಮೂಲ ಕದಂಬರ ಕಾಲಕ್ಕಿದ್ದ ವಿಸ್ತಾರತೆಯನ್ನು ಕಳೆದುಕೊಂಡಿತ್ತು ಎಂಬ ಸತ್ಯ ವಿದಿತವಾಗುತ್ತದೆ.

ಪ್ರಾಚೀನ ಕಾಲದ ಕರ್ನಾಟಕದ ಹಳ್ಳಿಗಳಲ್ಲಿ ಊರಿಗೆ ಪ್ರವೇಶ ಮಾಡಲು 'ಊರ ಬಾಗಿಲು' ಇದ್ದಂತೆ 'ನೀರ್ಬಾಗಿಲುಗಳು'[೭] ಇರುತ್ತಿದ್ದವು ಎಂಬುದು ಮಂತಗಿ ಶಾಸನದಿಂದ ದಿಟವಾಗುತ್ತದೆ. ಗೊಟ್ಟಗಡಿಯಲ್ಲಂತೂ 'ವಿವಿಧ ತಟಾಕ ಕೂಪ ಸರಸೀ ಸರಸೀರುಹ ಷಂಡಮಂಡಿತ'[೮] ಎಂದು ಹಲವು ಬಗೆಯ ಕೆರೆ, ಬಾವಿ, ಕೊಳ, ಸರೋವರ ಎಂಬ ಜಲಮೂಲದ ಸಮೂಹವೇ ಇತ್ತು ಎಂಬುದಾಗಿ ಶಾಸನ ಉಲ್ಲೇಖಿಸುತ್ತದೆ.

## ೦೩.ಸಸ್ಯ.

ನಿಸರ್ಗದ ಮೂಲಸೆಲೆ ಸಸ್ಯಗಳು. ಪ್ರಾಣಿಸಂತಾನದ ಮೂಲ ಆಕರಗಳೂ ಇವೆ ಆಗಿವೆ. ಅಂತೆಯೇ ಕವಿಯ ಕಾವ್ಯವರ್ಣನೆಯಲ್ಲೂ ಸಸ್ಯಗಳಿಗೂ ಪಾಲಿದೆ. ಹಾವೇರಿ ಪರಿಸರದ ಜೈನ ಶಾಸನ ಕವಿಗಳು ಕೆಲವೊಂದು ಸಾರಿ ಆನುಷಂಗಿಕ ವರ್ಣನೆಯಾಗಿ, ಕೆಲವು ಬಾರಿ ಮುಖ್ಯ ವರ್ಣನೆಯ ಭಾಗವಾಗಿ ಸಸ್ಯಗಳನ್ನು ಬಣ್ಣನೆಗೆ ಬಳಸಿಕೊಂಡಿದ್ದಾರೆ. ಒಂದು ಶಾಸನದಲ್ಲಿ ದಾನ ಭೂಮಿಯ ಮೇರೆಯನ್ನು ಗುರುತಿಸಲು 'ಪುಣಸೆ ಮರ'ವನ್ನು ಬಳಸಿಕೊಂಡರೆ, ಇದೇ ಶಾಸನದಲ್ಲಿ ಸಸ್ಯ ಸಮೂಹದ 'ತೋಣ್ಟ'ವನ್ನು ಬಸದಿಗೆ ದಾನ ಬಿಡಲಾಗಿದೆ.[೯] ಬಸದಿಗೆ ಬಿಟ್ಟ

'ಪೂದೋಂಟವೂ' ಸಸ್ಯ ಪ್ರಭೇದವಾಗಿದೆ.[೧೦೦] ಕೆಲವೊಂದು ಊರುಗಳಲ್ಲಿ ಹೂಗಳಿಂದ ತುಂಬಿದ 'ಪೂಗೊಳ', 'ಶಾಳೀವನ', 'ತೋಂಟ', ಕಮಲದಿಂದ ತುಂಬಿದ 'ಪದ್ಮ ಸರಸಿಜ' ಕಂಡುಬರುತ್ತವೆ.[೧೦೧] ನೇರಲಗೆಯ ಕೊಳವೊಂದರಲ್ಲಿ ಅರಳಿ ಮಂದಹಾಸ ಬೀರುವ 'ಸಸ್ಮಿತ ಪಂಕಜ'ಗಳು ಕವಿಯ ಕಣ್ಣಿಗೆ ಕಾಣಬರುತ್ತವೆ.[೧೦೨] ಗೊಟ್ಟಗಡಿಯಲ್ಲಂತೂ ತಾಳೆ, ಮಾವಿನ ಮರದ ಸಾಲುಗಳು, ಭೂರ್ಜದ ಮರಗಳು, ಲವಂಗ, ಲಲಿತ ಲತಾವನಗಳ ಇದ್ದವು ಎಂದು ಕವಿ ವರ್ಣಿಸಿದ್ದಾನೆ.[೧೦೩]

ಹೂಗಳ ಗುಣಕ್ಕೆ ವ್ಯಕ್ತಿಗಳನ್ನು ಹೋಲಿಸುವ ಕ್ರಿಯೆಯಲ್ಲಿ ಇಲ್ಲಿನ ಕವಿಗಳು ಹಿಂದೆ ಬಿದ್ದಿಲ್ಲ. ಅಕ್ಕೂರು ಶಾಸನವೊಂದು ಸೋಮದೇವಕುಮಾರ ಮುನಿಯನ್ನು 'ಕುಮುದ ಚಂದ್ರ' ಎಂದು ನೈದಿಲೆಯಂತೆ ಬಿಳುಪಾದ ಚಂದ್ರನಿಗೆ ಉಪಮೀಕರಿಸಿದೆ. ಈ ಮುನಿಯ ಆರಾಧ್ಯ ತೀರ್ಥಂಕರನ ಪಾದಗಳನ್ನು 'ಕೋಮಳ ಪದ ಕಮಳ ಯುಗಳ' ಎಂದು ಕಮಲದಂತಹ ಸುಕೋಮಲವಾದ ಪಾದಗಳನ್ನು ಕೊಂಡಾಡುತ್ತದೆ. ಇನ್ನು ಸಂಗೂರ ಪ್ರಭು ಸಂಗಮನು ಸಂನ್ಯಸನ ವಿಧಾನದಿಂದ ಮರಣಿಸಿದ ನಂತರ ಅಲ್ಲಿದ್ದ ಪ್ರಜೆಗಳು 'ನೀರಜ ಮುರಿತಾಗಿದಂತೆ' ಎಂದು ಒಲುಮೆಯ ವ್ಯಕ್ತಿಗಳನ್ನು ಕಳೆದುಕೊಂಡಾಗ ಅವರ ಕಳೆಗುಂದಿದ ದೇಹವನ್ನು ಮುದುಡಿದ ತಾವರೆಗೆ ಹೋಲಿಸಿದ್ದು ಹೃದಯಸ್ಪರ್ಶಿಯಾಗಿದೆ.[೧೦೪]

## ೦೪. ಬೆಟ್ಟಗುಡ್ಡ, ಪರ್ವತ.

ಕದಂಬ ದೇವವರ್ಮನ ದೇವಗಿರಿಯ ತಾಮ್ರಪಟದಲ್ಲಿ 'ಶ್ರೀ ವಿಜಯ ತ್ರೀಪರ್ವ್ವತೇ'[೧೦೫] ಎಂಬ ಪರ್ವತ ಕುರಿತಾದ ವಾಕ್ಯೊಂದು ದಾಖಲಾಗಿದೆ. ಇಲ್ಲಿನ ಉತ್ತರಾರ್ಧಪದವಾದ ತ್ರೀಪರ್ವ್ವತ ಈಗಿನ ದೇವಗಿರಿ. ಮೂರು ಗುಡ್ಡಗಳ ಸಂಸ್ಕೃತಿಕರಣ ರೂಪ ತ್ರೀಪರ್ವ್ವತ. ಇದರ ಇನ್ನೊಂದು ಪ್ರಾಚೀನ ನಾಮ ಬೃಹತ್ಪರಲೂರು. ಈ ಊರಿನ ಆಡಳಿತವನ್ನು ದೇವವರ್ಮ ವಹಿಸಿಕೊಂಡ ನಿಮಿತ್ತವಾಗಿ ವಿಜಯ ತ್ರೀಪರ್ವ್ವತ ಎಂಬ ಅಭಿದಾನ ಪ್ರಾಪ್ತವಾದಂತೆ ಕಾಣುತ್ತದೆ. ಶಾಸನದಲ್ಲಿ ಪರ್ವ್ವತದ ಉಲ್ಲೇಖಗೊಂಡು ಸಾಹಿತ್ಯಿಕ ವರ್ಣನೆಯೇನು ಇಲ್ಲ. ಬಾಳೇಹಳ್ಳಿ ಕ್ರಿ.ಶ. ೧೧೪೬ ಶಾಸನವು 'ಮೇರುಗಿರಿ'ಯ[೧೦೬] ದಕ್ಷಿಣಕ್ಕಿರುವುದು ಕುನ್ತಳದೇಶ ಎಂದಿದೆ. ಈ ಗಿರಿಯನ್ನು 'ವಿಕ್ರಮಾರ್ಜುನ ವಿಜಯ'[೧೦೭] ಕೃತಿಯಲ್ಲಿ ಉಲ್ಲೇಖಿಸಲಾಗಿದೆ. ಕನಕಾಚಲ, ಸುವರ್ಣ, ಚಿನ್ನದ ಪರ್ವತ ಎಂಬ ನಾಮಾವಳಿ ಇದಕ್ಕಿದೆ. ಸಂಗೂರಿನ ಒಂದು ಶಾಸನವು ದಕ್ಷಿಣ ಭಾರತದ ಪರ್ವತ ಶ್ರೇಣಿಯಾದ 'ಮಲಯ ಪರ್ವ್ವತ'ವನ್ನು[೧೦೮] ಹೆಸರಿಸಿದೆ. 'ದೂರದ ಬೆಟ್ಟ ನುಣ್ಣಗೆ' ಮತ್ತು ಬೆಟ್ಟದ ನುಣ್ಪಿನಂತೆ' ಎನ್ನುವ ಗಾದೆಗಳನ್ನು ಹೆಸರಿಸುವ ಎರಡು ಶಾಸನಗಳು ದೂರ ಇರುವ ಬೆಟ್ಟ ಯಾವಾಗಲೂ ಚೆಂದವೆ ಎಂಬ ಬೆಟ್ಟದ ಗುಣಸ್ವರೂಪವನ್ನು ವಿವರಿಸಿವೆ.[೧೦೯] ಹೀಗೆ ಬೆಟ್ಟ ಗುಡ್ಡ ಪರ್ವತಗಳ ವರ್ಣನೆ ಹಾವೇರಿ ಪರಿಸರದ ಜೈನ ಶಾಸನಗಳಲ್ಲಿ ಬರೆದಿದ್ದರೂ ಅವುಗಳ ಹೆಸರುಗಳನ್ನು ಪ್ರಾಸಂಗಿಕವಾಗಿ ತರಲಾಗಿದೆ.

### ೦೫. ಇತರೆ.

ಈ ಭಾಗದ ಜೈನಶಾಸನಗಳಲ್ಲಿ ಕೀಟ, ಪಕ್ಷಿ, ಪ್ರಾಣಿಗಳನ್ನು ಸಹ ವರ್ಣನೆಯ ತೆಕ್ಕೆಗೆ ತೆಗೆದುಕೊಳ್ಳಲಾಗಿದೆ. ಭ್ರಮರ (ದುಂಬಿ), ಕ್ರಿಮಿ, ಷಟ್ಪದಿ (ಹೆಣ್ಣು ದುಂಬಿ), ಹಂಸ (ಮರಾಳ), ರಾಜ ಹಂಸ, ನವಿಲು, ಕೋಗಿಲೆ, ಗಿಳಿಹಿಂಡುಗಳ ಉಲ್ಲೇಖಗಳು, ಸಿಂಗ, ಹುಲಿ ಎಂಬ ಪ್ರಾಣಿಗಳು, ಕೂರ್ಮ, ವರಹ (ಉಭಯವಾಸಿ), ಉರಗ (ಸರಿಸೃಪ)ದ ಉಲ್ಲೇಖಗಳಿವೆ. ಮಾವಿನಮರದಲ್ಲಿ ಕೋಗಿಲೆಗಳಿದ್ದರೆ, ಲತಿಕಾವನದಲ್ಲಿ ಹಂಸಗಳಿದ್ದರೆ ಅವುಗಳ ಸೊಬಗು ದ್ವಿಗುಣಗೊಳ್ಳುತ್ತದೆ ಎಂದು ನದಿಹರಳಹಳ್ಳಿಯ ಶಾಸನದ ಕವಿಯ ವರ್ಣನೆ ನಿಜಕ್ಕೂ ಪಕ್ಷಿಪ್ರೀತಿಯನ್ನು ಹೆಚ್ಚಿಸುವಂತದ್ದು.[೧೧೦]

### ಬ. ವ್ಯಕ್ತಿ ವರ್ಣನೆ.

ಶಾಸನಗಳು ವಾಸ್ತವಗಳ ನಿರೂಪಗಳ ಜೊತೆಗೆ ವರ್ಣಕಗಳೆಡೆಗೆ ಮುಖಮಾಡಿದಾಗಲೇ ಅವು ವೈವಿಧ್ಯಗೊಂಡವು. ವಾಸ್ತವವಾಗಿ ಆರಂಭದಲ್ಲಿ ರಾಜಪ್ರಶಸ್ತಿಗಳು ವರ್ಣಕದ ಮೂಲ ಸೆಲೆಯೇ ಆಗಿದ್ದವು. ಕಲ್ಯಾಣ ಚಾಳುಕ್ಯರ ಶಾಸನಗಳಲ್ಲಿ ವರ್ಣಕಗಳದ್ದೇ ಪಾರುಪತ್ಯ. ಅತೀಯಾದ ವರ್ಣಕಗಳಿಂದ ಶಾಸನಗಳು ವಸ್ತುನಿಷ್ಠತೆಯನ್ನು ಗೌಣಗೊಳಿಸಿದೇನೋ ನಿಜ. ಆದರೆ ಶಾಸನಗಳು ಕೇವಲ ಒಕ್ಕಣೆಗಳಲ್ಲ; ಅವು ಉತ್ತಮ ಕಾವ್ಯಗಳಾಗಬಲ್ಲವು ಎಂದು ನಿರೂಪಿಸುವಲ್ಲಿ ಹಿಂದೆ ಬೀಳಲಿಲ್ಲ. ಕಾವ್ಯಗಳಂತೆ ಶಾಸನಗಳಲ್ಲೂ ವ್ಯಕ್ತಿ ಗುಣಗಾನ, ರಸಾಭಿವ್ಯಕ್ತಿ, ಛಂದೋಲಯಗಳು ಮೇಳೈಯಿಸಿದುವು. ಅದರಲ್ಲೂ ರಾಜ, ರಾಣಿ, ಮಂತ್ರಿಮಹೋದಯ–ದಂಡನಾಯಕ, ದಾನಿಗರ ವ್ಯಕ್ತಿ ವರ್ಣನೆಗಳು ಚಾಳುಕ್ಯರ ಶಾಸನಗಳಲ್ಲಿ ರಸಗಟ್ಟಿದವು. ಇಂಥಹ ಸ್ತ್ರೀ–ಪುರಷರ ಗುಣಾವಳಿಗಳ ಚಿತ್ರಣವನ್ನು ಹಾವೇರಿ ಪರಿಸರದ ಜೈನಶಾಸನಗಳಲ್ಲಿ ಗುರುತಿಸಲು ಸಾಧ್ಯ.

### ೦೧. ಸ್ತ್ರೀ ವರ್ಣನೆ.

ಪ್ರಾಚೀನ ಸಮಾಜದಲ್ಲಿ ಗಂಡು ಕೊಡುವ ಅನೇಕ ಉಪಸರ್ಗಗಳನ್ನು ಅನುಭವಿಸಿದ ಮಹಿಳೆಯರಿಗೆ ಪ್ರತಿಸ್ವರ್ಗವನ್ನು ಸೃಷ್ಠಿಸಿದ್ದು ಜೈನಧರ್ಮ. ಅಂತೆಯೇ ಅವರನ್ನು ಶಾಸನಗಳಲ್ಲಿ ಕೊಂಡಾಡಲಾಗಿದೆ. ರಾಣಿಯರಿಂದ ಹಿಡಿದು ಗ್ರಾಮ ಸಮುದಾಯದ ಸಾಮಾನ್ಯ ಹೆಣ್ಣೂ ಸಹ ಹೊಗಳಿಕೆಗೆ ಭಾಜನಳಾಗಿದ್ದಾಳೆ. ಕಾವ್ಯ ಕೃತಿಗಳಲ್ಲಿ ಶೃಂಗಾರ ವರ್ಣನೆಗಷ್ಟೇ ಸೀಮಿತವಾಗಿದ್ದ ಹೆಣ್ಣು ವೀರತೆ, ಧೀರತೆ, ನಯ, ವಿನಯ, ದಾನ, ಕ್ಷಮಾ, ವಾಗ್ಮಿ, ಜವಾಬ್ದಾರಿಯಂಥಹ ಗುಣಾವಳಿಗಳನ್ನು ಶಾಸನಗಳು ಉತ್ಕೀರ್ತಿಸಿ ಸ್ತ್ರೀಪರವಾದ ಧೋರಣೆಯನ್ನು ಅನುಸರಿಸಿವೆ.

ಹೆಣ್ಣು ಭೋಗವಸ್ತು ಎಂಬ ವಾದಗಳಿವೆ. ಕೆಲವೊಂದು ಆಯಾಮಗಳಲ್ಲಿ ಇದು ನಿಜವೂ ಹೌದು. ಆದರೆ ಜೈನಶಾಸನಗಳು ಹೆಣ್ಣನ್ನು ವಿನೂತನ ದೃಷ್ಟಿಕೋನದಿಂದ ನೋಡಿ ಅವಳಿಗೆ ಸಕಲ ಗೌರವವನ್ನು ಕೊಟ್ಟಿವೆ. ಸ್ತ್ರೀಯು ಅಬಲೆ ಇರಬಹುದು ಆದರೆ ಅವಳ ಗುಣ ಸಬಲವಾಗಿದ್ದು, ಗಂಡಸಿನ ಸರ್ವಬಲವೂ ಹೌದು. ಈ ತರದ ಗುಣಾವಳಿಯನ್ನು ಹೊಂದಿದವಳು ಹಾನಗಲ್ಲು

ಕದಂಬರ ಅರಿಕೇಸರಿಯ ರಾಣಿ ಲಚ್ಚಲದೇವಿ. "ಇವಳು ಸಕಲರಿಗು ಒಳಿತನ್ನು ಬಯಸುವವಳು, ಸಂಪತ್ತಿನಲ್ಲಿ ಎರಡನೆಯ ಲಕ್ಷ್ಮಿಯೂ ತ್ಯಾಗದಲ್ಲಿ ನಿಧಿಯಂತೆ ದೃಢಚಿತ್ತವನ್ನು ಹೊಂದಿದವಳು, ಚೆಲುವಿನಲ್ಲಿ ಗಂಗೆಯಷ್ಟೇ ಶುಭ್ರಳು ದಾನಗುಣದಲ್ಲಿ ಚಿಂತಾಮಣಿಯನ್ನೇ ಒಂದು ಕೈ ಮೀರಿಸಿದವಳು. ಅಷ್ಟೇಯಲ್ಲ ಗೌರಿಯ ಕೃಪೆಯಿಂದ ಜನಿಸಿದ ಇವಳು ಸಂಪಿಗೆಯ ಕಂಪಿನವಳು, ವಿವೇಕದಲ್ಲಿ ವಿದ್ಯಾಧರಿ, ಸರ್ವ ಕಲಾನಿಪುಣೆ, ಗೋತ್ರ ಪವಿತ್ರೆಯಾದ ಲಚ್ಚಲದೇವಿಯು ಅರಿಕೇಸರಿಯ ಮನೋ ಸರೋವರದ ರಾಜಹಂಸೆಯಂತಿದ್ದಳು"[೧೧೧] ಎಂದು ಅರಟಾಳದ ಒಂದು ಶಾಸನ ಸೊಗಸಾಗಿ ವರ್ಣಿಸಿದೆ.

ಪತಿಯೇ ಪರದೈವ ಎಂಬ ನಿಯಮದಂತೆ ಅದೆಷ್ಟು ಸ್ತ್ರೀಯರು ಗಂಡನಲ್ಲಿ ದೇವರನ್ನು ಕಂಡಿಲ್ಲ. ಪತ್ನಿಯರು ಪತಿಗೆ ಬೆಂಬಲವಾಗಿ ನಿಂತ ಸ್ತ್ರೀ ಉದಾಹರಣೆಗಳೇನು ಕೊರತೆಯಿಲ್ಲ. "ಬಮ್ಮನ ಪತ್ನಿಯಾದ ಚಾಮಿಕವ್ವೆ ತನ್ನ ಹಿತ ಬಯಸುವುದರಲ್ಲಿ ಸೀತೆ, ಅರುಂಧತಿ ಅಷ್ಟೇಯಲ್ಲಿ ಗಿರಿಜೆಗೂ ಮೀರಿದ ವನಿತಾರತ್ನವಾಗಿದ್ದಳಂತೆ."[೧೧೨] ಕಲಿದೇವ ಎಂಬ ವ್ಯಾಪಾರಿಯ ಹೆಂಡತಿಯಾದ ಕೆಮಿಯಕ್ಕ ಗಂಡನ ಶ್ರೇಯಸ್ಸು ಬಯಸುವುದರಲ್ಲಿ ಸೀತೆ, ರುಕ್ಮಿಣಿ, ಸುಮಿತ್ರೆ ಎಂಬಂತಿದ್ದಳಂತೆ. ದಾನಗುಣದಲ್ಲೂ ಇವಳು ಅಭಿನವ ಅತ್ತಿಮಬ್ಬೆಯಂತೆ ಇದ್ದಳು. ಇವಳ ಸದ್ಗುಣಗಳನ್ನು ಭೂವಲಯವೇ ಬಣ್ಣಿಸುತ್ತಿತ್ತು ಎಂದು ಕರಗದರೆಯ ಶಾಸನವೊಂದು ಹೇಳಿದೆ.[೧೧೩]

ಗಂಡನಿಗೆ ಅನುರೂಪವಾದ ಹೆಂಡತಿ ಎನ್ನುವ ಪಟ್ಟ ಧರಿಸಿದ ಗೌಡತಿಯರೇನೂ ಕರ್ನಾಟಕದ ಸಂದರ್ಭದಲ್ಲಿ ಕಡಿಮೆಯೇನಿಲ್ಲ. ಇಂಥವರಲ್ಲಿ ದೇವಲಬ್ಬೆಯೂ ಒಬ್ಬಳು. ನೀಱುಲುಗೆಯ ಮಹಾಪ್ರಭು ಎಱಕನೆಂಬುವನು 'ಮಂದರ ನಗರಕ್ಕೆ ಬಂಜಕುಳಕ್ಕೆ ನಾಳ್ಕೆ ತನ್ನಿಟ್ಟುದೆ ಬೊಟ್ಟು, ಕಟ್ಟಿದುದೆ ಕಣ್ಠಿಕೆ, ಬಿಟ್ಟುದೆ ತಾಮ್ರಶಾಸನ' ಎಂತಿದ್ದರೆ ಅವನ ಸತಿ ದೇವಲಬ್ಬೆಯು 'ಗುಣಾವಳಿಯಿಂ ಪುರುಷ ಭಕ್ತಿಯಿಂ ಶೀಳದೊಳಂ ತೀವಿ ಜಿನಮತಕ್ಕೆ ಶಾಸನದೇವಿಯೆನಲು ಪೆಂಪುವೆತ್ತ ಕುಲವಧುವಾಗಿದ್ದಳು'[೧೧೪] ಇಲ್ಲಿ ಶಾಸನದೇವಿ ಎಂದರೆ ಯಕ್ಷಿ. ಇವಳ ಕೆಲಸ ರಕ್ಷಣೆ, ಕ್ಷೇತ್ರರಕ್ಷಣೆ ಅಂತೆಯೆ ದೇವಲಬ್ಬೆ ಎಱಕನ ಮತ್ತು ಅವನ ಮನೆತನಕ್ಕೆ ಯಕ್ಷಿ ಮತ್ತು ರಕ್ಷಿಯಾಗಿದ್ದಳು ಎಂಬ ಕವಿ ಮಾತಿನ ಕಾಣ್ಕೆ ಹೆಣ್ಣಿಗಿರುವ ಗೌರವವನ್ನು ಬೊಟ್ಟಿಟ್ಟು ತೋರುತ್ತದೆ.

ಗೊಟ್ಟಗಡಿಯ ಬರ್ಮ್ಮಗೌಡನ ಸತಿ ಅರಸಿಯಕ್ಕ ಒಬ್ಬ ಸುಶೀಲ ಪತ್ನಿಯೆಂಬುದು ಈ ಊರ ಶಾಸನವೊಂದರಲ್ಲಿ ಮೂಡಿಬಂದಿದೆ. ಇವಳು ಮಾತಿನಲ್ಲಿ ರುಕ್ಮಿಣಿಯಷ್ಟು ಪ್ರೀತಿ, ಖ್ಯಾತಿಯಲ್ಲಿ ಸೀತೆಯ ಪ್ರಸಿದ್ಧತೆಯನ್ನು ಪಡೆದು ಭೂತಳದಲ್ಲೇ ಮಿಗಿಲಾದ ಹೆಮ್ಮೆಗೆ ಭಾಜನಳಾದಳು. ಅಷ್ಟೆಯಲ್ಲ ಇವಳು ಗುಣವತಿ, ವಿಳಾಸವತಿ, ನಯವತಿ, ನಂದನವತಿ, ಎಂದು ಶಾಸನ ಕವಿ ಕೊಂಡಾಡಿದ್ದಾನೆ.[೧೧೫] ಕಲೆ ಸಂಸ್ಕೃತಿಗೆ ಹಾವೇರಿ ಭಾಗದ ಜೈನ ಮಹಿಳೆಯರ ಕೊಡುಗೆಯನ್ನು ಅಲ್ಲಗಳೆಯುವಂತಿಲ್ಲ. ಲಖ್ಖವ್ವೆ ಎಂಬುವಳು ಅಣತಿ ನೋಂಪಿಯ ಉದ್ಯಾಪನೆಯ ನಿಮಿತ್ತ

ಚೌವ್ವೀಸ ತೀರ್ಥಂಕರ ಪ್ರತಿಮೆಯನ್ನು ಹಾನಗಲ್ಲು ಬಸದಿಗೆ.[೧೧೬] ಹವಳವ್ವೆ ಎಂಬುವಳು ಅರಟಾಳ ಬಸದಿಗೆ ಚೌವ್ವೀಸ ತೀರ್ಥಂಕರ ಬಿಂಬವನ್ನು ಅರಟಾಳ ಬಸದಿಗೆ ಮಾಡಿಸಿ ಕೊಟ್ಟಿದ್ದಾರೆ.[೧೧೭]

ಜೈನಧರ್ಮದ ಸ್ತ್ರೀಯರು ದಾನಧರ್ಮಾದಿಗಳಲ್ಲಿ, ಮಾತಿನಲ್ಲಿ, ಗುಣದಲ್ಲಿ ಅಷ್ಟೇ ಪ್ರಸಿದ್ಧರಲ್ಲದೆ ಅವರು ಮರಣ ಮಹೋನ್ನತಿಯನ್ನು ಆಹ್ವಾನಿಸುವುದರಲ್ಲಿ ದಿಟ್ಟೆಯರೂ ಹೌದು. ಜೀವನಧರ್ಮ-ಜಿನಧರ್ಮ ಎರಡನ್ನೂ ಒಟ್ಟೊಟ್ಟಿಗೆ ಅನುಸರಿಸಿ ಪ್ರಾಣತ್ಯಾಗ ಮಾಡಿದ ನೂರಾರು ಮಹಿಳೆಯರು ಕರ್ನಾಟಕದಲ್ಲಿದ್ದಾರೆ. ಹಾವೇರಿ ಪರಿಸರದಲ್ಲಿ ಮಹಾಮರಣವನ್ನು ಆಹ್ವಾನಿಸುವುದರಲ್ಲಿ ಸ್ತ್ರೀಯರೇನು ಹಿಂದೆಬಿದ್ದಿಲ್ಲ. ಕ್ರಿ.ಶ. ೧೨೪೫ರಲ್ಲಿ ಕನಕವ್ವೆ ಎಂಬುವಳು ಸಮಾಧಿ ವಿಧಾನದ ಮರಣ ಆಹ್ವಾನಿಸಿದ್ದು ದಿಟ್ಟತನದ ಚಿತ್ರಣವನ್ನು ಕವಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾನೆ.

> ತಮತಮಗಳ್ಕಿ ಬನ್ಧುಗಳು ಬಾಯ್ವಿಡೆ ತಂನವರೆಲ್ಲಮಾವಗಂ
> ಸಮತೆಯನೊಕ್ಕು ಗೋಳಿಡೆ ನಿಜಾನ್ವಯರಕ್ಕಟ ಗಾತ್ರೆಯೆಂದುದುಃ
> ಖಮನೊಳಕೊಂಡು ಶೋಕಿಸೆ ಸಮಾಧಿ ವಿಧಾನದಿನೆಯ್ದಿ ದೇವಲೋ
> ಕಮನಮರತ್ವಮಂ ಪಡೆದಳೇಂ ಕನಕಾಂಬಿಕೆ ಧೈರ್ಯವಂತೆಯೋ.[೧೧೮]

ಬಂಧುಗಳು ಒಬ್ಬರಿಗೊಬ್ಬರು ತಮ್ಮ ಮೊಗಗಳನ್ನು ನೋಡಿ ಅಳುತ್ತ ಸಂಬಂಧಿಕರೆಲ್ಲರೂ ಗೋಳಿಟ್ಟರೂ, ದಿಟ್ಟವನಿತೆ ಇವಳು ಎಂದು ದು:ಖತುಂಬಿದ ಕಣ್ಣುಗಳಿಂದ ನೀರ್ಗರೆಯುತ್ತಿದ್ದರೂ ಕನಕಾಂಬಿಕೆ ಮಾತ್ರ ಸಮಾಧಿ ವಿಧಾನದಿಂದ ಸಾವನ್ನು ಆಹ್ವಾನಿಸಿ ದೇವಲೋಕದಲ್ಲಿ ಅಮರತ್ವ ಪಡೆದಳು ಎಂದೂ, ನಿಜಕ್ಕೂ ಇವಳು ಧೈರ್ಯವಂತೆಯೇ ಹೌದು ಎಂದು ಕವಿ ಕೊಂಡಾಡಿದ್ದಾನೆ. ಸಮಾಧಿ ಮರಣದ ಕಾಠಿಣ್ಯತೆಯೇ ಹಾಗೆ. 'ಮನೆಯಂ ಪುತ್ರ ಕಳತ್ರ ಮಿತ್ರ ಧನ ವ್ರಾತಮಂ ಬಿಟ್ಟು' ಪಾರಮಾರ್ಥಿಕ ಸುಖವೇ ಧರ್ಮಮಾರ್ಗದ ಸ್ವರ್ಗವೆಂದಿದ್ದಾನೆ ಬ್ರಹ್ಮಶಿವ.[೧೧೯] ಕನಕವ್ವೆ ಈ ಎಲ್ಲ ಲೌಖಿಕ ಸುಖಗಳನ್ನು ತ್ಯಾಗಮಾಡಿ ಪಾರಮಾರ್ಥಿಕ ಸುಖವನ್ನು ಕಂಡುಕೊಂಡ ದಿಟ್ಟೆ.

### ೦೨. ಪುರುಷ ವರ್ಣನೆ.

ರಾಜರ ಪ್ರಶಸ್ತಿಗಳನ್ನು ಉತ್ಕೀರ್ತಿಸುವ ಶಾಸನಗಳಲ್ಲಿ ಅವರ ಇತರೆ ಗುಣಾವಳಿಗಳನ್ನು ಚಿತ್ರಿಸುವ ನೆಲೆಗಟ್ಟನ್ನು ಒದಗಿಸಿದ್ದು ಕವಿಗಳು. ರಾಜಪ್ರಶಸ್ತಿಗಳೂ ಸಹ ವರ್ಣನೆಗಳೆನಿಸಿದರೂ ಅವುಗಳ ಸ್ವರೂಪ ಬೇರೆ. ಕೆಲವೊಂದು ಸಾರಿ ಸಿದ್ಧಮಾದರಿಯ ಪ್ರಶಸ್ತಿಗಳಲ್ಲಿ ಸೃಜನಶೀಲತೆ ಕಂಡುಬರದೇ ಚರ್ವಿತ ಚರ್ವಣವೆನಿಸುತ್ತವೆ. ಆದರೆ ಕವಿವರ್ಣನೆಯೆ ಮಾತು ಬೇರೆ. ಕವಿ ತಾನು ಕಂಡ ವ್ಯಕ್ತಿಯ ಗುಣಾವಳಿಗಳನ್ನು ಅಲಂಕಾರಿಕವಾಗಿ ಹೇಳುವುದೇ ವರ್ಣನೆಯೆನಿಸುತ್ತದೆ. ರಾಜರ ಇತರೆ ವ್ಯಕ್ತಿಗಳ ವಿಶೇಷ ಗುಣಗಳು, ದಾನಗುಣ, ಬುದ್ಧಿಮತ್ತೆ, ಭಕ್ತಿ, ಶೌರ್ಯ ಇತ್ಯಾದಿ ನಿರೂಪಣೆ

ವ್ಯಕ್ತಿವರ್ಣನೆಗಳು ಎನ್ನಿಸುತ್ತವೆ. ಕೆಲವೊಂದು ವಿಶೇಷ ವರ್ಣನೆಯಿಂದ ಗುಣಗಾನಗೊಂಡ ವ್ಯಕ್ತಿಗಳನ್ನು ಇಲ್ಲಿ ಅಭ್ಯಸಿಸಲಾಗಿದೆ.

ರಾಜರು ಕೇವಲ ರಾಜಸ್ವವನ್ನು ನೋಡಿಕೊಳ್ಳಲು ಸೀಮಿತವಾಗಿರದೆ ಅವರು ಸಕಲಕಲಾವಲ್ಲಭರಾಗಿ, ವಿವಿಧ ವಿದ್ಯಾಶಾಸ್ತ್ರಪ್ರವೀಣರು ಎಂಬುದು ದಿಟ. ಅದು ಒಬ್ಬ ರಾಜನಿಗಿರಬೇಕಾದ ಅರ್ಹತೆಯೂ ಹೌದು. ಕದಂಬರ ದೇವಗಿರಿ ಶಾಸನವೊಂದು ವಿಜಯ ಶಿವ ಮೃಗೇಶವರ್ಮ ಇಂಥಹ ಅರ್ಹತೆಯನ್ನು ಹೊಂದಿದ್ದನು ಎಂದು ತಿಳಿಸುತ್ತದೆ. ಇವನು ಅನೇಕ ಶಾಸ್ತ್ರಗಳನ್ನು, ಅರ್ಥವ್ಯವಸ್ಥೆಯನ್ನು ಬಲ್ಲವನಾಗಿದ್ದ. ತತ್ವ, ವಿಜ್ಞಾನ, ವಿವೇಚನ, ಹಸ್ತಸಾಮುದ್ರಿಕ, ಅಶ್ವಾರೋಹಣದಲ್ಲಿ ಪಾಂಡಿತ್ಯ ಪಡೆದಿದ್ದ. ಅಲ್ಲದೆ ಇವನು ವಿಶಾಲ, ಉದಾರ ಬುದ್ಧಿಯುಳವನೂ, ಉತ್ತಮ ನಡತೆಯನ್ನೂ ಹೊಂದಿ ನಯ, ವಿನಯ, ಕುಶಲತೆ, ಧೈರ್ಯ, ಸಾಹಸಗಳು ಇವನಲ್ಲಿ ಮನೆಮಾಡಿದ್ದವಂತೆ. ದೇವತಾ ಸ್ಮಾರಕಗಳು, ದ್ವಿಜರು, ಗುರುಗಳು, ಸಾಧು ಸಜ್ಜನರಲ್ಲಿ ವಿಜಯಶಿವ ಮೃಗೇಶವರ್ಮ ಅಪಾರ ಗೌರವ ಹೊಂದಿದ್ದ ಎಂದು ಶಾಸನ ಕವಿ ಹೊಗಳುತ್ತಾನೆ.[೧೨೦] ಒಬ್ಬ ರಾಜನಿಗಿರಬೇಕಾದ ಸಕಲ ಸಂಪೂರ್ಣ ಗುಣಗಳು ವಿಜಯ ಶಿವಮೃಗೇಶರ್ಮನಲ್ಲಿದ್ದವು.

'ಯಥಾ ರಾಜಃ ತಥಾ ಪ್ರಜಾಃ' ಎಂಬಂತೆ ರಾಜನ ಗುಣಾವಳಿಯನ್ನು ಮೀರಿಸುವ ಮಹಾಮಂಡಳೇಶ್ವರರು ಕರ್ನಾಟಕ ಪರಿಸರದಲ್ಲಿ ಆಳಿಹೋಗಿದ್ದಾರೆ. ಚಾಳುಕ್ಯ ಒಂದನೆಯ ಸೋಮೇಶ್ವರ ಅಧೀನ ಬನವಾಸಿ ೧೨೦೦೦ ಆಡಳಿತ ಘಟಕದ ಅಧಿಕಾರಿ ಮಹಾಮಂಡಳೇಶ್ವರ ಲಕ್ಷ್ಮರಸನೂ ಇವರಲ್ಲಿ ಒಬ್ಬ. ಇವನನನ್ನು ಚಲಕ್ಕೆ ಬಲ್ಗಂಡ, ಶೌರ್ಯಮಾರ್ತ್ತಣ್ಡಂ ಸಂಗ್ರಾಮಗರುಡ, ಮನುಜ ಮಾನ್ಧಾತ, ಕೀರ್ತಿವಿಖ್ಯಾತ, ಗೋತ್ರಮಾಣಿಕ್ಯ, ವಿವೇಕಚಾಣಕ್ಯ, ಕೋದಣ್ಡ ಪಾರ್ತ್ಥ, ಸೌಜನ್ಯತೀರ್ತ್ಥ, ಮಣ್ಡಳಿಕ ಕಣ್ಠೀರವ, ಪರಚಕ್ರಭೈರವ, ರಾಯರಗಣ್ಡಗೋಪಾಳ ಮಲೆವಮಣ್ಡಳಿಕ, ಮೃಗಶಾರ್ದೂಳ ಎಂದು ವರ್ಣಿಸಿದೆ.[೧೨೧] ಒಬ್ಬ ವ್ಯಕ್ತಿಯಲ್ಲಿ ಶೌರ್ಯ, ಕೀರ್ತಿ, ವಿವೇಕ, ಸ್ತ್ರೀಗೌರವ, ವೀರ, ಸೌಜನ್ಯ ಮುಂತಾದ ಗುಣಗಳು ಇರುವುದು ಅಪರೂಪ. ಈ ಗುಣಗಳಿಗೆ ಸರಿ ಹೊಂದುವ ಉಪಮೆಗಳ ಹೋಲಿಕೆಯನ್ನು ಲಕ್ಷ್ಮರಸನಿಗೆ ತಗುಳ್ಚಿರುವುದು ತಾನು ಕಂಡುಕೊಂಡ ಸತ್ಯ ಎಂದು ಶಾಸನ ಕವಿಯ ಅಂಬೋಣ.

ರಾಜಸ್ವದಲ್ಲಿ ಮಂತ್ರಿ ಪದವಿಯನ್ನು ನಿರ್ವಹಿಸುವವರು ಪಾರದರ್ಶಕರು, ಸದ್ಗುಣಿಗಳು, ವಿವೇಕಿಗಳು ಆಗಿರುತ್ತಿದ್ದರು ಎಂಬುದಕ್ಕೆ ಚಾಳುಕ್ಯ ೨ನೇ ಜಗದೇಕಮಲ್ಲನ ರಾಜ್ಯದ ಮಂತ್ರಿ ರೇಚಿ ಸಾಕ್ಷಿಯಾಗಿ ನಿಲ್ಲುತ್ತಾನೆ. ಇವನ ಉದಾತ್ತ ಗುಣಗಳನ್ನು ಕವಿ ಹೀಗೆ ವರ್ಣಿಸುತ್ತಾನೆ.

ವಿನಯದ ಶಿತ್ತು ಸತ್ಯದ ತವರ್ಮ್ಮನೆ ಸದ್ಗುಣದಿಕ್ಕೆ ದಾಣ ಪೆಂ
ಪಿನ ಕಣಿ ಶೌಚದಾಗರ ವಿವೇಕ ನಿಧಾನದ ಪಾಕಶಾಸನಂ

ಜಿನಪದ ಪದ್ಮ ಸದ್ಗುಣವೂರ್ಜಿತ ಪುಣ್ಯನೆನಲ್ಕೆ ನಮ್ಮ ರಾ
ಯನನವದಾತ್ತಕೀರ್ತಿ ವರನೆಂಬು. ಪೇಳ್ವಱತೊಂದನೆಂಬುದೆ.[೧೨೨]

ಒಬ್ಬ ನಾಳ್ಪ್ರಭುವಾದ ದಡಿಗ ತನ್ನ ಪ್ರಾಮಾಣಿಕತೆ, ಶೌರ್ಯ, ನುಡಿ, ದಾನಗುಣಗಳಿಂದ ಚಾಳುಕ್ಯ ಚಕ್ರವರ್ತಿಯಾದ ಅಹವಮಲ್ಲ ತ್ರೈಲೋಕ್ಯಮಲ್ಲ ೧ನೆಯ ಸೋಮೇಶ್ವರನಿಂದ ಗೌರವಕ್ಕೆ ಭಾಜನಾದ ಪ್ರಸಂಗ ನೇಱುಲಗೆಯ ಕ್ರಿ.ಶ. ೧೧೪೮ರ ಶಾಸನದಲ್ಲಿ ವರ್ಣಿತವಾಗಿದೆ. ಪ್ರಾಮಾಣಿಕ ಒಬ್ಬ ಹಳ್ಳಿಯ ಅಧಿಕಾರಿಗೂ ಚಾಳುಕ್ಯ ಕಾಲಾವಧಿಯಲ್ಲಿ ರಾಜಮನ್ನಣೆ ದೊರಕುತ್ತಿತ್ತು ಎಂಬುದಕ್ಕೆ ನೇಱುಲುಗೆಯ ನಾಳ್ಪ್ರಭು ದಡಿಗ ಸಾಕ್ಷಿಯಾಗಿ ನಿಲ್ಲುತ್ತಾನೆ. ಇವನು ಹೇಗಿದ್ದ ಎಂಬುದಕ್ಕೆ ಕವಿಯು 'ನುಡಿಕಲ್ಲೊಳ್ ಕಡೆದಕ್ಕರಕ್ಕೆ ಮಱುವಕ್ಕಂ, ವಿಕ್ರಮಂಸಿಂಹಮಂ, ಜಡಿಗುಂ ತನ್ನಯ ದಾನಶಕ್ತಿ' ಇತ್ಯಾದಿಯಾಗಿ ವರ್ಣಿಸಿದ್ದಾನೆ. ಕಲ್ಲಿನಲ್ಲಿ ಕಡೆದ ಅಕ್ಷರದಷ್ಟೆ ಇವನ ಮಾತುಗಳು ಸತ್ಯ ಎಂಬ ಕವಿಯ ಮಾತುಗಳ ದಡಿಗನ ಗುಣಕ್ಕೆ ಹಾಕಿದ ಸುಂದರ ಚೌಕಟ್ಟು. ಇವನ ಗುಣ ಮೆಚ್ಚ

ಬಲ್ಲಹನೆನೆ ನೆಗರ್ದ್ದಾಹವ
ಮಲ್ಲಂ ಕೊಡೆಯಡಪ ಮಂದಳಂ ಸೀಗಿರಿಯೆಂ
ಬೆಲ್ಲಾ ಚಿಹ್ನಮನದಟರ
ಮಲ್ಲಂ ದಡಿಗಂಗೆ ಕೊಟ್ಟನನ್ದಾದರದಿಂ[೧೨೩]

ಮಹಾಪ್ರಭು ದಡಿಗನಿಗೆ ಅಹವಮಲ್ಲ ತ್ರೈಲೋಕ್ಯಮಲ್ಲ ಚಕ್ರಿಯಿತ್ತ ರಾಜಮರ್ಯಾದೆಯ ರಾಜವಿಶ್ವಾಸದ ವಸ್ತುಗಳು ಕೊಡೆ, ಅಡಪ, ಮಂದಳ, ಸೀಗುರಿ, ಗಾಳಿ ಮಳೆ ಬಿಸುಲುಗಳಿಗೆ ಮರೆಯಾಗಿ ಹಿಡಿಯುವ ಸಾಧನ ಮಾತ್ರವಾಗದೆ ಕೊಡೆ ಮರ್ಯಾದೆಯನ್ನು ತೋರುವ ವಸ್ತುವೂ ಹೌದು. 'ವಡ್ಡಾರಾಧನೆ'ಯಲ್ಲಿ 'ಸೀಗುರಿಗಳುಮಂ ಕೊಡೆಗಳುಮಂ ಪಿಡಿಯಿಸಿ' ಎಂಬ ಮಾತಿದೆ. ಪಂಪನ 'ಆದಿಪುರಾಣ'ದಲ್ಲಿ ಪಂಚರತ್ನದ ಕೊಡೆಯಂಪಿಡಿದಂ' ಎಂಬ ಪ್ರಯೋಗವಿದೆ . . . . . ಈ ನಾನಾ ಪ್ರಯೋಗಗಳ ಹಿನ್ನೆಲೆಯಲ್ಲಿ ನೋಡಿದಾಗ ೧೦-೧೧ನೆಯ ಶತಮಾನದ ಸಾಮಾಜಿಕ ಶಿಷ್ಟಾಚಾರವಾಗಿ ಈ ವಸ್ತುಗಳನ್ನು ಕೊಡುವುದು ಒಪ್ಪಿತ ವ್ಯವಸ್ಥೆಯಾಗಿತ್ತು. ಅದರಂತೆ ಚಕ್ರವರ್ತಿಯ ಅರಮನೆಯಿಂದ ಬಂದ ಈ ಬಗೆಯ ಮನ್ನಣೆಗೆ ದಡಿಗನು ನೇಱುಲಗೆ ಎಂಬ ಹೆಸರು ಸಲುವಳಿಯಾಯಿತು.[೧೨೪]

ಒಂದು ಮನೆತನದ ಪ್ರಸಿದ್ಧ ವ್ಯಕ್ತಿಯ ಗುಣಾವಳಿಗಳು ಮುಂದಿನ ತಲೆಮಾರಿನವರಿಗೆ ಪ್ರವಹಿಸುವುದು ವಿರಳ. ಆದರೆ ಈ ಹಿಂದೆ ಹೇಳಿದ ದಡಿಗನ ಗುಣಾವಳಿಗಳಿಗೆ ಚ್ಯುತಿ ಬರದಂತೆ ಪ್ರಸಿದ್ಧನಾದವನು ಅವನ ಮರಿಮೊಮ್ಮಗ ನಾಳ್ಪ್ರಭು ಮಲ್ಲಗಾವುಣ್ಡ. ಜಿನಸಮಯಿ ಸಂಯಮಿಯಾಗಿದ್ದ ಮಲ್ಲಗಾವುಣ್ಡನು ರಣರಂಗದಲ್ಲಿ ನಿಂತರೆ ಅವನನನ್ನು ಎದುರಿಸುವವರಿಗೆ

ಎಂಟೆದೆಯೇ ಬೇಕು ಎಂಬರ್ಥದಲ್ಲಿ ಕವಿ ವರ್ಣಿಸಿದ್ದಾನೆ. ಮಲ್ಲಗಾವುಂಡನ ವೀರತ್ವಕ್ಕೆ ಈ ಪದ್ಯ ಒಂದು ಕನ್ನಡಿ.

> ಸಿಡಿಲೊಂದೇಳೆಂಟು ಕಾಳಾಂತಕನ ಮಸಕವೇಳೆಂಟು ರಾಹುಪ್ರಕೋಪಂ
> ಪಡಿಯೇಳೆಂಟಪ್ಪಡಕ್ಕುಂ ನಿನಗೆ ಸಮರದೊಳ್ ಮಲ್ಲ ತಾಂಗಲ್ ತಱುಂಬಲ್
> ಕಡುಕೆಯ್ಯಲು ಕೆಯ್ದು ಕೆಯ್ಯಲು ಮರೆಯಲುಲಿಯಲುರ್ವ್ವಳಲೊಟ್ಟಯ್ಸಲೆಯ್ತಂ
> (ದಡೆ)ಯಿಂ ಮುಂದಣ್ಗಿ ಮತ್ತೊಂದಡಿಯನಿಡುವ ಮಲ್ಲಯ್ವ ಕೆಲ್ಲಯ್ವನಾವೊಂ.[೧೨೫]

ಈ ಶಾಸನದಲ್ಲಿ ನೇಱುಲಗೆಯ ನಾಳ್ಪ್ರಭುವಿಬ್ಬರ ಸದ್ಗುಣಗಳ ಮೂರ್ತಿಶಿಲ್ಪವನ್ನು ಕವಿ ಅಕ್ಕರ ರೂಪದಲ್ಲಿ ಕಡೆದು ನಿಲ್ಲಿಸಿದ್ದಾನೆ. ಒಬ್ಬ ದಡಿಗ ಇನ್ನೊಬ್ಬ ಮಲ್ಲಗಾವುಂಡ. ಈ ರೀತಿಯ ಚಿತ್ರಣ ಕನ್ನಡ ಕಾವ್ಯಲೋಕದಲ್ಲಿ ಹೊಸದಲ್ಲ. ಈ ಶಾಸನದಲ್ಲಿ "ಪೊನ್ನನು ಮಲ್ಲಪ–ಪುನ್ನಮಯ್ಯರನ್ನು 'ಶಾಂತಿಪುರಾಣ'ದಲ್ಲಿಯೂ, ರನ್ನನು ಅದೇ ವಂಶದ ದಲ್ಲಪ ಮತ್ತು ನಾಗದೇವಾದಿಗಳನ್ನೂ ಚಿತ್ರಿಸಿರುವ ಕಾವ್ಯ ಶೈಲಿಯ ಮಾದರಿಯನ್ನು ಮುಂದುವರೆಸಿರುವುದು ಗಮನಿಕೆಗೆ ತಕ್ಕುದಾಗಿದೆ."[೧೨೬]

ಜೈನರು ಅಹಿಂಸಾ ಪ್ರವೃತ್ತಿಯವರಾದರೂ ರಾಜ್ಯಾಡಳಿತದಲ್ಲಿ ವೀರತ್ವಕ್ಕೆ ಹೆಸರುವಾಸಿಯಾದರು. ಮೂಲತಃ ಕ್ಷತ್ರಿಯರಾದ ಜೈನರಲ್ಲಿ ವೀರತ್ವ ರಕ್ತಗತವಾಗಿಯೇ ಇತ್ತು. ಆದರೆ ಅವರು ಎಂದೂ ಅದನ್ನು ದುರುಪಯೋಗ ಪಡಿಸಿಕೊಳ್ಳಲಿಲ್ಲ. ರಣರಂಗದಲ್ಲಿ ಅದು ಅನಿವಾರ್ಯವೂ ಅವಶ್ಯಕತೆಯೂ ಆದ್ದರಿಂದ ಅಲ್ಲಿ ಅವರ ಬಲ ಪ್ರದರ್ಶನಗೊಂಡಿದೆ. ಕಾಗಿನೆಲೆಯ ಗಾವುಂಡನಾದ ಆದಿತ್ಯವರ್ಮ ಇದಕ್ಕೊಂದು ದಿಟ್ಟ ಉದಾಹರಣೆ. ಈ ಹಿಂದೆ ಕಾಗಿನೆಲೆಯ ಪ್ರಭುಗಾವುಂಡ ಕಾಳಗಾವುಂಡನ ಮಗನಾದ ಇವನನ್ನು ದಾನವಿನೋದ, ವೈರಿನಾರಾಯಣ ಅಂತಾಗಿ ಬಣ್ಣಿಸಲಾಗಿದೆ.

> ಪಱುಗುಂ ನೆರ್ಕ್ಕನೆ ವೈರಿಯೆಂಬ ತೊಡರಂ ವಿದ್ವಿಷ್ಟರಂ ಸಱ್ಚಿನ
> ಲ್ನೆಟ್ಟಿಸೀಟ್ದಿಕ್ಕಿಯೆ ದುಷ್ಟ ದಾಯಿಗರ ನಿಟ್ಟೆಲ್ವಂ ಬಿರಿಲ್ಲೆಂಬಿನಂ
> ಮಱುದೀಡಾಡಿ ನಭೋನ್ತದೊಳ್ ನಿಲಿಸಿ ಕೋಡೇಱುಂ ನಿಜೋತ್ಸಾಹದಿಂ
> ಮೇಱಗುಂ ಕಾಳನ ಗನ್ಧವಾರಣ ಮೇಲೆ ಜೀಹಯ್ಯ ಬಾಪ್ಪೆಂಬಿನಂ.[೧೨೭]

ಒಂದು ಪುಟ್ಟ ಪದ್ಯದಲ್ಲಿ ಇಡೀ ರಣರಂಗದ ಚಿತ್ರಣವನ್ನು ಮೂರ್ತಗೊಳಿಸಿದ್ದು ಕವಿ ಪ್ರತಿಭೆ. ಇಲ್ಲಿ ಆದಿತ್ಯವರ್ಮನನ್ನು ಮದಗಜಕ್ಕೆ ಹೋಲಿಸಿ ವರ್ಣನೆಗೆ ಮತ್ತೇಭ ವಿಕ್ರೀಡಿತ ಛಂದೋವೃತ್ತ ಬಳಸಿಕೊಳ್ಳಲಾಗಿದೆ. ಮತ್ತೇಭ ಎಂದರೆ ಮದಗಜ. 'ತನ್ನ ದಾರಿಗೆ ಅಡ್ಡಲಾದ ವೈರಿಯನ್ನು ಧ್ವಂಸಗೊಳಿಸಿ, ಶತ್ರುಗಳ ಮೇಲೆ ರಭಸವಾಗಿ ಅಪ್ಪಳಿಸಿ ಅವರನ್ನು ನುಗ್ಗಮಾಡಿ, ದುಷ್ಟ ದಾಯಾದಿಗಳ

ಬೆನ್ನುಮೂಳೆ ಮುರಿದು, ತನ್ನ ನಿಡಿದಾದ ಕೋರೆಗಳಲ್ಲಿ ಶತ್ರುಗಳನ್ನು ಚುಚ್ಚಿಕೊಂಡು ನಭಕ್ಕೆತ್ತರಿಸಿ ಮೆರೆಯುತ್ತಿದ್ದ ಶ್ರೇಷ್ಠಜಾತಿಯ ಆನೆ ಕಾಳನ ಮಗ ಆದಿತ್ಯವರ್ಮ ಎಂಬುದು ಪದ್ಯದ ಭಾವ. ಗನ್ಧವಾರಣ ಎಂದರೆ ಶ್ರೇಷ್ಠಜಾತಿಯ ಆನೆ ಮತ್ತು ಅದರಷ್ಟೇ ಬಲಶಾಲಿ, ಶ್ರೇಷ್ಠತೆಯನ್ನು ಹೊಂದಿದ ಮಗ ಎಂಬ ಶ್ಲೇಷವನ್ನು ಇಲ್ಲಿ ತರಲಾಗಿದೆ. ಇಡೀ ವರ್ಣನೆ ಶ್ಲೇಷಾಲಂಕಾರದಿಂದ ಕೂಡಿದ್ದು, ನೆರ್ಕ್ಕ, ಸಿಜ್ಜನೆ, ಬಿರಿಲ್ ಎಂಬ ಅನುರಣನವಾಚಿಗಳು ವರ್ಣನೆಗೆ ಒತ್ತಾಸೆಯಾಗಿ ತಂದದ್ದು ಕವಿಪ್ರತಿಭೆ.

ಒಬ್ಬ ಸ್ಥಳಿಯ ಗಾವುಂಡನಾದ ನಾಗಗಾವುಂಡನು ತನ್ನೂರಾದ ಗೊಟ್ಟಗಡಿ (ನದಿಹರಳಹಳ್ಳಿ)ಯಲ್ಲಿ ಒಂದು ವೃಷಭಜಿನೇಂದ್ರನ ಜಿನಾಲಯವನ್ನು ಕಟ್ಟಿಸುವ ಮೂಲಕ ಹೊಗಳಿಕೆಗೆ ಪಾತ್ರವಾಗಿದ್ದು ಇದೇ ಊರ ಕ್ರಿ.ಶ. ೧೧೬೮ರ ಶಾಸನದಲ್ಲಿ ಒಡಮೂಡಿದೆ. ನಾಗಗಾವುಂಡನಿಗೆ ಜಿನಭಕ್ತಿಯೆಂಬುದು ಜನ್ಮಜಾತಕವಾಗಿಯೇ ಬಂದಿತ್ತು. ಸತ್ಯ, ಧರ್ಮ, ಅಹಿಂಸೆಯ ರೂಪ ಇವನು. ದಯೆ, ದಾನ, ಕ್ಷಮಾಗುಣಗಳು, ಔದಾರ್ಯ, ಸಂಪನ್ನತೆ, ನಿತ್ಯ ಜಿನಪೂಜೆ, ಅಭಿಷೇಕ, ಅರ್ಚನೆ ಇವನಲ್ಲಿ ಅಂತರ್ಗತವಾಗಿದ್ದವು. ಚತುರ್ವಿಧ ದಾನಗಳಾದ ಆಹಾರ, ಅಭಯ, ಔಷಧ ಶಾಸ್ತ್ರದಾನಗಳನ್ನು ಮಾಡುತ್ತ ಸುತ್ತಮುತ್ತಲ ಪ್ರದೇಶಗಳಿಗೆ ಇವನು ಪ್ರಸಿದ್ಧನಾಗಿದ್ದ ಎಂದು ಇಡೀ ಶಾಸನದಲ್ಲಿ ನಾಗಗಾವುಂಡನ ಸಂಪನ್ನತೆಯನ್ನು, ಸುಶೀಲತೆಯನ್ನು ಕೊಂಡಾಡಲಾಗಿದೆ. ಜೈನ ಸಾಂದವಂಶಕ್ಕೆ ತಿಳಕಪ್ರಾಯನಾದ ಇವನ ಗುಣಾವಳಿಯನ್ನು ಕವಿಯ ವರ್ಣನೆಯಲ್ಲಿ ಹೀಗೆ ಒಡಮೂಡಿದೆ.

> ಕಳ್ಪಮಹೀರುಹಕ್ಕೆ ವಸುಧಾವಸನಕ್ಕೆ ಸುರಾಚಳಕ್ಕೆ ಪೆಂ
> ಪಲ್ವಮೆನುತ್ತಾಧಾರರತೆ ಗಭೀರತೆ ಧೀರತೆ ಮಾನಗರ್ವ್ವಸಂ
> ಕಲ್ಪಮನಪ್ಪು ಕೆಯ್ವದೆನಲುಂನತಿಯಂ ಕಲಿಕಾಲ ಲೋಲುಪ
> ರ್ಪ್ಪೊಲ್ವರೆ ಸಾಂದವಂಶ ಕುಮುದೇಂದುವನಿ ಪ್ರಭುನಾಗರ್ಮ್ಮನಂ.[೧೨೮]

ಜೈನರ ಕುಲಕಸುಬು ವ್ಯಾಪಾರ. ಅವರು ಕೇವಲ ವ್ಯಾಪಾರಿಗಳಾಗಿರದೇ ದಾನ-ಧರ್ಮಿಷ್ಠರೂ ಆಗಿದ್ದರೂ ಪಾನ್ಥಿಪುರದ (ಹಾನಗಲ್ಲು) ಕಲಿದೇವಸೆಟ್ಟಿ ಎಂಬ ಮಹಾವಡ್ಡವ್ಯವಹಾರಿ ಇದಕ್ಕೊಂದು ಸ್ಪಷ್ಟ ಉದಾಹರಣೆ. ಇವನು ಗುಣಾವಳಿಯನ್ನು ಮಂತಗಿ ಶಾಸನದ ಗದ್ಯದಲ್ಲಿ ಕವಿ ಹೀಗೆ ವರ್ಣಿಸಿದ್ದಾನೆ. "ಸ್ವಸ್ತಿಸಮಸ್ತಾನವದ್ಯ ಸ್ಯಾದ್ವಾದ ಸಮಯ ಸಮುದಿತಾಣ ಪ್ರತಿಪಾಳನ ಕ್ರಿಯಾಪರನುಮಹಾರಾಭಯ ಭೈಷಜ್ಯ ಗೋಮಶಿಷ್ಯಾದಿ ಬಹುವಿಧ ಪ್ರವರ್ತ್ತನಾನೂನ ದಾನ ಬಿನೋದರು ವೈಶ್ಯವಂಶ ರಕ್ಷಾಮಣಿಯುಂ."[೧೨೯] ಈ ಕಲಿದೇವ ಸೆಟ್ಟಿ ಕರಗುದರೆಯಲ್ಲಿ ಒಂದು ಧುರಿತ ನಿವಾರಣ ಎಂಬ ತೀರ್ತ್ಥವನ್ನು ವಿಜಯಪಾರ್ಶ್ವ ಜಿನೇಂದ್ರ ಬಸದಿಯನ್ನು, ಮಂತಗಿಯಲ್ಲಿ 'ಶ್ರೀಚತುರ್ವ್ವಿಂಶ ತೀತ್ಥಂಕರ ಪರಮದೇವ ಪ್ರತಿಮೆ ಗುಳುಮಂ' ಪ್ರತಿಷ್ಟೆ ಮಾಡಿದನು. ಶ್ರೇಷ್ಠ

ವ್ಯಾಪಾರಿಯೂ ದಾನವಿನೋದನೂ ಆದ ಕಲಿದೇವ ಶೆಟ್ಟಿ ಸ್ವತಃ ಜಿನಮುನಿಗಳಿಗೆ ಆಹಾರ ನೀಡುತ್ತಿದ್ದ. 'ಕಲಿದೇವ ಶ್ರೇಷ್ಠಿರತ್ನ ಕಡೆ ಚರಿಗೆಯ ಮೃಷ್ಟಾನ್ನ ದಾನಪ್ರದಾನಂ' ಎಂದು ಮಂತಗಿಯ ಶಾಸನದಲ್ಲಿ ವರ್ಣಿಸಲಾಗಿದೆ.

> ಪರಹಿತ ಚರಿತಂ ಸತ್ಯಾ
> ಭರಣಂ ಧನದತ್ತ ಚಾರುದತ್ತ ಸಮಾನಂ
> ನಿರವದ್ಯಂ ನೆರೆ ಬಣ್ಣಿಸೆ
> ಧರೆ ಮಾಣಿಕಕೇತಿ ಸೆಟ್ಟಿಯೊಗೆದಂ ಜಗದೊಳು.[೧೩೦]

ಎಂದು ಮಾಣಿಕಕೇತಿ ಸೆಟ್ಟಿಯ ಶ್ರೇಷ್ಠತೆಯನ್ನು ಯಮ್ಮಿಗನೂರು (ಹಿತಾ) ಶಾಸನದಲ್ಲಿ ವರ್ಣಿಸಲಾಗಿದೆ. ಇವನೊಬ್ಬ ಜೈನ ವ್ಯಾಪಾರಿ. ಪರರ ಹಿತ ಕಾಯುವ ಚಾರಿತ್ರವನ್ನು, ಸತ್ಯವಂತನಾದ ಕೇತಿಸೆಟ್ಟಿಯನ್ನು ಧನದತ್ತ, ಚಾರುದತ್ತ ಎಂಬ ಪ್ರಸಿದ್ಧ ಇರ್ವರಿಗೆ ಹೋಲಿಸಲಾಗಿದೆ. ಇವರಿಬ್ಬರೂ ಜೈನ ಪುರಾಣಗಳಲ್ಲಿ ಬರುವ ಧನ್ಯಕುಮಾರ ಹಾಗೂ ಚಾರುದತ್ತರಾಗಿದ್ದಾರೆ ಎಂದು ಹಂಪ ನಾಗರಾಜಯ್ಯ ಅವರು ಸಂಶೋಧಿಸಿದ್ದಾರೆ. ಧನ್ಯಕುಮಾರ–ಧನಕುಮಾರ ಶ್ರೇಷ್ಠಗುಣಗಳ ವೈಶೋತ್ತಮನು, ಚಾರುದತ್ತ ಅನೇಕ ಸಾಹಸ ಸದ್ಗುಣಗಳ ಆಗರವಾಗಿದ್ದನು ಎಂದು ಇವರು ಅಭಿಪ್ರಾಯ.[೧೩೧] ಇವರಿಬ್ಬರೂ ವೈಶೋತ್ತಮರಾಗಿದ್ದರಿಂದ ಅವರಿಗೆ ವೈಶ್ಯನಾದ ಮಾಣಿಕ ಕೇತಿಸೆಟ್ಟಿಯನ್ನು ಉಪಮೀಕರಿಸಲಾಗಿ ಬಣ್ಣಿಸಲಾಗಿದೆ.

ಪರಧರ್ಮಸಹಿಷ್ಣುವಾದ ಮಾಕನೂರು ಬೊಪ್ಪಗೌಡ ೧೨ನೆಯ ಶತಮಾನದಲ್ಲಿ ಸಮಾಧಿ ವಿಧಾನದಿಂದ ದೇಹ ತ್ಯಾಗ ಮಾಡಿದ್ದು ಅವನ ಜಿನ ಧರ್ಮನಿಷ್ಠತೆಯನ್ನು ತೋರಿದರೆ; ಮಾಕನೂರಲ್ಲಿ ಬೊಪ್ಪೇಶ್ವರ ದೇವಾಲಯ ಕಟ್ಟಿಸಿ ದತ್ತಿಬಿಟ್ಟದ್ದು ಪರಧರ್ಮ ಪ್ರೀತಿಯನ್ನು ಅರಹುತ್ತದೆ.[೧೩೨] ಈ ಶಾಸನದಲ್ಲಿ ಬೊಪ್ಪಗೌಡನ 'ದಶಲಕ್ಷಣ'ಗಳನ್ನು ಕವಿ ಸಂಖ್ಯಾವಾಚಿಗಳನ್ನು ಬಳಸಿ ನಿರೂಪಿಸಿದ್ದಾನೆ. ಅವು ಇಂತಿವೆ

| | |
|---|---|
| ಮಾನ್ತನ | ವೊಂದು (ಒಂದು) |
| ಸತ್ಯ | ವೆರಡು (ಎರಡು) |
| ಆಗಮಭಾವನೆ | ಮೂಱು (ಮೂರು) |
| ಕಾರ್ಯ್ಯನಿಶ್ಚಿಂತತೆ | ನಾಲ್ಕು |
| ಶೌಚಗುಣ | ವಯ್ದು (ಐದು) |
| ಗಂಭೀರತೆ | ಯಾಱು (ಆರು) |
| ಶೀಳ | ವೇಳಂ (ಏಳು) |

| | |
|---|---|
| ಅಂತರಶುದ್ಧಿ | ಯೆಂಟ (ಎಂಟು) |
| ನಯ | ವೊಂಬತು (ಒಂಭತ್ತು) |
| ರೂಪ | ಹತ್ತು. |

'ದಶಲಕ್ಷಣ' ಹಾಗೂ 'ದಶಧರ್ಮ' ಎಂದು ಕರೆಯುವ ಮೇಲಿನ ಹತ್ತೂ ಗುಣಗಳನ್ನು ಜಿನಮುನಿಯು ಅಳವಡಿಸಿಕೊಳ್ಳುವುದು ವಾಡಿಕೆ. ಆದರೆ ಶ್ರಾವಕನಾದ ಬೊಪ್ಪಗೌಡನು ತನ್ನ ನಿತ್ಯ ಜೀವನದಲ್ಲಿ ಅಳವಡಿಸಿಕೊಂಡು ಬದುಕುತ್ತಿರುವುದು ಅವನಿಗೆ ಆ ಧರ್ಮದಲ್ಲಿದ್ದ ನಿಷ್ಠೆ ಎದ್ದುತೋರುತ್ತದೆ. ಸಾಮಾನ್ಯವಾಗಿ ಈ ಗುಣಗಳು ಒಂದೇ ತೆರನಾಗಿ ಹೆಸರಿಸದೇ ಬೇರೆ ರೀತಿಯಾಗಿ ಹೆಸರಿಸಿದ್ದುಂಟು. ಈಗಲೂ ಚಾತುರ್ಮಾಸದಲ್ಲಿ ನಡೆಯುವ ದಶಲಕ್ಷಣ ಪರ್ವದಲ್ಲಿ ಶ್ರಾವಕರಿಗೆ ಹತ್ತು ಗುಣಗಳ ಮಹತ್ವವನ್ನು ತಿಳಿಸಲಾಗುತ್ತದೆ. ಆ ಗುಣಗಳು ಕ್ಷಮಾ, ಮಾರ್ಧವ (ಮೃದು ಸ್ವಭಾವ) ಆರ್ಜವ (ವಿನಮ್ರತೆ) ಶೌಚ (ಪರಿಶುದ್ಧ ನಡತೆ), ಸತ್ಯ, ಸಂಯಮ (ಇಂದ್ರಿಯ ನಿಗ್ರಹ), ತಪ, ತ್ಯಾಗ, ಅಕಿಂಚನ್ಯ (ಏನೂ ಹೊಂದದೆ ಇರುವುದು, ಬಡತನ), ಬ್ರಹ್ಮಚರ್ಯ (ಶೀಲ) ಆಗಿವೆ. ಇವುಗಳನ್ನೇ ಶಾಂತಿನಾಥ ಕವಿಯು ತನ್ನ ಸುಕುಮಾರ ಚರಿತೆಯಲ್ಲಿ "ತ್ಯಾಗಂ ಲಸತ್ಕೀರ್ತಿ ಸಂಯಮ ಆಚಾರಗುಣಂ ತಪಂ ಛಲಂ ಆಕಿಂಚನ್ಯಂ ನಯಂ ಬ್ರಹ್ಮಚರ್ಯಮೆ ಮಾನೋನ್ನತಿ"[೧೩೩] ಎಂಬ ಹತ್ತು ಮುನಿಗಣಗಳನ್ನು ಹೇಳಿ ಈ ಗುಣಗಳು 'ವರ್ಧಮಾನ ಮುನಿಗಕ್ಕುಂ ಪೇಱರ್ಗಕ್ಕುಮೇ'[೧೩೪] ಎಂದಿದ್ದಾನೆ. ಒಟ್ಟಿನಲ್ಲಿ ಹೇಳುವುದಾದರೆ ಬೊಪ್ಪಗೌಡ ಧರ್ಮದಲ್ಲಿ ಅಷ್ಟೇ ಜೈನನಲ್ಲ; ಅವನು ಆ ಧರ್ಮ ಹೇಳುವ ತತ್ವಗಳನ್ನು ಪರಿಪಾಲಿಸುವ ನಿಷ್ಠಾವಂತ ಜಿನಧರ್ಮಿಯಾಗಿದ್ದ.

ಜನನಾಯಕ, ಪ್ರಜಾಪಾಲಕ, ಧರ್ಮಿಷ್ಠ, ಸಕಲ ಸದ್ಗುಣಿಯೊಬ್ಬ ಇಹಲೋಕವನ್ನು ತ್ಯಜಿಸಿದಾಗ ಪ್ರಜೆಗಳ, ಬಂಧುಗಳ ಆಕ್ರಂದನ ಮುಗಿಲುಮುಟ್ಟುತ್ತದೆ. ಇಂಥಹ ಜನಪರ ನಾಯಕ ದಂಡನಾಯಕ ಸಂಗಮ. ಘನಚಾರಿತ್ರ, ಪರೋಪಕಾರಿ, ಸಂಗ್ರಾಮಸಿಂಹನಾಗಿದ್ದ ಸಂಗಮ ವಿಜಯನಗರ ಸಾಮ್ರಾಜ್ಯದಲ್ಲಿ ದಂಡನಾಯಕನಾಗಿದ್ದು ಕ್ರಿ.ಶ. ೧೩೯೫ರಲ್ಲಿ ಸಂಗೂರಲ್ಲಿ ಜಿನಧರ್ಮ ನಿಯಮದಂತೆ ಸಂನ್ಯಸನ ವಿಧಾನದಿಂದ ಜೀವತ್ಯಾಗ ಮಾಡಿದ. ಇವನನನ್ನು ಕಳೆದುಕೊಂಡ ಪರಿವಾರ, ಪ್ರಜೆಗಳು ಆಕ್ರಂದಿಸುವ ಸನ್ನಿವೇಶಗಳನ್ನು ಕವಿ ಮನಕಲುಕುವಂತೆ ಚಿತ್ರಿಸಿದ್ದಾನೆ.

ಪ್ರಜೆಮಱುಗಿತ್ತು ಪಂಡಿತ ಜನಂ ಬೆರಗಾದುದು ಯಾಚಕಾಳಿ ನೀ
ರಜ ಮುರಿತಾಗಿದಂತೆ ಕಡುಗಂದಿದುವಂಧಕರಾಗೆ ಬಂಧುಗ
ಳು ಜನರ ಸಂಭ್ರಮಂ ಪರಿದುದಧೃತಿವೆತ್ತರನಾಥರಂಜಿದ
ರ್ಭುಜಗಮಡರ್ದ್ದವೊಲ್ಲುರ ಜನರ್ಗ್ಗುಣಿ ಸಂಗಮಸ್ತಮಾನದೊಳು.

ಇಡೀ ಪದ್ಯದಲ್ಲಿ ಶೋಕರಸ ಮಡುಗಟ್ಟಿದೆ. ಮರುಕದಿಂದ ಸಂಕಟಪಡುವ ಪ್ರಜೆಗಳು, ಸಂಗಮನ ಸಾವನ್ನು ಆಹ್ವಾನಿಸುವ ನಿರ್ಧಾರದಿಂದ ಪಂಡಿತ ಜನರು ಆಶ್ಚರ್ಯಚಕಿತರಾದರು, ಕಮಲ ಬಾಡಿದಂತೆ ಬಂಧುಗಳ ಮುಖಕಮಲಗಳು ಬಾಡಿ ಬೆಂಡಾದವು, ನಿರ್ಗತಿಕರು ಮತ್ತೆ ಅನಾಥರಾದರು ಎಂದು ಸಂಗಮ ಅಸ್ತಮಿಸುವಾಗಿನ ಚಿತ್ರಣದಲ್ಲಿ ದು:ಖ ಧ್ವನಿಯನ್ನು ಕವಿ ಅನುಕರಿಣಿಸಿದ್ದಾನೆ.

ಸಂಗಮ ಶ್ರೇಷ್ಠ ಆಡಳಿತಗಾರ ಅಷ್ಟೇಯಲ್ಲದೇ ಒಬ್ಬ ಕಲಾರಸಿಕನಿದ್ದಂತೆ ತೋರುತ್ತದೆ. ಅಂತೆಯೆ ಅವನ ಎದುರಿಗೆ ಹಾಡುಗಾರರು ವಿವಿಧ ತಾಳಕ್ರಮದ ಗಾಯನವನ್ನು, ತಮ್ಮ ವಿವಿಧ ನೃತ್ಯಭಂಗಿಗಳನ್ನು ಪ್ರದರ್ಶನ ಮಾಡುತ್ತಿದ್ದರು ಈಗ ತಮ್ಮ ಕಲೆಯನ್ನು ಮೆಚ್ಚಿ ಮೆಚ್ಚನ್ನೀಯುತ್ತಿದ್ದ ಸಂಗಮ ಅಸ್ತಮಿಸಿದ ನಂತರ ನಾವಾರನ್ನು ಬೇಡುವೆವು, ಆರಮುಂದೆ ಕಲಾಪ್ರದರ್ಶನ ನೀಡುವೆವೆವು ಎಂದು ಅವರು ರೋಧಿಸುತ್ತಿದ್ದರಂತೆ. ಇಡೀ ಒಂದು ಘಟನೆಯನ್ನು ಜೀವಂತಗೊಳಿಸುವುದು ದಿಟ್ಟ ಕವಿ ಪ್ರತಿಭೆಯೇ ಸರಿ.

> ಬೇಡುವೇವಾರನೆಂದಳಲಿತರ್ಥಿಜನಂ ಧ್ರುವಗೀತಜಾತಿಯಂ
> ಪಾಡುವೆವಾರಮುಂದೆನುತ ಗಾಯಕರತ್ತುದನೇಕ ಚಿತ್ರದಿಂ
> ದಾಡುವೇವಾರಮುಂದೆನುತ ಬಾಯ್ವಿಡುತಿರ್ದ್ದುದು ನರ್ತ್ತಕಾಳಿ ನಾ
> ಡಾಡಿಯ ರೂಢಿಯೆ ಸುಕೃತಿ ಸಂಗಮನಸ್ತಮಯ ಧರಾಗ್ರದೊಳು.[೧೩೫]

ಹೀಗೆ ಹಾವೇರಿಪರಿಸರದ ಸ್ತ್ರೀ–ಪುರುಷರ ಗುಣಗಳನ್ನು ವೀರ, ಶಾಂತ, ರೌದ್ರ, ಭಯಾನಕ, ಬೀಭತ್ಸ, ಅದ್ಭುತ ರಸಗಳ ಮೂಲಕ ಶಾಸನ ಕವಿಗಳ ಚಿತ್ರಿಸಿದ್ದಾರೆ. ಬಣ್ಣನೆಗೆ ತಕ್ಕ ಅಲಂಕಾರ, ಛಂದೋಲಯಗಳನ್ನು ಅಳವಡಿಸಿಕೊಂಡಿರುವುದನ್ನು ಗಮನಿಸಿದರೆ ಇಲ್ಲಿನ ಶಾಸನ ಕವಿಗಳಿಗೆ ಆಳವಾದ ಸಾಹಿತ್ಯ ಅಭ್ಯಾಸವಿದೆ ಎಂದು ಮನಗಾಣಬಹುದು.

**ಕ. ಸ್ಥಳವರ್ಣನೆ.**

ಕವಿಯಾದವನು ತನ್ನ ಕಾವ್ಯದಲ್ಲಿ ಅಷ್ಟಾದಶ (೧೮) ವರ್ಣನೆಗಳನ್ನು ತರುವುದು ಒಂದು ಕಾವ್ಯ ನಿಯಮವಾಗಿತ್ತು. ಪಂಪರನ್ನಾದಿಕವಿಗಳು ಈ ಕ್ರಮವನ್ನು ಸಮರ್ಥವಾಗಿಯೇ ನಿರ್ವಹಿಸಿದರು. ಈ ಅಷ್ಟಾದಶ ವರ್ಣನೆಗಳಲ್ಲಿ ಸ್ಥಳ ವರ್ಣನೆಯೂ ಒಂದು. ಪಾರಿಭಾಷಿಕವಾಗಿ ಇದನ್ನು ನಗರವರ್ಣನೆಯೂ ಎನ್ನಬಹುದು. ಶಾಸನಗಳಲ್ಲಿ ೧೮ ವರ್ಣನೆಗಳು ನಿಯಮಿತವಾಗಿ ಬರದಿದ್ದರೂ ಕೆಲವೊಂದು ಬಣ್ಣನೆಗಳು ಕೆಲವು ಶಾಸನಗಳಲ್ಲಿ ಒಡಮೂಡಿವೆ. ಕ್ರಿ.ಶ. ೧೧೬೮ರ ನದಿಹರಳಹಳ್ಳಿಯ ಜಿನಶಾಸನ ಇದಕ್ಕೊಂದು ಉತ್ತಮ ಉದಾಹರಣೆ. ಕಾವ್ಯ ಮತ್ತು ಶಾಸನ ಕಾವ್ಯದ ಕವಿಗಳು ತಾವು ಕಂಡ ಸ್ಥಳಗಳ ವಿಶೇಷತೆಗಳ ಬಣ್ಣನೆಯ ಸ್ಥಳವರ್ಣನೆಯೆನಿಸುತ್ತದೆ.

ಹಾವೇರಿ ಪರಿಸರದ ಜೈನಶಾಸನಗಳಲ್ಲಿ ದೇಶ, ನಾಡು, ಸೀಮೆ, ಗ್ರಾಮಗಳ ಸೊಬಗನ್ನು ಸೆರೆಹಿಡಿದ ಕೆಲವು ಸ್ಥಳಗಳನ್ನು ಇಲ್ಲಿ ಅಭ್ಯಸಿಸಬಹುದಾಗಿದೆ.

## ೦೧. ದೇಶ.

ನಿಘಂಟಿನಲ್ಲಿ ದೇಶ ಎಂದರೆ ಸ್ಥಳ, ಜಾಗ, ಪ್ರದೇಶ, ನಾಡು, ಸೀಮೆ, ಜನಪದ ಎಂಬರ್ಥಗಳಿವೆ.[೧೩೬] ಇಲ್ಲಿ ದೇಶ ಎಂದರೆ ಸ್ವತಂತ್ರ ಭೌಗೋಳಿಕ ಪರಿಸರವನ್ನು ಹೊಂದಿದ ಪ್ರದೇಶವೆಂದೇ ಪರಿಗಣಿಸುವುದು ಸೂಕ್ತ. ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಬನವಾಸಿ ಒಂದು ದೇಶವಾಗುತ್ತದೆ. ಪ್ರಾಚೀನ ಆಡಳಿತದ ಗಮನಿಕೆಯಂತೆ ಒಂದು ರಾಜ್ಯದ ರಾಜಧಾನಿಯಾದ ಪ್ರದೇಶದಿಂದಲೇ ದೇಶ ಗುರುತಿಸಿಕೊಳ್ಳುತ್ತಿತ್ತು. ಬನವಾಸಿ ಕದಂಬರ ಕಾಲದ ರಾಜ್ಯಧಾನಿಯಾದ ವೈಜಯಂತಿ, ವನವಾಸಿ, ಬನವಾಸಿ ಎಂದು ಕರೆಯಲ್ಪಡುವ ಬನವಾಸಿ ದೇಶ ಇದಕ್ಕೊಂದು ಸ್ಪಷ್ಟ ಉದಾಹರಣೆ. ಪಂಪ ತನ್ನ ಕಾವ್ಯದಲ್ಲಿ 'ಆರಂಕುಶಮಿಟ್ಟೊಡಂನೆನೆವುದೆನ್ನ ಮನಂ ಬನವಾಸಿದೇಶಂ' ಎಂದು ಬನವಾಸಿಯನ್ನು ದೇಶವೆಂದೇ ಬಿಂಬಿಸಿದ್ದಾನೆ.

ಬನವಾಸಿ ೧೨೦೦೦ ಜನವಸತಿಗಳ ಆಡಳಿತ ಗುಚ್ಛದ ಕೇಂದ್ರ ಸ್ಥಾನ. ಇದರಲ್ಲಿ ಹಾವೇರಿ ಪರಿಸರದ ಬಹುತೇಕ ಭಾಗ ಸಮಾಗಮವಾಗಿತ್ತು. ಅಂತೆಯೇ ಈ ಭಾಗದ ಶಾಸನಗಳಲ್ಲಿ ಬನವಾಸಿದೇಶದ ವರ್ಣನೆ ಸಹಜವಾಗಿದೆ. ನದಿಹರಳಹಳ್ಳಿಯ ಕ್ರಿ.ಶ. ೧೧೬೮ರ ಶಾಸನವೊಂದು ಈ ದೇಶದ ವರ್ಣನೆಯನ್ನು ಸೊಗಸಾಗಿ ಕಟ್ಟಿಕೊಟ್ಟಿದೆ.

ದೊರೆವೆತ್ತು ತುಂಗಭದ್ರೆಯ<br>
ವರದೇಳೆ ಮಧ್ಯಪ್ರದೇಶದೊಳ್ಸೊಗಯಿಸುಗುಂ<br>
ಸಿರಿಯ ತವರ್ಮ್ಮನೆ ಸೌಖ್ಯಾ<br>
ಕರಮೆನೆ ಬನವಾಸೆದೇಶ ವತುಳ ವಿಳಾಸಂ.

ವನರುಹವನದಿಂ ವನರುಹ<br>
ವನ ಮಧುಮುಧಿತಾಳಿಮಾಳೆಯಿಂದಳಿ ಮಾಳಾ<br>
ಧ್ವನಿ ಹೃದ್ಯೋದ್ಯಾನದಿನಾ<br>
ಜಿನಪದ ವೊಡರಿಸುವುದಖಿಳ ವನಸುಖಪದರೆಂ.

ಪಿಕವರದಿಂ ತೆಂಬೆಲರಿಂ<br>
ಶುಕಶತ ಚಾರುಪ್ರಚಾರದಿಂದೆಳೆ ನೀರಿಂ<br>
ವಿಕಸಿತ ವನರುಹ ವನದಿಂ<br>
ಸಕಳೇಂದ್ರಿಯ ತೃಪ್ತಿಚತುರ ವಿಷಯಂ ವಿಷಯಂ.

ಕಳಕಂಠ ದಿನಾಮ್ರವನಂ
ಗಿಳಿವಿಂಡಿಂಗಂಧ ಶಾಳಿವನವಳಿಕುಳದಿಂ
ಲಲಿತ ಲತಿಕಾವನಂ
ಣ್ಗೊಳಿಸುವ ಮದಜಿಹ್ಮರಾಳದಿಂ ವನಜವನಂ.[೧೩೭]

ವರದೆ ಮತ್ತು ತುಂಗಭದ್ರಾ ನದಿಗಳ ಪಾತ್ರದಲ್ಲಿ ಕಂಗೊಳಿಸುವ ಬನವಾಸಿ ನಾಡು ಸ್ವಚ್ಛಂದವಾಗಿ ಬೆಳೆದ ತಾಳೆ ಮರಗಳ ಸಾಲುಗಳಿಂದ ಕಂಗೊಳಿಸುತ್ತಿತ್ತು. ಕೋಗಿಲೆಗಳು, ಗಿಳಿಗಳು ಚೆಲುವಾದ ತೆಂಗಿನ ತೋಟಗಳನ್ನು ವನಗಳನ್ನು ಮುತ್ತಿದ್ದವು. ಇಂಥ ಸೊಬಗಿನಿಂದ ಅರಳಿನಿಂತ ವನಗಳಿಂದ ಮೆಲ್ಲನೆ ಸೂಸುವ ತಂಗಾಳಿಯು ಕಣ್ಮನಗಳನ್ನು ತೃಪ್ತಿ ಪಡಿಸುವಂತಿತ್ತು. ಕೋಗಿಲೆಗಳಿಗೆ ಅಂದವಾದ ಮಾವಿನ ಮರಗಳು, ಗಿಳಿವಿಂಡಿನಿಂದ ಸೊಬಗನ್ನು ಹೆಚ್ಚಿಸಿಕೊಂಡ ಶಾಳಿವನಗಳು, ಮನೋಹರವಾದ ಹೂಬನಗಳಲ್ಲಿ ನಲಿದು ನರ್ತಿಸುವ ನವಿಲುಗಳಿಂದ ಬನವಾಸಿ ನಾಡು ಕಂಗೊಳಿಸುತ್ತಿತ್ತು ಎಂಬುದು ಕವಿಯ ಅಂಬೋಣ. ಇದು ಸತ್ಯವೂ ಹೌದು. ಒಂದು ರಾಜ್ಯದ ರಾಜಧಾನಿಯಾದ ಬನವಾಸಿಯಲ್ಲಿ ಈ ವಾತಾವರಣವು ಸಹಜವೂ ಹೌದು. ಮೇಲಾಗಿ ಬನವಾಸಿ ಮಲೆನಾಡಿನ ಪರಿಸರದಲ್ಲಿ ಇದ್ದುದರಿಂದ ಕವಿ ವರ್ಣನೆಗೆ ಇಮ್ಮಡಿ ಇಂಬು ಹೌದು. ಅಂತಾಗಿ ಪಂಪನೂ ಸಹ ತನ್ನ ಕಾವ್ಯದಲ್ಲಿ ಕೋಗಿಲೆಯಾಗಿ, ಮರಿದುಂಬಿಯಾಗಿ ಹುಟ್ಟಬೇಕೆಂದಿದ್ದು ಇಲ್ಲಿಯ ವಾತಾವರಣದ ಸೊಬಗಿನಿಂದ. ಅದಕ್ಕೆ ಅವನ ಮನಸ್ಸು ಬನವಾಸಿ ದೇಶವನ್ನು ಪದೇ ಪದೇ ನೆನೆಯುತ್ತದೆ. ಪ್ರಸ್ತುತ ಶಾಸನ ಕವಿ ಶಾಂತಿರಾಜ ಪಂಪನಿಗಿಂತಲೂ ಒಂದು ಕೈ ಹೆಚ್ಚು ಎನ್ನುವಂತೆ ಬನವಾಸಿಯನ್ನು ಬಣ್ಣಿಸಿದ್ದಾನೆ.

**೦೨. ನಾಡು.**

ದೇಶದ ಅಡಿಯಲ್ಲಿ ಬರುವ ಪ್ರಾಂತಗಳನ್ನು ಸಾಮಾನ್ಯವಾಗಿ ನಾಡು ಎನ್ನುತ್ತಾರೆ. ಹಾಗೆ ನೋಡಿದರೆ ದೇಶಕ್ಕೂ ನಾಡು ಎನ್ನುವ ರೂಢಿಯುಂಟು. ದೇಶ, ನಾಡು ವಸತಿ ಸೂಚಕ ಶಬ್ದಗಳು ಎಂಬುದು ದಿಟ. ಇಲ್ಲಿ ನಾಡು ಎಂಬುದನ್ನು ದೇಶದಲ್ಲಿ ಬರುವ ಉಪ ಆಡಳಿತ ಘಟಕ ಎಂಬರ್ಥದಲ್ಲಿ ಗ್ರಹಿಸಲಾಗಿದೆ. ಹಾನುಂಗಲ್ಲನ್ನು 'ಹಾನುಂಗಲ್ನಾಡು'[೧೩೮] ಎಂದೇ ಕರಗುದರೆ ಶಾಸನದಲ್ಲಿ ಕರೆಯಲಾಗಿದೆ. ಹಾನುಂಗಲ್ಲು ೫೦೦ ಗ್ರಾಮಗಳನ್ನು ಒಳಗೊಂಡ ಆಡಳಿತ ಘಟಕವಾಗಿದ್ದು ಕದಂಬರ ಒಂದು ಶಾಖೆ ಇಲ್ಲಿಂದ ಆಳುತ್ತಿತ್ತು. ಕದಂಬರ ಎರಡನೆಯ ರಾಜಧಾನಿ ಎನಿಸಿದ ಹಾನುಗಲ್ಲು ಬನವಾಸಿ ದೇಶದ ಪ್ರಮುಖ ಪಟ್ಟಣವೂ ಹೌದು. ಇದರ ಸೊಬಗನ್ನು ಕ್ರಿ.ಶ. ೧೧೪೮ರ ಕರಗುದರೆ ಶಾಸನ ಹೀಗೆ ಬಣ್ಣಿಸಿದೆ. "ಕಬ್ಬಿನ ಗದ್ದೆಗಳು, ಎಲೆಯತೋಟಗಳು, ವನಗಳು, ಗಂಧದ ಮರಗಳು, ದೊಡ್ಡ ಕೆರೆಗಳನ್ನು ಹೊಂದಿದ ಹಾನಗಲ್ಲುನಾಡು ದಾನಕ್ಷೇತ್ರವೂ ಆಗಿತ್ತು."[೧೩೯] ಕ್ರಿ.ಶ. ೧೧೫೫ರ ಮಂತಗಿಯ ಜಿನಶಾಸನವು ಹಾನುಂಗಲ್ಲ ವರ್ಣನೆಯನ್ನು ಇನ್ನೂ ಸೊಗಸಾಗಿ

ಕಟ್ಟಿಕೊಟ್ಟದೆ. ಇಡೀ ಪ್ರಕೃತಿಯನ್ನೆ ಬಣ್ಣಿಸಿದ ಶಾಸನವು ಸೊಬಗಿನಲ್ಲಿ ಹಾನುಗಲ್ಲು ಭೂಮಂಡಲದಲ್ಲಿಯೇ ಪ್ರಸಿದ್ಧವಾಗಿತ್ತು ಎಂಬ ಅತಿಶಯದ ಮಾತುಗಳನ್ನಾಡುತ್ತದೆ.

ಫಳವೃಕ್ಷಾವಳಿಯಿಂ ಗಂಧೋಪವನದಿಂ ಪೂದೋಂಟದಿಂ ಕತ್ತಲಿ
ಪ್ಪೆಲೆವಳ್ಳಿಯಿಂ ಮಡಲ್ತ ನವಮಲ್ಲಿವಲ್ಲಿಯಿಂ ಬಪ್ಪ ತಂಬೆಲರಿಂ
ಶಾಳಿವನಾಳಿಯಿಂ ನದಿಯುನುನು ಮತ್ತಾಳಿಯಿಂ ಪಕ್ಷಿಸೋವೆಳೆವಿಂ
ಡಿಂದಂನೊಪ್ಪುಗುಂ ನೆಗರ್ದ್ದ ಹಾನುಂಗಲ್ಲಾ ಮಹೀಭಾಗದೊಳಂ.[೧೪೦]

ಸಂಗೂರಿನ ಒಂದು ನಿಸಿಧಿ ಶಾಸನದಲ್ಲಿ ಪುಲಿಕರ (ಪುಲಿಗೆರೆ) ನಾಡಿನ ಬಗ್ಗೆ ವರ್ಣನೆ ಇದೆ.[೧೪೧] ಇಂದಿನ ಲಕ್ಷ್ಮೇಶ್ವರ ಅಂದಿನ ಪುಲಿಗೆರೆ. ಇದು ಪುಲಿಗೆರೆ ೩೦೦ ನಾಡಿನ ಆಡಳಿತ ಘಟಕ. ಈ ಭಾಗದ ಜನರಾಡುವ ಕನ್ನಡ ಭಾಷೆ ಪುಲಿಗೆರೆಯ ಪ್ರಸಿದ್ಧತೆಯ ಮುಕುಟ. ಪಂಪ ತನ್ನ ಕಾವ್ಯದ ಭಾಷೆ ಯಾವ ತರಹದ್ದು ಎಂದು ಹೇಳುವಾಗ 'ರಾಜರಲ್ಲಿಯೇ ರಾಜ ಎನಿಸಿದ ಪುಲಿಗೆರೆ ಸಹಜ ತಿರುಳ್ಗನ್ನಡದಲ್ಲಿ ತನ್ನ ಇನಿಯ ಕವಿತೆ ಹುಟ್ಟಿದೆ ಎನ್ನುತ್ತಾನೆ.'[೧೪೨] ದೇಸಿ ಶೈಲಿಯ ಪುಲಿಗೆರೆಯ ನಾಡಿನ ತಿರುಳು ಕನ್ನಡ ಭಾಗವಾದ ಪುಲಿಗೆರೆ ಸೌಂದರ್ಯ ಹೇಗಿತ್ತೆಂಬುದನ್ನು ಕವಿ ಹೀಗೆ ವರ್ಣಿಸಿದ್ದಾನೆ.

ಲಲಿತ ವನಮಾಲೆಯಿಂದಂ
ಜಲಜಾಕರ ನಿಕರದಿಂದೆ ಬಹುಚೈತ್ಯಗೃಹಾ
ವಳಿಯಿಂದಂ ಕರಮೆಸೆವುದು
ಪುರಿಕರಮದು ಸುರೇಂದ್ರನಮರಾವತಿಯೋಲ್.[೧೪೩]

ಸುಂದರವಾದ ಉದ್ಯಾನಗಳು, ತುಂಬಿ ತುಳುಕುತ್ತಿದ್ದ ನೀರ್ ನೆಲೆಗಳು, ಎಲ್ಲಿ ನೋಡಿದರಲ್ಲಿ ಜಿನಮಂದಿರಗಳಿಂದ ಆವೃತವಾಗಿದ್ದು ಪುರಿಕರವು ಸಮೃದ್ಧಿಯಲ್ಲಿ ಇಂದ್ರನ ಅಮರಾತಿಗಿಂತಲೂ ಮಿಗಿಲೆನಿಸಿತ್ತೆಂಬುದು ನೈಜ ಉಪಮೆ. ಒಂದು ಪ್ರದೇಶದಲ್ಲಿ ವನಗಳು ಇರುವುದು, ಕೆರೆಗಳು ಇರುವುದು ಸಹಜ. ಇಲ್ಲಿ ಗಮನಿಸಬೇಕಾದದ್ದು 'ಬಹುಚೈತ್ಯಾಗೃಹಾವಳಿ' ಎಂಬ ಪದವನ್ನು ಪುಲಿಗೆರೆಯಲ್ಲಿ "ಆನೆಸೆಜ್ಜೆಯ ಬಸದಿ, ಶಂಖ ಬಸದಿ, ತೀರ್ಥ ಬಸದಿ, ಜಿನಭಟ್ಟಾರಕರ ಬಸದಿ, ಧವಳ ಬಸದಿ, ಚತರ್ಮುಖ ಶಾಂತಿನಾಥ ಬಸದಿ, ಗೊಗ್ಗಿ ಬಸದಿ, ಶ್ರೀ ವಿಜಯ ಬಸದಿ, ಗಂಗಪೆರ್ಮಾಡಿ ಬಸದಿ, ರಾಜಮಲ್ಲ ಬಸದಿ, ಗಂಗ ಕಂದರ್ಪ ಬಸದಿ, ಮುಕ್ಕರ ಬಸದಿ, ಮರುದೇವಿ ಬಸದಿ, ಚಂದ್ರಿಕಾಂಬಿಕ ಬಸದಿ, ಅನಂತನಾಥ ಬಸದಿ, ಜಿನ್ನೋಜನ ಬಸದಿ, ಪಂಚಬಸದಿ, ಮಲ್ಲಿಸೆಟ್ಟಿಯ ಬಸದಿ, ಅನಂತನಾಥ ಬಸದಿ, ಗಾವುಣ್ಡನ ಬಸದಿ, ಶಾಂತಿನಾಥನ ಬಸದಿ"[೧೪೪] ಎಂಬ

೨೧ ಬಸದಿಗಳಿದ್ದ ಉಲ್ಲೇಖಗಳು ದೊರೆಯುತ್ತವೆ. ಆದ್ದರಿಂದಲೇ ಇಷ್ಟೊಂದು ಪ್ರಮಾಣದ ಬಸದಿಗಳನ್ನು ನೋಡಿದ ಕವಿ ಜಿನಧರ್ಮದ ಅಮರಾವತಿಯೇ ಪುರಿಕರ ನಾಡು ಎಂದಿರಲಿಕ್ಕೆ ಸಾಕು.

### ೦೩. ಕಂಪಣ.

ಕಂಪಣ ಎಂದರೆ ನಾಡಿನ ಒಂದು ಭಾಗ.[೧೪೫] ನಾಡಿನ ವಿಸ್ತಾರತೆಗೆ ತಕ್ಕಂತೆ ಕಂಪಣಗಳ ಸಂಖ್ಯೆಗಳು ಅಧಿಕವಾಗಿರುತ್ತದೆ.[೧೪೬] ಮೂವತ್ತು ಹಳ್ಳಿಗಳಿಂದ ಕೂಡಿರುವ ಕಂಪಣಗಳು ಕೆಲವೊಂದು ಬಾರಿ ಎಪ್ಪತ್ತು, ನೂರು, ನೂರಾನಲ್ವತ್ತು ಹಳ್ಳಿಗಳನ್ನು ಒಳಗೊಂಡಿರುತ್ತವೆ. ಕಂಪಣಕ್ಕೆ ದೇಶದಲ್ಲಿರುವಂತೆ ಆಡಳಿತ ಕೇಂದ್ರವೂ ಇರುತ್ತದೆ. ಇದು ಅದರ ಹೆಸರು ಮತ್ತು ಅದರ ಆಡಳಿತಕ್ಕೆ ಒಳಗೊಂಡ ಗ್ರಾಮಗಳ ಸಂಖ್ಯೆಯಿಂದ ಸಂಬೋಧನೆಗೊಳ್ಳುತ್ತದೆ. ಉದಾ ಬಾಸವೂರು–೧೪೦.[೧೪೭]

ಬಾಸವೂರಿನಂತೆ ರಟ್ಟಹಳ್ಳಿ ನೂಱುಂಬಾಡವೂ ಒಂದು ಕಂಪಣ. ಈ ಕಂಪಣದ ಭೂ ಸೊಬಗನ್ನು ಒಂದು ಶಾಸನದಲ್ಲಿ ಹೀಗೆ ಹೊಗಳಲಾಗಿದೆ. "ಬನವಾಸಿ ಎಂಬ ಸುಂದರ ನಾಡಿನಲ್ಲಿ ನಯನ ಮನೋಹರವಾದ ಕಂಪಣ, ಸಂಪತ್ತಿನಿಂದ ತುಂಬಿತುಳುಕುತ್ತಿದ್ದ, ರೂಢಿಯಲ್ಲಿ ನೂಱುಂಬಾಡ ಎಂದು ಕರೆಯಲ್ಪಡುವ ಱಟ್ಟಹಳ್ಳಿಯು ಭೂದೇವಿಯ ಕಿರೀಟಪ್ರಾಯದಂತಿತ್ತು"[೧೪೮] ಕವಿಯ ಸರಳ ಬಣ್ಣನೆ ಇದು. ಪ್ರಾಚೀನ ಕರ್ನಾಟಕದಲ್ಲಿ ರಟ್ಟಹಳ್ಳಿ (ರಟ್ಟಪಳ್ಳಿ) ಕಂಪಣವು ರಾಜ್ಯಾಡಳಿತದ ಒಂದು ಪ್ರಮುಖ ಭಾಗ ಎನ್ನುವುದರಲ್ಲಿ ಅನುಮಾನವಿಲ್ಲ.

### ೦೪. ಗ್ರಾಮ ವರ್ಣನೆ.

ದೇಶ, ನಾಡು, ಕಂಪಣಗಳ ಪ್ರಾಕೃತಿಕ ಸೊಬಗನ್ನು ವರ್ಣನೆ ಮಾಡಿದ ಕವಿ ಸ್ಥಳೀಯ ಸೊಬಗನ್ನು ಬಣ್ಣಿಸದಿರುತ್ತಾನೆಯೆ. ಒಂದು ಸಾಮ್ರಾಜ್ಯದ ಕೊನೆಯ ಮತ್ತು ಮೂಲ ಆಡಳಿತ ಘಟಕ ಗ್ರಾಮ. ಹಾಗೆ ನೋಡಿದರೆ ಕರ್ನಾಟಕದ ಸಾಮ್ರಾಜ್ಯ, ದೇಶ, ನಾಡು, ಕಂಪಣಗಳು ನಿರ್ದೇಶಿತವಾಗುವುದು ಆ ಪ್ರದೇಶದಲ್ಲಿರುವ ಹಳ್ಳಿಗಳ ಸಂಖ್ಯೆಯಿಂದಲೆ. ಬನವಾಸಿ–೧೨೦೦೦, ಗಂಗವಾಡಿ–೯೬೦೦೦, ಹಾನಗಲ್ಲು–೫೦೦ ಇತ್ಯಾದಿಗಳು. ರಟ್ಟಹಳ್ಳಿ ನೂಱುಂಬಾಡ ಎನ್ನುವಲ್ಲಿ 'ಬಾಡ' ಎಂದರೆ ಹಳ್ಳಿ ಎಂದು ಸ್ಪಷ್ಟವಾಗಿ ಹೇಳಲಾಗಿದೆ. ರಟ್ಟಹಳ್ಳಿ + ನೂರು + ಬಾಡ = ನೂರು ಹಳ್ಳಿಗಳಿಂದ ಕೂಡಿದ ಆಡಳಿತ ಪ್ರದೇಶ. ಇಂಥಹ ಹಳ್ಳಿಗಳಿಂದ ಕೂಡಿದ ಸಾಮ್ರಾಜ್ಯ ದೇಶ ನಾಡಿನ ಛಂದತೆಯನ್ನು ವರ್ಣಿಸುವುದರ ಜೊತೆಗೆ ಹಳ್ಳಿಗಳ ಬಣ್ಣನೆಯನ್ನು ಶಾಸನಗಳು ಕಡೆಗಣಿಸಿಲ್ಲ.

ಮಂತಗಿಯ ಚಾಳುಕ್ಯರ ತ್ರುಟಿತವೊಂದರ ಶಾಸನದಲ್ಲಿ ಮೂವಳ್ಳಿಯ ವರ್ಣನೆ ಬರುತ್ತದೆ. ಈ ಊರು "ಜಿನಮಂದಿರಗಳಿಂದ ತುಂಬಿ ಇಂದ್ರನ ಅಮರಾವತಿಯಂತಿತ್ತು. ಅಷ್ಟೇ ಅಲ್ಲದೇ ಇಲ್ಲಿನ ಜನರು ಉತ್ತಮರು, ವಾಕ್‌ಚಾತುರ್ಯರು, ರಾಮಕತ್ವ, ಕವಿತ್ವ, ಪುರಾಣ, ತರ್ಕ್ಕಗಳಲ್ಲಿ ಪ್ರಾವಿಣ್ಯತೆ ಪಡೆದಿದ್ದರು".[೧೪೯] ಕರಗುದುರೆ ಗ್ರಾಮವಂತೂ ನಳಕಾಪುರಿ ಮತ್ತು ಇಂದ್ರನ

ಅಮರಾವತಿಗೆ ಒಪ್ಪುವಂತಿತ್ತು. ಇಲ್ಲಿ "ಸ್ವಚ್ಛಂದವಾಗಿ ಬೆಳೆದ ವನಗಳು, ಜಲಮೂಲಗಳು ಆ ವಾಸಗಳು ಇದ್ದವು"[೧೫೦] ಈಗಲೂ ಈ ಪ್ರದೇಶ ಸಮೃದ್ಧವಾಗಿಯೇ ಇದೆ.

ಜಲಮೂಲ ಆಕರಗಳಾದ ಕೆರೆ, ಬಾವಿ, ಕೊಳ, ಸರೋವರ, ನದಿ ಸೊಬಗು, ನೀರಿನಿಂದ ಕಂಗೊಳಿಸುವ ಭೂಮಿ, ವಿವಿಧ ಜಾತಿಯ ಮರಗಳು, ಪಕ್ಷಿಗಳಿಂದ ಕಂಗೊಳಿಸುವ ಗೊಟ್ಟಗಡಿ (ನದಿಹರಳಹಳ್ಳಿ)ಯಂಥ ಭೋಗಭೂಮಿ ಈ ಭುವಿಯಲ್ಲಿ ಮತ್ತೆಲ್ಲಾದರೂ ಉಂಟೆ ಎಂಬ ತನ್ನ ನೆಲದ ಐಸಿರಿ ಬಗ್ಗೆ ಕವಿ ಹೇಳುವ ಮಾತುಗಳು ಇಂದಿಗೂ ಸತ್ಯವೂ ಕೂಡಾ.[೧೫೧] ಯಾಕೆಂದರೆ ಗೊಟ್ಟಗಡಿ ಗ್ರಾಮ ಈಗಲೂ ತುಂಗಭದ್ರೆಯ ನೀರಿನಿಂದ ಕೃಷಿ ಕ್ಷೇತ್ರದಲ್ಲಿ ಮುಂಚೂಣಿಯಲ್ಲಿದೆ. ಬೆಳವಂತಿ ಎಂಬ ಗ್ರಾಮವು ಜಿನಾಲಯ ಶಿವಾಲಯಗಳನ್ನು ಹೊಂದಿ 'ಪೊಗರ್ತ್ತೆಗಂ ನೆಗರ್ತ್ತೆಗಂ ನೆಲೆಯಾಗಿತ್ತು'.[೧೫೨] ತ್ಯಾಗಿಗಳಿಗೆ, ಭೋಗಿಗಳಿಗೆ, ನಿರ್ವೇಗಿಗಳಿಗೆ, ಪರಮಯೋಗಿಗಳಿಗೆ, ಜೈನಾಗಮಗಳಿಗೆ ಚತುರಸಾಗರ ಎಂದು ಚಂಗಾಪುರ (ಸಂಗೂರು) ಹಳ್ಳಿಯ ಬಣ್ಣನೆ ಶಾಸನವೊಂದರಲ್ಲಿ ಒಡಮೂಡಿದೆ.[೧೫೩] ಹೀಗೆ ಗ್ರಾಮಗಳ ವರ್ಣನೆಗಳನ್ನು ಗಮನಿಸಿದಾಗ ಗ್ರಾಮಗಳಲ್ಲಿ ಜನರಲ್ಲಿ ಸುಜನತ್ವ, ಸೌಜನ್ಯ ಮನೆಮಾಡಿದ್ದಂತೆ ಕಂಡುಬರುತ್ತದೆ ಇದಕ್ಕೆ ಕಾರಣ ಗ್ರಾಮದ ಪರಿಸರ. ಮತ್ತು ಸಮೃದ್ಧಿ. ಜನರು ಆರ್ಥಿಕವಾಗಿ ಸಬಲರಿದ್ದಾಗ ಸುಭೀಕ್ಷೆಯೂ ಅವರಲ್ಲಿ ಮನೆಮಾಡುತ್ತದೆ.

## ೦೨. ಶಾಸನ ಛಂದಸ್ಸು.

ವ್ಯಕ್ತಿಯು ತನಗೆ ಆಹ್ಲಾದಕರ ಭಾವನೆಗಳುಂಟಾದಾಗ ಲಯಬದ್ಧವಾಗಿ ಹೊರಹಾಕುವ ಮೌಖಿಕ ಮತ್ತು ಲಿಖಿತರೂಪದ ಅಭಿವ್ಯಕ್ತಿಯೇ ಛಂದಸ್ಸು. ಆರಂಭದಲ್ಲಿ ಜನಪದರು ತಮ್ಮ ಶ್ರಮಸಂಸ್ಕೃತಿಯ ವೃತ್ತಿಗಳಲ್ಲಿ ತೊಡಗಿದಾಗ ಏಕತಾನತೆ, ಆಯಾಸ ಆಗದಿರಲೆಂದು ಗುನಗಲಿಕ್ಕೆ ಶುರುಮಾಡಿದರು. ಗುನುಗು ಮುಂದೆ ಹಾಡಾಯಿತು. ಬೀಸುವ ವೃತ್ತಿ ಅಥವಾ ಕಾರ್ಯದಲ್ಲಿ ಹಾಡು ಲಯಬದ್ಧಗೊಂಡಿತು. ಛಂದಸ್ಸು ಹುಟ್ಟಿದ್ದೆ ಇಲ್ಲಿ. ಈ ಕಾರ್ಯ ಒಂದು ಉದಾಹರಣೆಯಷ್ಟೇ ಇದರಂತೆ 'ಹಂತಿ' ಹೊಡೆಯುವಾಗ, ಗಾಣ ನಡೆಸುವಾಗ ಲಯಬದ್ಧ ಹಾಡುಗಳು ಹುಟ್ಟದೇ ಇರಲಿಲ್ಲ. ಬೀಸುವ ಪ್ರಕ್ರಿಯೆಯನ್ನು ಇಲ್ಲಿ ಮುಖ್ಯವಾಗಿ ಗಮನಿಸಬೇಕು. ಬೀಸುವ ಆವರ್ತನದಲ್ಲಿ ಒಂದು ಲಯವಿದೆ ಆ ಲಯಕ್ಕೆ ಅನುಗುಣವಾಗಿ ನಮ್ಮ ಪ್ರಾಚೀನ ಸ್ತ್ರೀಯರು ಹಾಡು ಹೇಳುತ್ತಿದ್ದರು. ಈ ಹಾಡೇ ಮುಂದೆ ತ್ರಿಪದಿಯಾಯ್ತು. ಆದ್ದರಿಂದಲೆ ತ್ರಿಪದಿಯ ಎರಡನೆ ಪಾದ ಮುಕ್ಕಾಲು ಭಾಗದ ಲಯಗಳು ಎರಡು ಸಾರಿ ವ್ಯಕ್ತಗೊಳ್ಳುತ್ತದೆ. ಋಗ್ವೇದದಲ್ಲಿ ಬರುವು 'ತ್ರಿಷ್ಟುಪ್' ಅನುಷ್ಟುಪ್ ಛಂದೋವೃತ್ತಗಳು ಮೊದಲು ಮೌಖಿಕವಾಗಿದ್ದವು ಎಂಬುದು ಗಮನೀಯ. ಆದ್ದರಿಂದ ಮೊದಮೊದಲು ವ್ಯಕ್ತಿಯ ಭಾವಗಳಿಗೆ ಅನುಗುಣವಾಗಿ ಛಂದಸ್ಸು ಹುಟ್ಟಿತು; ಛಂದಸ್ಸಿಗೆ ಅನುಗುಣವಾಗಿ ಭಾವನೆಗಳು ಉದಯಿಸಲಿಲ್ಲ. ಈ ಕ್ರಮ ಲಿಖಿತ

ರೂಪದ ಕಾವ್ಯದಲ್ಲಿ ಅಳವಟ್ಟಿತು. ತದನಂತರ ಛಂದಸ್ಸೇ ಒಂದು ಶಾಸ್ತ್ರವಾಗಿ ಕಾವ್ಯ ರಚನೆಯಲ್ಲಿ ನಿಯಮಗಳು ಹೆಣೆಯಲ್ಪಟ್ಟವು.

ಕನ್ನಡ ಮೊಟ್ಟಮೊದಲ ಉಪಲಬ್ಧ ಛಂದೋಕೃತಿ ೧ನೆಯ ನಾಗವರ್ಮನ 'ಛಂದೋಂಬುಧಿ'. ಇದು ಹತ್ತನೆಯ ಶತಮಾನದ ರಚನೆ. ಪ್ರಾಚೀನ ಕನ್ನಡ ಕಾವ್ಯಗಳಲ್ಲಿರುವ ಛಂದಸ್ಸಿನ ಎಲ್ಲಾ ನಿಯಮಗಳನ್ನು ಒಳಗೊಂಡ ಮಹತ್ವದ ಕೃತಿಯಾಗಿದೆ. ಇದರ ನಂತರ 'ಗುಣಗಾಂಕಿಯಂ' 'ಛಂದೋವಿಚಿತಿ', ಛಂದೋನುಶಾಸನ', 'ಮಾನಸೋಲ್ಲಾಸ' ಮುಂತಾದ ಛಂದೋಗ್ರಂಥಗಳು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಡಮೂಡಿವೆ. ಈ ಎಲ್ಲ ಛಂದೋಗ್ರಂಥಗಳು ರಚಿತವಾಗುವ ಮುನ್ನವೇ ಛಂದೋಪದ್ಯಗಳು ಕಾವ್ಯಗಳಲ್ಲಿ ವ್ಯಕ್ತವಾಗುವ ಮುನ್ನ ಶಾಸನಗಳಲ್ಲಿ ಮೈದಾಳಿ ನಿಂತಿದ್ದವು. ಕನ್ನಡ ಛಂದಸ್ಸಿನ ತಾಯಿಬೇರು ಶಾಸನಗಳು ಎಂಬುದರಲ್ಲಿ ಅನುಮಾನವೇ ಇಲ್ಲ. ಅಂತೆಯೇ ಚಿತ್ರದುರ್ಗದ 'ತಮ್ಮಟಕಲ್ಲು' ಶಾಸನದ ಪದ್ಯವೊಂದು ಮೊದಲ ಕನ್ನಡ ಛಂದಸ್ಸಿಗೆ ಅಳವಟ್ಟ ಶಾಸನ ಪದ್ಯ ಎನ್ನಿಸುತ್ತದೆ.[೧೫೪]

ಹಾವೇರಿ ಪರಿಸರ ಜೈನಶಾಸನಗಳು ಛಂದೋನಿಯಮಗಳಿಗೆ ಹೊರತಾದುವಲ್ಲ. ಇಲ್ಲಿ ಬಹುಮುಖ್ಯವಾಗಿ ಕಲ್ಯಾಣ ಚಾಳುಕ್ಯರ ಶಾಸನಗಳಲ್ಲಿ ಛಂದೋಲಯಗಳ ಅಳವಡಿಕೆಯಾಗಿದೆ. ಇಲ್ಲಿರುವ ದಾನಶಾಸನಗಳು ಚಂಪೂ ಮಾದರಿಯ ಗದ್ಯ-ಪದ್ಯ ಮಿಶ್ರಿತ ಶೈಲಿಯವು. ಅಂತಾಗಿ ಅಕ್ಷರಗಣಗಳಾದ ಖ್ಯಾತ ಕರ್ನಾಟಕ ವೃತ್ತಗಳು ಮತ್ತು ಮಾತ್ರಾಗಣದ ಕಂದಪದ್ಯವು ಹೆಚ್ಚಾಗಿ ಬಳಕೆಯಾಗಿವೆ. ಅಂಶಗಣದ ಕರ್ನಾಟ ವಿಷಯ ಜಾತಿ ಛಂದೋಪ್ರಕಾರಗಳು ಇದುವರೆಗೂ ಈ ಭಾಗದ ಜೈನಶಾಸನಗಳಲ್ಲಿ ಕಂಡುಬಂದಿಲ್ಲ. ಆದ್ದರಿಂದ ಶಾಸನಗಳಲ್ಲಿ ಬಳಕೆಯಾದ ಕಂದ ಮತ್ತು ಖ್ಯಾತ ಕರ್ನಾಟಕ ವೃತ್ತಗಳನ್ನು ಮಾತ್ರ ಅಭ್ಯಸಿಸಲಾಗಿದೆ.

ಕಾವ್ಯಕ್ಕೆ ನೂರಾರು ಕಣ್ಣುಗಳು. ಅವು ಎತ್ತಸವಿದರೂ ಬೆಲ್ಲದಚ್ಚುಗಳೆ. ಅಂತೆಯೇ ಕವಿ ಒಂದು ಕಾವ್ಯವನ್ನು ಕಟ್ಟಬೇಕಾದರೆ ಉತ್ಕೃಷ್ಟ ಬಂಧಗಳನ್ನು ಬಳಸಿರುತ್ತಾನೆ. ಛಂದಸ್ಸು, ಅಲಂಕಾರ ಪದ್ಯದ ಮುಖ್ಯ ಅಂಗಗಳು. ಇವುಗಳ ಸೊಬಗು ಹೆಚ್ಚಿಸಲು ಪ್ರಾಸ, ಯತಿಗಳನ್ನೂ ಬಳಸಿರುತ್ತಾನೆ. ಜೊತೆಗೆ ವಿಸ್ತಾರ ಭಾವಗಳ ಅನಾವರಣಕ್ಕೆ ಗದ್ಯಗಳನ್ನು ಅವನು ಬಳಸದೇ ಇರಲಿಲ್ಲ. ಶಾಸನಗಳಲ್ಲೂ ಈ ನಿಯಮಗಳನ್ನು ಯಥಾವತ್ತಾಗಿ ಶಾಸನ ಕವಿಗಳು ಅನುಸರಿಸಿದ್ದಾರೆ. ಈ ಕುರಿತಾದ ಅಭ್ಯಾಸ ಪ್ರಸ್ತುತ ಭಾಗದಲ್ಲಿದೆ.

**ಅ. ಕಂದ.**

ನರಸಿಂಹರಾಜಪುರದ ಸಿಂಹನಗದ್ದೆಯ ಜೈನಮಠದ ತಾಮ್ರಶಾಸನದಲ್ಲಿ ಕ್ರಿ.ಶ. ೭ನೆಯ ಶತಮಾನದಲ್ಲಿ ಗೋಚರವಾಗುವ ಕಂದ ಪದ್ಯ[೧೫೫] ಪ್ರಕಾರವು ಕನ್ನಡ ಶಾಸನಗಳಲ್ಲಿ, ಕಾವ್ಯಗಳಲ್ಲಿ

ಬಹುವಾಗಿ ಬಳಕೆಗೊಂಡಿದೆ. "ಕಂದ ಕನ್ನಡದ ಕವಿಗಳಿಗೆ ಅತೀ ಪ್ರಿಯವಾದ ಬಂಧ. ಇದಕ್ಕೆ ಕಾರಣವಿಲ್ಲದಿಲ್ಲ. ಕನ್ನಡದ ಗತಿಗೆ ಹೆಚ್ಚಿಗೆ ಹೊಂದಿಕೊಂಡು ಹೋಗುವ ಅಂಶಗಳು. ಜೊತೆಗೆ ಇಲ್ಲಿನ ಗೇಯತೆಯಿಂದಾಗಿ ಹೆಚ್ಚಿನ ಸಂಖ್ಯೆಯ ಶ್ರೋತೃಗಳಿಗೆ ಕರ್ಣಾನಂದವನ್ನು ನೀಡುವ ಬಂಧವಾಗಿರುವುದರಿಂದ, ಹೆಚ್ಚಿನ ಜನಪದ ಕವಿಗಳೂ ಕೂಡ ತಮ್ಮ ಅಭಿವ್ಯಕ್ತಿಗಳಿಗೆ ಕಂದವನ್ನೇ ಆಯ್ದುಕೊಂಡದುದರಲ್ಲಿ ಆಶ್ಚರ್ಯವಿಲ್ಲ".[೧೫೬]

ಕಂದವೆಂಬ ಹೆಸರು ಸ್ಕಂದಕದ ಪ್ರಾಕೃತ ರೂಪವಾದ ಖಂಥಅ > ಖಂಥ > ಕಂದ ಎಂದು ಪರಿವರ್ತನೆಗೊಂಡು ಹುಟ್ಟಿರುವುದು ಸಂಭವನೀಯ. ಕನ್ನಡ ಭಾಷೆ ಸಾಹಿತ್ಯಗಳ ಆರಂಭ ಕಾಲದಲ್ಲಿ, ಅದಕ್ಕೆ ಒದಗಿದ ಪ್ರಾಕೃತ ಭಾಷೆ ಸಾಹಿತ್ಯಗಳ ಸಂಪರ್ಕದಿಂದ ಈ ಮಾತ್ರಾವೃತ್ತವು ಕನ್ನಡ ಪದ್ಯಪದ್ಧತಿಗೆ ಸ್ವೀಕೃತವಾಗಿರುವಂತೆ ತೋರುತ್ತದೆ.[೧೫೭] ಸಂಸ್ಕೃತದಲ್ಲಿ 'ಆರ್ಯಾಗೀತಿ' ಎಂಬ ಹೆಸರು ಕಂದಕ್ಕಿದೆ. ಕನ್ನಡದಲ್ಲಿ ಮತ್ತು ತೆಲುಗಿನಲ್ಲಿ 'ಕಂದ' ಎಂಬ ಬಳಕೆ ಸಹಜವಾಗಿದೆ. ಕಂದ ಚಿಕ್ಕ ಮತ್ತು ಚೊಕ್ಕ ಲಯಗಟ್ಟನ್ನು ಹೊಂದಿದ ಪದ್ಯಜಾತಿ. ಸ್ವರೂಪ ಸಣ್ಣದಾದರೂ ಭಾವ ಹಿರಿದು. ಅಂತೆಯೇ ಪಂಪ, ಪೊನ್ನ, ರನ್ನ, ಜನ್ನ ಮುಂತಾದ ಕವಿಗಳ ಕಾವ್ಯಗಳಲ್ಲಿ ಹೆಚ್ಚು ಬಳಕೆಗೊಂಡಿತು. ಇದರ ಬಂಧುರತೆಗೆ ಮೆಚ್ಚಿ ೧ನೆಯ ನಾಗವರ್ಮ ತನ್ನ 'ಛಂದೋಬುಧಿ'ಯಲ್ಲಿ ಕೇಶಿರಾಜ 'ಶಬ್ದಮಣಿದರ್ಪಣ' ಎಂಬ ವ್ಯಾಕರಣ ಕೃತಿಯಲ್ಲಿ ಲಕ್ಷಣಗಳನ್ನು ಹೇಳುವಲ್ಲಿ ಕಂದಪದ್ಯವನ್ನು ಹೇರಳವಾಗಿ ಬಳಸಿಕೊಂಡಿದ್ದಾರೆ.

ಕಂದ ಪದ್ಯದಲ್ಲಿ ಒಟ್ಟು ನಾಲ್ಕು ಚರಣಗಳಿದ್ದು, ಒಂದು ಹಾಗೂ ಮೂರನೆಯ ಚರಣಗಳು ಪರಸ್ಪರ ಸಮನಾಗಿದ್ದು ೧೨ ಮಾತ್ರೆಗಳನ್ನು ಹೊಂದಿರುತ್ತವೆ. ಇನ್ನು ಎರಡು ಮತ್ತು ನಾಲ್ಕನೆಯ ಚರಣಗಳು ೨೦ ಮಾತ್ರಾ ವಿನ್ಯಾಸದಲ್ಲಿ ಪರಸ್ಪರ ಸಮಾನವಾಗಿರುತ್ತವೆ. ಇಲ್ಲಿರುವ ಎಲ್ಲ ಗಣಗಳು ನಾಲ್ಕು ಮಾತ್ರೆಯ ವಿನ್ಯಾಸದಲ್ಲಿ ಬರತಕ್ಕದ್ದು. ಆರನೆಯ ಸ್ಥಾನದಲ್ಲಿ ಜಗಣ (u-u) ಅಥವಾ ಸರ್ವ ಲಘು (uuuu) ವಿನ ಗಣಗಳು ಬಂದು, ವಿಷಮ ಸ್ಥಾನಗಳಲ್ಲಿ ಜಗಣ ಬರಕೂಡದು. ಎಂಟು ಹಾಗೂ ಹದಿನಾರನೆಯ ಗಣದ ಕೊನೆಯಲ್ಲಿ ಗುರು ಕಡ್ಡಾಯ. ಆರು ಹಾಗೂ ಏಳನೆಯ ಗಣದ ಮಧ್ಯ ಯತಿ ಬರಬೇಕು.

ಹಾವೇರಿ ಪರಿಸರದ ಜೈನ ಶಾಸನಗಳಲ್ಲಿ ಮೊಟ್ಟ ಮೊದಲ ಕಂದ ಪದ್ಯವು ಕ್ರಿ.ಶ. ೧೦೬೧ರ ಅರಟಾಳದ ಶಾಸನದಲ್ಲಿ ಒಡಮೂಡಿದೆ.[೧೫೮] ಈ ಪದ್ಯ ತ್ರುಟಿತವಾಗಿದ್ದು, ಕಂದಪದ್ಯದ ಲಕ್ಷಣಗಳನ್ನು ಹೊಂದಿದ್ದು, ಕೆಲವೊಂದು ನ್ಯೂನ್ಯತೆಗಳು ಎದ್ದುತೋರುತ್ತವೆ.

ಚಾಂದ್ರಾಂ ಕಾತಂತ್ರಂ ಜೈ
ನೇಂದ್ರಂ ಶಬ್ದಾನುಸಾಸನಂ ಪಾ . . . .

. . . . ಸೇನಮು
ನೀಂದ್ರಂಗೇಕಾಕ್ಷರಂ ಪೆಮಿಂಗಿವು ಮೊಗ್ಗೇ

ಕಂದ ಪದ್ಯದ ಲಕ್ಷಣದಂತೆ ಇಲ್ಲಿ ಬಹುತೇಕ ನಿಯಮ ಪಾಲನೆಯಾಗಿವೆ. ಆರನೆಯ ಗಣದ ನಂತರ ಯತಿ ಬಂದು ಪದ್ಯ ನಿತ್ಯ ಪ್ರಾಸದಿಂದ ಕೂಡಿದೆ. ಆದರೆ ಆರನೆಯ ಸ್ಥಾನದಲ್ಲಿ ಬರಬೇಕಾದ ಜಗಣ ಅಥವಾ ಸರ್ವಲಘು ಬರದೆ ರಗಣ (–u–) ಬಂದಿದೆ. ಇದು ನಿಯಮದ ವಿರುದ್ಧ. ಆದರೆ ಕವಿಯು ಸ್ವತಂತ್ರ. ಅವನಿಗೆ ಬಂಧನಗಳಿಲ್ಲ ಮೇಲಾಗಿ ಈ ಶಾಸನ ಕವಿ ಛಂದೋಗ್ರಂಥಗಳ ಪರಿಜ್ಞಾನ ಪಡೆದಿದ್ದನೋ ಎಂಬುದು ಮನಗಾಣಬೇಕು.

ಶಾಸನವನ್ನು ಗಮನಿಸಿದಾಗ ಒಂದು ಅಶುದ್ಧ ಚಂಪಕಮಾಲೆ ವೃತ್ತವನ್ನು ಒಂದು ಶುದ್ಧ ಮತ್ತೇಭ ವಿಕ್ರೀಡಿತ ವೃತ್ತವನ್ನು ಬಳಸಿದ್ದಾನೆ. ಆದ್ದರಿಂದ ಶಾಸನ ಕವಿಗೆ ಪೂರ್ಣ ಪ್ರಮಾಣದ ಛಂದೋಪ್ರಜ್ಞೆ ಇಲ್ಲದಂತೆ ಕಾಣುತ್ತದೆ. ಅಂತೆಯೇ ಅವನು ೬ನೆಯ ಗಣದಲ್ಲಿ ಜಗಣ ಪ್ರಯೋಗವನ್ನು ತಂದಿಲ್ಲ. ಕಂದದ ಶುದ್ಧ ಪ್ರಯೋಗವನ್ನು ಕ್ರಿ.ಶ. ೧೧೪೮ರ ನೇರಲಗೆಯ ಶಾಸನದಲ್ಲಿ ಗಮನಿಸಬಹುದು.

ಬಲ್ಲಹನೆನೆ ನೆಗದ್ರ್ಧಾಹವ
ಮಲ್ಲಂ ಕೊಡೆಯಡಪ ಮಂದಳಂ ಸೀಗಿರಿಯೆಂ
ಬೆಲ್ಲಾ ಚಿಹ್ನಮನದಟರ
ಮಲ್ಲಂ ದಡಿಗಂಗೆ ಕೊಟ್ಟನನ್ಾದರದಿಂ.[೧೫]

ನೆಗದ್ರ್ಧಾಹವ ಎಂಬಲ್ಲಿ ಶಿಥಿಲದ್ವಿತ್ವ ಪದಪ್ರಯೋಗವಾಗಿದ್ದು. 'ದ್ರ್ಧಾ' ಎಂಬುದು ಶಿಥಿಲದ್ವಿತ್ವ. ಆದ್ದರಿಂದ ಆ ಅಕ್ಷರದ ಹಿಂದಿನ ಅಕ್ಕರಕ್ಕೆ ಗುರುವನ್ನು ಹಾಕದೆ ಲಘುವನ್ನು ಹಾಕಬೇಕು. ಒಟ್ಟಿನಲ್ಲಿ ಹೇಳುವುದಾದರೆ ಕಂದ ಪದ್ಯವು ಕಾವ್ಯಗಳಿಗಿಂತ ಮುಂಚೆಯೇ ಶಾಸನಗಳಲ್ಲಿ ಪ್ರಯೋಗಗೊಂಡು ತದನಂತರ ಕಾವ್ಯಗಳಲ್ಲಿ ಸ್ವಚ್ಛಂದವಾಗಿ ವಿಹರಿಸಿತು. ಹಾವೇರಿ ಪರಿಸರದ ಅರಟಾಳ [(ಕ್ರಿ.ಶ. ೧೦೬೧) ಮತ್ತು (೧೧೨೨)], ಬೆಳವಂತಿ (ಕ್ರಿ.ಶ. ೧೦೭೬–೧೧೨೫), ಬಾಳೇಹಳ್ಳಿ (ಕ್ರಿ.ಶ. ೧೧೪೬) ಮುಂತಾದ ದಾನಶಾಸನಗಳು, ಅಕ್ಕೂರು (೧೨ನೇ ಶ), ಹೇರೂರು (ಕ್ರಿ.ಶ. ೧೨೬೯), ಹಿರೇಅಣಜಿ (ಕ್ರಿ.ಶ. ೧೨೭೩), ಆಡೂರು (೧೩ನೇ ಶ) ಇತ್ಯಾದಿ ನಿಸಿಧಿ ಶಾಸನಗಳಲ್ಲಿ ಪ್ರಯೋಗಗೊಂಡಿದೆ. ಹಾವೇರಿ ವೀರಭದ್ರದೇವಾಲಯದ ತೊಲೆಯ ಮೇಲಿರುವ ೧೩ನೆಯ ಶತಮಾನದ ಶಾಸನ ಒಂದೇ ಒಂದು ಕಂದಪದ್ಯದಲ್ಲಿ ರಚನೆಯಾಗಿದ್ದು, ಅಷ್ಟರಲ್ಲಿಯೇ ಕರ್ತೃವಿನ ಹೆಸರು, ಅವನ ಗುಣಾವಳಿ, ಶಾಸನದ ಉದ್ದೇಶ, ಸೋದಾಹರಣವಾಗಿ ನಿರೂಪಿತವಾಗಿದೆ.

ಪರಹಿತ ಚರಿತಂ ಪಾವನ
ತರತತ್ವ ವಿಚಾರನಮಳ ಗುಣಮಣಿ ಕೋಶಂ
ಸುರಚಿತ ನವ ಪದಮಂ ಮಾ
ದರಸಂ ಮಾಡಿಸಿದ ನೆಸೆಯೆ ಜಿನಮಂದಿರದೊಳ್.[೧೬೦]

**ಬ. ಖ್ಯಾತ ಕರ್ಣಾಟಕ ವೃತ್ತಗಳು.**

ಮಾತ್ರಾಗಣಗಳು ಲಘು, ಗುರುಗಳ ವಿನ್ಯಾಸದಿಂದ, ಅಂಶಗಣ ಛಂದೋಲಯಗಳು 'ಅಂಶ'ಗಳಿಂದ ಗುರುತಿಸಲ್ಪಟ್ಟರೆ ವೃತ್ತಗಳು ಅಕ್ಷರ ಸಂಯೋಜನೆಯಿಂದ ವಿಭಾಗಿಸಲ್ಪಡುತ್ತವೆ. ಇವುಗಳಲ್ಲಿ ಸಾಮಾನ್ಯವಾಗಿ ಮೂರು ವಿಧ. ಸಮವೃತ್ತ, ಅರ್ಧಸಮವೃತ್ತ, ವಿಷಮವೃತ್ತ. ಸದ್ಯ ಹಾವೇರಿ ಪರಿಸರದ ಜೈನಶಾಸನಗಳಲ್ಲಿ ಸಮವೃತ್ತಗಳು ಬಳಕೆಯಾಗಿದ್ದು ಅವುಗಳ ಬಗ್ಗೆ ವಿವೇಚಿಸಲಾಗಿದೆ. ಈ ಪ್ರದೇಶದ ಶಾಸನಗಳಲ್ಲಿ ಚಂಪಕ, ಉತ್ಪಲ, ಮತ್ತೇಭ ವಿಕ್ರೀಢಿತ, ಮಹಾಸ್ರಗ್ಧರಾ ಎಂಬ ಖ್ಯಾತಕರ್ಣಾಟಕದ ನಾಲ್ಕು ವೃತ್ತಗಳು ಬಳಕೆಯಾಗಿವೆ. ಉಳಿದೆರಡು ವೃತ್ತಗಳಾದ ಶಾರ್ದೂಲ ವಿಕ್ರೀಢಿತ ಮತ್ತು ಮಹಾಸ್ರಗ್ಧರಾವೃತ್ತಗಳು ಬಳಕೆಗೊಂಡಿಲ್ಲ. ಈ ಆರು ವೃತ್ತಗಳನ್ನು ನಾಗವರ್ಮ ತನ್ನ ಛಂಧೋಬುಧಿಯಲ್ಲಿ 'ಖ್ಯಾತ ಕರ್ಣಾಟಕಂ' ಎಂದು ಕರೆದು ಅವುಗಳ ಲಕ್ಷಣಗಳನ್ನು ಈ ರೀತಿ ಶ್ರುತಿಸಿದ್ದಾನೆ.

ಗುರುವೊದಾದಿಯೊಳುತ್ಪಲಂ ಗುರು ಮೊದಲ್ಮೂರಾಗೆ ಶಾರ್ದೂಲಮಾ
ಗುರು ನಾಲ್ಕಾಗಿರಲಂತು ಸ್ರಗ್ಧರೆ ಲಘು ದ್ವಂಧ್ವಗುರುದ್ವಂಧ್ವಮಾ
ಗಿರೆ ಮತ್ತೇಭ ಲಘುದ್ವಯ ತ್ರಿಗುರುವಿಂದಕ್ಕುಂ ಮಹಾಸ್ರಗ್ಧರಂ
ಹರಿಣಾಕ್ಷಿ ಲಘು ನಾಲ್ಕು ಚಂಪಕಮಿವಾಱುಂ ಖ್ಯಾತಕರ್ಣಾಟಕಂ.[೧೬೧]

"ಕನ್ನಡ ಮೂಲತಃ ಹ್ರಸ್ವ ಪ್ರಧಾನವುಳ್ಳ ಭಾಷೆ. ಇಲ್ಲಿ ೨-೩ ವರ್ಣಗಳಿಗಿಂತ ಪ್ರಕೃತಿರೂಪಗಳು ಕಡಿಮೆ. ಹೀಗಾಗಿ ಪದ, ವಾಕ್ಯ ರಚನೆಗಳೆಲ್ಲವೂ ಹ್ರಸ್ವದತ್ತ. ಸಮಾಸಗಳಿಂದ ಬಹುದೂರ. ಆದ್ದರಿಂದ ಒಂದು ಭಾಷೆ ತನ್ನ ಜಾಯಮಾನಕ್ಕನುಸರಿಸಿ ಅಭಿವ್ಯಕ್ತಿಯ ಮಾಧ್ಯಮವನ್ನು ಆಯ್ಕೆ ಮಾಡಿಕೊಳ್ಳುವುದು ಸಹಜ. ಇಂಥ ಸಹಜ ಸ್ವಭಾವಕ್ಕನುಗುಣವಾಗಿ ಚಂಪೂ ಕವಿಗಳು ಮೇಲಿನಾರು ವೃತ್ತಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಬಳಕೆ ಮಾಡಿಕೊಂಡಿರುತ್ತಾರೆ."[೧೬೨]

ಖ್ಯಾತಕರ್ಣಾಟಕ ವೃತ್ತಗಳು ಸಮವೃತ್ತಗಳಾಗಿದ್ದು ನಾಲ್ಕು ಪಾದಗಳಿಂದ ಕೂಡಿರುತ್ತವೆ. ನಾಲ್ಕು ಪದಗಳು ಪರಸ್ಪರ ಸಮನಾಗಿದ್ದು, ಅವುಗಳ ಲಕ್ಷಣಕ್ಕೆ ಅನುಗುಣವಾಗಿ ಒಂದೇ ರೀತಿಯ ಅಕ್ಷರ ಸಂಯೋಜನೆಯನ್ನು ಹೊಂದಿರುತ್ತವೆ. ಸಾಮಾನ್ಯವಾಗಿ ಇವುಗಳ ಮೊದಲ ಪಾದದ

ಲಕ್ಷಣವನ್ನು ಉಳಿದ ಮೂರು ಪಾದಗಳು ಹೊಂದಿರುತ್ತವೆ. ಹಾವೇರಿ ಪರಿಸರದ ಜಿನಶಾಸನಗಳಲ್ಲಿ ಬಳಕೆಯಾದ ವೃತ್ತಗಳನ್ನು ಅವುಗಳ ಹೆಚ್ಚಳಕ್ಕೆ ತಕ್ಕಂತೆ ಅನುಕ್ರಮವಾಗಿ ಇಲ್ಲಿ ಅಭ್ಯಸಿಸಲಾಗಿದೆ.

## ೦೧. ಚಂಪಕ ಮಾಲಾ ವೃತ್ತ.

ಕನ್ನಡ ಕವಿಗಳ ಮನವನ್ನಾಕರ್ಷಿಸಿದ ವೃತ್ತ ಇದು. ಮಧುರ ಭಾವಗಳಾದ ಶೃಂಗಾರ, ಭಕ್ತಿ, ಕರುಣೆ, ಸ್ನೇಹಾಭಿವ್ಯಕ್ತಿಯಂತಹ ಸೂಕ್ಷ್ಮ ಭಾವಗಳನ್ನು ಈ ವೃತ್ತದಲ್ಲಿ ಸುಲಭವಾಗಿ ಹಿಡಿದಿಡಬಹುದು. 'ಭಾರತವು ಕರ್ಣರಸಾಯನ' ಎಂಬ ಸ್ನೇಹವನ್ನು ವ್ಯಕ್ತಪಡಿಸುವ ಭಾವನೆಗಳನ್ನು ಆದಿಕವಿ ಪಂಪ ಇದೇ ವೃತ್ತದಲ್ಲಿ ವ್ಯಕ್ತಪಡಿಸಿದ್ದಾನೆ. ನಾಗವರ್ಮನು ಈ ವೃತ್ತದ ಲಕ್ಷಣವನ್ನು ಈ ರೀತಿಯಾಗಿ ಹೇಳಿದ್ದಾನೆ. 'ನಜಭಜಜಂಜರಂ ಬಗೆಗೊಳ್ಳುತ್ತಿರೆ ಚಂಪಕಮಾಲೆಯೆಂದಪರ್'[೧೬೩] ಇದರಲ್ಲಿ ಒಟ್ಟು ೨೧ ಅಕ್ಷರಗಳಿದ್ದು ನ,ಜ,ಭ,ಜ,ಜ,ಜ,ರ ಎಂಬ ೦೭ ಗಣಗಳು ಬರುತ್ತವೆ. ನಾಲ್ಕು ಪಾದಗಳಿದ್ದು ಒಂದಕ್ಕೊಂದು ಪರಸ್ಪರ ಸಮನಾಗಿರುತ್ತವೆ.

ಹಾವೇರಿ ಪರಿಸರದ ಜೈನಶಾಸನಗಳಲ್ಲಿ ಚಂಪಮಾಲಾವೃತ್ತದ ಬಳಕೆ ಹೇರಳವಾಗಿದ್ದು, ದಾನ ಶಾಸನಗಳಲ್ಲಿ ಮತ್ತು ನಿಸಿಧಿ ಶಾಸನಗಳಲ್ಲೂ ಬಳಕೆಯಾಗಿದೆ. ನಿಸಿಧಿ ಶಾಸನಗಳಲ್ಲಿ ಬಳಕೆಯಾದ ಏಕೈಕ ವೃತ್ತ ಇದು. ಈ ವೃತ್ತದ ಬಳಕೆ ಪ್ರಥಮವಾಗಿ ಕ್ರಿ.ಶ. ೧೧೨೨ರ ಅರಟಾಳ ಶಾಸನದಲ್ಲಿ ಬಳಕೆಗೊಂಡಿದೆ. ತದನಂತರ ಬೆಳವತ್ತಿ, ದೇವಗಿರಿ, ಬಾಳೆಯಹಳ್ಳಿ, ನೇರಲಗಿ, ಹುಲಗೂರು ನದಿಹರಳಹಳ್ಳಿ, ಹೆರೂರು, ಸುಣಕಲ್ಲಬಿದರಿ, ಬಾಳೂರು, ಸಂಗೂರು ಶಾಸನಗಳಲ್ಲಿ ಬಳಕೆಗೊಂಡಿದೆ. ಈ ಭಾಗದ ಪ್ರಥಮ ಚಂಪಕ ಮಾಲಾ ವೃತ್ತದ ಬಳಕೆ ಈ ರೀತಿ ಪ್ರಬುದ್ಧವಾಗಿ ಬಂದಿದೆ.

> ಅನುಪಮರೆಂದು ಬಣ್ಣಿಪುದನಾನಱುಯೆಂ ತನುಕಲ್ಲ ಕಂಭದ
> ನ್ತೆನಿತು ಪರಿಕ್ಷಹ ಪ್ರಬಳಭಾರ ಮನಾನ್ತುದು ಚಿತ್ತವಾತ್ಮಭಾ
> ವನೆಯೊಡಗೂಡಿತೀ ಕನಕಚಂದ್ರ ಮಹಾಮುನಿಪಂಗೆ ಕಾಲವ
> ತ್ತನದವ ಸರ್ಪ್ಪಣಂ ನೆಗಳದಿರ್ದ್ದಡೆ ನೆಟ್ಟನೇರಿಧ್ಧಿಪುಟ್ಟದೇ.[೧೬೪]

## ೦೨. ಉತ್ಪಲಮಾಲಾ ವೃತ್ತ.

'ಉತ್ಪಲಮಾಲೆಯಪ್ಪುದು ಭರಂನಭಭಂರಲಗಂ ನೆಗಜ್ಜುರಲ್'[೧೬೫] ಎಂದು ಛಂದೋಂಬುಧಿಯಲ್ಲಿ ಹೇಳಿದ ಲಕ್ಷಣದಂತೆ ಉತ್ಪಲಮಾಲೆಯಲ್ಲಿ ೨೦ ಅಕ್ಷರಗಳು ಬಂದು, ಒಟ್ಟು ಮೂರು ಅಕ್ಷರಗಳ ಆರು ಗಣಗಳಿರುತ್ತವೆ. ಕೊನೆಗೆ ಒಂದು ಲಘು ಒಂದು ಗುರು ಬರುತ್ತದೆ. ಚಂಪಕ ಮಾಲೆಯ ತದನಂತರ ಅತೀ ಹೆಚ್ಚು ಈ ವೃತ್ತ ಬಳಕೆಯಾಗಿದ್ದು ಹಾವೇರಿ ಜೈನಶಾಸನಗಳಲ್ಲಿ ಕಂಡುಬರುತ್ತದೆ. ಅರಟಾಳ, ಬೆಳವತ್ತಿ, ನೇರಲಗಿ, ನದಿಹರಳಹಳ್ಳಿ ಶಾಸನಗಳಲ್ಲಿ

ಕಂಡುಬರುವ ಈ ವೃತ್ತವು ಮೊದಲು ಕ್ರಿ.ಶ. ೧೧೨೨ರ ಅರಟಾಳದ ಜಿನಶಾಸನದಲ್ಲಿ ಬಳಕೆಯಾಗಿದೆ. ವೀರ, ಆವೇಶಗಳ ಭಾವಾಭಿ ವ್ಯಕ್ತಿಗಳಿಗೆ ಇದು ಯೋಗ್ಯವಾದ ವೃತ್ತ.

ವೀರಮನೋಭವ ಪ್ರಬಳದರ್ಪ್ಪ ವಿಭಂಜನರುದ್ಧತತ್ರಿದಂ
ಡಾರಿಕುಳಾಚಳೇಂದ್ರ ಕುಳಿಶರ್ಕ್ಕಲಿಕಾಲವಿಮೋಹ ರಾಜನಿ
ದ್ಧಾರ್ಗರಕರನ್ಯ ಶೂನ್ಯಮತಸನ್ತಮಸೋದಯ ಚಂದ್ರರೆಂದು ವಿ
ಸ್ತಾರದೆ ಬಣ್ಣಿಕುಂ ಕನಕಚಂದ್ರಮುನೀಂದ್ರನನೀಜಗಜ್ಜನಂ.[೧೬೬]

## ೦೩. ಮತ್ತೇಭ ವಿಕ್ರೀಢಿತ ವೃತ್ತ.

ಮತ್ತೇಭ ಎಂದರೆ ಮದಗಜ. ರೋಷಾವೇಶದ ಭಾವಗಳನ್ನು, ಗಾಂಭೀರ್ಯದ ಭಾವಗಳನ್ನು ವ್ಯಕ್ತಪಡಿಸಲು ಈ ವೃತ್ತ ಅನುಕೂಲಕರವಾದದ್ದು. ಕೆಲವೊಂದು ಸಾರಿ ಭಕ್ತಿಗೆ ದುಃಖದ ಭಾವಗಳನ್ನು ಮತ್ತೇಭ ವಿಕ್ರೀಢಿತ ವೃತ್ತಕ್ಕೆ ಅಳವಡಿಸಲಾಗುತ್ತದೆ. ಇದರ ಲಯ ಮಂದಗತವಾಗಿದ್ದು ಗೋನಾಳಿಯನ್ನ ಔತುಕಿ ಬರುವ ದು:ಖ-ಭಕ್ತಿಯ ಭಾವವನ್ನು ಸ್ಫುರಿಸಲು ಹೆಚ್ಚು ಸೂಕ್ತ. ನಾಗವರ್ಮನು ಛಂಧೋಬುಧಿಯಲ್ಲಿ ಈ ವೃತ್ತದ ಲಕ್ಷಣ 'ಸಬರಂನಂಮಯಲಂಗಮುಂ ಬಗೆಗೊಳಲ್ ಮತ್ತೇಭ ವಿಕ್ರೀಡಿತಂ'[೧೬೭] ಎಂದಿದ್ದಾನೆ. ಇಲ್ಲಿ ನಾಲ್ಕು ಚರಣಗಳಿದ್ದು, ಚರಣವೊಂದರಲ್ಲಿ ಒಟ್ಟು ೨೦ ಅಕ್ಷರಗಳಿರುತ್ತವೆ. ಸ,ಭ,ರ,ನ,ಮ,ಯ ಎಂಬ ಆರು ಗಣಗಳು ಬಂದು ಕೊನೆಯಲ್ಲಿ ಒಂದು ಲಘು ಒಂದು ಗುರು ಬರಬೇಕು. ಪ್ರತಿ ಪಾದಗಳು ಪರಸ್ಪರ ಸಮನಾಗಿದ್ದು ಆದಿಪ್ರಾಸದಿಂದ ಕೂಡಿರುತ್ತವೆ. ಹಾವೇರಿ ಪರಿಸರದಲ್ಲಿ ಈ ವೃತ್ತ ಬಳಕೆಯಲ್ಲಿ ಮೂರನೆಯ ಸ್ಥಾನದಲ್ಲಿದ್ದು ಪ್ರಥಮವಾಗಿ ಕ್ರಿ.ಶ. ೧೦೭೧ರ ಅರಟಾಳದ ಶಾಸನದಲ್ಲಿ ಕಂಡುಬರುತ್ತದೆ. ಆ ಪದ್ಯ ಹೀಗಿದೆ.

ಹರಿರಾಜ ಧ್ವಜ ಸಪ್ತಸಪ್ತತಿ ಕದಂಬಾಧೀಶ ಪೆರ್ಮ್ಮಟ್ಟಿತೂ
ರ್ಯ್ಯರವಾಷ್ಟಾದಶ ವಾಜಿಮೇಧ ಚತುರಗ್ರಾಶೀತಿ ಸಂಖ್ಯಾಪುರೇ
ಶ್ವರ ರುದ್ರಾನ್ವಯ ಸಿಂಹಲಕ್ಷ್ಮ ಹಿಮಸ್ಶೈಲೇಂದ್ರೋ ಪರಿಸ್ಥಾಪಿತ
ಸ್ಥಿರಶಕ್ತ್ಯುಧ್ವ ಹಿರಣ್ಯಗರ್ಭ್ಭ ಮಹಿಮಂ ಕಾದಂಬ ಚಕ್ರೇಶ್ವರ.[೧೬೮]

ಈ ವೃತ್ತವು ಹಾವೇರಿ ಪರಿಸರದ ಅರಟಾಳ, ಕರಗುದರೆ, ನೇರಲಗೆ, ಕಾಗಿನೆಲೆ ನದಿಹರಳಹಳ್ಳಿ, ಸಂಗೂರು ಶಾಸನಗಳಲ್ಲಿ ಪ್ರಯೋಗಗೊಂಡಿದೆ.

## ೦೪. ಮಹಾಸ್ರಗ್ಧರಾ ವೃತ್ತ.

ಖ್ಯಾತಕರ್ಣಾಟಕ ವೃತ್ತಗಳಲ್ಲಿ ದೊಡ್ಡ ವೃತ್ತ ಮಹಾಸ್ರಗ್ಧರೆ. ೨೨ ಅಕ್ಷರಗಳನ್ನು ಹೊಂದಿದ ಈ ವೃತ್ತ ಸ,ತ,ತ,ನ,ಸ,ರ,ರ ಎಂಬ ಏಳು ಗಣಗಳು ಕೊನೆಗೆ ಒಂದು ಗುರುವನ್ನು ಒಳಗೊಂಡಿರುತ್ತದೆ. ಗಾಂಭಿರ್ಯ, ಕೌತುಕ ಭಾವಗಳನ್ನು ವ್ಯಕ್ತಪಡಿಸಲು ಈ ವೃತ್ತ ಅನುಕೂಲ. ಕ್ರಿ.ಶ. ಸು ೬೫೦ರ ಶ್ರವಣಬೆಳಗೊಳದ ಸಂದಿಸೇನ ಮುನಿಯ 'ಸುರಚಾಪಂಬೋಲೆ'[೧೯೯] ಪದ್ಯ ಈ ಮಹಾಸ್ರಗ್ಧರಾ ವೃತ್ತದಲ್ಲಿದೆ. ಇದು ಕರ್ನಾಟಕದ ಮೊದಲ ಮಹಾಸ್ರಗ್ಧರಾ ವೃತ್ತವೂ ಹೌದು. ನಾಗವರ್ಮನ ಈ ವೃತ್ತದ ಲಕ್ಷಣವನ್ನು ಛಂದೋಂಬುಧಿಯಲ್ಲಿ ಈ ರೀತಿ ಹೇಳಿದ್ದಾನೆ. "ಸತತಂನಂಸಂರಮಗಂ ನೆರೆದೆಸೆಯ ಮಹಾಸ್ರಗ್ಧರಾವೃತ್ತಮಕ್ಕುಂ"[೨೦೦] ಹಾವೇರಿ ಪರಿಸರದಲ್ಲಿ ಈ ವೃತ್ತದ ಪ್ರಯೋಗ ಕ್ರಿ.ಶ. ೧೦೬೬ರ ಮೋಟೇಬೆನ್ನೂರು ಶಾಸನದಲ್ಲಿ ಮೊದಲು ಪ್ರಯೋಗಗೊಂಡಿದೆ.

> ಪ್ರಭು ಮಂತ್ರೋತ್ಸಾಹ ಶಕ್ತಿತ್ರಯಗುಣವಿದಿತಂ ರಾಜಿಮಯ್ಯಂ ಮಹಾಮಾ
> ತ್ಯಭರಂ ಸದ್ವಾಚನಾಲೇಖನಗಣನನಗುಣಸ್ತುತ್ಯನಿಸ್ತಾಯ್ಜಿಮಯ್ಯಂ
> ವಿಭು ಸೌಜನ್ಯಾಂಕುರಂ ಪಣ್ಡಿತಕುವಳಯಸಂರಾಜ ಗೋವಿನ್ದರಾಜಂ
> ವಿಭವಾತ್ತಂ ಧೋರಪಾರ್ಯ್ಯಂ ಸುಜನಜನಮನೋರಂಜನರ್ದ್ಧರ್ಮ್ಮನಮ್ಮರ್.[೨೦೧]

ಹಾವೇರಿ ಪರಿಸರದ ನೇರಲಗೆ, ನದಿಹರಳಹಳ್ಳಿ, ಮಂತಗಿ, ಸಂಗೂರು ಮಹಾಸ್ರಗ್ಧರಾ ವೃತ್ತ ಬಳಕೆಯಾಗಿದ್ದನ್ನು ಕಾಣಬಹುದು.

## ಕ. ಗದ್ಯ.

'ಪದ್ಯಂ ವದ್ಯಂ ಗದ್ಯಂ ಹೃದ್ಯಂ' ಎಂಬ ಮುದ್ದಣನ ಮಾತು ಗದ್ಯಕ್ಕೆ ಇರುವ ಪ್ರೀತಿಯನ್ನು ತೋರುತ್ತದೆ. ಮುದ್ದಣನ ಕಾಲಕ್ಕಾಗಲೇ ಕನ್ನಡ ಸಾಹಿತ್ಯ ಪದ್ಯದಿಂದ ಗದ್ಯದ ಕಡೆಗೆ ವಾಲುತ್ತಿರುವ ಸೂಚನೆಯಿದು. ಆದರೆ ಶಾಸನದಲ್ಲಿ ಮೊದಮೊದಲು ಗದ್ಯರಚನೆಗಳೆ ಬಳಕೆಗೊಂಡು ಅನಂತರ ಪದ್ಯರಚನೆಗಳು ಸಮ್ಮಿಳಿತವಾದುವು. ಕನ್ನಡ ಮೊದಲ ಶಾಸನ ಹಲ್ಮಿಡಿ ಶಾಸನವು ಗದ್ಯದಲ್ಲಿಯೇ ಇದೆ. ಸಾಮಾನ್ಯವಾಗಿ ಶಾಸನಗಳಲ್ಲಿ ಗದ್ಯವನ್ನು ರಾಜನ ಪ್ರಶಸ್ತಿ, ದಾನಕೊಟ್ಟ ವಿವರ, ದಾನಕೊಟ್ಟ ಮೇರೆ ಗುರುತಿಸಲು, ಕೆಲವೊಂದು ಶಾಸನಗಳಲ್ಲಿ ಶಾಪಾಶಯಗಳನ್ನು ಹೇಳುವಲ್ಲಿ ಬಳಸಿಕೊಳ್ಳಲಾಗಿದೆ. ಆರಂಭದ ಅದರಲ್ಲೂ ರಾಷ್ಟ್ರಕೂಟರ ಶಾಸನಗಳಲ್ಲಿ ಶಾಪಾಶಯಗಳ ಕೆಲವು ಭಾಗಗಳು ಗದ್ಯದಲ್ಲೂ ಬಂದಿವೆ. ಶಾಸನಗಳು ಕಾವ್ಯ ಭೂಯಿಷ್ಠವಾದಾಗ ಗದ್ಯವನ್ನು ವಚನ ಎಂದು ಗುರುತಿಸಲಾಗಿದೆ. ಹಾವೇರಿ ಪರಿಸರದ ಜೈನಶಾಸನಗಳ ಕೆಲವೊಂದು ಗದ್ಯ ಸಾಹಿತ್ಯ ಮಾದರಿಗಳನ್ನು ಈ ರೀತಿ ನೋಡಬಹುದು.

ಬನವಾಸಿ ಕದಂಬರ ವಿಜಯ ಶಿವಮೃಗೇಶವರ್ಮನ ನಾಲ್ಕನೆಯ ವರ್ಷದ ದೇವಗಿರಿ ತಾಮ್ರಶಾಸನದ ಗದ್ಯಭಾಗ ಸಂಸ್ಕೃತದಲ್ಲಿದ್ದರೂ ಕಾವ್ಯತ್ವದ ಗುಣಗಳನ್ನು ಹೊಂದಿದೆ. ಶಿವಮೃಗೇಶವರ್ಮನ ಪ್ರಶಸ್ತಿ ಗುಣಾವಳಿಯನ್ನು ಗರ್ಭೀಕರಿಸಿಕೊಂಡಿರುವ ಈ ಗದ್ಯದಲ್ಲಿ ಲಯ, ಶಬ್ದಾಲಂಕಾರ ಸಮಾಸಗಳಿಗೇನು ಕೊರತೆಯಿಲ್ಲ.

"ಸವಿಶುದ್ಧ ಪಿತೃಮಾತೃವಂಶಃ ಉಭಯಲೋಕ ಪ್ರಿಯಹಿತಕರಾನೇಕಶಾಸ್ತ್ರಾರ್ಥ ತತ್ವ ವಿಜ್ಞಾನ ವಿವೇಚನ ವಿನಿವಿಷ್ಟ ವಿಶಾಲೋದಾರಮತಿಃ ಹಸ್ತ್ಯಶ್ವಾರೋಹಣ ಪ್ರಹರಣಾದಿಷು ವ್ಯಾಯಾಮಿಕೀಷು ಭೂಮಿಷು ಯಥಾವತ್ಕೃತಶ್ರಮಃ ದಕ್ಷೋ ದಕ್ಷಿಣಃ ನಯವಿನಯ ಕುಶಲಃ ನೈಕಾಹವಾರ್ಜ್ಜಿತ ಪರಮದೃಢಸತ್ವ: ಉದಾತ್ತಬುದ್ಧಿ ಧೈರ್ಯವೀರ್ಯ್ಯತ್ಯಾಸಮ್ಪನ್ನಃ ಸುವಹತಿ ಸಮರಸುಜ್ಝಟೇ ಸ್ವಭುಜಬಲ ಪರಾಕ್ರಮಾಪ್ತವಿಪುಲೈಶ್ವರ್ಯ್ಯ: . . . . ."[೧೭೨]

ಕ್ರಿ.ಶ. ಸು ೭೫೦ರ ಬಾದಾಮಿ ಚಲುಕ್ಯರ ಆಡೂರು ಶಾಸನದ ಒಂದು ಗದ್ಯ ದಾನ, ದಾನದ ಮೇರೆ, ಶಾಪಾಶಯ, ದಾನಸ್ವೀಕರಿಸಿದ ವ್ಯಕ್ತಿ ವಿವರಗಳನ್ನು ಈ ರೀತಿಯಾಗಿ ಒಳಗೊಂಡಿದೆ. ಶಾಪಾಶಯ ಸಾಧುವಾಗಿರುವುದು ಈ ಗದ್ಯದ ವಿಶೇಷ.

. . . . . "ಹವಿರಕ್ಷತ ಗನ್ಧ ಪುಷ್ಪಾದಿಗಳ್ಗೆ ಕರ್ಮಗಾಲೂರಾ ಪಡುವಣ ಮಟ್ಟ . . . ಯ ಕೇಱಗೆ ಎಣ್ಬು ಮತ್ತಲ್ಗಱ್ದಿ ರಾಜಮಾನಂ ಜಿನೇನ್ದ್ರಭವನಕ್ಕಿತ್ತೋರಿದಾ ನಾರ್ಸಲಿಪ್ಪೊರವರ್ತ್ತೆ ಧರ್ಮಮಾರಾರಿದಾ ಕಿಡಿಪ್ಪೋರವರ್ತ್ತೆ ಪಾಪಂ ಪರಲೂರಾ ಚೇದಿಯಬ್ಬಱಿ ಪ್ರಭಾಚನ್ದ್ರಗುರಾವರ್ಪಡೆದ. . ."[೧೭೩]

ರಾಷ್ಟ್ರಕೂಟರ ಕಾಲದಲ್ಲಿ ಹೇರಳವಾಗಿ ಲಭ್ಯವಾಗುವ ಗೋಸಾಸನಗಳು ಸಾಮಾನ್ಯವಾಗಿ ಗದ್ಯದಲ್ಲಿ ರಚನೆಯಾಗಿರುತ್ತವೆ. ಅಂತೆಯೇ ಕೆಲವೊಂದು ನಿಸಿಧಿ ಶಾಸನಗಳು ಗದ್ಯವನ್ನೇ ಆಯ್ದುಕೊಂಡಿರುತ್ತವೆ. ಗೋಸಾಸ ಮತ್ತು ನಿಸಿಧಿಗಳು ಸ್ಮಾರಕಪ್ರಧಾನ ಸಂಸ್ಕೃತಿಗಳಾದ್ದರಿಂದ ಸರಳಗದ್ಯವಿರುತ್ತದೆ. ಶ್ರವಣಬೆಳಗೊಳದ ನಂದಿಸೇನಮುನಿಯ ಕೆಲವು ನಿಸಿಧಿಗಳಲ್ಲಿ ಪದ್ಯ ಬಳಸಿರುವುದು ಕಂಡುಬರುತ್ತಾದರೂ ಅದು ಸಾರ್ವತ್ರಿಕವಾಗಿಲ್ಲ. ಸದ್ಯ ೯ನೆಯ ಶತಮಾನದ ಹಿರೂರು (ಹಾನತಾ) ಗೋಸಾಸ + ನಿಸಿಧಿಯ ಸರಳ ಗದ್ಯ ಉದಾಹರಣೆಗೆ ಯೋಗ್ಯ. ಗೋಸಾಸ + ನಿಸಿಧಿ ಒಟ್ಟೊಟ್ಟಿಗೆ ಇರುವ ಅಪರೂಪದ ಸ್ಮಾರಕವಿದು.

"ಗೋಸಹಸ್ರಮಿೞ್ದು ಸನ್ಯಸನಗೆಯ್ದು ಮುಡಿಪಿದ
ಆತನ ತಮ್ಮ ಮನ್ನಯ್ಯನು ಮಗಸುತ್ತವಯ್ಯನು
ಮಿರ್ಬ್ಬರುಮಿೞ್ದು ಕಲ್ಲನಿರಿಸಿದರು ಮಜ್ಗಳ"[೧೭೪]

ಕಲ್ಯಾಣ ಚಾಳುಕ್ಯರ ಕಾಲಾವಧಿಯಲ್ಲಿ ಶಾಸನಗದ್ಯದ ಸ್ವರೂಪ ಬದಲಾಗಿ ಕಾವ್ಯ ಸ್ವರೂಪದ ಗುಣಲಕ್ಷಣಗಳನ್ನು ಪಡೆಯಿತು. ಸಾಹಿತ್ಯ ಕೃತಿಗಳ ಪ್ರಭಾವ ಇವರ ಶಾಸನಗಳ ಮೇಲೆ ಆಗದಿರಲಿಲ್ಲ. ಗದ್ಯವನ್ನು ವಚನ ಎಂದು ಹೆಸರಿರುವ ರೂಢಿ ಇವರ ಕಾಲದಲ್ಲಿಯೇ ಬಂದಂತೆ ತೋರುತ್ತದೆ. ಕದಂಬ ಕಾಮದೇವನ ರಾಣಿಯಾದ ಲಚ್ಚಲದೇವಿಯ ಗುಣಾವಳಿಯನ್ನು ಶಿಲ್ಪಿಸುವ ಒಂದು ಗದ್ಯ ಕ್ರಿ.ಶ. ೧೧೬೧ರ ಅರಟಾಳ ಶಾಸನದಲ್ಲಿದ್ದು ಸೋದಾಹರಣವಾಗಿ ರಚಿತವಾಗಿದೆ. ಶಬ್ದಾಲಂಕಾರ, ಉಪಮಾಲಂಕಾರ, ಲಯದಿಂದ ತುಂಬಿದ ಈ ವಚನ ಯಾವ ಛಂದೋ ಪದ್ಯಗಳಿಗೇನು ಕಡಿಮೇ ಇಲ್ಲ.

"ಆ ಕಾದಂಬ ಚಕ್ರೇಶ್ವರ . . . . . . . . . . . . . . . ಸ್ವಸ್ತ್ಯನವರತ ಪರಮ ಕಲ್ಲ್ಯಾಣಾಭ್ಯುದಯ ಸಹಸ್ರಫಳ ಭೋಗಭಾಗಿನಿ ದ್ವಿತೀಯ ಲಕ್ಷ್ಮಿ ಸಮಾನೆ ತ್ಯಾಗನಿಧಾನೆ ಶ್ರೀಂಗಾರ ಗಂಗಾತರಂಗಣಿ ದಾನಚಿನ್ತಾಮಣಿ ಗೌರಿಲಬ್ದವರ ಪ್ರಸಾದೆ ಚಂಪಕಾಮೋದೆ ವಿವೇಕ ವಿಧ್ಯಾಧರಿ ಸಕಳ ಕಳಾಧರಿ ಗೋತ್ರ ಪವಿತ್ರೆ ಶ್ರಿಮದರಿಕೇಸರಿದೇವ ಮನಸ್ಸರೋವರ ರಾಜಹಂಸೆಯರಪ್ಪ ಶ್ರೀಮಲ್ಲಚಲದೇವಿಯರ್"[೧೭೫]

ಕಾಲ, ದಾನ, ಉದ್ದೇಶ, ದಾನದ ಪ್ರಮಾಣ, ದಾನದ ಮೇರೆಗಳನ್ನು ಗುರುತಿಸುವ ಒಂದು ಗದ್ಯ ಸಾಕಷ್ಟು ವಿವರಗಳನ್ನು ಒದಗಿಸುತ್ತದೆ ಎಂಬುದಕ್ಕೆ ಕ್ರಿ.ಶ. ೧೧೬೮ರ ನದಿಹರಳಹಳ್ಳಿಯ ಶಾಸನ ಸಾಕ್ಷಿಯಾಗಿ ನಿಲ್ಲುತ್ತದೆ.

"ಸಕವರ್ಷ ೧೦೯೦ನೆಯ ೧೫ನೆಯ ಸರ್ವ್ವಧಾರಿ ಸಂವತ್ಸರದ ಚೈತ್ರದ ಪುಣ್ಣಮಿ ಸೋಮವಾರ ಸೋಮಗ್ರಹಣದಂದು ಅರಸಿಗಾವುಂಡಿಯುಂ ನಾಗಗಾವುಂಡನುಂ ತಂಮ ಮಾಡಿಸಿದ ಚೈತ್ಯಾಲಯಕ್ಕೆ ಬಿಟ್ಟ ಧರ್ಮವೆಂತೆಂದಡೆ ರಿಷಿಯರರಾಹಾರ ದಾನಕ್ಕಂ ಅಜ್ಜಿಯರಾಹಾರದಾನಕ್ಕಂ ಖಂಡಸ್ಪುಟಿತ ಜಿರ್ನ್ನೋರ್ದ್ಧಾರಣಕ್ಕಂ ಬಿಟ್ಟ ತೋಂಟ ಹಿರಿಯ ಕೆರೆಯ ಕೆಳಗೆ ತುಂಬಿನ ಮೊದಲಲು ತೋಂಟ ಅಡಕೆಯ ಮರಂ ನಾಲ್ನೂಱು ಸಿಡಿಲಗೇಱಿಯ ಕೆಳಗೆ ತುಂಬಿದಂ ಕೆಳಗೆ ಗದ್ದೆ ಮತ್ತರೊಂದು ಊರಿಂದಂ ಬಡಗಲೋಣಿಯಿಂದಂ ಹಡುವಲು ಎರಕೆಯಿ ೧೦ ಮತ್ತರು ಮೂಱು ಸಿಡಿಲಗೆರೆಯ ತೆಂಕಣ ಕೋಡಿಯ ಕೆಳಗೆ ಹಾಳಕೆಯಿ ಮತ್ತರೊಂದು"[೧೭೬] ಎಲ್ಲ ಪದಗಳನ್ನು ಪದ್ಯ ಭಾವದಲ್ಲಿ ಹಿಡಿದಿಡಲು ಕಷ್ಟಸಾಧ್ಯ. ಅದು ಗದ್ಯದಲ್ಲಿ ಮಾತ್ರ ಸಾಧಿತವಾಗುತ್ತದೆ. ಗದ್ಯ ವಿಶಾಲವಾದ ಬಯಲಲ್ಲಿ ಹರಿವ ನದಿ ಎಂಬಂತೆ ಮೇಲಿನ ಗದ್ಯದಲ್ಲಿ ಒಡಮೂಡಿದೆ.

ಹಾವೇರಿ ಪರಿಸರದ ಜೈನಶಾಸನಗಳು ನಿಸಿಧಿಮಯವಾದ ಕಾಲ ಸೇವುಣರ ಆಡಳಿತಾವಧಿಯದ್ದು. ನಿಸಿಧಿ ಶಾಸನಗಳು ನೇರ ನಿರೂಪಣೆಯಾದ್ದರಿಂದ ಗದ್ಯದ ಬಳಕೆಯೇ ಹೆಚ್ಚು. ಸಮಾಧಿ ಹೋದ ವ್ಯಕ್ತಿ, ವ್ರತಬೋಧಿಸಿದ ನಿರ್ಯಾಪಕಾಚಾರ್ಯ, ಅವನ ಗಣ, ಗಚ್ಛ,

ಅನ್ವಯ ಪರಂಪರೆ ದಾಖಲಿಸುವುದು ಮುಖ್ಯ ಉದ್ದೇಶ. ಆದ್ದರಿಂದ ಗದ್ಯದ ನೇರ ಮತ್ತು ಸರಳ ನಿರೂಪಣೆ ಇವುಗಳಲ್ಲಿರುತ್ತದೆ. ವ್ರತಧಾರಿಯ ವಿಶೇಷ ಗುಣಗಳನ್ನು ಪದ್ಯ ರೂಪದಲ್ಲಿ ಹೆರೂರು ಕನಕವ್ವೆ (ಚಂಪಕಮಾಲಾ ವೃತ್ತ) ಸುಣಕಲ್ಲಬಿದರೆಯ ಬೊಪ್ಪಿಸೆಟ್ಟಿ (ಚಂಪಕಮಾಲಾವೃತ್ತ) ನಿಸಿಧಿ ಶಾಸನಗಳಲ್ಲಿ ಬಳಸಲಾಗಿದೆ. ಆದರೂ ನಿಸಿಧಿಗಳಲ್ಲಿ ಗದ್ಯದ ಬಳಕೆಯೇ ಹೆಚ್ಚು. ೨ನೆಯ ಸಿಂಹಣದೇವನ ಕಾಲಾವಧಿಯ ಕ್ರಿ.ಶ. ೧೨೪೧ರ ಕಡಕೋಳದ ನಿಸಿಧಿ ಶಾಸನದ ಸರಳ ಗದ್ಯ ನಿರೂಪಣೆಯೊಂದು ಈ ರೀತಿಯಿದೆ.

> "ಸ್ವಸ್ತಿ ಶ್ರೀಮತು ಯಾದವ ನಾರಾಯಣಭುಜಬಳ ಪ್ರತಾಪ ಚಕ್ರವರ್ತ್ತಿ
> ಸಿಂಹಣದೇವ ವರ್ಷ ೩೧ ಪರಾಭವ ಸಂವತ್ಸರದ ಮಾರ್ಗ್ಗಶಿರ ಸುದ
> ಪಂಚಮಿ ಬ್ರಹಸ್ಪತಿ ವಾರದಲು ಸೂರಸ್ಥಗಣದ ಮೂಲಸಂಘದ ಶ್ರೀನಂದಿ
> ಭಟ್ಟಾರಕದೇವರ ಗುಡ್ಡ ಕಡಕುಳದ ಸಾವಂತ ಬೊಪ್ಪಗೌಡನ ಹೆಗ್ಗಡೆ
> ಸೋಮಯ್ಯನು ಸಮಾಧಿಯಿಂ ಮುಡಿಪಿ ಸ್ವರ್ಗ್ಗ ಪ್ರಾಪ್ತನಾದ ಮಂಗಳ ಮಹಾಶ್ರೀ"[೧೭೭]

ವಿಜಯನಗರ ಅರಸರ ಹಾವೇರಿ ಪರಿಸರದ ಜಿನಶಾಸನಗಳಲ್ಲಿ ನಿಸಿಧಿಗಳೇ ಇರುವುದರಿಂದ ಅಲ್ಲಿಯೂ ಸರಳ ಗದ್ಯದ ಶೈಲಿ ಅನುಸರಣೆಯಾಗಿದೆ. "ಪೂರ್ಣವಾಗಿ ಗದ್ಯದಲ್ಲಿರುವ ಶಾಸನಗಳು ಸಂಖ್ಯೆಯ ದೃಷ್ಟಿಯಿಂದ ಗೌಣವಾಗಿದ್ದರೂ ಶಾಸನಗಳಲ್ಲಿ ಗದ್ಯದ ನಾನಾ ರೂಪಗಳನ್ನು ಕಾಣಬಹುದು. ಗದ್ಯ ತನ್ನ ನಿಜವಾದ ಸ್ವರೂಪದಲ್ಲಿ ಕಾಣಿಸಿಕೊಂಡಿರುವುದು ಶಾಸನಗಳಲ್ಲಿಯೆ. ಪ್ರೌಢವಾದ ಗದ್ಯ ಬೇಕೆ, ಸಂಸ್ಕೃತ ಭೂಯಿಷ್ಠವಾದ ಗದ್ಯ ಬೇಕೆ, ಪೆಡಸಾದ ಗದ್ಯ ಬೇಕೆ, ಶ್ಲೇಷಾರ್ಥದಿಂದ ಕೂಡಿದ ಗದ್ಯ ಬೇಕೆ ವ್ಯಾವಹಾರಿಕ ಗದ್ಯ ಬೇಕೆ, ದೇಸಿ ಚಲುವಿನಿಂದ ಕೂಡಿದ ಗದ್ಯ ಬೇಕೆ ಈ ಎಲ್ಲವೂ ಶಾಸನಗಳಲ್ಲಿ ದೊರೆಯುತ್ತದೆ."[೧೭೮]

## ಡ. ಪ್ರಾಸಗಳು.

ಪ್ರಾಸ ಕವಿತ್ವದ ಪ್ರಕ್ರಿಯೆಗಳಲ್ಲಿ ಒಂದು. ಪ್ರಾಸ ಎಂದರೆ ಏನೆಂಬುದಕ್ಕೆ ಕವಿರಾಜಮಾರ್ಗಕಾರ ಹೀಗೆ ಹೇಳಿದ್ದಾನೆ.

> ಪಾದದೊಳೆರಡನೆಯಕ್ಕರ
> ಮಾದರದಿಂದಾದುದಾವುದದನಜೆದನಿತುಂ
> ಪಾದದೊಳಿಡುವುದದಕ್ಕುಂ
> ಭೇದೋಕ್ತಿಕ್ರಮವಿಚಾರಿತೋರುಪ್ರಾಸಂ.

ಎಂದರೆ ಪದ್ಯದ ಪ್ರತಿಪಾದದಲ್ಲಿಯೂ ಆದಿಯಲ್ಲಿ ಎರಡನೆಯಕ್ಷರ ಒಂದೇ ವಿಧವಾಗಿರುವುದು ಪ್ರಾಸ ಎನಿಸುವುದು.[೧೭೯] ಹಾವೇರಿ ಪರಿಸರದ ಲಭ್ಯ ಜೈನಶಾಸನಗಳ ಪದ್ಯದಲ್ಲಿ ಬಹುತೇಕ ಆದಿಪ್ರಾಸ ಪ್ರಯೋಗಗೊಂಡಿದೆ. ಆದಿಪ್ರಾಸದಲ್ಲಿ ಸಿಂಹ, ಗಜ, ವೃಷಭ, ಅಜ, ಹಯ ಶರಭಗಳೆಂದು ನಾಗವರ್ಮ ಛಂದೋಬುಧಿಯಲ್ಲಿ ಸೂಚಿಸಿದ್ದಾನೆ. ಈ ಪ್ರಯೋಗಗಳು ಹಾವೇರಿ ಪರಿಸರದ ಜೈನಶಾಸನಗಳಲ್ಲಿ ಲಭ್ಯವಿವೆ. ಶರಭ ಪ್ರಾಸದ ಪ್ರಯೋಗಗಳು ಇದುವರೆಗೂ ಲಭ್ಯವಿಲ್ಲ.

ಪಾದದ ಆದಿಯಲ್ಲಿ ಒಂದೆರಡನೆಯ ಸ್ವರಗಳ ನಡುವೆ ಒಂದೇ ತೆರನಾದ ವ್ಯಂಜನ ಬಂದು ಹಿಂದಿನ ಸ್ವರವು ಹ್ರಸ್ವವಾಗಿದ್ದರೆ ಅದು ಸಿಂಹಪ್ರಾಸವೆನಿಸುತ್ತದೆ. ಉದಾಹರಣೆಗೆ ನದಿಹರಳಹಳ್ಳಿಯ ಶಾಸನದ ಒಂದು ಕಂದಪದ್ಯವನ್ನು ಗಮನಿಸಬಹುದು.

> ಪಿಕವರದಿಂ ತೆಂಬೆಲರಿಂ
> ಶುಕಶತ ಚಾರುಪ್ರಚಾರದಿದೆಳೆನೀರಿಂ
> ವಿಕಸಿತ ವನರುಹವನದಿಂ
> ಸಕಳೇಂದ್ರಿಯ ತೃಪ್ತಿಚತುರ ವಿಷಯಂ ವಿಷಯಂ.[೧೮೦]

ಪ್ರಾಸ ವ್ಯಂಜನದ ಹಿಂದಿನ ಸ್ವರವು ದೀರ್ಘವಾಗಿದ್ದರೆ ಗಜಪ್ರಾಸವಾಗುತ್ತದೆ.

> ಶ್ರೀಕಾಂತಮೆನಿಸಿ ಭರತ ಮ
> ಹೀ ಕಾಂತೆಗೆ ಕುಂತಳಂಬೊಲೆಸಗುಂ ವಿಷಯಂ
> ಲೋಕನುತಂ ಕುಂತಳಮಂ
> ತಾಕುಂತಳ ವಿಷಯ ಮಧ್ಯದೊಳ್ಸೊಗಯಿಸುಗುಂ.[೧೮೧]

ವೃಷಭಪ್ರಾಸದ ಲಕ್ಷಣ ಪ್ರಕಾರ ಪ್ರಾಸಾಕ್ಷರದ ಹಿಂದೆ ಅನುಸ್ವರ ಬರಬೇಕು.

> ಸಿಂಗದ ಕೇಸರಂ ಹುಲಿಯ ಮೆಯ್ದೊವಲುಗ್ರವಿಷೋರಗೇನ್ದ್ರನು
> ತ್ತುಂಗ ಫಣಾಳಿರತ್ನಮೆನಿಸಿರ್ಪ್ಪುವು ಮತ್ತಿನವನ್ದಿರರ್ತ್ಥವೇ
> ಸಂಗತವೆಮ್ಮ ಮಲ್ಲನ ಧನಂ ಜಿನಯೋಗಿಗೆ ಜೈನಗೇಹದು
> ತ್ತುಂಗತೆಗಾಶ್ರಿತಂಗೆ ಸಮಸಂದುದು ಸಿದ್ಧರಸಂ ಸುಧಾರಸಂ.[೧೮೨]

ಪಾದದ ಆದಿಯಲ್ಲಿ ಒಂದೆರಡನೆಯ ಸ್ವರಗಳ ಮಧ್ಯೆ ಒಂದೇ ರೀತಿಯ ವ್ಯಂಜನ ಬಂದು ಪ್ರಾಸಾಕ್ಷರದ ಹಿಂದೆ ವಿಸರ್ಗ (ಃ) ಇದ್ದರೆ ಅದು ಅಜಪ್ರಾಸವೆನಿಸುತ್ತದೆ. ಹಾವೇರಿ ಪರಿಸರದ ಜೈನಶಾಸನಗಳಲ್ಲಿ ಈ ಪ್ರಾಸ ಪ್ರಯೋಗಗೊಂಡ ಶಾಸನ ಪದ್ಯಗಳು ಲಭ್ಯವಿಲ್ಲ.

ಪ್ರಾಸಸ್ಥಾನದ ವ್ಯಂಜನಾಕ್ಕರವು ಸಜಾತಿಯ ದ್ವಿತ್ವದಿಂದ ಕೂಡಿದ್ದರೆ ಅದು ಹಯಪ್ರಾಸವೆನಿಸುತ್ತದೆ.

ಪುಟ್ಟಿದನಂತವರ್ಗ್ಗೆಜಿಕನೆಂಬ ಮಹಾಪ್ರಭು ವಂಶವರ್ಧನಂ
ಜೆಟ್ಟಿಗನರ್ಹದಂಘ್ರಿ ನಳಿನಾನತಭೃಂಗನುದಾರಿ ಬಿಙ್ಪು ಮಾ
ರ್ಕಟ್ಟಳೆಯಾಯ್ತು ಮಂದರನಗಕ್ಕೆ ಬಣಂಜುಕುಳಕ್ಕೆ ನಾಳ್ಕೆ ತ
ನ್ನಿಟ್ಟುವೆ ಬೊಟ್ಟು ಕಟ್ಟಿದುದೆ ಕಣ್ಡಿಕೆ ಬಿಟ್ಟುದೆ ತಾಂಬ್ರಶಾಸನಂ.[೧೮೩]

ಶರಭಪ್ರಾಸದ ಮುಖ್ಯ ಲಕ್ಷಣ ಪ್ರಾಸಾಕ್ಷರವು ವಿಜಾತಿಯ ದ್ವಿತ್ವಾಕ್ಷರವನ್ನು ಹೊಂದಿರುತ್ತದೆ.

ಸತ್ಯತ್ಯಾಗಾಭಿಮಾನ್ನೋನ್ನತವ . . . . . ಗಾರ್ಯ್ಯಂಗಳೆನ್ನು
ನಿತ್ಯೋದ್ಯೋಗಂಗೆ ನೋಡಿಲ್ತೆನಿತುಮವಿಕಲಂ ಮೆಯ್‌ಗುಣಂಗಳ್‌ನಿತಾನ್ತಂ
ಪ್ರತ್ಯಕ್ಷಂ ಲೋಕರೂಢಂ ಸಲೆ ತನಗಿವು ತಾಂ . . .
ನಿತ್ಯಮಮ್ಮಾ . . ಟ್ಟಿದ್ದಿತ್ಯನ್ತಂ ಕ್ಷೇತ್ರಮಾಗುತ್ತಮಾ.[೧೮೪]

## ಗ. ಅಲಂಕಾರಗಳು.

ಕವಿಯ ಪ್ರತಿಭೆ ಭಾಷೆಯಮೂಲಕ ವ್ಯಕ್ತವಾದಾಗ ಒಡಮೂಡುವ ಶಬ್ದವೈಚಿತ್ರ್ಯಗಳೇ ಅಲಂಕಾರಗಳು. "ಕಾವ್ಯದ 'ಗುಣ', 'ರೀತಿ', ಅಂಶಗಳೇ ಅಲಂಕಾರವೆಂದು ವಿವಿಧ ಅಲಂಕಾರಿಕರ ಅಭಿಪ್ರಾಯಗಳೂ ಉಂಟು."[೧೮೫] ಅವುಗಳ ಚರ್ಚೆಯನ್ನು ಇಲ್ಲಿ ಮಾಡದೇ ಶಾಸನದಲ್ಲಿ ವ್ಯಕ್ತವಾದ ಕೆಲವು ಅಲಂಕಾರದ ವಿಧಗಳನ್ನು ಮಾತ್ರ ಅಭ್ಯಸಿಸಲಾಗಿದೆ. ಹಾವೇರಿ ಜೈನಶಾಸನಗಳಲ್ಲಿ ರೂಪಕ, ಉಪಮಾ, ಶ್ಲೇಷ ಅಲಂಕಾರ ಎಂಬ ಮೂರು ಬಗೆಯ ಅರ್ಥಾಲಂಕಾರಗಳು ಹೇರಳವಾಗಿ ದೊರಕುತ್ತವೆ. ಅವುಗಳ ಸಂಕ್ಷಿಪ್ತ ವಿವೇಚನೆ ಅವಶ್ಯ.

## ೦೧. ರೂಪಕ ಅಲಂಕಾರ.

ಉಪಮಾನ ಉಪಮೇಯ ಎರಡೂ ಒಂದೇ ಎನ್ನುವ 'ಅಭೇದ ಕಲ್ಪನೆ' ಮಾಡುವುದೇ ರೂಪಕಾಲಂಕಾರ ಎನಿಸುತ್ತದೆ. ಸಂಗೂರ ಸಂಗಮ ಎನ್ನುವ ವ್ಯಕ್ತಿಯು ಸಂನ್ಯಸನ ವಿಧಾನದಿಂದ

ಮರಣಿಸಿದಾಗ ಪ್ರಜೆಗಳ, ಬಂಧುಗಳ ದು:ಖದ ಚಿತ್ರಣ ಒಂದು ಸೋದಾಹರಣವಾದ ರೂಪಕ ಅಲಂಕಾರಕೆ ಉದಾಹರಣೆ

> ಪ್ರಜೆ ಮಱುಗಿತ್ತು ಪಂಡಿತಜನಂ ಬೆಱಗಾದುದು ಯಾಚಕಾಳಿ ನೀ
> ರಜ ಮುರಿತಾಗಿದಂತೆ ಕಡುಗಂದಿದುವಂಧಕರಾಗೆ ಬಂಧುಗ
> ಳು ಜನರ ಸಂಭ್ರಮಂ ಪರಿದುದಧೃತಿವೆತ್ತರನಾಥರಂಜಿದ
> ರ್ಭುಜಗಮುಡರ್ದ್ದವೋಲ್ಗರ ಜನರ್ಗ್ಗುಣಿ ಸಂಗಮನಸ್ತಮಾನದೊಳು.[೧೮೬]

ಜನರ ಗುಣಿ ಎನ್ನುವುದು ಇಲ್ಲಿ ರೂಪಕವಾಗಿ ಬಂದಿದೆ. ಪ್ರಜೆಗಳ, ಬಂಧುಗಳ, ಅನಾಥರ ಜನರ ಗುಣಿಯಾಗಿದ್ದ ಸಂಗಮ ಎಂದು ವರ್ಣಿಸುವ ಶಾಸನ ಗುಣಕ್ಕೆ ಮತ್ತು ಸಂಗಮನಿಗೆ ಅಭೇದ್ಯ ಕಲ್ಪಿಸಿದೆ. ಕ್ರಿ.ಶ. ೧೨೪೫ರ ಹೇರೂರು ಕನಕಾಂಬಿಕೆಯ ನಿಸಿಧಿ ಶಾಸನದಲ್ಲಿ ಕನಕಾಂಬಿಕೆಯನ್ನು ಮತ್ತು ಅವಳು ಸಾವನ್ನು ಆಹ್ವಾನಿಸುವ ಧೈರ್ಯಕ್ಕೆ ಅಭೇದ್ಯ ಕಲ್ಪಿಸಲಾಗಿದೆ. ಅರಟಾಳ ಶಾಸನವೊಂದರಲ್ಲಿ ಲಚ್ಚಲದೇವಿಯನ್ನು ದಾನಚಿಂತಾಮಣಿ, ತ್ಯಾಗ ನಿಧಾನೆ ಎಂದಿರುವುದು ರೂಪಕಕ್ಕೆ ಪ್ರಮಾಣವಾಗುತ್ತದೆ.

### ೦೨. ಉಪಮಾಲಂಕಾರ.

ಎರಡು ವಸ್ತುಗಳು, ವ್ಯಕ್ತಿಗಳು, ವಸ್ತು–ವ್ಯಕ್ತಿಗಳ ಪರಸ್ಪರ ಹೋಲಿಕೆ ಕಲ್ಪಿಸುವುದೇ ಉಪಮಾಲಂಕಾರ. ಉಪಮಾ ಎಂದರೆ ಹೋಲಿಕೆ ಎಂದರ್ಥ. ಯಾವ ಅಲಂಕಾರದಲ್ಲಿ ಉಪಮೇಯ–ಉಪಮಾನಗಳೊಳಗೆ ಹೋಲಿಕೆ ಇರುತ್ತದೆಯೋ ಅದು ಉಪಮಾಲಂಕಾರ. ಇದರಲ್ಲಿ ಎರಡು ವಿಧ ೧. ಪೂರ್ಣೋಪಮಾಲಂಕಾರ ೨. ಲುಪ್ತೋಮಾಲಂಕಾರ. ಈ ಎರಡು ಅಲಂಕಾರಗಳು ಹಾವೇರಿ ಪರಿಸರದ ಜೈನಶಾಸನಗಳಲ್ಲಿ ಬಳಕೆಯಾಗಿವೆ.

### ೨.೧ ಪೂರ್ಣೋಪಮಾಲಂಕಾರ.

ಉಪಮೇಯ, ಉಪಮಾನ, ಉಪಮವಾಚಕ, ಸಮಾನಧರ್ಮಗಳು ಪೂರ್ಣವಾಗಿ ಬಂದಾಗ ಅದು ಪೂರ್ಣೋಪಮಾಲಂಕಾರ ಎನ್ನಿಸುತ್ತದೆ. ಈ ಎಲ್ಲ ಅಂಶಗಳು ಪುಲಿಗೆರೆಯ ಸೌಂದರ್ಯವನ್ನು ವರ್ಣಿಸುವ ಸಂಗೂರು ಶಾಸನದಲ್ಲಿ ವ್ಯಕ್ತಗೊಂಡಿವೆ.

> ಲಲಿತವನಮಾಲೆಯಿಂದಂ
> ಆಲಜಾಕರನಿಕರದಿಂದೆ ಬಹುಚೈತ್ಯಗೃಹಾ
> ವಳಿಯಿಂದಂ ಕರಮೆಸೆವುದು
> ಪುಲಿಕರಪುರಮದು ಸುರೇಂದ್ರನಮರಾವತಿಯೋಲ್.[೧೮೭]

ಇಲ್ಲಿ ಉಪಮೇಯ ಪುಲಿಕರ, ಉಪಮಾನ ಸುರೇಂದ್ರನ ಅಮರಾವತಿ, ಉಪಮವಾಚಕ ವೊಲ್, ಸಮಾನಧರ್ಮ ಕರಮೆಸೆವುದು ಆಗಿವೆ.

### ೨.೨ ಲುಪ್ತೋಮಾಲಂಕಾರ.

ಉಪಮೇಯ ಉಪಮಾನ, ವಾಚಕಪದ ಸಮಾನಧರ್ಮ ಈ ನಾಲ್ಕು ಅಂಶಗಳಲ್ಲಿ ಒಂದು ಅಂಶ ಇಲ್ಲವಾದರೆ ಅಂಥಹ ಹೋಲಿಕೆ ಲುಪ್ತೋಮಾಲಂಕಾರವೆನಿಸುತ್ತದೆ. ಹಾವೇರಿ ಪರಿಸರದ ಜೈನ ಶಾಸನಗಳಲ್ಲಿ ಈ ರೀತಿಯ ಅಲಂಕಾರಗಳು ಶಾಸನಗಳುದ್ದಕ್ಕೂ ಕಾಣಸಿಗುತ್ತವೆ.

'ದ್ವಿತೀಯ ಲಕ್ಷ್ಮೀ ಸಮಾನೆ', ಎಂದು ಲಕ್ಷ್ಮೀಗೆ ಲಚ್ಚಲದೇವಿಯನ್ನು ಹೋಲಿಕೆ ಮಾಡಿರುವುದು,[೧೮೮] ಚಲಕ್ಕೆ ಬಲ್ಗಂಡ, ಶೌರ್ಯ ಮಾರ್ತಾಂಡ, ಮನುಜಮಾನ್ಧಾತಂ, ಸಂಗ್ರಾಮ ಗರುಡ, ಚಾಳುಕ್ಯ ಆಭರಣ ಎಂದು ಒಂದನೆಯ ಸೋಮೇಶ್ವರನನ್ನು ವರ್ಣಿಸಿರುವುದು, ನುಡಿ ಕಲ್ಲೊಳ್ 'ಕಡೆದಕ್ಕರಕ್ಕೆಮಱುವಕ್ಕಂ' ಎಂದು ದಡಿಗನನ್ನು ವರ್ಣಿಸಿರುವುದು, ಅವನ ಸೊಸೆಯಾದ ದೇವಲಬ್ಬೆಯನ್ನು 'ಜಿನಮತಕೆ ಶಾಸನದೇವಿ' ಎಂದು[೧೮೯] ವರ್ಣಿಸಿರುವುದ ಲುಪ್ತೋಮೆಗಳಾಗುತ್ತವೆ

### ೨.೩ ಶ್ಲೇಷಾಲಂಕಾರ.

ಒಂದೇ ಪದದಲ್ಲಿ ನಾನಾರ್ಥಗಳನ್ನಿಟ್ಟು ಆ ಅರ್ಥಗಳ ಮೂಲಕವಾಗಿ ವಿವಿಧಾರ್ಥದಲ್ಲಿ ವರ್ಣಿಸುವುದೇ ಶ್ಲೇಷಾಲಂಕಾರ. ಉದಾಹರಣೆಗೆ ಗಂಧವಾರಣ. ಗಂಧವಾರಣ ಎಂದರೆ ಶ್ರೇಷ್ಠಜಾತಿಯ ಆನೆ, ಮದಗಜ ಎಂದೂ ಮತ್ತು ಮಗ, ಪ್ರತಾಪಿ ಮಗ, ಎಂದೂ ಅರ್ಥ ಬರುತ್ತದೆ. ಕಾಳಗಾವುಂಡನ ಮಗನಾದ ಆದಿತ್ಯವರ್ಮ ಯುದ್ಧ ಮಾಡುವ ಸನ್ನಿವೇಶದ ರೀತಿಯನ್ನು ಮದಗಜದ ಪರಾಕ್ರಮಕ್ಕೆ ಹೋಲಿಸುವ ೧೨ನೆಯ ಶತಮಾನದ ಕಾಗಿನೆಯ ಶಾಸನದ ಒಂದು ಪದ್ಯದಲ್ಲಿ ಶ್ಲೇಷಾಲಂಕಾರವನ್ನು ಸ್ಪಷ್ಟವಾಗಿ ಗುರುತಿಸಬಹುದು.

> ಪಱುಗುಂ ನೆರ್ಕ್ಕನೆ ವೈರಿಯೆಂಬ ತೊಡರಂ ವಿದ್ವಿಷ್ಟರಂ ಸಜ್ಜಿನ
> ಲ್ನೆಱೆಸೀಱುದ್ಧಿಕ್ಕಿಯೆ ದುಷ್ಟ ದಾಯಿಗರ ನಿಟ್ಟೆಲ್ವಂ ಬಿರಿಲ್ಲೆಂಬಿನಂ
> ಮುಱುದೀಡಾಡಿ ನಭೋನ್ತದೊಳ್ ನಿಲಿಸಿ ಕೋಡೇಱಂ ನಿಜೋತ್ಸಾಹದಿಂ
> ಮೇಱೆಗುಂ ಕಾಳನ ಗನ್ಧವಾರಣ ಮೇಲೆ ಜೇಹಯ್ಯ ಬಾಪ್ಪೆಂಬಿನಂ.[೧೯೦]

ಹೀಗೆ ಶಾಸನಗಳು ಕೇವಲ ಐತಿಹಾಸಿಕ ವಿವರಗಳನ್ನಷ್ಟೇ ಒಳಗೊಂಡ ಸರಕುಗಳಲ್ಲ ಅವುಗಳಲ್ಲಿ ಸಾಹಿತ್ಯ ಮತ್ತು ಅದರ ಅಂಗಗಳಾದ ಛಂದಸ್ಸು, ಅಲಂಕಾರ ಇತರೆ ಅಂಶಗಳು ಇರುತ್ತವೆ ಎಂಬುದನ್ನು ಪ್ರಸ್ತುತ ಅಧ್ಯಯನದಲ್ಲಿ ತೋರಿಸಲು ಪ್ರಯತ್ನಿಸಲಾಗಿದೆ.

## ೦೩. ಪ್ರಶಸ್ತಿ ಭಾಗ.

ರಾಜನ ಸಾಹಸ, ಪರಾಕ್ರಮ, ದಿಗ್ವಿಜಯದ ಗುಣಾವಳಿಯ ಹೊಗಳಿಕೆಯನ್ನು ಸಾಮಾನ್ಯವಾಗಿ ಪ್ರಶಸ್ತಿ ಎಂದು ಕರೆಯಲಾಗುತ್ತದೆ. "ಇವುಗಳಲ್ಲಿ ಎರಡು ವಿಧ ೧. ಶುದ್ಧವಾದ ರಾಜನ ದಿಗ್ವಿಜಯವನ್ನು ಕೀರ್ತಿಸುವಂತಹವು. ೨. ರಾಜನೊಬ್ಬ ದೇವಾಲಯ ಕಟ್ಟಿಸಿದ್ದನೋ ತಟಾಕವೊಂದನ್ನು ನಿರ್ಮಿಸಿದ್ದನೋ ಹೇಳಲು ಹೋಗಿ ಅದನ್ನು ಗೌಣಮಾಡಿ ರಾಜನ ದಿಗ್ವಿಜಯವನ್ನು ಕೀರ್ತಿಸುವಂತಹವು. ಇದಕ್ಕೆ ಅಲಹಾಬಾದ್ ಸ್ತಂಭಶಾಸನ, ಕಾಕುಸ್ಥವರ್ಮನ ತಾಳಗುಂದ ಶಾಸನ, ರವಿಕೀರ್ತಿಯ ಐಹೊಳೆಯ ಶಾಸನ, ವಿಷ್ಣುವರ್ಧನನ ಬೇಲೂರಿನ ಶಾಸನ ಮೊದಲಾದವು ಉದಾಹರಣೆಯಾಗಿ ಸಿಗುತ್ತವೆ. ಸಾಮಾನ್ಯವಾಗಿ ಪ್ರಶಸ್ತಿ ಶಾಸನಗಳನ್ನು ಬಹುಪ್ರಸಿದ್ಧರಾದ ಕವಿಗಳು ರಚಿಸುತ್ತಿದ್ದರಿಂದ ಪ್ರೌಢಕಾವ್ಯಗಳಲ್ಲಿ ಕಂಡುಬರುವ ಶ್ಲೇಷ, ಅಲಂಕಾರ ಅಲ್ಲಿನ ಪದ್ಯಜಾತಿಗಳು ಮೊದಲಾದವು ಕಂಡುಬರುತ್ತವೆ. ಪ್ರಶಸ್ತಿ ಶಾಸನಗಳು ನಾಡಿನ ರಾಜಕೀಯ ಇತಿಹಾಸವನ್ನು ಪುನಾರಚಿಸಲು ಬಹುವಾಗಿ ನೆರವಿಗೆ ಬರುತ್ತವಾದರು ಈ ಶಾಸನಗಳನ್ನು ಹೇಳಲು ರಚಿಸಿದಂತೆ ಕಂಡುಬರುತ್ತದೆ."[೯೧] ಕವಿಗಳು ಆಯಾ ರಾಜನ ಆಶ್ರಿತ ಅಡಿಯಾಳಾದ್ದರಿಂದ ಉತ್ಪ್ರೇಕ್ಷೆ ಸಹಜವೆ. ಜೊತೆಗೆ ಕೆಲವೊಂದು ಸುಳ್ಳುಗಳನ್ನು ಅವರು ಹೆಣೆಯದೇ ಇರಲಿಲ್ಲ. ಉದಾಹರಣೆಗೆ ಬಹುತೇಕ ಕನ್ನಡ ರಾಜರ ಮೂಲ ವಂಶ ಔತ್ತರೇಯ ಮೂಲದ್ದೆಂಬುದು.

ಅಂದಂದಿನ ಆಂದೋಲನಗಳು ಆರ್ಥಿಕ, ಸಾಮಾಜಿಕ, ಧಾರ್ಮಿಕ, ರಾಜಕೀಯ ಸ್ಥಿತ್ಯಂತರಗಳ ಪ್ರಭಾವದಿಂದಾಗಿ ಶಾಸನಗಳ ಸ್ವರೂಪ ಬದಲಾದದ್ದು ಸಹಜ. ಒಂದು ಕಾಲಕ್ಕೆ ರಾಜನಷ್ಟೇ ಹಾಕಿಸುತ್ತಿದ್ದ ಶಾಸನಗಳನ್ನು ೧೧–೧೨ನೆಯ ಶತಮಾನದ ಹೊತ್ತಿಗೆ ಮಹಾಮಂಡಳೇಶ್ವರರು, ದಂಡನಾಯಕರು ನಾಳ್ಗಾವುಂಡರು, ಕಂಪಣದ ಅಧಿಕಾರಿಗಳು ಅಷ್ಟೇ ಏಕೆ ಊರ ಗಾವುಂಡರೂ ಹಾಕಿಸತೊಡಗಿದರು. ಇವುಗಳಲ್ಲಿ ರಾಜ–ರಾಜ್ಯದ ಅಸ್ಮಿತೆ ಇದ್ದರೂ ಅದು ಗೌಣವಾಗಿ ಶಾಸನ ಹಾಕಿಸಿದ್ದವರ ಗುಣಾವಳಿಗಳು ಮಿಂಚತೊಡಗಿದವು ಇವುಗಳೂ ಸಹ ಪ್ರಶಸ್ತಿಗಳು ಎನ್ನಿಸುತ್ತವೆ. ಹಾವೇರಿ ಪರಿಸರದ ಜೈನಶಾಸನಗಳಲ್ಲಿ ವಿವಿಧ ರಾಜರ ಪ್ರಶಸ್ತಿಗಳು ವರ್ಣಿತವಾಗಿವೆ.

### ೦೧. ರಾಜಪ್ರಶಸ್ತಿ.

ಬನವಾಸಿ ಕದಂಬರ ವಿಜಯಶಿವಮೃಗೇಶವರ್ಮನ ಗುಣಾವಳಿಯನ್ನು, ಪರಾಕ್ರಮಗಳನ್ನು ದೇವಗಿರಿಯ ಶಾಸನವೊಂದು ಪ್ರಶಸ್ತಿಸಿದೆ. ಇವನು 'ಉದಾತ್ತಬುದ್ಧಿ ಧೈರ್ಯವೀರ್ಯ್ಯತ್ಯಾಗಸಮ್ಪನ್ನಃ ಸುಮಹತಿ ಸಮರ ಸಙ್ಕಟೇ ಸ್ವಭುಜಬಲ ಪರಾಕ್ರಮಾವಾಪ್ತವಿಪುಲೈಶ್ವರ್ಯ್ಯಃ ಎಂಬ ವಿವಿಧ ಗುಣಾವಳಿಯನ್ನು ದಾಖಲಿಸಿದೆ.[೯೨] ಈ ಅರಸನ ದಿಗ್ವಿಜಯಗಳ ದಾಖಲೆ ಇಲ್ಲಿಲ್ಲ. ಇದೇ ಊರಲ್ಲಿ ದೊರಕುವ ಯುವರಾಜ ದೇವವರ್ಮನ ದೇವಗಿರಿ ಶಾಸನದಲ್ಲಿ ಇವನ ತಂದೆಯಾದ ಕೃಷ್ಣವರ್ಮ ಮಹಾರಾಜನನ್ನು "ಅಶ್ವಮೇಧಯಾಜಿನಃ ಸಮರಾರ್ಜ್ಜಿತ ವಿಪುಲೈಶ್ವರ್ಯ್ಯಸ್ಯ

ಸಾಮನ್ತರಾಜವಿಶೇಷರತ್ನ" ಎಂದು ಹೊಗಳಲಾಗಿದೆ. ಅಶ್ವಮೇಧಯಾಗವನ್ನು ಇಲ್ಲಿ ಸಮರದ ಸಂಕೇತವಾಗಿ ತರಲಾಗಿದೆ.

ಶಿಗ್ಗಾವಿಯ ಕ್ರಿ.ಶ. ೭೦೮ರ ಚಲುಕ್ಯರ ವಿಜಯಾದಿತ್ಯನ ತಾಮ್ರಶಾಸನ ರಾಜಪ್ರಶಸ್ತಿ ಪ್ರಧಾನ ಶಾಸನ.[೯೩] ಬಾದಾಮಿ ಚಲುಕ್ಯರ ಆನುಪೂರ್ವಿಗಳಾದ ೨ನೆಯ ಪುಲಿಕೇಶಿ, ಒಂದನೆಯ ವಿಕ್ರಮಾದಿತ್ಯ, ವಿನಯಾದಿತ್ಯರ ಪರಾಕ್ರಮ ಮತ್ತು ದಿಗ್ವಿಜಯಗಳನ್ನು ಕೀರ್ತಿಸುತ್ತದೆ. ಇಮ್ಮಡಿ ಪುಲಿಕೇಶಿಯನ್ನು ಸತ್ಯಾಶ್ರಯ ಎಂದು ಕರೆದು ಅವನು 'ಉತ್ತರ ಪಥೇಶ್ವರನಾದ ಹರ್ಷವರ್ಧನನನ್ನು ಸೋಲಿಸಿದ (ಉತ್ತರಾಪಥೇಶ್ವರ ಶ್ರೀ ಹರ್ಷವರ್ಧನ ಪರಾಜಯೋ) ಎಂದು ಹೇಳುತ್ತದೆ. ಈ ಪ್ರಶಸ್ತಿ ಮೊದಲಿಗೆ ಐಹೊಳೆ ಶಾಸನದಲ್ಲಿ ಕಂಡುಬರುತ್ತದೆ. ತದನಂತರ ಪಟ್ಟಕ್ಕೆ ಬಂದ ಒಂದನೇ ವಿಕ್ರಮಾದಿತ್ಯ ಪಾಂಡ್ಯ, ಚೋಳ, ಕೇರಳ, ಕಳಭ್ರರ ಜೊತೆ ಹೋರಾಡಿದ್ದಾಗಿಯೂ "ಕಾಂಚಿಪೀಠ ಮುಕುಟ ಚುಂಬಿತ" ಎನ್ನುವ ಪ್ರಶಸ್ತಿಯಿಂದ ಇವನ ಕಂಚಿಯನ್ನು ಗೆದ್ದಿದ್ದ ಎಂದು ತೋರುತ್ತದೆ. ಇವನ ಮಗನಾದ ವಿನಯಾದಿತ್ಯನು ಕಮೇರ, ಪಾರಸಿಕ, ಸಿಂಹಳದ್ವೀಪಗಳ ಅಧಿಪತಿ ಎಂದು ಇದೇ ಶಾಸನ ಕೀರ್ತಿಸುತ್ತದೆ. ಅಂತೆಯೇ ಅವರಿಂದ ಕಪ್ಪಗಳನ್ನೂ ಸಂಗ್ರಹಿಸಿದ್ದ. ಇವನ ಮಗನಾದ ವಿಜಯಾದಿತ್ಯನು ಪೃಥ್ವಿವಲ್ಲಭ ಮಹಾರಾಜಾಧಿರಾಜ ಪರಮೇಶ್ವರನಾಗಿ ಆಳಿದ್ದು 'ಶತ್ರು ಮಂಡಲ, ಗಂಗಾ, ಯಮುನಾ, ಪಾಲಿಧ್ವಜ ಪದಾದಕ್ಕ ಮಹಾಶಬ್ದ' ಎಂಬ ಪ್ರಶಸ್ತಿ ಈ ಪ್ರದೇಶಗಳ ಮೇಲಿರುವ ಅಧಿಪತ್ಯವನ್ನು ಅರಹುತ್ತದೆ.

ರಾಷ್ಟ್ರಕೂಟ ಅರಸರ ಸಾಹಸದ ಪ್ರಶಸ್ತಿಗಳು ಈ ಭಾಗದ ಜೈನಶಾಸನಗಳಲ್ಲಿ ಲಭ್ಯವಿಲ್ಲ. ಕೇವಲ ನಾಮಮಾತ್ರ ಉಲ್ಲೇಖಿತಗಳು ಕಂಡುಬರುತ್ತವೆ. "ಸ್ವಸ್ತಿ ಕಾಲವರ್ಷ ಶ್ರೀ ಪ್ರಿಥುವಿವಲ್ಲಭಂ ಮಹಾರಾಜಾಧಿರಾಜಂ ಪರಮೇಶ್ವರ ಪೌತ್ರೇಣ ಸ್ವಸ್ತಿ ಜಗತುಙ್ಗ ಪ್ರಭೂತವರ್ಷ ಪ್ರತಾಪಾವಲೋಕಂ ಶ್ರೀವಲ್ಲಹಂ ಪ್ರಥ್ವೀರಾಜ್ಯಂ ಗೆಯೆ"[೯೪] ಎಂಬಂತಹ ನೀರಸ ಪ್ರಶಸ್ತಿಗಳು ವ್ಯಕ್ತವಾಗುತ್ತವೆ. ಕಲ್ಯಾಣ ಚಾಳುಕ್ಯರ ಕಾಲದ ಶಾಸನಗಳಲ್ಲೂ ಈ ಪ್ರಕ್ರಿಯೆ ಮುಂದುವರೆದಿದೆ ಬಹುಶಃ ಶಾಸನಗಳನ್ನು ಬರೆಯಿಸಿದ್ದು ಸ್ಥಳೀಯರಾದ್ದರಿಂದ ಅವರು ಸಿದ್ಧ, ಸರಳ ಮಾದರಿಯ ರಾಜಪ್ರಶಸ್ತಿಗಳನ್ನೇ ಬಳಸಿದರು. ಈ ಕಾಲದ ಶಾಸನಗಳು ವಿಷಯ ಪ್ರಧಾನವಾದ್ದರಿಂದ ರಾಜರಿಗೆ ಹೆಚ್ಚು ಒತ್ತು ಕೊಟ್ಟಿಲ್ಲ. ಆದ್ದರಿಂದಲೇ "ಸ್ವಸ್ತಿ ಸಮಸ್ತ ಭುವನಾಶ್ರಯ ಕುಳತಿಳಕಂ ಚಾಳುಕ್ಯಾಭರಣಂ ಶ್ರೀಮತ್ರೈಲೋಕ್ಯಮಲ್ಲದೇವರ ವಿಜಯರಾಜ್ಯ"[೯೫] ಎಂಬ ಏಕರೀತಿಯ ಪ್ರಶಸ್ತಿ ಪುನರಾವರ್ತನೆಯಾಗುತ್ತಾ ಹೋಗುತ್ತದೆ. ಇಲ್ಲಿ ರಾಜ ಬದಲಾದಾಗ ಅವನ ಹೆಸರನ್ನು ಬದಲಾಯಿಸಿ ಆಡಳಿತಾರೂಢ ರಾಜನ ನಾಮವನ್ನು ಉಲ್ಲೇಖಿಸಿ ಇದೇ ಒಕ್ಕಣೆಯನ್ನು ಅನುಸರಿಸಿದ್ದು ಕಂಡುಬರುತ್ತದೆ.

ಮಂತಗಿಯ ಶಾಸನವೊಂದು ಕಳಚೂರ್ಯ್ಯ ಬಿಜ್ಜಣದೇವನ ಪ್ರಶಸ್ತಿಯನ್ನು ಸಮರ್ಥವಾಗಿ ಕಟ್ಟಿಕೊಟ್ಟಿದೆ. ಬಿಜ್ಜಣದೇವನ ಸಾಹಸ, ಶೌರ್ಯಗಳನ್ನು ಇಲ್ಲಿ ಚಿತ್ರಿಸಲಾಗಿದೆ. "ಸ್ವಸ್ತಿ ಸಮಸ್ತ ಭುವನಾಶ್ರಯಂ ಶ್ರೀ ಪ್ರಿಥ್ವೀವಲ್ಲಭಂ ಮಹಾರಾಜಾಧಿರಾಜಂ ಪರಮೇಶ್ವರಂ ಕಾಳಾಂಜರ ಪುರವರಾಧಿಶ್ವರಂ ಸುವರ್ಣ್ನವ್ರಿಷಭಧ್ವಜಂ ಡಮರುಗ ತೂರ್ಯ್ಯ ನಿರ್ಗ್ಘೋಷಣಂ ಕಳಚೂರ್ಯ್ಯ ಕುಳಕಮಳ ಮಾರ್ತ್ತಾಂಡ ಕದನಪ್ರಚಂಡ ಮಾನ ಕನಕಾಚಳ ಸುಭಟರಾದಿತ್ಯ ಕಲಿಗಳಂಕುಶಂ ಗಜಸಾಮನ್ತ ಸರಣಾಗತ ವಜ್ರಪಂಜರಂ ಪ್ರತಾಪ ಲಂಕೇಶ್ವರಂ ಪರನಾರೀ ಸಹೋದರಂ ಸನಿವಾರಸಿದ್ಧಿ ಗಿರಿದುರ್ಗ್ಗಮಲ್ಲ ಚಲದಂಕರಾಮ ವೈರೀಭ ಕಂಠೀರವಂ ನಿಸ್ಸಂಕಮಲ್ಲಂ ಇತ್ಯಖಿಳ ನಾಮಾವಳಿ ವಿರಾಜಿತಮಪ್ಪ ಶ್ರೀಮದ್ಭುಜಬಳ ಚಕ್ರವರ್ತ್ತಿ ತ್ರಿಭುವನಮಲ್ಲ ಬಿಜ್ಜಣದೇವರಸರು ಸಮಸ್ತ ದಿಗ್ವಿಜಯಮಂ ಮಾಡಿ ಕಲ್ಯಾಣಪುರದ ನೆಲೆವೀಡಿನಲ್ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ."[೧೯೬] ಬಿಜ್ಜಳನು ದಿಗ್ವಿಜಯಗಳನ್ನು ಮಾಡಿ 'ಸಣಿವಾರಸಿದ್ಧಿ', 'ಗಿರಿದುರ್ಗ'ಗಳನ್ನು ವಶಪಡಿಸಿಕೊಂಡಿದ್ದು ಮಾತ್ರ ನೈಜ ಘಟನೆಗಳಿದ್ದು ಉಳಿದ ಕವಿಯ ಉತ್ಪ್ರೇಕ್ಷೆ ಅನ್ನಿಸಿದರೂ ಸತ್ಯವೆನಿಸಿವೆ. ಏಕೆಂದರೆ ಬಿಜ್ಜಳ ಚಾಳುಕ್ಯರನ್ನು ಹತ್ತಿಕ್ಕಿ ಕಳಚೂರ್ಯ್ಯ ರಾಜ್ಯ ಕಟ್ಟಿದ್ದು ಸುಲಭದ ಮಾತಲ್ಲ.

ಸೇವುಣರಾಜರ ಪ್ರಶಸ್ತಿ ಅತೀ ನೀರಸವಾಗಿದ್ದು ಹೆಸರನ್ನು ಮಾತ್ರ ಶಾಸನಗಳು ದಾಖಲಿಸಿವೆ. 'ಸ್ವಸ್ತಿ ಶ್ರೀಮತು ಯಾದವ ನಾರಾಯಣ ಭುಜಬಳ ಪ್ರತಾಪ ಚಕ್ರವರ್ತ್ತಿ ಶ್ರೀ ವೀರರಾಮದೇವ'[೧೯೭] ಇದಕ್ಕೊಂದು ಉದಾಹರಣೆ. ಎಲ್ಲ ಸೇವುಣ ದೊರೆಗಳಿಗೆ ಇದೇ ಒಕ್ಕಣೆ ಬಳಕೆಯಾಗಿದೆ. "ಶ್ರೀಮನ್ಮಹಾಮಂಡಳೇಶ್ವರ ರಾಜಾಧಿರಾಜ ಸತಬಿಟ್ಟಿ ಅರಿರಾಯ ವಿಭಾಡ ಮಾತಿಗೆ ತಪ್ಪುವ ರಾಯರ ಗಂಡ"[೧೯೮] ಎಂಬ ಸಾಮಾನ್ಯ ಒಕ್ಕಣೆ ವಿಜಯನಗರ ಅರಸರಿಗೂ ಆರೋಪಿತವಾಗಿದೆ. ಸೇವುಣ ಮತ್ತು ವಿಜಯನಗರ ಕಾಲವಧಿಯಲ್ಲಿ ನಿಸಿಧಿ ಶಾಸನಗಳೇ ಹೆಚ್ಚು ರಚಿತವಾಗಿರುವುದರಿಂದ ಅವು ವಿಷಯಕ್ಕೆ ಪ್ರಾಧಾನ್ಯತೆ ಕೊಟ್ಟವು.

### ೧೪. ಕಾಲದ ಉಲ್ಲೇಖ.

ಶಾಸನಗಳಲ್ಲಿ ಅದು ರಚನೆಯಾದ ಕಾಲವನ್ನು ಉದ್ಧೃತಗೊಳಿಸುವುದು ಸರ್ವೇಸಾಮಾನ್ಯ. ಅಂತೆಯೇ ಇಂದಿಗೂ ನಮಗೆ ಶಾಸನ ರಚನೆಯಾದ ಕಾಲವನ್ನು ನಿಖರವಾಗಿ ಗುರುತಿಸಲು ಸಾಧ್ಯವಾಗಿದೆ. ದಾನಕೊಟ್ಟ ವ್ಯಕ್ತಿ ದಾನ ಕೊಡುವಾಗ ಶ್ರೇಷ್ಠ ದಿನವನ್ನೆ ಆಯ್ಕೆ ಮಾಡಿಕೊಳ್ಳುತ್ತಿದ್ದ. ದಿನ, ವಾರ, ಮಾಸ, ಪಕ್ಷ, ಸಂವತ್ಸರ ಇತ್ಯಾದಿಗಳನ್ನು ಗಣನೆಗೆ ತೆಗೆದುಕೊಂಡು, ಶ್ರೇಷ್ಠವಾದ ದಿನದಂದು ದಾನ ಕೊಡುವುದು ನಡೆದುಕೊಂಡು ಪದ್ಧತಿ. ಶಾಸನಗಳಲ್ಲಿ ಇಂಥಹ ಕಾಲವನ್ನು ಗುರುತಿಸುವ ಪದ್ಧತಿಗಳು ಬೇರೆ ಬೇರೆ ತೆರನಾಗಿ ಬಳಕೆಯಲ್ಲಿದ್ದವು ಎಂಬುದು ಅಧ್ಯಯನದಿಂದ ತಿಳಿದು ಬರುತ್ತದೆ. ಹಾವೇರಿ ಪರಿಸರದಲ್ಲಿ ಜೈನ ಶಾಸನಗಳಿಗೂ ಈ ಪದ್ಧತಿ ಅನ್ವಯವಾಗಿದೆ.

ಇಲ್ಲಿರುವ ಶಾಸನಗಳಲ್ಲಿ ಸಂವತ್ಸರಗಳು, ಮಾಸ, ಪಕ್ಷ, ತಿಥಿ, ಗ್ರಹಣ ಹಿಂದೂ ಪದ್ಧತಿಯಿಂದ ಬಂದರೂ ಕಾಲಗಣನೆಯ ವರ್ಷಗಳು ವಿವಿಧ ರೀತಿಯಾಗಿ ಅನುಸರಣೆಯಾಗಿವೆ.

## ೦೧. ಕಾಲಗಣನೆ.

ಕರ್ನಾಟಕದ ಇತರೆ ಶಾಸನಗಳಲ್ಲಿರುವಂತೆ ಕಾಲದ ಉಲ್ಲೇಖಗಳಂತೆ ಹಾವೇರಿ ಪರಿಸರದ ಜೈನಶಾಸನಗಳಲ್ಲೂ ಅದೇ ಪದ್ಧತಿ ಮುಂದುವರೆದುಕೊಂಡು ಬಂದಿದೆ. ಇಲ್ಲಿ ಮುಖ್ಯವಾಗಿ ಶಕವರ್ಷ ಮತ್ತು ಸ್ಥಳೀಯ ರಾಜರ ಪಟ್ಟಧಿಕಾರದ ವರ್ಷದ ಉಲ್ಲೇಖಗಳು ಕಂಡುಬರುತ್ತವೆ. ಉಳಿದಂತೆ ಸಂವತ್ಸರ ಮಾಸ, ಪಕ್ಷ, ವಾರ, ದಿನ, ಹುಣ್ಣಿಮೆ, ಅಮವಾಸೆ, ಗ್ರಹಣ, ಹಬ್ಬಗಳನ್ನು ದಾಖಲಿಸಲಾಗಿದೆ. ಇವು ಶಾಸನ ರಚನೆಯಾದ ದಿನವನ್ನು ನಿಖರವಾಗಿ ಗುರುತಿಸಲು ಒತ್ತಾಸೆಯಾಗಿವೆ.

## ೦೨. ಶಕವರ್ಷ.

ಶಕೆ, ಶಕರ್ಷ, ಶಾಲಿವಾಹನ ಶಕೆ, ಶಕಕಾಲ, ಶಕನೃಪ ಕಾಲಾತೀತ ಸಂವತ್ಸರ ಎಂದು ಕರೆಯಲ್ಪಡುವ ಕಾಲ ಸಂಬೋಧನೆ ಸ್ಥಾಪಕ ಪದ್ಧತಿಯು ಕುಷಾಣರ ಕಾಲದಲ್ಲಿ ಬಳಕೆಗೆ ಬಂದಿತು. ಈ ಮನೆತನದ ರಾಜನಾದ ಕನಿಷ್ಕನು ಶಕರ ಮೇಲೆ ಸಾಧಿಸಿದ ದಿಗ್ವಿಜಯದ ನಿಮಿತ್ತ ಶಕರ ಹೆಸರಿಂದಲೇ ಹೊಸ ಕಾಲಗಣನೆ ಪ್ರಾರಭಿಸಿದನು. ಕ್ರಿಸ್ತಶಕಕ್ಕೂ ಮತ್ತು ಶಕವರ್ಷಕ್ಕೂ ೭೮ ವರ್ಷಗಳ ಅಂತರವಿದೆ. ಶಕವರ್ಷವು ಕ್ರಿ.ಶ.೭೮ ರಲ್ಲಿ ಆರಂಭವಾಗಿದ್ದು ಶಾಸನಗಳಲ್ಲಿ ಉದ್ಧೃತವಾದ ಶಕವರ್ಷಕ್ಕೆ ೭೮ನ್ನು ಸೇರಿಸಿದರೆ ಕ್ರಿ.ಶಕ ಬರುತ್ತದೆ. "ಕ್ರಿ.ಶ. ಸು. ೨-೩ನೆಯ ಶತಮಾನದಲ್ಲಿ ರಚಿತವಾಗಿದೆಯೆಂದು ನಂಬಲಾಗಿರುವ ಜೈನ ಧಾರ್ಮಿಕ ಗ್ರಂಥವಾದ 'ಕಾಲಕಾಚಾರ್ಯಕಥಾ' ಎಂಬ ಗ್ರಂಥದಲ್ಲಿ ಮೊಟ್ಟಮೊದಲ ಬಾರಿಗೆ ಶಕ ಸಂವತ್ಸರದ ಉಲ್ಲೇಖ ದೊರೆಯುತ್ತದೆ. ಕರ್ನಾಟಕದ ಶಾಸನಗಳಲ್ಲಿ ಈ ಶಕದ ಉಲ್ಲೇಖ ಮೊಟ್ಟ ಮೊದಲ ಬಾರಿಗೆ ಬಾದಾಮಿ ಚಾಲುಕ್ಯ ವಂಶದ ಪುಲಿಕೇಶಿಯ ಕ್ರಿ.ಶ. ೫೪೩ರ ಬಾದಾಮಿ ಶಾಸನದಲ್ಲಿ ದೊರೆಯುತ್ತದೆ. 'ಶಕವರ್ಷೆಶು ಚತುಃಶ್ಯತೇಶು ಪಂಚಷಷ್ಠಿಯತೇಶು ಎಂಬುದಾಗಿ ಆ ಶಾಸನದಲ್ಲಿ ಉಕ್ತವಾಗಿದೆ."[೧೯]

ಹಾವೇರಿ ಪರಿಸರದ ಜೈನಶಾಸನಗಳಲ್ಲಿ ಶಕವರ್ಷದ ನೇರ ಪದಬಳಕೆ ೧೩ ಶಾಸನಗಳಲ್ಲಿ ಬಳಕೆಯಾಗಿದೆ. ಬಾದಾಮಿ ಚಾಲುಕ್ಯರ ಮೊದಲುಗೊಂಡು ಹೊಯ್ಸಳರನ್ನು ಹೊರತುಪಡಿಸಿ ಬಾದಾಮಿ ಚಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಳುಕ್ಯರು, ಕಳಚೂರ್ಯರು, ಗುತ್ತರು, ವಿಜಯನಗರ ಶಾಸನಗಳಲ್ಲಿ ಶಕವರ್ಷ ಬಳಕೆಯಾಗಿವೆ. ಈ ಪರಿಸರದ ಮೊದಲ ಶಕವರ್ಷದ ಉಲ್ಲೇಖ ಬಾದಾಮಿ ಚಲುಕ್ಯರ ವಿಜಯಾದಿತ್ಯನ ಕ್ರಿ.ಶ. ೭೦೮ರ ಶಿಗ್ಗಾವಿ ತಾಮ್ರಪಟದಲ್ಲಿ ಬಳಕೆಯಾಗಿದೆ. ವಿವಿಧ ಅರಸರ ಮನೆತನಗಳಲ್ಲಿ ಶಕವರ್ಷದ ಪದಬಳಕೆ ಹೀಗಿದೆ.

'ಶಕವರ್ಷ' – ಬಾದಾಮಿ ಚಾಲುಕ್ಯರ ವಿಜಯಾದಿತ್ಯ ಶಿಗ್ಗಾವಿ ತಾಮ್ರಪಟ ಕ್ರಿ.ಶ. ೭೦೮.
'ಶಕನೃಪ ಕಾಲಾತೀತ ಸಂವತ್ಸರ' – ರಾಷ್ಟ್ರಕೂಟರ ಕದರಮಂಡಲಗಿಯ ಶಿಲಾಶಾಸನ ೯ನೆಯ.ಶ.
'ಸಕವರ್ಷಂ'– ಚಾಳುಕ್ಯ ೧ನೆಯ ಸೋಮೇಶ್ವರನ ಮೋಟೆಬೆನ್ನೂರು ಶಿಲಾಶಾಸನ ಕ್ರಿ.ಶ. ೧೦೬೬.
'ಸಕವರ್ಶ' – ಗುತ್ತಲ ವಿಕ್ರಮಾದಿತ್ಯ೧ ನ ಗುತ್ತಲ ಶಿಲಾಶಾಸನ ಕ್ರಿ.ಶ. ೧೧೬೨.
'ಸಕವರ್ಷ' – ಕಳಚೂರ್ಯ್ಯ ಬಿಜ್ಜಳನ ನದಿಹರಳಹಳ್ಳಿಯ ಶಿಲಾಶಾಸನ ಕ್ರಿ.ಶ. ೧೧೬೮.
'ಸಕವರುಶ' – ಸೇವುಣ ಮಹದೇವನ ಕಡಕೊಳದ ನಿಸಿಧಿ ಶಿಲಾಶಾಸನ ಕ್ರಿ.ಶ. ೧೨೬೯.
'ಸಕವರುಸ' – ವಿಜಯನಗರ ೨ನೇ ಹರಿಹರನ ವೀರಾಪುರ ನಿಸಿಧಿ ಶಿಲಾಶಾಸನ ಕ್ರಿ.ಶ. ೧೩೯೬.
'ಶಕಕಾಲಂ' – ವಿಜಯನಗರ ೨ನೆ ಹರಿಹರನ ಸಂಗೂರು ನಿಸಿಧಿ ಶಿಲಾಶಾಸನ ಕ್ರಿ.ಶ. ೧೩೯೬.

### ೦೩. ಅಬ್ದ ಶಾಲಿವಾಹನ ಶಕೆ ವರ್ಷ.

ಯಳವಟ್ಟಿಯ ಕೇಮಿಯಕ್ಕೆ ಎಂಬುವಳು ನಿಸಿಧಿ ಶಾಸನದಲ್ಲಿ 'ಅಬ್ದಾ ರುಧಿರೋದ್ಗಾರಿ ಪಾಲ್ಗುಣ ಮಾಸೆ ಶತತಾರ ಪಕ್ಷೆ ಪಂಚುಮ್ಯಾ ಕುಜವಾರೆ' ಎಂಬ ಕಾಲಗಣನೆ ಉಲ್ಲೇಖವಾಗಿದೆ. ಇಲ್ಲಿ ಬಹುಮುಖ್ಯವಾಗಿ ಅಬ್ದಾ ಪದವನ್ನು ಗಮನಿಸಬೇಕು. ಅಬ್ದಾ ಅಥವಾ ಅಬ್ದ ಎಂಬುದು ಒಂದು ಕಾಲಗಣನೆಯನ್ನು ಸೂಚಿಸುವ ಪದ 'ಶಾಲಿವಾಹನ ಶಕಕ್ಕೆ ಮೊದಲಿಗೆ 'ಅಬ್ದಾ' ಎಂಬ ಪರ್ಯಾಯ ನಾಮವಿತ್ತೆಂಬುದಾಗಿ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.[೨೦೦]

### ೦೪. ಚಾಳುಕ್ಯ ವಿಕ್ರಮ ಶಕೆ.

ಹೆಸರೇ ಹೇಳುವ ಹಾಗೆ ಈ ಶಕ ಕಲ್ಯಾಣ ಚಾಳುಕ್ಯರ ಕಾಲಾವಧಿಯಲ್ಲಿ ಆರಂಭವಾಗಿದೆ. ಈ ಮನೆತನದ ಪ್ರಭಾವಿ ಚಕ್ರವರ್ತಿ ಆರನೆಯ ವಿಕ್ರಮಾದಿತ್ಯ ಚಾಳುಕ್ಯ ವಿಕ್ರಮ ಶಕ ಸಂವತ್ಸರದ ಸ್ಥಾಪಕ. ಇವನು ಕ್ರಿ.ಶ. ೧೦೭೬ರಲ್ಲಿ ಚಾಳುಕ್ಯ ಅಧಿಪತ್ಯದ ಪಟ್ಟಾಧಿಕಾರವನ್ನು ಸ್ವೀಕರಿಸಿದ ಸಂದರ್ಭದಲ್ಲಿ ತನ್ನ ಹೆಸರಿನ ಪೂರ್ವಾರ್ಧ ಪದದಿಂದ ಈ ಶಕೆಯನ್ನು ಪ್ರಾರಂಭಿಸುತ್ತಾನೆ. ವಿಕ್ರಮಶಕೆ ಪ್ರಾರಂಭವಾದ ವರ್ಷ ಮತ್ತು ಶಾಸನದಲ್ಲಿ ಉಲ್ಲೇಖವಾದ ವರ್ಷವನ್ನು ಕೂಡಿದರೆ ಕ್ರಿ.ಶ. ಬರುವುದು. ಈ ಶಕೆಯನ್ನು ಉಲ್ಲೇಖಿಸುವ ಒಂದೇ ಒಂದು ಶಾಸನ ಹಾವೇರಿಯ ಬೆಳವತ್ತಿ ಪರಿಸರದಲ್ಲಿ ದೊರೆತಿದೆ. ಇದರಲ್ಲಿ 'ಸ್ವಸ್ತಿ ಶ್ರೀಮಚ್ಚಾಳುಕ್ಯ ವಿಕ್ರಮವರ್ಷ ೪೭ನೆಯ ಶೋಭಕೃತಂವತ್ಸರದ ಆಷಾಡ ಶುದ್ಧ ಪಾಡಿವ ಸೋಮವಾರ ಮುತ್ತರಾಯಣ ಸಂಕ್ರಮಣ ವ್ಯತಿಪಾತಂ ಕೂಡಿದ ಪುಣ್ಯತಿಥಿಯೊಳ್'[೨೦೧] ಎಂಬ ಕಾಲವನ್ನು ಕೂಡಿದಾಗ ಕ್ರಿ.ಶ.೧೧೨೩ ಬರುತ್ತದೆ. ಅಂದರೆ ಶಾಸನ ರಚಿತವಾದ ಕಾಲವು ೧೧೨೩ ಎಂದು ತಿಳಿಯಬೇಕಾಗುತ್ತದೆ.

ಆರನೆಯ ವಿಕ್ರಮಾದಿತ್ಯನ ರೀತಿ ಇವನ ಮೊಮ್ಮಗ ೨ನೆಯ ಜಗದೇಕಮಲ್ಲನು ತನ್ನ ಪಟ್ಟಾಧಿಕಾರವಾದ ನಿಮಿತ್ತ ಹೊಸ ಶಕಸಂವತ್ಸರವನ್ನು ಜಾರಿಗೆ ತಂದನು. ಇದನ್ನು 'ಚಾಳುಕ್ಯ ಪ್ರತಾಪಚಕ್ರವರ್ತಿ ಜಗದೇಕಮಲ್ಲ ವರ್ಷ[೨೦೨] ಎಂದು ಕರೆಯಲಾಗಿದೆ. ೨ನೆಯ ಜಗದೇಕಮಲ್ಲ

ಪಟ್ಟಾಧಿಕಾರಕ್ಕೆ ಬಂದದ್ದು ಕ್ರಿ.ಶ. ೧೧೩೮ರಲ್ಲಿ ಇದಕ್ಕೆ ಶಾಸನದಲ್ಲಿ ಉಲ್ಲೇಖಿತವಾದ ವರ್ಷಗಳನ್ನು ಸೇರಿಸಿದರೆ ಕ್ರಿ.ಶ. ಬರುತ್ತದೆ. ಜಗದೇಕಮಲ್ಲ ವರ್ಷ ೦೬ ಎಂದಿದ್ದರೆ ಅದರ ಕಾಲ ಕ್ರಿ.ಶ. ೧೧೪೪ ಎಂದಾಗುತ್ತದೆ. ಜಗದೇಕಮಲ್ಲ ವರ್ಷದ ಹಾವೇರಿ ಪರಿಸರದ ಜಿನಶಾಸನಗಳು ದೇವಗಿರಿ (ಹಾತಾ), ಕುಂಟನಹೊಸಳ್ಳಿ, ಬಾಳೇಹಳ್ಳಿ, ಕರಗುದರಿ (ಹಾನತಾ), ನೇರಲಗಿ (ಹಾತಾ) ಯಲ್ಲಿ ದೊರೆಯುತ್ತವೆ. ನೇರಲಗಿಯ ಶಾಸನವೊಂದರಲ್ಲಿ ಸ್ವಸ್ತಿ ಶ್ರೀಮಚ್ಚಾಳುಕ್ಯ ಪ್ರತಾಪಚಕ್ರವರ್ತಿ ಜಗದೇಕಮಲ್ಲ ವರ್ಷದ ೧೦ನೆಯ ಪ್ರಭವ ಸಂವತ್ಸರದ ಪುಷ್ಯ ಶುದ್ಧ ೧೩ ಬೃಹಸ್ಪತಿ ವಾರ ಮುಮುತ್ತರಾಯಣ ಸಂಕ್ರಮಣ ವ್ಯತಿಪಾತಂ ಎಂಬುದು ಕ್ರಿ.ಶ. ೧೧೪೮ ಜನವರಿ ೫ ಮಂಗಳವಾರಕ್ಕೆ ಹೊಂದುತ್ತದೆ.

## ೦೫. ಸೇವುಣರ ಶಾಸನಗಳ ಶಕವರ್ಷ.

ದೇವಗಿರಿ ಯಾದವರೆಂದೆ ಪ್ರಸಿದ್ಧರಾದ ಸೇವುಣರು ತಮ್ಮ ಶಾಸನಗಳಲ್ಲಿ ಶಕವರ್ಷವನ್ನು ಬಳಸದೆ ಆಯಾ ರಾಜರು ತಾವು ಪಟ್ಟಾಧಿಕಾರಕ್ಕೆ ಬಂದ ವರ್ಷವನ್ನು ಉಲ್ಲೇಖಿಸಿದ್ದಾರೆ. ಹಾವೇರಿ ಪರಿಸರದಲ್ಲಿ ಸಿಂಹಣ, ಕೃಷ್ಣ, (ಕಂಧರ ಕನ್ಹರ) ಮಹದೇವ, ರಾಮದೇವ (ರಾಮಚಂದ್ರ) ರಾಜರ ಅಂಕಿತದ ನಿಸಿಧಿ ಶಾಸನಗಳು ದೊರೆತಿದ್ದು, ಅವುಗಳಲ್ಲಿ ಶಾಸನ ರಚನೆಯೆಯಾದ ಕಾಲವನ್ನು ಈ ರೀತಿಯಾಗಿ ಉಲ್ಲೇಖಿಸಲಾಗಿದೆ.

'ವೀರಸಿಂಹಣದೇವರ ರಾಜ್ಯದ ೩೯ನೆಯ ವಿಶ್ವಾವಸು ಸಂವತ್ಸರದ ಪುಷ್ಯ ಸ೭ ಬುಧವಾರ,
'ವೀರಕಂಧಾರದೇವ ವಿಜಯರಾಜ್ಯದ ೧೪ನೆಯ ಸಿದ್ಧಾರ್ಥಿ ಸಂವತ್ಸರದ ಆಶ್ವೈಜ ಸು೫'
'ಮಹದೇವ ವರ್ಷದ ೫ನೆಯ ಕ್ರೋಧನ ಸಂವತ್ಸರದ ಕಾರ್ತ್ತಿಕ ಬ ೧೩ ಬುಧವಾರ'
'ವೀರರಾಮದೇವ ರಾಜ್ಯೋದಯದ ೧೮ ಸಾರ್ಬ್ಬಧಾರಿ ಸೌವಸ್ಥರದ ಪುಷ್ಯ ಸುಧ ೮ ವಡ್ಡವಾರ'

ಇಲ್ಲಿ ಉಲ್ಲೇಖವಾದ ರಾಜ್ಯೋದಯದ ವರ್ಷಗಳನ್ನು ರಾಜರು ಆಳ್ವಿಕೆ ಬಂದ ವರ್ಷದ ಜೊತೆ ಕೂಡಿದರೆ ಕ್ರಿ.ಶ. ದೊರೆಯುತ್ತದೆ. ಹಾವೇರಿ ಪರಿಸರದಲ್ಲಿ ಒಟ್ಟು ಸೇವುಣರ ೭೧ ಶಾಸನಗಳು ದೊರೆತಿವೆ. ಅವುಗಳಲ್ಲಿ ೨೧ ಶಾಸನಗಳಲ್ಲಿ ಈ ಮನೆತನದ ರಾಜರುಗಳು ಅಂಕಿತವಿದೆ. ಸಿಂಹಣದೇವ (ಕ್ರಿ.ಶ.೧೩೦೦-೪೭) ಕೃಷ್ಣ-೧೨೪೭ ಮಹದೇವ ೧೨೬೧, ರಾಮಚಂದ್ರ ಕ್ರಿ.ಶ. ೧೨೭೧ ರಲ್ಲಿ ಸೇವುಣ ಚಕ್ರಾಧಿಪತ್ಯವನ್ನು ಅಲಂಕರಿಸಿದರು.

## ೦೬. ಸಂವತ್ಸರಗಳು.

ಪಂಚಾಂಗದ ಪ್ರಕಾರ ಹಿಂದೂ ಸಂವತ್ಸರಗಳು ಅರವತ್ತು. ವರ್ಷಕ್ಕೆ ಒಂದರಂತೆ ಅರವತ್ತು ವರ್ಷದ ಪರಿಕ್ರಮಣದಲ್ಲಿ ಸಂವತ್ಸರಗಳು ಬಳಕೆಯಾಗುತ್ತದೆ. ಉದಾ: ಪ್ರಭವ ಸಂವತ್ಸರ ಕ್ರಿ.ಶ. ೭೨೭ರಲ್ಲಿ ಬಂದಿತ್ತೆಂದರೆ ಅದು ಮತ್ತೆ ಅರವತ್ತು ವರ್ಷದ ನಂತರ ಅಂದರೆ ಕ್ರಿ.ಶ. ೭೮೭ಕ್ಕೆ ಆಗಮಿಸುತ್ತದೆ. ಶಾಸನಗಳಲ್ಲಿ ಶಕಸಂವತ್ಸರಗಳ ಜೊತೆಗೆ ಹಿಂದೂ ಪಂಚಾಂಗದ ಪ್ರಭವಾಧಿಯಾಗಿ

ಅಕ್ಷಯ (ಕ್ಷಯ) ಸಂವತ್ಸರಗಳನ್ನು ಉಲ್ಲೇಖಿಸಿದ್ದಾರೆ. ಇವುಗಳ ಸ್ಪಷ್ಟ ಉಲ್ಲೇಖಗಳಿಂದ ಶಾಸನಗಳ ಸ್ಪಷ್ಟ ವರ್ಷವನ್ನು ಕಂಡು ಹಿಡಿಯಲು ಸಾಧ್ಯವಾಗಿದೆ. ಹಾವೇರಿ ಪರಿಸರದ ಜೈನಶಾಸನಗಳಲ್ಲಿ ಒಟ್ಟು ೩೫ ಹಿಂದೂ ಸಂವತ್ಸರಗಳೇ ಬಳಕೆಯಾಗಿದ್ದು ಅವುಗಳ ಹೆಸರು ಬಳಕೆಯಾದ ಸಂಖ್ಯೆ ಈ ರೀತಿಯಾಗಿವೆ.

೧ ಪ್ರಭವ-೦೩
೨ ವಿಭವ-೦೩
೩ ಶುಕ್ಲ-೦೧
೪ ಪ್ರಜೋತ್ಪತ್ತಿ -೦೧
೫ ಶ್ರೀಮುಖ-೦೧
೬ ಭಾವ-೦೧
೭ ಯುವ -೦೨
೮ ಧಾತು -೦೨
೯ ಬಹುಧಾನ್ಯ - ೦೨
೧೦ ಪ್ರಮಾಧಿ -೦೧
೧೧ ವಿಕ್ರಮ-೦೧
೧೨ ವಿಷ್ಣು-೦೧
೧೩ ಸ್ವಭಾನು-೦೨
೧೪ ತಾರುಣ-೦೧
೧೫ ಪಾರ್ಥಿವ-೦೧
೧೬ ವ್ಯಯ-೦೩
೧೭ ಸರ್ವಧಾರಿ-೦೩
೧೮ ವಿರೋಧಿ-೦೨
೧೯ ಖರ-೦೧
೨೦ ನಂದನ-೦೧
೨೧ ವಿಜಯ-೦೩
೨೨ ಮನ್ಮಥ-೦೧
೨೩ ದುರ್ಮುಖಿ-೦೧
೨೪ ಶುಭಕೃತು-೦೨
೨೫ ಶೋಭಕೃತ್-೦೨
೨೬ ವಿಶ್ವಾವಸು-೦೩
೨೭ ಪರಾಭವ-೦೩
೨೮ ಪ್ಲವಂಗ-೦೧
೨೯ ಸೌಮ್ಯ-೦೧
೩೦ ಆನಂದ-೦೨
೩೧ ಪೈಂಗಳ-೦೧
೩೨ ಸಿದ್ಧಾರ್ಥಿ-೦೧
೩೩ ದುಂದಭಿ-೦೨
೩೪ ರೋಧಿಕೋದ್ಗಾರಿ-೦೧
೩೫ ಕ್ರೋಧನ-೦೩

## ೦೭. ಮಾಸ.

ಶಾಸನದಲ್ಲಿ ಉಲ್ಲೇಖಗೊಂಡ ಮಾಸಗಳು ಹಿಂದೂ ಪಂಚಾಗದ ತಿಂಗಳುಗಳು. ತಿಂಗಳು ಎಂದರೆ ಚಂದ್ರ, ಅಮವಾಸೆ ಮತ್ತು ಹುಣ್ಣಿಮೆಗಳು ಸೇರಿ ಒಂದು ತಿಂಗಳು ಪೂರ್ಣವಾಗುತ್ತದೆ. ಪ್ರತಿ ಹುಣ್ಣಿಮೆಯ ಮಾರನೆಯ ದಿನ ಹೊಸ ಮಾಸಗಳು ಪ್ರಾರಂಭವಾಗುತ್ತವೆ. ಈ ದಿನ ಬಹುಳ ೧ ಅಥವಾ ಪ್ರತಿಪದ ಎಂದು ಕರೆಯಲ್ಪಡುತ್ತದೆ. ಒಟ್ಟು ಮಾಸಗಳು ೧೨. ಹಾವೇರಿ ಪರಿಸರದ ದಾನಶಾಸನಗಳಲ್ಲಿ ಬಹುಮುಖ್ಯವಾಗಿ ಚೈತ್ರ, ಜೇಷ್ಠ, ಆಷಾಡ, ಪುಷ್ಯ, ಪಾಲ್ಗುಣ, ಮಾಸಗಳನ್ನು ಆಯ್ದುಕೊಂಡಿದ್ದಾರೆ.ಉಳಿದಂತೆ ನಿಸಿಧಿಗಳಲ್ಲಿ ಮಾಸಗಳ ಆಯ್ಕೆ ಇಲ್ಲ. ಯಾಕೆಂದರೆ ಮರಣವನ್ನು ಆಹ್ವಾನಿಸಿದ ವ್ಯಕ್ತಿ ಯಾವಾಗ ಪ್ರಾಣತ್ಯಾಗ ಮಾಡುತ್ತಾನೆ. ತಿಳಿಯದು. ಇಲ್ಲಿನ ೯ ಶಾಸನಗಳಲ್ಲಿ ವ್ಯಕ್ತವಾದ ಮಾಸಗಳು ಮತ್ತು ಬಳಕೆಯಾದ ಸಂಖ್ಯೆಗಳನ್ನು ಈ ರೀತಿ ಪಟ್ಟಿ ಮಾಡಬಹುದು.

೦೧ ಚೈತ್ರ - ೦೬
೦೨ ವೈಶಾಖ - ೦೨
೦೩ ಜೇಷ್ಠ-೦೧
೦೪ ಆಷಾಢ-೦೯
೦೫ ಶ್ರಾವಣ-೦೩
೦೬ ಭಾದ್ರಪದ - ೦೫
೦೭ ಆಶ್ವಯಜ-೦೩
೦೮ ಕಾರ್ತಿಕ-೦೭
೦೯ ಮಾರ್ಗಶಿರ-೦೫
೧೦ ಪುಷ್ಯ-೧೧
೧೧ ಮಾಘ-೦೩
೧೨ ಪಾಲ್ಗುಣ-೦೩

## ೦೮. ಪಕ್ಷ.

ಶಾಸನ ರಚನೆಯಾದ ದಿನವನ್ನು ಗುರುತಿಸುವಾಗ ಸಾಮಾನ್ಯವಾಗಿ ಪಕ್ಷಗಳನ್ನು ಹೇಳುವುದು ರೂಢಿ. ಹಿಂದೂ ಪಂಚಾಂಗದ ಪ್ರಕಾರ ಎರಡು ಪಕ್ಷಗಳು. ೧. ಕೃಷ್ಣಪಕ್ಷ ೨.ಶುಕ್ಲಪಕ್ಷ ಶಾಸನಗಳಲ್ಲಿ ಕೃಷ್ಣಪಕ್ಷವನ್ನು ಆ ಹೆಸರಿನಿಂದ ಕರೆಯುವ ಜೊತೆಗೆ ಬಹುಳ ಪಕ್ಷವೆಂದು ಕರೆಯಲಾಗಿದೆ. ಹಿರೇಕಣಗಿ ಮತ್ತು ಸವಣೂರು ಶಾಸನಗಳಲ್ಲಿ ಈ ನಿದರ್ಶನಗಳನ್ನು ಕಾಣಬಹುದು. ಉಳಿದಂತೆ ಈ ಪಕ್ಷವನ್ನು ಬ, ಬಹುಳ, ಎಂದು ಗುರುತಿಸಲಾಗಿದೆ. ಇನ್ನು ಶುಕ್ಲಪಕ್ಷವನ್ನು ಶುದ್ಧ,ಸು,ಸುದ್ಧ, ಸುಕ್ಲ ಎಂದು ಉಲ್ಲೇಖಿಸಲಾಗಿದೆ. ಪಂಚಾಂಗದ ಪ್ರಕಾರ ಹುಣ್ಣಿಮೆಯ ವರೆಗಿನ ಕಾಲವನ್ನು ಶುಕ್ಲಪಕ್ಷವೆಂದು ಕರೆಯಲಾಗುತ್ತದೆ. ಹಾವೇರಿ ಪರಿಸರದ ಜೈನ ಶಾಸನಗಳಲ್ಲಿ ಈ ಮಾದರಿಯ ಪಕ್ಷಗಳ ಗುರುತಿಸುವಿಕೆ ಇದ್ದು ಕೃಷ್ಣ ಪಕ್ಷದ =೧೮, ಶುಕ್ಲ ಪಕ್ಷದ–೨೮ ಉಲ್ಲೇಖಗಳು ದೊರೆಯುತ್ತವೆ.

## ೦೯. ಗ್ರಹಣ.

ಆಗಸದಲ್ಲಿ ಚಲಿಸುವ ಗ್ರಹಗಳು ಒಂದಕ್ಕೊಂದು ಅಡ್ಡ ಬರುವ ಪರಿಣಾಮವಾಗಿ ಗ್ರಹಣಗಳು ಉಂಟಾಗುತ್ತವೆ. ಗ್ರಹಗಳ ಕತ್ತಲೆ ಬೆಳಕಿನಾಟದ ಗ್ರಹಣಗಳು ನಮ್ಮ ಪೂರ್ವಿಕರಿಗೆ ಆಶ್ಚರ್ಯ, ಭಯ, ದಿಗ್ಭ್ರಮೆ, ಪೂಜ್ಯ ಭಾವನೆಗಳನ್ನು ಉಂಟು ಮಾಡಿರಲಿಕ್ಕೂ ಸಾಕು. ಅಂತೆಯೇ ಗ್ರಹಣಗಳ ಕುರಿತು ಶುಭ ಅಶುಭ ಲೆಕ್ಕಾಚಾರಗಳು ಪ್ರಾರಂಭವಾದವು. ಅವುಗಳ ನಿವಾರಣೆಗೆ ಪೂಜೆ ಪುನಸ್ಕಾರಾಧಿಗಳು, ದಾನ ಕೊಡುವ ಪದ್ಧತಿಯು ಬಹು ಹಿಂದಿನಿಂದಲೂ ಜಾರಿಯಲ್ಲಿದ್ದುದ್ದಕ್ಕೆ ಶಾಸನಗಳು ಆಧಾರವಾಗಿ ನಿಲ್ಲುತ್ತವೆ. ಸೂರ್ಯಗ್ರಹಣ, ಚಂದ್ರಗ್ರಹಣದಂದು ದಾನ ಕೊಡುವ ಪದ್ಧತಿ ಶ್ರೇಷ್ಠಕರವಾದದ್ದು ಎಂಬ ನಂಬಿಕೆಗಳಿವೆ. ಜೈನಸಂಪ್ರದಾಯದಲ್ಲೂ ಗ್ರಹಣಗಳಂದು ದಾನಕೊಟ್ಟ ಉದಾಹರಣೆಗಳು ಹಾವೇರಿ ಪರಿಸರದಲ್ಲಿ ಲಭ್ಯವಿದೆ.

ಅರಟಾಳದ ಕ್ರಿ.ಶ. ೧೧೨೨ರಲ್ಲಿ ಗಂಗರ ಬೊಮಿಸೆಟ್ಟಿ ಕಟ್ಟಿಸಿದ ಪಾರ್ಶ್ವನಾಥ ಜಿನಾಲಯಕ್ಕೆ ಮೂಱುಂಕೇರಿಯ ಪ್ರಭುಗಾವುಂಡರು, ಅರವತ್ತೊಕಲರು, ಅಯಿನೂರ್ವ್ವರು ಗದ್ದೆ, ಮತ್ತರು ಭೂಮಿ, ಎಣ್ಣೆ, ನಿವೇಶನವನ್ನು ಬಿಟ್ಟರು. ಸೂರ್ಯಗ್ರಹಣದ ದಿನ ಅಮವಾಸೆಯಂದು ಈ ದಾನಪ್ರಕ್ರಿಯೆ ನಡೆದಿದೆ.[೨೦೩] ಸೂರ್ಯಗ್ರಹಣದಷ್ಟೇ ಚಂದ್ರಗ್ರಹಣವೂ ಶ್ರೇಷ್ಠ. ಗೊಟ್ಟಗಡಿ. (ನದಿಹರಳಹಳ್ಳಿ) ಯಲ್ಲಿ ನಾಗಗಾವುಂಡನು ಕ್ರಿ.ಶ. ೧೧೬೮ರಲ್ಲಿ ಕಟ್ಟಿಸಿದ ವೃಷಭಜಿನೇಂದ್ರನ ಬಸದಿಗೆ ಸೋಮ (ಚಂದ್ರ) ಗ್ರಹಣದ ಹುಣ್ಣಿಮೆಯಂದು ನಾಗಗಾವುಂಡ ರಿಶಿ ಕಂತಿಯರ ಆಹಾರಕ್ಕೆ, ಖಂಡಸ್ಪುಟಿತ ಜೀರ್ಣೋದ್ಧಾರಕ್ಕೆ, ತೋಟ, ಗದ್ದೆ, ಮತ್ತರುಭೂಮಿ, ಗಾಣಗಳನ್ನು ದಾನ ಮಾಡುತ್ತಾನೆ.[೨೦೪]

## ೧೦. ಅಮವಾಸೆ.

ಪಂಚಾಂಗದ ಪ್ರಕಾರ ತಿಂಗಳ ಕಡೆಯ ದಿನ ಅಮವಾಸೆಯಾಗಿರುತ್ತದೆ. ಇದು ಕೃಷ್ಣಪಕ್ಷದ ೧೫ ನೆಯ ದಿನವೂ ಹೌದು. ಸಾಮಾನ್ಯವಾಗಿ ಈ ದಿನ ತಿಂಗಳ ಮಧ್ಯದಲ್ಲಿ ಬರುತ್ತದೆ. ಈ ದಿನ

ಶುಭಕಾರ್ಯಗಳನ್ನು ಮಾಡುವ ಪದ್ಧತಿ ಇಲ್ಲ. ಆದರೆ ಸೂರ್ಯಗ್ರಹಣದಂದು ಅಮವಾಸೆ ಬಂದರೆ ಅದು ಶ್ರೇಷ್ಠವೆಂದು ಶಾಸನಗಳಲ್ಲಿ ಪರಿಗಣಿಸಲಾಗಿದೆ. ದೇವತಾ ಸ್ಮಾರಕಕ್ಕೆ ವ್ಯಕ್ತಿಗಳಿಗೆ ಇತರೆ ಕಾರ್ಯಗಳಿಗೆ ದಾನಕೊಟ್ಟ ದಾಖಲೆಗಳಿವೆ. ಅರಟಾಳದ ಜಿನಾಲಯಕ್ಕೆ ಈ ದಿನದಂದು ದಾನಗಳು ಸಂದಿವೆ.

## ೧೧. ಹುಣ್ಣಿಮೆ.

ತಿಂಗಳ ಮೊದಲನೆಯ ದಿನಕ್ಕೆ ಹುಣ್ಣಿಮೆ ಎನ್ನುವರು. ಈ ದಿನ ಚಂದ್ರ ಪೂರ್ಣವಾಗಿ ಕಾಣುವನು. ಸಂಸ್ಕೃತದಲ್ಲಿ ಪೌರ್ಣಮಿ ಎಂಬ ಹೆಸರು ಇದಕ್ಕಿದೆ. ಶುಕ್ಲ ಪಕ್ಷದ ಕಡೆಯ ದಿನವಾದ ಹುಣ್ಣಿಮೆಯ ದಿನದಂದು ದಾನಕೊಟ್ಟ ಒಂದು ಉದಾಹರಣೆ ಹಾವೇರಿ ಪರಿಸರದ ಜೈನ ಶಾಸನವೊಂದರಲ್ಲಿ ದೊರೆಯುತ್ತದೆ. ಕ್ರಿ.ಶ. ೧೧೬೮ ರಲ್ಲಿ ನಾಗಗಾವುಂಡ ಗೊಟ್ಟಗಡಿಯಲ್ಲಿ ತಾನು ಕಟ್ಟಿಸಿದ ವೃಷಭ ಜಿನಾಲಯಕ್ಕೆ 'ಚೈತ್ರದ ಪುಣ್ಣಮಿ' ಯೆಂದು ದಾನ ನೀಡಿದ್ದಾನೆ.[೨೦೫] ಪೌರ್ಣಮಿಯ ತದ್ಭವ ಪುಣ್ಣಮಿಯಾದದ್ದು ಗಮನಿಸಬೇಕು. ಗುತ್ತಲದ ಪಾರ್ಶ್ವನಾಥ ಬಸದಿಗೂ ಸಹ ಕ್ರಿ.ಶ. ೧೧೬೨ರ ಹುಣಮೆಯಂದು ದಾನ ಸಂದಿದೆ.

## ೧೨. ಇತರೆ.

ಸಂವತ್ಸರಗಳು ಮಾಸ, ಪಕ್ಷ ಹುಣ್ಣಿಮೆ, ಅಮವಾಸೆಗಳನ್ನು ಹೊರತುಪಡಿಸಿ ಶಾಸನಗಳಲ್ಲಿ ವಾರ, ಆಯನ, ಸಮಯಗಳು ಉಲ್ಲೇಖಗೊಂಡಿವೆ. ದಾನಶಾಸನಗಳಲ್ಲಿ ಸಂಕ್ರಾಂತಿ ಉಲ್ಲೇಖ ಹೆಚ್ಚಾಗಿ ಕಂಡು ಬರುತ್ತಿದ್ದು ಆ ದಿನವೇ ಬಸದಿಗಳಿಗೆ ದಾನ ಬಿಡಲಾಗಿದೆ. ಸಂಕ್ರಾಂತಿ, ಸೂರ್ಯ ತನ್ನ ದಿಕ್ಕನ್ನು ಬದಲಿಸುವ ಮತ್ತು ಮಕರ ರಾಶಿಗೆ ಪ್ರವೇಶ ಮಾಡುವ ದಿನವಾದ್ದರಿಂದ ಈ ಶುಭದಿನದಂದು ದಾನ ಮಾಡುವುದು ಒಳ್ಳೆಯದೆಂದು ಜನಪದರ ನಂಬಿಕೆ. ಅದಲ್ಲದೆ ಇದು ಉತ್ತರಾಯಣದ ಪುಣ್ಯಕಾಲ ಆಗಿದ್ದು ಸಂಕ್ರಾಂತಿ ಮತ್ತು ಉತ್ತರಾಯಣ ಒಟ್ಟಿಗೆ ಇರುವ ಉಲ್ಲೇಖವನ್ನು ಮೋಟೆಬೆನ್ನೂರು, ಬೆಳವತ್ತಿ ಮತ್ತು ಗುತ್ತಲ ಜೈನಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಪುಷ್ಯ ಮಾಸದ ಉತ್ತರಾಯಣ ಒಂದರ ಉಲ್ಲೇಖ ನೇರಲಗೆಯ ಶಾಸನದಲ್ಲಿದ್ದು ಜೇಷ್ಠ ಮಾಸದ ಸಂಕ್ರಾಂತಿಯೊಂದು ಮಂತಗಿಯ ಕ್ರಿ.ಶ. ೧೧೫೫ ರ ಶಾಸನದಲ್ಲಿ ವ್ಯಕ್ತವಾಗಿದೆ.

ಶಾಸನಗಳಲ್ಲಿ ವಾರಗಳ ಉಲ್ಲೇಖಗಳಿದ್ದು ಎಲ್ಲಾ ವಾರದ ದಿನಗಳ ಹೆಸರನ್ನು ಹೆಸರಿಸಲಾಗಿದೆ. ಭಾನುವಾರವನ್ನು ಆದಿ, ಆದಿತ್ಯವಾರವೆಂದು, ಸೋಮವಾರವನ್ನು ಚಂದ್ರ ಸೋಮ, ಸೋಮವಾರವೆಂದು, ಮಂಗಳವಾರವನ್ನು ಮಂಗಳ, ಕುಜವಾರವೆಂದು, ಬುಧವಾರವನ್ನು ಅದೇ ಹೆಸರಿಂದ, ಗುರುವಾರವನ್ನು ಗು, ಗುರುವಾರ, ಬೃಹಸ್ಪತಿವಾರ, ಬ್ರಿಹಸ್ಪತಿ, ಬ್ರಿಹವಾರ, ಬ್ರಹ್ಮಸ್ಪತಿ ವಾರವೆಂದು, ಶುಕ್ರವಾರವನ್ನು ಸು, ಸುಕ್ರವಾರ, ಶುಕ್ರವಾರವೆಂದು, ಶನಿವಾರವನ್ನು ಸನಿವಾರ,

ವಡ್ಡವಾರ ಎಂದು ಪ್ರತಿನಾಮದಿಂದ ಹೆಸರಿಸಲಾಗಿದೆ. ಸೋಮವಾರ ಅತಿ ಹೆಚ್ಚು ಉಲ್ಲೇಖಗೊಂಡರೆ ಶನಿವಾರ ಮತ್ತು ಮಂಗಳವಾರ ಕಡಿಮೆ ಉಲ್ಲೇಖವಾಗಿವೆ. ವಾರದ ಒಟ್ಟು ಉಲ್ಲೇಖ ಇಂತಿವೆ.

| | |
|---|---|
| ೧ ಭಾನುವಾರ-೦೫ | ೫ ಗುರುವಾರ-೧೦ |
| ೨ ಸೋಮವಾರ-೧೫ | ೬ ಶುಕ್ರವಾರ-೦೬ |
| ೩ ಮಂಗಳವಾರ-೦೨ | ೭ ಶನಿವಾರ-೦೨ |
| ೪ ಬುಧವಾರ-೦೯ | |

### ೧೩. ತಿಥಿ.

ತಿಥಿಗಳು ಒಟ್ಟು ೧೪ ಇದ್ದು ೧೫ನೆಯ ದಿನ ಹುಣ್ಣಿಮೆ ಅಥವಾ ಅಮವಾಸೆ ಬರುತ್ತದೆ. ಒಂದು ತಿಂಗಳಲ್ಲಿ ಎರಡು ಭಾರಿ ಪುನರಾವರ್ತಿತವಾಗುವ ತಿಥಿಗಳು ಶಾಸನದಲ್ಲಿ ವ್ಯಕ್ತವಾಗಿದೆ.

| | | | | | |
|---|---|---|---|---|---|
| ೧ | ಪ್ರತಿಪದೆ (ಪಾಡ್ಯ) | ೬ | ಷಷ್ಠಿ | ೧೧ | ಏಕಾದಶಿ |
| ೨ | ದ್ವಿತೀಯ (ಬಿದಿಗೆ) | ೭ | ಸಪ್ತಮಿ | ೧೨ | ದ್ವಾದಶಿ |
| ೩ | ತೃತೀಯ (ತದಿಗೆ) | ೮ | ಅಷ್ಟಮಿ | ೧೩ | ತ್ರಯೋದಶಿ |
| ೪ | ಚತುರ್ಥಿ (ಚೌತಿ) | ೯ | ನವಮಿ | ೧೪ | ಚತುರ್ದಶಿ |
| ೫ | ಪಂಚಮಿ | ೧೦ | ದಶಮಿ | ೧೫ | ಪೌರ್ಣಿಮೆ / ಅಮವಾಸೆ[೨೦೬] |

ಶಾಸನದಲ್ಲಿ ತಿಥಿಗಳನ್ನು ಪಕ್ಷವನ್ನು ಕೊಟ್ಟು ದಿನಗಳನ್ನು ಸಂಖ್ಯೆ ರೂಪದಲ್ಲಿ ತೋರಿಸಲಾಗುತ್ತದೆ. ಉದಾ ಬಹುಳ-೧೦, ಶುದ್ಧ ೧೦, ಬಹುಳ ದಶಮಿ, ಸುದ್ಧ ದಶಮಿ ಎಂದರೆ ೧೦ನೆಯ ದಿನ ಅಥವಾ ದಶಮಿ ಎಂದು ತಿಳಿಯಬೇಕು. ಬಹುಳ-೧೦ ಎಂಬುದು ಹುಣ್ಣಿಮೆಯ ೧೧ನೆಯ ದಿನವು (ಕೃಷ್ಣಪಕ್ಷ), ಶುದ್ಧ-೧೦ ಎಂದರೆ ಅಮವಾಸೆಯ ಹತ್ತನೆಯ ದಿನವೆಂದು ಗ್ರಹಿಸಬೇಕು. ಹಾವೇರಿ ಪರಿಸರದ ಜೈನ ಶಾಸನಗಳಲ್ಲಿ ಉಲ್ಲೇಖಗೊಂಡ ತಿಥಿಗಳನ್ನು ಈ ರೀತಿ ಪಟ್ಟಿ ಮಾಡಬಹುದು.

| | | |
|---|---|---|
| ಬಹುಳ ೧-೩ | ಸುದ್ಧ ೧-೦೬ | ಸು ಬಿದಿಗೆ - ೦೧ |
| ಬಹುಳ ೩-೩ | ಸುದ್ಧ ೩-೦೨ | ಸು ತದಿಗೆ - ೦೧ |
| ಬಹುಳ ೪-೦೧ | ಸುದ್ಧ ೫-೦೫ | ಸು ಚೌತಿ - ೦೧ |
| ಬಹುಳ ೫-೦೨ | ಸುದ್ಧ ೭-೦೧ | ಸು ಪಂಚಮಿ - ೦೩ |

| | | |
|---|---|---|
| ಬಹುಳ ೬-೦೧ | ಸುದ್ಧ ೮-೦೩ | ಸು ದಶಮಿ - ೦೧ |
| ಬಹುಳ ೮-೦೧ | ಸುದ್ಧ ೯-೦೧ | ಸು ಏಕಾದಶಿ - ೦೧ |
| ಬಹುಳ ೧೦-೦೧ | ಸುದ್ಧ ೧೦-೦೧ | ಸು ಚತುರ್ದಸಿ - ೦೧ |
| ಬಹುಳ ೧೧-೦೨ | ಸುದ್ಧ ೧೧-೦೩ | |
| ಬಹುಳ ೧೩-೦೧ | | |

ಬಹುಳ ಪಂಚಮಿ - ೦೧
ಬಹುಳ ಅಷ್ಟಮಿ -೦೧
ಕೃಷ್ಣಪಕ್ಷ ಚತುರ್ದಶ- ೦೧
ಬಹುಳ ಪಕ್ಷದಷ್ಟಮಿ-೦೧

ಒಂದು ಶಾಸನದ ಕಾಲವನ್ನು ಗುರುತಿಸಲು ವಾರ, ಪಕ್ಷ, ಸಂವತ್ಸರ, ಇತ್ಯಾದಿಗಳು ಬಹುಮುಖ್ಯವಾದವುಗಳು. ಒಂದು ವೇಳೆ ಶಾಸನದಲ್ಲಿ ಇವು ಇರದೇ ಇದ್ದ ಪಕ್ಷದಲ್ಲಿ ಲಿಪಿ ಸ್ವರೂಪ, ಐತಿಹಾಸಿಕ ವ್ಯಕ್ತಿ, ರಾಜಮನೆತನದಿಂದ ಶಾಸನದ ಕಾಲವನ್ನು ಗುರುತಿಸಲು ಸಾಧ್ಯ. ಆದರೆ ನಿಖರವಾದ ದಿನಾಂಕ ಮತ್ತು ವರ್ಷಗಳನ್ನು ಗುರುತಿಸಲು ಅಸಾಧ್ಯ. ಹಾವೇರಿ ಪರಿಸರದಲ್ಲಿ ಈ ಎರಡೂ ಮಾದರಿಯ ಜೈನಶಾಸನಗಳಿವೆ. ಇವುಗಳ ಕಾಲಗಳನ್ನು ಹೇಳುವಾಗ ಹಿಂದೂ ಪಂಚಾಂಗದ ಅಂಗಗಳನ್ನೇ ಬಳಸಲಾಗಿದ್ದು ಜೈನ ಸಂಪ್ರದಾಯದ ಯಾವುದೇ ಹಬ್ಬ, ನೋಂಪಿ, ಆಚರಣೆಯ ದಿನಗಳ ಉಲ್ಲೇಖಗಳಿಲ್ಲ.

ಹಾವೇರಿ ಜೈನಶಾಸನಗಳ ಕಾಲಗಣನೆಗೆ ಸಂಬಂಧಿಸಿದ ವಿಶೇಷ ಎಂದರೆ ಹೊತ್ತನ್ನು ಉಲ್ಲೇಖಿಸಿರುವುದು. ಈ ಅಂಶ ನಿಸಿಧಿ ಶಾಸನಗಳಲ್ಲಿ ಮಾತ್ರ ಕಂಡು ಬರುವುದು. ಸಾವನ್ನು ಆಹ್ವಾನಿಸಿದ ವ್ರತಧಾರಿ ಜೀವತ್ಯಾಗ ಮಾಡಿದ ಸಮಯವನ್ನೂ ನಿಸಿಧಿ ಶಾಸನಗಳಲ್ಲಿ ಉಲ್ಲೇಖಿಸುವ ಪ್ರಕ್ರಿಯೆ ಜೈನಶಾಸನಗಳಲ್ಲಿ ಮಾತ್ರ ಕಂಡುಬರುತ್ತದೆ.

> ಶ್ರೀಮನ್ನಾಳ್ಪಭು ಭರತಗಾಮುಂಡ 'ಮೂರನೆಯ ಝಾಮಕ್ಕೆ' ಸ್ವರ್ಗಸ್ತನಾದನು. . .[೨೦೭]
> ಗುಣಮತೌವ್ವೆಗಳು ವುದಯವಾದ ಜಾವಕ್ಕೆ ಸಮಾಧಿ ವಿಧಿಯಿ ಮುಡಿಪಿ. . .[೨೦೮]
> ಶುಕ್ರವಾರದ 'ಬೆಳಗಹ ಜಾವ' ಸಮಾಧಿಯ ಮುಡಿಸಿ ಸ್ವರ್ಗ್ಗಸ್ಥನಾದ. . .[೨೦೯]
> ಬುಧವಾರದ 'ರಾತ್ರಿಯೊಳು' ಸಮಾಧಿ ವಿದಿಯಂ ಮುಡಿಪೆ. . .[೨೧೦]

**೦೫. ಶಾಪಾಶಯಗಳು.**

ಮನುಷ್ಯ ನಾಗರಿಕತೆಯತ್ತ ದಾಪುಗಾಲು ಹಾಕುವುದರ ಜೊತೆ ಜೊತೆಗೆ ಸ್ವಾರ್ಥತೆಯ ಗುಣವನ್ನು ಬೆಳೆಸಿಕೊಂಡ. ಈ ಗುಣ ಹುಟ್ಟಲು ಬಹುಮುಖ್ಯ ಕಾರಣ ಸಂಪತ್ತು. ಲೋಹ (ಬೆಳ್ಳಿ,

ಬಂಗಾರ ಕಬ್ಬಿಣ ಇತ್ಯಾದಿ) ದನಕರುಗಳು, ಭೂಮಿ ದಿನಬಳಕೆಯ ಸೌಕರ್ಯಗಳಾಗಿದ್ದರಿಂದ ಅವು ಮಾನವನಿಗೆ ಸಂಪತ್ತು ಎನ್ನಿಸತೊಡಗಿದವು. ಅಂತೆಯೇ ಅವುಗಳ ಮೌಲ್ಯವು ಹೆಚ್ಚ ತೊಡಗಿತು. ಇವುಗಳ ಅಪಹರಣ, ಕಬಳಿಕೆ ಮಹಾಭಾರತ ಕಾಲದಿಂದಲೂ ನಡೆದುಕೊಂಡು ಬಂದಿದೆ. ಕೌರವರು ಪಾಂಡವರು ರಕ್ತ ಚೆಲ್ಲಿದ್ದೇ ನೆಲಕ್ಕಾಗಿ. ಕೌರವರು ವಿರಾಟನ ತುರುಗಳನ್ನು ಅಪಹರಿಸಿದ್ದು ಅವು ಸಂಪತ್ತು ಎಂತಲೆ. ಇನ್ನು ಕರ್ನಾಟಕದ ರಾಜ್ಯಸತ್ತೆಗಳು ಸಂಪತ್ತಿಗೋಸ್ಕರ ಯುದ್ಧ ಮಾಡಿದ್ದೇ ಹೆಚ್ಚು. ಇದರಲ್ಲಿ ವಯ್ಯಕ್ತಿಕ ಪ್ರತಿಷ್ಠೆಗೇನು ಕೊರತೆ ಇರಲಿಲ್ಲ. ಸೋತ ರಾಜ ಸಂಪತ್ತಿನ ರೂಪವಾದ ರಜತ ಕನಕಾದಿ ಪರಿಕರಗಳನ್ನು ಕಪ್ಪವಾಗಿ ಕೊಡಬೇಕಿತ್ತು.

ರಾಜಸತ್ತೆಯ ಕಾಲದಲ್ಲಿ ಭೂಮಿ ಸಂಪತ್ತಾಗಿ ಮಾರ್ಪಟ್ಟ ನಂತರ ಅದನ್ನು ಅಪಹರಣ ಮಾಡುವ ಕ್ರಿಯೆಯಷ್ಟೆ ಅಲ್ಲ ದಾನ ಕೊಡುವ ಪ್ರಕ್ರಿಯೆಗಳು ಪ್ರಾರಂಭಗೊಂಡವು. ಕನ್ನಡ ನಾಡಿನ ಸಾವಿರಾರು ಶಾಸನಗಳಲ್ಲಿ ರಾಜರು, ರಾಣಿಯರು, ಮಂತ್ರಿಗಳು, ದಂಡನಾಯಕರು, ನಾಳ್ಗಾವುಂಡರು ವ್ಯಾಪಾರಿಗಳು, ಗಾವುಂಡರು ಒಟ್ಟಿನಲ್ಲಿ ಭೂ ಮಾಲಿಕರು ದೇವತಾ  ಸ್ಮಾರಕಗಳಿಗೆ, ವ್ಯಕ್ತಿಗಳಿಗೆ ದಾನ ಕೊಟ್ಟ ವಿವರಗಳು ದಾಖಲಾಗಿವೆ. ಹಾಗೆ ನೋಡಿದರೆ ದಾನ ಕೊಡುವ ಪ್ರಕ್ರಿಯೇ ಪ್ರಾರಂಭವಾದ ಮೇಲೆಯೇ ಶಾಸನಗಳು ವೈವಿಧ್ಯಮಯವಾಗತೊಡಗಿದವು. ಕೆಲವೊಂದು ಬಾರಿ ಮನುಷ್ಯ ಎಷ್ಟು ಸಂಕುಚಿತವಾಗತೊಡಗಿದನೆಂದರೆ ದಾನ ಕೊಟ್ಟು ಭೂಮಿಯನ್ನು ಸಹ ಕಬಳಿಸಲು ಮುಂದಾಗತೊಡಗಿದ. ಈ ತರಹದ ವ್ಯಕ್ತಿಗಳಿಂದ ಭೂದಾನ ಸ್ವೀಕರಿಸಿದ ಫಲಾನುಭವಿ ಕೊಟ್ಟ ಸಂಪತ್ತನ್ನು ಕಾಪಾಡಿಕೊಳ್ಳಲು ಸೃಷ್ಟಿ ಮಾಡಿದ ಪಾಪ-ಪುಣ್ಯದ ವಾಕ್ಕುಗಳೇ ಶಾಪಾಶಯಗಳಾದವು.

ಕ್ರಿ.ಶ. ಎರಡನೆಯ ಶತಮಾನದಿಂದ ಸಂಸ್ಕೃತ-ಪ್ರಾಕೃತ ಮಿಶ್ರ ಶಾಸನಗಳು ರಚನೆಯಾರಂಭವಾದ ಮೇಲೆ ಈ ಶಾಪಾಶಯ ಪದ್ಯಗಳು ಆರಂಭವಾಗುತ್ತವೆ. ಅದರಲ್ಲೂ ತಾಮ್ರಶಾಸನಗಳಲ್ಲಿ ಇವು ಅಧಿಕವಾಗಿರುತ್ತವೆ. ಇದಕ್ಕೆ ಕಾರಣ ತಾಮ್ರಶಾಸನಗಳು ಕಲಿತ ಬ್ರಾಹ್ಮಣರ ವೈಯಕ್ತಿಕ ದಾಖಲೆಗಳಾಗಿದ್ದದ್ದು ಹಾಗೂ ರಾಜಕೀಯ ಅಸ್ಥಿರತೆಯಿಂದ ದಾನಗಳು ವ್ಯಕ್ತಿಯಿಂದ ವ್ಯಕ್ತಿಗೆ ಬದಲಾಗುತ್ತಿದ್ದುವು. ಹೀಗಾಗಿ ಇಂತಹ ಬಲಾತ್ಕಾರ ಬದಲಾವಣೆಯನ್ನು ಸ್ವಲ್ಪವಾದರೂ ತಡೆಯಲು ಶಾಪಾಶಯಗಳನ್ನು ಬಳಸಿದರು. ಇವು ತಾವು ಹೇಳಿದ್ದಲ್ಲ ಹಿಂದಿನವರು ಹೇಳಿದ್ದೆಂಬುದನ್ನು ಮನವರಿಕೆ ಮಾಡಲು ಶಾಸನಗಳ ಅಂತ್ಯದಲ್ಲಿ 'ಅಪಿ ಚಾತ್ರ ಮನುಗೀತಾಃ' ಶ್ಲೋಕಾಃ ಎಂದೋ, 'ಅತ್ರ ಮನುಗೀತಾ ಶ್ಲೋಕಾ ಭವಂತಿ' ಎಂದೋ, 'ಉಕ್ತಂ ಚ ಭಗವತಾ ವೇದವ್ಯಾಸೇನ' ಎಂದೋ ಹೇಳಿ ಶಾಪಾಶಯ ಶ್ಲೋಕಗಳನ್ನು ರಚಿಸುತಿದ್ದರು.[೨೧೧]

ಬಹುಭಿರ್ವ್ವಸುಧಾಭುಕ್ತಾ ರಾಜಬಿಸ್ಸಗರಾಭಿಃ
ಯಸ್ಯ ಯಸ್ಯ ಯದಾ ಭೂಮಿಃ ತಸ್ಯ ತಸ್ಯ ತದಾ ಫಲಮ್[೨೧೨]

ಇದು ಪ್ರಥಮ ಬಾರಿಗೆ ಮೃಗೇಶವರ್ಮನ ಮೂರನೆಯ ವರ್ಷದ ದೇವಗಿರಿ ತಾಮ್ರ ಜಿನಶಾಸನದಲ್ಲಿ ಕಂಡು ಬರುತ್ತದೆ. ಸಗರ ರಾಜನಾದಿಯಾಗಿ ಈ ಭೂಮಿಯನ್ನು ಸಾಕಷ್ಟು ರಾಜರು ಆಳಿದ್ದಾರೆ. ಅವರು ಹೇಗೆ ಹೇಗೆ ಭೂಮಿಯನ್ನು ಅನುಭವಿಸಿದ್ದಾರೆಯೋ ಹಾಗೆಯೇ ಫಲವನ್ನೂ ಪಡೆದಿರುತ್ತಾರೆ. ಯುವರಾಜ ದೇವವರ್ಮನ ಮತ್ತು ಶಿವಮೃಗೇಶವರ್ಮ ದೇವಗಿರಿ ತಾಮ್ರ ಜಿನಶಾಸನದಲ್ಲಿ, ಚಾಲುಕ್ಯರ ವಿನಯಾದಿತ್ಯನ ಶಿಗ್ಗಾವಿ ತಾಮ್ರ ಶಾಸನದಲ್ಲಿ, ಅವರದೇ ಆಡೂರು ಶಾಸನದಲ್ಲಿ, ರಾಷ್ಟ್ರಕೂಟರ ಕದರಮಂಡಲಗಿ ಶಾಸನಗಳಲ್ಲಿ ಪುನರುಕ್ತಿಗೊಂಡಿದೆ. ೯ನೆಯ ಶತಮಾನದವರೆಗೂ ಬಳಕೆಗೊಂಡ ಈ ಶ್ಲೋಕ ೧೦ನೆಯ ಶತಮಾನದ ಮೋಟೆಬೆನ್ನೂರು ಶಾಸನದಲ್ಲಿ ಸಗರ ರಾಜಾಧಿಗಳನ್ನು ಕೈಬಿಟ್ಟು 'ಯಸ್ಯಯಸ್ಯಯದಾ ಭೂಮಿಃ ತಸ್ಯ ತಸ್ಯ ತದಾ ಫಲಂ' ಮಾತ್ರ ಬಳಸಲಾಗಿದೆ.

ಸ್ವದತ್ತಾಮ್ಪರದತ್ತಂ ವಾಯೋ ಹರೇತ ವಸುನ್ಧರಾ
ಷಷ್ಟಿಂ ವರ್ಷ ಸಹಸ್ರಾಣಿ ನರಕೇ ಪಚ್ಯತೇ ತು ಸಃ॥[೨೧೩]

ತಾನಾಗಲೀ ಇತರರೇ ಆಗಲಿ ಕೊಡುಗೆಯಾಗಿ ಕೊಟ್ಟ ಭೂಮಿಯನ್ನು ಕಬಳಿಸಿದರೆ ಅರವತ್ತು ಸಾವಿರ ವರ್ಷಗಳ ಕಾಲ ನರಕದಲಿ ಇರಬೇಕಾಗುತ್ತದೆ ಎಂಬುದು ಮೇಲಿನ ಶ್ಲೋಕದ ಅರ್ಥ. ಇದು ಬನವಾಸಿ ಕದಂಬರ ಮೃಗೇಶವರ್ಮನ ದೇವಗಿರಿ ತಾಮ್ರ ಶಾಸನದಲ್ಲಿ ಮೊದಲಬಾರಿಗೆ ಉಕ್ತವಾಗಿದೆ. ತದನಂತರ ಇದೇ ಊರ ದೇವವರ್ಮನ ತಾಮ್ರಶಾಸನದಲ್ಲಿ ವ್ಯಕ್ತವಾಗಿದೆ. ಕೊನೆಯ ನರಕೇ ಪಚ್ಯತೇ ತು ಸಃ ಎಂಬಲ್ಲಿ 'ವಿಷ್ಟಾಯಂ ಜಾಯೇತ ಕ್ರಿಮಿಃ (ಕ್ರಿಮಿಯಾಗಿ ಹುಟ್ಟುತಾರೆ) ಎಂದು ಚಾಲುಕ್ಯ ವಿನಯಾದಿತ್ಯನ ಶಿಗ್ಗಾವಿ ತಾಮ್ರಪಟದಲ್ಲಿ ಬದಲು ಮಾಡಿಕೊಳ್ಳಲಾಗಿದೆ. ಮುಂದೆ ಇದೇ ಅನುಕರಣೆ ಮೇದೂರು, ಕದರಮಂಡಲಗಿ, ಮೋಟೆಬೆನ್ನೂರು, ಅರಟಾಳ, ಮಂತಗಿ, ನೇರಲಗಿ, ನದಿಹರಳಹಳ್ಳಿ ಜಿನಶಾಸನಗಳಲ್ಲಿ ಕಂಡುಬರುತ್ತದೆ. ೫ ರಿಂದ ೧೨ ಒಟ್ಟು ೦೭ ಶತಮಾನಗಳ ಕಾಲ ಈ ಶ್ಲೋಕ ಬಳಕೆಯಾಗಿದೆ.

ಸ್ವನ್ದಾತುಂ ಸುಮಹಚ್ಚಕ್ಯ ದುಃಖಮನ್ಯಸ್ಯ ಪಾಲಸಂ
ದಾನಂ ವಾ ಪಾಲವೆತ್ತಿ ದಾಸಾಚ್ರೇಯೋನು ಪಾಲನಂ॥[೨೧೪]

ದಾನ ಕೊಟ್ಟ ಭೂಮಿಯನ್ನು ಕಾಪಾಡಿಕೊಳ್ಳುವುದು ಸವಾಲೆನಿಸಿದಾಗ ಹುಟ್ಟಿಕೊಂಡ ಶ್ಲೋಕವಿದು. ತಾನು ಪರರಿಗೆ ಕೊಡುವುದು ಕಷ್ಟ, ಇನ್ನೊಬ್ಬರು ಕೊಟ್ಟಿದ್ದು ಕಾಪಾಡಿಕೊಂಡು ಹೋಗುವುದು ಕಷ್ಟದ ಕೆಲಸ. ದಾನ ಕೊಡುವುದು ಕೊಟ್ಟಿದ್ದನ್ನು ರಕ್ಷಿಸುವುದು ಇವೆರಡರಲ್ಲಿ ದಾನದ ರಕ್ಷಣೆ ಮಾಡುವುದೇ ಶ್ರೇಯಸ್ಸನ್ನು ತಂದು ಕೊಡುತ್ತದೆ ಎಂಬ ಭಾವನೆಯನ್ನು ಅಪಹರಣಕಾರರಿಗೆ ನಾಟುವಂತೆ ಶಾಪೋಕ್ತಿ ಹೆಣೆಯಲಾಗಿದೆ. ಆದರೆ ಇದಕ್ಕೂ ಅವರು ಬಗ್ಗದಾದಾಗ

ದೇವಸ್ವಂ ತದ್ವಿಷಂ ಘೋರಂ ನ ವಿಷಂ ವಿಷಯಮುಚ್ಚತೇ
ವಿಷಮೇಕಾಕಿನಂ ಹನ್ತಿ ದೇವಸ್ವ ಪುತ್ರ ಪೌತ್ರಿಕಂ॥[೨೧೫]

ದೇವರ ಸ್ವತ್ತನ್ನು ಕದಿಯುವುದು ಘನಘೋರವಾದ ವಿಷಯವಿದ್ದಂತೆ. ವಿಷ ಒಬ್ಬನನ್ನು ಮಾತ್ರ ಕೊಲ್ಲುತ್ತದೆ. ದೇವರ ಸ್ವತ್ತು ಕಬಳಿಕೆ ಮಾಡಿದವನ ಮಕ್ಕಳು ಮೊಮ್ಮಕ್ಕಳನ್ನು ಕೊಲ್ಲುತ್ತದೆ. ವಂಶವೇ ನಿರ್ವಂಶವಾಗುತ್ತದೆ ಎಂಬ ಕಲ್ಪನೆ ಮೇಲಿನ ಶ್ಲೋಕದ್ದು, ಇದು ವಿನಯಾದಿತ್ಯನ ಶಿಗ್ಗಾವ ತಾಮ್ರಪಟದಲ್ಲಿ ವ್ಯಕ್ತವಾಗಿದೆ. 'ದೇವಸ್ವಂ ತದ್ವಿಷಂ' ಬಿಟ್ಟು ಉಳಿದ ಶ್ಲೋಕವನ್ನಷ್ಟೇ ಕದರಮಂಡಲಿಗಿಯ ಶಾಸನದಲ್ಲಿ ಬಳಸಲಾಗಿದೆ.

ದಾನವನ್ನು ಕೆಡಿಸಿದವರಿಗೆ ಆಗುವ ಪರಿಣಾಮಗಳನ್ನು ಗದ್ಯದಲ್ಲಿ ಹೇಳುವ ಪ್ರಕ್ರಿಯೆಗಳು ಹಾವೇರಿ ಜೈನ ಶಾಸನಗಳಲ್ಲಿ ರಾಷ್ಟ್ರಕೂಟರ ಕಾಲಕ್ಕೆ ಆರಂಭಗೊಂಡವು. ಬ್ರಾಹ್ಮಣರು ಶ್ರೇಷ್ಠ ಎಂಬ ಕಲ್ಪನೆ ಪಂಡಿತ–ಪಾಮರ ವರ್ಗದ ಜ್ಞಾನವಲಯಗಳಲ್ಲಿ ಈ ಕಾಲಕ್ಕಾಗಲೇ ಅಚ್ಚಾಗಿತ್ತು. ಜೊತೆಗೆ ಹಸು ಶ್ರೇಷ್ಠ ಎಂಬ ಭಾವನೆಯೂ ಮೊಳೆತಿತ್ತು. ತೀರ್ಥಕ್ಷೇತ್ರವಾದ ವಾರಣಾಸಿ ಕ್ಷೇತ್ರವು ಹಿರಿಮೆಯನ್ನು ಶಾಪೋಕ್ತಿಗಳಲ್ಲಿ ತುಂಬಲಾಯಿತು. ಇವೆಲ್ಲಾ ಔತ್ತರೇಯದಿಂದ ಬಂದ ಆಚಾರಗಳು, ದಾಕ್ಷಿಣಾತ್ಯದಲ್ಲೂ ಇವುಗಳ ಶ್ರೇಷ್ಠತೆಯ ಪ್ರಭಾವವೇನು ಕಮ್ಮಿಯಾಗಲಿಲ್ಲ. ಇವುಗಳನ್ನು ಕಾಪಾಡಿದವನಿಗೂ ಕೊಟ್ಟವನಿಗೆ ಫಲ ಕೆಡಿಸಿದವನಿಗೆ ಪಾತಕ ತಪ್ಪಿದ್ದಲ್ಲ ಎಂಬ ಉಕ್ತಿಗಳು ಸಹಜವೆಂಬಂತೆ ಹುಟ್ಟಿಕೊಂಡವು. ಮೇದೂರು ಶಾಸನದಲ್ಲಿ 'ವಾರಣಾಸಿ ಸಾಸಿರ ಪಾರ್ವ್ವರು ಪಸುಮ ಕೊಂದ್ದ ಲೋಕಕ್ಕೆ ಸನ್ದೋನ್'[೨೧೬] ಇದು ಸ್ಪಷ್ಟ ಕನ್ನಡ ಶಾಪೋಕ್ತಿ. ಇದೇ ಅರ್ಥದ ವಾಕ್ಯ ಶಿರಗಂಬಿ ಶಾಸನದಲ್ಲಿ 'ಬಾರಣಾಸಿಯ ಸಾಸಿರ್ವಪಾರ್ವರುಂ ಸಾಸಿರಕವಿಲೆಉಮಂ ಕೊನ್ದೊರಪ್ಪರ್'[೨೧೭] ಮೇದೂರಿನ ಇನ್ನೊಂದು ಶಾಸನದಲ್ಲಿ 'ವಾರಣಾಸಿಯುಳ್ ಸಾಸಿರ ಕವಿಲೆಯುಮಂ ಸಾಸಿರ್ವಪ್ಪಾರ್ವರುಮಂ ಕೊನ್ದ ಪಜ್ಞಚ ಮಹಾಪಾತಕಂ,[೨೧೮] ಎಂದು ರಾಣೇಬೆನ್ನೂರು ಶಾಸನದಲ್ಲಂತೂ 'ಬಾರಣಾಸಿಯನಟಿುದೋ ಪಾತಕಂ'[೨೧೯] ಎಂದು ಇಡೀ ಕ್ಷೇತ್ರವನ್ನೇ ಹಾಳು ಮಾಡಿದಂತೆ ಎಂದು ತೀಕ್ಷ್ಣವಾಗಿ ಪ್ರತಿಕ್ರಿಯಿಸಲಾಗಿದೆ. ಮೋಟೇಬೆನ್ನೂರು ಶಾಸನದಲ್ಲಿ 'ವಾರಣಾಸಿಯ ಸಾಸಿರ್ವ್ವ ಪಾರ್ವರು ಸಾಸಿರ ಕವಿಲೆಯುಮನ್ಕೊನ್ದ ಲೋಕಕ್ಕೆ ಸನ್ದೋನಕ್ಕುಂ (ಲೋಕಕ್ಕೆ ಸಲ್ಲದವನು)[೨೨೦] ಎಂದು ರಾಷ್ಟಕೂಟರ ಶಾಸನಗಳಲ್ಲಿ ಹೇಳಲಾಗಿದೆ.

ಕಲ್ಯಾಣ ಚಾಳುಕ್ಯರ ಕಾಲಕ್ಕೆ ಈ ಶಾಪೋಕ್ತಿಯ ಋಣಾತ್ಮಕ ಋಣಭಾರದೊಂದಿಗೆ ಧನಾತ್ಮಕ ಋಣಾಂಶಗಳು ವ್ಯಕ್ತಗೊಳ್ಳತೊಡಗಿದವು. ಧರ್ಮವನ್ನು ಪ್ರತಿಪಾಲಿಸಿದವರಿಗೆ ವಾರಣಾಸಿ ತೀರ್ಥದಲ್ಲಿ ಸಾವಿರ ಗೋವುಗಳನ್ನು ಸಾವಿರ ಬ್ರಾಹ್ಮಣರಿಗೆ ಕೊಟ್ಟ ಫಲ ದೊರೆಯುತ್ತದೆ. ಧರ್ಮವನ್ನು ಅಳಿದವನಿಗೆ ಅದೇ ತೀರ್ಥದಲ್ಲಿ ಗೋವುಗಳನ್ನು ಬ್ರಾಹ್ಮಣರನ್ನು ಕೊಂದ ಮಹಾಪಾತಕ ಬರುತ್ತದೆ ಎಂಬುದು ಇವರ ಕಾಲದಲ್ಲಿ ಸಹಜ ಶಾಪೋಕ್ತಿ.

ಬೆಳವತ್ತಿಯ ಜಿನಶಾಸನದಲ್ಲಿ ಧರ್ಮವನ್ನು ಕಾಪಾಡುವವರು ಮಹಾಪುರುಷರು ಎಂದು ಕರೆದು ಅದನ್ನು ಕೆಡಿಸಿದವರು ಮಹಾಪಾತಕರು ಎಂದು ಕರೆದಿದೆ.

> "ಪ್ರತಿಪಾಳಿಸಿದ ಮಹಾಪುರುಷರ್ಗ್ಗೆ ಗಂಗೆ ವಾರಣಾಸಿ ಕುರುಕ್ಷೇತ್ರ ಪ್ರಯಾಗೆರ್ಗ್ಪ
> ತೀರ್ತ್ಥವೆಂಬೀ ಪುಣ್ಯತೀರ್ತ್ಥಂಗಳೊಳೆ ಸಾಯಿರ ಕವಿತಿಯ
> ಕೋಡುಂ ಕೊಳಗುಮಂ ಪಂಚರತ್ನದೊಳ್ ಕಟ್ಟಿಸಿ ಸಾಸಿರ್ವ್ವರ್ವ್ವೆದ
> ಪಾರಗರ್ಗ್ಗಭಯಮುಖಿಗೊಟ್ಟ ಫಲಮೀ ಧರ್ಮಮ ನೋಡದವರಾ
> ತೀರ್ತ್ಥಗಳೊಳನಿತು ಕವಿತೆಯುಮನನಿತು ಬ್ರಾಹ್ಮಣರು ಮನಳಿದರೆಂಬ
> ಮಹಾಪಾತಕರಪ್ಪರ್"[೨೨೧]

ಇಲ್ಲಿ ವಾರಣಾಸಿಯ ಜೊತೆಗೆ ಕುರುಕ್ಷೇತ್ರ ಪ್ರಯಾಗ, ತೀರ್ಥಗಳು ಗಂಗೆಯೂ ಸೇರಿಕೊಳ್ಳುತ್ತಾಳೆ. ಈ ಸ್ಥಳದಲ್ಲಿ ಕೊಟ್ಟ ಹಸು ಬರೀ ಹಸುವಲ್ಲ ಗಬ್ಬ ಹಸು, ಅಲ್ಲದೆ ಕೊಂಬು ಕಾಲುಗಳಿಗೆ ಪಂಚರತ್ನ ಕಟ್ಟಿಸಿಕೊಂಡ ಹಸು. ಒಂದು ಸಂಪತ್ತಿನೊಂದಿಗೆ ಇನ್ನೊಂದು ಸಂಪತ್ತು. ಇದೇ ಶಾಪಾಶಯದ ಸ್ವಲ್ಪ ಬದಲಾವಣೆಗೆ ನೇರಲಗಿ ಶಾಸನದಲ್ಲಿದೆ. ಇಲ್ಲಿ ಗಂಗೆಯ ಜೊತೆ ಯುಮುನಾ ನದಿಗಳನ್ನು ಸಂಗಮಿಸಲಾಗಿದೆ ಮತ್ತು ದಾನವನ್ನು 'ಶುಭದಿನದೊಳಿತ್ತ ಫಲಮಂ ಪಡೆವರ್' ಎಂದು ಶುಭ ಅಶುಭಗಳ ಶಕುನಗಳು ಸೇರಿಕೊಂಡಿವೆ.

ಕಳಚೂರ್ಯರ ನದಿಹರಳಹಳ್ಳಿ ಶಾಸನದಲ್ಲಿ 'ಸಾವಿರ ಕವಿಲೆಗಳ ಕೊಂಬು ಕೊಳಗಳನ್ನು ಹೊಂನಲು ಬೆಳ್ಳಿಯಲ್ಲಿ ಕಟ್ಟಿಸಿ ವೇದ ದ್ವಿಜರ್ಗ್ಗೆ ದಾನ ಮಾಡಿದ ಫಲ, ಧರ್ಮವನ್ನು ಅಳಿದವರಿಗೆ ಕವಿಲೆ ಬ್ರಾಹ್ಮಣರನ್ನು ಕೊಂದ ಫಲ ಎಂದು ಹೇಳಲಾಗಿದೆ'.[೨೨೨] ಒಟ್ಟಿನಲ್ಲಿ ಶಾಪಾಶಯಗಳೆಲ್ಲವು ವೈದಿಕರು ತಮ್ಮ ದಾನಭೂಮಿಯನ್ನು ಕಾಪಾಡಿಕೊಳ್ಳುವ ಸಲುವಾಗಿಯೇ ಹುಟ್ಟಿದವುಗಳಾಗಿವೆ. ಬೇರೆ ಬೇರೆ ಧರ್ಮದವರು ಆಗಾಗ ತಮ್ಮ ಧರ್ಮದ ಶ್ರೇಷ್ಠತೆಗಳನ್ನು ತಂದರೂ ಕೊನೆಗೆ ನಿಂತದ್ದು ವೈದಿಕ ಶಾಪೋಕ್ತಿ. ಈಗಲೂ ಬ್ರಾಹ್ಮಣರ ಹೊಲವನ್ನು ಕಬಳಿಸಿದವನು ಉದ್ಧಾರವಾಗೊಲ್ಲ ಎಂಬುದು ಜನಪದರ ನಂಬಿಕೆ.

### ೧೧. ಜೈನ ಶಾಪೋಕ್ತಿಗಳು.

ಜೈನಧರ್ಮ ಸಂಬಂಧಿತ ಶಾಪೋಕ್ತಿಗಳು ಕರ್ನಾಟಕದ ಶಾಸನಗಳಲ್ಲಿ ಬಂದಿದ್ದರೂ ಎಲ್ಲ ಜೈನಶಾಸನಗಳಲ್ಲಿ ಅನುಕ್ರಮಣಿಯಾಗಿಲ್ಲ. ಇಲ್ಲಿಯೂ ಸಹ ವೈದಿಕ ಶಾಪೋಕ್ತಿಗಳು ಬಳಕೆಗೊಂಡವು. ಬ್ರಾಹ್ಮಣರ ಬಗ್ಗೆ ಇದ್ದ ಗೌರವ, ಹೆದರಿಕೆ ಜನಗಳಿಗಿದ್ದನ್ನು ಜೈನರು ಅರಿತಿದ್ದರು. ಅಂತೆಯೇ ಆ ಭಾವನೆ ಹಾಗೆ ಕಾಪಾಡಿಕೊಂಡು ಶಾಪೋಕ್ತಿಗಳನ್ನು ಅನುಸರಿಸುವ ಮೂಲಕ ಹಾಗೇ

ಮುಂದುವರಿಸಿಕೊಂಡು ಹೋದರು. ಸ್ಥಳೀಯ ಭಯ–ಭಕ್ತಿಗಳ ಅನುಸರಣೆಯ ಒಡಂಬಡಿಕೆ ಇದು. ಆದರೂ ಜೈನ ನೆಲೆ, ನೆಲ ಪರರ ಪಾಲಾದದ್ದು ವಿಪರ್ಯಾಸ.

ಜೈನರಿಗೆ ಬಸದಿ ಮತ್ತು ಬೆಳ್ಳವಾಸಿ (ದಿಗಂಬರ ಮುನಿ) ಶ್ರೇಷ್ಠ ಅಂತೆಯೇ ಹಾಳು ಮಾಡಿದ ಕೊಂದ ಪಾಪಗಳು ಎಂಬ ಶಾಪೋಕ್ತಿಗಳು ಸೃಷ್ಟಿಯಾದವು. ಇಲ್ಲಿ ಬ್ರಹ್ಮಸ್ವದ ಆಸ್ತಿಯಿಲ್ಲ ಎಲ್ಲವೂ ದೈವಸ್ವದ ದಾನಗಳು.

ಇದಱಬಿತ್ತುವಟ್ಟನೞಿಪಿ ಕೊಣ್ಡವ
ದೇಗುಲವಂ ಬಸದಿಯುಮಂ ಕವಿಲೆಯುವಂ
ಕೆಱೆಯುಮಂ ಬಾರಣಾಸಿಯುಮನೞಿದಂ.[೨೨೩]

ಧರ್ಮವನ್ನು ಅಳಿದವ ಬಸದಿಯನ್ನು ಹಾಳು ಮಾಡಿದಂತೆ ಎಂಬ ಶಾಪೋಕ್ತಿ ಈ ಶಾಸನದಲ್ಲಿ ಬಂದಿದೆ. ಆದರೆ ವೈದಿಕ ಶ್ರೇಷ್ಠತೆಗಳನ್ನು ಬಿಡಲಾಗಲಿಲ್ಲ. ಶ್ರವಣಬೆಳಗೊಳದ ಶಾಸನಗಳಲಿ ಸಮಯದ್ರೋಹಿ, ಸಂಘ ಸಮುದಾಯಕ್ಕೆ ದ್ರೋಹಿ ಎಂಬ ಶಾಪಗಳು ಉಕ್ತವಾಗಿವೆ. ಧರ್ಮದ್ರೋಹ, ಸಂಘ (ಮುನಿಗಳ ಸಂಘ) ಸಮುದಾಯಗಳಿಗೆ ದ್ರೋಹ ಮಾಡುವುದು ಮಹಾಪಾಪ ಎಂಬುದು ಜೈನರ ನಂಬಿಕೆ. ಅಂತೆಯೆ ದಾನವನ್ನು ಕೆಡಿಸಿದವರು ಸ್ತ್ರೀಯನ್ನು ರಿಸಿ (ಮುನಿ) ವಧೆ ಮಾಡಿದ ವಿವರಗಳು ಹಾವೇರಿ ಜಿನಶಾಸನಗಳಲ್ಲಿ ಬಂದಿವೆ.[೨೨೪] ಸರ್ವಸಂಘ ಪರಿತ್ಯಾಗಿ ಮುನಿಯು ಜೈನರ ನಡೆದಾಡುವ ತೀರ್ಥಂಕರರಿದ್ದಂತೆ. ಇನ್ನೂ ಸ್ತ್ರೀಯನ್ನು ಮಾತೃಸ್ವರೂಪಕ್ಕೆ ಹೋಲಿಸುವ ಪರಿಪಾಠಗಳು ಈ ಧರ್ಮದಲ್ಲಿವೆ. ರಾಷ್ಟಕೂಟರ ಕಾಲದಲ್ಲಿ ಜೈನಧರ್ಮ ಸ್ತ್ರೀಯನ್ನು ಪರಮ ಮೌಲ್ಯ ಎಂದು ಪರಿಗಣಿಸಿ, ರಿಸಿಯ ಸರಿಸಮಾನವಾಗಿ ಕಾಣುವುದನ್ನು ರೂಢಿಸಿಕೊಂಡಿತ್ತು.

### ೦೬. ಶಾಸನ ಕವಿಗಳು ಮತ್ತು ರೂವಾರಿಗಳು.

ಶಾಸನಗಳು ಸಂಸ್ಕೃತಿಯ ತೊಟ್ಟಿಲುಗಳು ಎಂಬುದರಲ್ಲಿ ಎರಡು ಮಾತಿಲ್ಲ. ಇದುವರೆಗೂ ಭೌತಿಕ ಮತ್ತು ಬೌದ್ಧಿಕ ಎರಡೂ ಆಯಾಮಗಳಲ್ಲಿ ಶಾಸನ ಅಧ್ಯಯನವಾಗುತ್ತಲೆ ಬಂದಿವೆ. ಆದರೆ ಶಾಸನಗಳ ಸೃಷ್ಟಿಕರ್ತನ ಬೌದ್ಧಿಕ, ಭೌತಿಕ ಪ್ರತಿಭೆಗಳ ಅನಾವರಣಗಳ ಅಧ್ಯಯನ ವಿರಳ. ಈ ಕುರಿತಾಗಿ ಮೇವುಂಡಿ ಮಲ್ಲಾರಿಯವರ 'ಕನ್ನಡ ನಾಡಿನ ಶಾಸನ ಕವಿಗಳು' ಮತ್ತು ಷ.ಶೆಟ್ಟರ್ ಅವರ 'ಹಳಗನ್ನಡ ಲಿಪಿ, ಲಿಪಿಕಾರ, ಲಿಪಿ, ವ್ಯವಸಾಯ' ಕೃತಿಗಳು ಮಹತ್ತರವಾದವು. ಶಾಸನಗಳ ಇಂದಿನ ಭೌತಿಕ ಸ್ಥಿತಿಗೆ ದಾನಿಗಳೇ ಕಾರಣರು ಎಂಬುದು ನಿರ್ವಿವಾದ. ಆದರೆ ಶಾಸನ ನಿರ್ಮಾಣ ಮಾಡುವ ಕ್ರಿಯೆ ಅವರದ್ದಲ್ಲ. ಅದು ಕವಿಗಳು, ಲಿಪಿಕಾರ, ರೂವಾರಿಗಳ ಶ್ರಮ. ಒಂದು ಶಾಸನಕ್ಕೆ ಸಾಹಿತ್ಯದ ಆತ್ಮತುಂಬುವವನು ಕವಿ, ದೇಹವನ್ನು ಒದಗಿಸುವವನು ರೂವಾರಿ. ಇವೆರಡನ್ನು ಬೆಸೆಯುವ ಪಾತ್ರ

ವಹಿಸುವವನು ಲಿಪಿಕಾರ. ಇವೆಲ್ಲವೂ ಬೇರೆ ಬೇರೆ ಕೆಲಸಗಳೇ ಆಗಿವೆ. ಕೆಲವು ಶಾಸನಗಳಲ್ಲಿ ಲಿಪಿಕಾರನ ಪಾತ್ರವನ್ನು ಕವಿಯೂ, ರೂವಾರಿಯೂ ನಿರ್ವಹಿಸಿದ ಉದಾಹರಣೆಗಳಿವೆ.

'ಕುಬ್ಜಂ ಸ್ವಕಾವ್ಯಮಿದಶ್ಮತಲೇ ಲಿಲೇಖ'[೨೨೫]

ಇಲ್ಲಿ ಕವಿಯೇ ಶಾಸನ ಕಾವ್ಯವನ್ನು ರಚಿಸುವುದರ ಜೊತೆಗೆ ಲಿಪಿಕಾರನಾಗಿದ್ದಾನೆ. ಇನ್ನು ಲಿಪಿಕಾರನ ಕೆಲಸವನ್ನು ರೂವಾರಿಗಳೂ ಮಾಡಿದ್ದಾರೆ.

'ಹುಲಿಗೇಜಿಯ ಬಮ್ಮೋಜ ತಾನೆ ಬರೆದು ಕಂಡರಿಸಿದ ಸಾಸನ'[೨೨೬]
'ಈ ಸಾಸನಕ್ಷರಮಂ ಬರೆದು ಪೊಯ್ದಂ ಧರ್ಮೋಜ'[೨೨೭]

ಲಿಪಿಕಾರರು ಸಕಾಲಕ್ಕೆ ದೊರೆಯದಿದ್ದಾಗ ಕವಿ ಅಥವಾ ರೂವಾರಿ ಈ ಮಾರ್ಪಾಡನ್ನು ಮಾಡಿಕೊಂಡಂತೆ ತೋರುತ್ತದೆ. ಸಾಮಾನ್ಯವಾಗಿ ಒಂದು ಶಾಸನ ರಚಿತವಾಗಲು ಒಂದು ಕ್ರಮವಿತ್ತು. ಮೊದಲು ಕವಿ ಶಾಸನಕ್ಕೆ ಬೇಕಾದ ಒಕ್ಕಣೆಯನ್ನು ರಚಿಸುತ್ತಿದ್ದ. ಕವಿಯ ರಚನೆಯನ್ನು ಲಿಪಿಕಾರ ಬಣ್ಣದಿಂದ ಶಾಸನಗಲ್ಲಿನ ಮೇಲೆ ಅಕ್ಷರ ರೂಪದಲ್ಲಿ ಬರೆಯುತ್ತಿದ್ದ. ಬಣ್ಣದ ಅಕ್ಷರಗಳನ್ನು ಆಳವಾಗಿ ಕೆತ್ತಿ ರೂವಾರಿ ಶಾಸನವನ್ನು ಸಿದ್ಧ ಪಡಿಸುತ್ತಿದ್ದ 'ಜನ್ನಯ್ಯನ ಕವಿತೆ, ದಾವಣ್ಣನ ಬರಪ, ಮಲ್ಲೋಜನ ಕಂಡರಣೆ'[೨೨೮] ಎಂಬ ಆನೆಕೆರೆ ಶಾಸನದಲ್ಲಿ ಕವಿ, ಲಿಪಿಕಾರ, ರೂವಾರಿಗಳ ಉಲ್ಲೇಖವಿದೆ. ಹೀಗೆ ಈ ಮೂವರು ವೃತ್ತಿನಿರತರು ಕನ್ನಡ ಶಾಸನಲೋಕಕ್ಕೆ ತಮ್ಮ ಅಮೂಲ್ಯ ಕಾಯಕವನ್ನು ಸಾದರಪಡಿಸಿದ್ದಾರೆ. ಹಾವೇರಿ ಜಿಲ್ಲೆಯ ೧೫೦ ಜೈನ ಶಾಸನಗಳು ಈ ಬಗೆಯ ಶ್ರಮಿಕರಿಂದ ರಚಿತವಾಗಿದ್ದು, ಬೆರಳೆಣಿಕೆಯಷ್ಟು ಪ್ರಮಾಣದಲ್ಲಿ ತಮ್ಮ ಹೆಸರಿನಿಂದ ಗುರುತಿಸಿಕೊಂಡಿದ್ದಾರೆ. ಅದೆಷ್ಟೋ ಕವಿಗಳು, ಲಿಪಿಕಾರರು, ರೂವಾರಿಗಳು ತಮ್ಮ ಹೆಸರನ್ನು ಶಾಸನದಲ್ಲಿ ಕೆತ್ತದ ಎಲೆ ಮರೆಯ ಕಾಯಿಯಾಗಿ ಅಜ್ಞಾತವಾಗಿದ್ದಾರೆ.

**ಅ. ಕವಿಗಳು.**

ಶಾಸನಗಳು ಚಾಕ್ಷುಕ ರೂಪದಂತೆ ಕಂಡರೂ ಅದರಲ್ಲಿರುವ ಅಕ್ಕರಗಳು ಕವಿಯ ಬೌದ್ಧಿಕ ಬಿಂಬಗಳು. ಕರ್ನಾಟಕದಲ್ಲಿ ದೊರೆತ ಸಹಸ್ರಾರು ಕಲ್ಬರೆಹಗಳಲ್ಲಿ ಇವರ ಸಾಹಿತ್ಯ ಮೇಳವಿಸಿಕೊಂಡಿದೆ. "ಕನ್ನಡ ಶಾಸನ ಪ್ರಪಂಚಕ್ಕೆ ಸಾಹಿತ್ಯ ದೃಷ್ಟಿಯಿಂದ ಭಾರತೀಯ ಮಹತ್ವವನ್ನು ದೊರಕಿಸಿಕೊಟ್ಟವರು ಶಾಸನ ಕವಿಗಳು. ರಾಜಕೀಯ ಮತ್ತು ಸಾಮಾಜಿಕ ದಾಖಲೆಗಳಾದ ಶಾಸನಗಳನ್ನು ತಮ್ಮ ಪ್ರತಿಭಾ ಸ್ಪರ್ಷದಿಂದ ಸಾಹಿತ್ಯವನ್ನಾಗಿಸಿದ ಈ ಕವಿಗಳ ಸಂಖ್ಯೆ ಕರ್ನಾಟಕದಲ್ಲಿ ವಿಪುಲವಾಗಿದೆ. ಇವರನ್ನು ಹೊರತುಪಡಿಸಿ ಬರೆದ ಕವಿಚರಿತೆ ಯಾವ ಕಾಲಕ್ಕೂ ಅಪೂರ್ಣ."[೨೨೯] ಆರಂಭಿಕ ಕನ್ನಡ ಸಾಹಿತ್ಯಕ್ಕೆ ಜೈನ ಕವಿಗಳ ಕೊಡುಗೆ ಅಪಾರವಾದಂತೆ ಶಾಸನ ಕವಿಗಳ

ಕೊಡುಗೆಯೂ ಅನನ್ಯವಾಗಿದೆ. ರವಿಕೀರ್ತಿ, ಜಿನವಲ್ಲಭ, ಧಾಮಕೀರ್ತಿ, ನಂದಿಸೇನ, ಕಪ್ಪೆ ಅರಭಟ್ಟರು ಪ್ರಸಿದ್ಧ ಶಾಸನ ಕವಿಗಳು. ಇವರು ಸಂಸ್ಕೃತವನ್ನು ಹೆಚ್ಚಾಗಿ ಬಳಸಿದ್ದರೂ ಲಿಪಿ ಕನ್ನಡ, ವ್ಯಕ್ತಿ ಕನ್ನಡಿಗ, ಭಾವ ಕನ್ನಡ. ಅಂತೆಯೇ ಇವರು ಕನ್ನಡದ ಶಾಸನ ಕವಿಗಳೇ. ಈ ಕ್ಷೇತ್ರಕ್ಕೆ ಇವರ ಕೊಡುಗೆಯೂ ಅಪಾರ. ಸಾಹಿತ್ಯ ಕೃತಿಗಳನ್ನು ರಚಿಸಿದ ರನ್ನ, ನಯಸೇನ, ಕಮಲಭವ ಮುಂತಾದ ಕವಿಗಳು ಶಾಸನಗಳನ್ನು ರಚಿಸುವುದರ ಮೂಲಕ ಶಾಸನ ಕವಿಗಳಾಗಿಯೂ ಗುರುತಿಸಿಕೊಂಡಿದ್ದಾರೆ.

ರಾಜನ ಆಜ್ಞೆಗಳು, ರಾಜಸ್ವದ ವಂಶಾವಳಿ, ಹಿರಿಮೆ, ರಾಜನ ಸಾಹಸದ ಯಶೋಗಾಥೆ, ಅಧೀನರಾಜ, ಮಾಂಡಳಿಕ, ದಂಡನಾಯಕ ನಾಳ್ಗಾವುಂಡರ ಬಿರುದಾವಳಿಗಳು, ದಾನದ ವಿವರ, ದಾನಿಗ, ದಾನಕ್ಕೆ ಪ್ರೇರಣೆಕೊಟ್ಟ ಗುರು, ಅವನ ಪರಂಪರೆ, ದಿನ, ವಾರ, ಹುಣ್ಣಿಮೆ ಅಮವಾಸೆ, ಗ್ರಹಣ, ಶಕವರ್ಷ, ಸಂವಂತ್ಸರ, ದಾನದ ಅಳತೆಗಳು, ಮೇರೆಗಳು, ಶಾಪಾಶಯ ಫಲಶೃತಿಗಳು ಹೀಗೆ ಒಂದು ಬಹುದೊಡ್ಡ ಸಂಸ್ಕೃತಿಯ ವಿವರಗಳನ್ನು ಒಟ್ಟಾಗಿ ಕಲೆಹಾಕಿ ಅವುಗಳಿಗೆ ಸಾಹಿತ್ಯ ಲೇಪನವನ್ನು ಪೂಸಿ ಛಂದೋಬದ್ಧವಾಗಿ ನಿರೂಪಿಸುವವನೇ ಶಾಸನ ಕವಿ. ಸಾಹಿತ್ಯ ಕೃತಿಗಳನ್ನು ರಚಿಸುವ ಕವಿಗಳಷ್ಟೇ ಪ್ರಬುದ್ಧತೆ ಶಾಸನ ಕವಿಗಳಿಗಿತ್ತು. ತಾಳಗುಂದ ಶಾಸನವನ್ನು ಕುಬ್ಜ, ಬಾದಾಮಿಯ ಶಾಸನವನ್ನು ರಚಿಸಿದ ರವಿಕೀರ್ತಿಯರ ಶಾಸನಗಳಲ್ಲಿ ಈ ಅಂಶವನ್ನು ಕಾಣಬಹುದು. ಬಹುತೇಕ ಶಾಸನ ಕವಿಗಳು ಸಾಹಿತ್ಯದ ವಿದ್ವತ್ತನ್ನು ಪಡೆದುಕೊಂಡವರಾಗಿರುತ್ತಿದ್ದರು. ಅವರಿಗೆ ಭಾಷೆಯನ್ನು ಬಳಸುವ ಹಿಡಿತ ಗೊತ್ತಿತ್ತು. ಹಿತಮಿತ ಶಾಸನ ನಿರೂಪಣೆಯಲ್ಲಿಯೂ ಇವರು ಸಿದ್ಧಹಸ್ತರು. 'ಸಾಧುಗೆ ಸಾಧುಂ ಮಾಧುರ್ಯ್ಯಂಗೆ ಮಾಧುರ್ಯ್ಯಂ' ಎನ್ನುವ ವ್ಯಕ್ತಿಗುಣ ವರ್ಣನೆಯ ನಿರೂಪಣೆಯನ್ನು ಕಪ್ಪೆ ಅರಭಟ್ಟ ಬಾದಾಮಿ ಶಾಸನದಲ್ಲಿ ಸಮರ್ಥವಾಗಿ ನಿಭಾಯಿಸಿದ್ದಾನೆ. ಅಂತೆಯೇ ಇದು ತ್ರಿಪದಿಯ ಶಾಸನವೂ ಹೌದು. ಹಾಗೆ ನೋಡಿದರೆ ಶಾಸನ ಕವಿಗಳ ಸಾಹಿತ್ಯವೇ ಕನ್ನಡ ಸಾಹಿತ್ಯದ ತಾಯ್ ಬೇರು. ಪಂಪನ ಆದಿಪುರಾಣ ಹುಟ್ಟುವ ಮೊದಲೇ ಶಾಸನ ಕವಿಗಳು ಹುಟ್ಟಿದ್ದರು. ಕವಿ ಕುಬ್ಜನ ತಾಳಗುಂದ ಶಾಸನ ಇದಕ್ಕೊಂದು ಉದಾಹರಣೆ. ಇಲ್ಲಿ ಬಳಸಿರುವ ಭಾಷೆ ಬೇರೆಯಾದರೂ ಭಾವನೆಗಳು ಕನ್ನಡತನದ್ದು ಎಂದು ಮರೆಯಬಾರದು.

ಕರ್ನಾಟಕದ ಆರಂಭಿಕ ಶಾಸನ ಕವಿಗಳು ರಾಜಾಸ್ಥಾನದಲ್ಲಿದ್ದವರು. ಕದಂಬರು ಭೋಜಕ, ಸೇನಾಪತಿಗಳನ್ನು, ಗಂಗರು ಸೇನಾಪತಿ, ಪುರಾಧಿಪತಿಗಳನ್ನು, ಚಾಲುಕ್ಯರು ಸಂಧಿ ವಿಗ್ರಹಿಗಳನ್ನು, ರಾಷ್ಟ್ರಕೂಟರು ಸಂಧಿವಿಗ್ರಹಿಗಳನ್ನು ಶಾಸನ ರಚಿಸಲು ಬಳಸಿಕೊಟ್ಟು ಅಂತೆಯೇ ಇವರು ತಮ್ಮ ಆಡಳಿತವೃತ್ತಿಯ ಜೊತೆಜೊತೆಗೆ ಶಾಸನ ರಚನೆಯ ಕಾರ್ಯವನ್ನು ನಿಭಾಯಿಸಬೇಕಿತ್ತು. ಶಾಸನ ಕ್ಷೇತ್ರದಲ್ಲಿ ಸಾರ್ವಜನಿಕ ಕವಿಗಳ ಪ್ರವೇಶವಾದದ್ದು ಕಲ್ಯಾಣ ಚಾಳುಕ್ಯರ ಕಾಲದಲ್ಲಿ ಇವರ ಅವಧಿಯಲ್ಲಿ ವರ್ತಕರು, ನಾಳ್ಗವುಂಡರು, ಗಾವುಂಡರು ಹೆಚ್ಚು ಹೆಚ್ಚು ದಾನ ಕೊಡುವ ಕ್ರಿಯೆಯಲ್ಲಿ ತೊಡಗಿಸಿಕೊಂಡರು. ಅಂತೆಯೇ ಶಾಸನಗಳು ಸಾಕಷ್ಟು ಸಂಖ್ಯೆಯಲ್ಲೆದ್ದವು. ಇಷ್ಟೊಂದು ಪ್ರಮಾಣದ ಶಾಸನಗಳನ್ನು ರಚಿಸಲು ಆಸ್ಥಾನ ಅಧಿಕಾರಿಗಳಿಗೆ ಸಾಧ್ಯವಾಗದಾಯ್ತು. ಈ ಸಂದರ್ಭದಲ್ಲಿಯೇ

ಸ್ಥಳೀಯ ಪ್ರತಿಭೆಗಳಿಗೆ ಶಾಸನ ರಚಿಸುವಲ್ಲಿ ಅವಕಾಶ ಸಿಕ್ಕಿತು. ತದನಂತರ ಶಾಸನ ತಯಾರಿಕೆ ಪ್ರಕ್ರಿಯೇ ಒಂದು ಉದ್ಯಮವಾಗಿ ಬೆಳೆದದ್ದು ಅತಿಶಯವಲ್ಲ. ಅಂತೆಯೇ ವೃತ್ತಿಕವಿಗಳು ಬೆಳೆಯತೊಡಗಿದರು.

ಈ 'ವೃತ್ತಿಕವಿ'ಗಳಲ್ಲದೆ ಕೇವಲ ಛಂದೋಯೋಜನೆ, ಸಾಂಪ್ರದಾಯಿಕ ವರ್ಣನೆಗಳನ್ನು ರೂಢಿಸಿಕೊಂಡ ಶಾಸನಗಳನ್ನು ಬರೆದ ಕವಿಗಳು ಇದ್ದಾರೆ. ಹೀಗಾಗಿ ಎಷ್ಟೋ ಸುದೀರ್ಘ ಶಾಸನಗಳಲಿ ಕವಿತ್ವಹೀನ ಪಾಂಡಿತ್ಯ ಒಣಆಡಂಬರ ಕಿಕ್ಕಿರಿದು ತುಂಬಿದೆ. ದೇಶದ ಯಾವುದೋ ಮೂಲೆಯ ಶಾಸನಕ್ಕೆ ಸುಪ್ರಸಿದ್ಧ ಕವಿಗಳಿಂದ ಸಾಹಿತ್ಯವನ್ನು ದೊರಕಿಸುವುದು ಸಾಧ್ಯವಿಲ್ಲದಾಗ ಸಮೀಪದ ಅಕ್ಷರಜ್ಞರಿಂದ ಇಲ್ಲವೇ ಪಂಡಿತರಿಂದ ಪಾಠ ಪಡೆದ ಸಂದರ್ಭಗಳೇ ಹೆಚ್ಚೆಂದು ತೋರುತ್ತದೆ. ಇಂಥ ಅನುಕರಣಶೀಲ, ವರ್ಣನಾಚತುರರಿಂದ, ಛಂದೋಯೋಜಕರಿಂದ[೨೩೦] ಕೆಲವು ಶಾಸನಗಳು ಸಾಹಿತ್ಯವಿಹೀನವೆನಿಸಿದವು. ಹೀಗಿದ್ದೂ ಉನ್ನತಮಟ್ಟದ ಶಾಸನ ಕವಿಗಳಿಗೆ ಕೊರತೆಯಿಲ್ಲ. ಹಾವೇರಿ ಪರಿಸರದ ಜೈನ ಶಾಸನಗಳ ಇಂಥಹ ಉನ್ನತಮಟ್ಟದ ಶಾಸನಕವಿಗಳು ಕೆಲವರಿದ್ದರು. ಜೈನ ಶಾಸನಗಳಲ್ಲಿ ತಮ್ಮ ಅಂಕಿತವನ್ನು ಹಾಕಿಕೊಂಡವರು ಕೇವಲ ಐದು ಜನ ಕವಿಗಳು. ಗುತ್ತಲ ಕರಗುದರಿ, ಬಾಳೇಹಳ್ಳಿ, ಬೆಳವಂತಿ, ಹುಲಗೂರು, ನೇರಲಗಿ, ಶಿಗ್ಗಾವಿ, ಮುಂತಾದ ಶಾಸನಗಳು ಉನ್ನತ ಮಟ್ಟದ ಜೈನ ದಾನ ಶಾಸನಗಳಾದರೂ ಅವುಗಳ ಕವಿಗಳು ಯಾರೆಂದು ತಿಳಿದು ಬರುವುದಿಲ್ಲ. ಸದ್ಯ ಈ ಪರಿಸರದ ಐದು ಕವಿಗಳ ಪೂರ್ವಾಪರದ ಬಗ್ಗೆ ಅಭ್ಯಸಿಸಲಾಗಿದೆ.

### ೦೧. ಧಾಮಕೀರ್ತಿ (ಕ್ರಿ.ಶ. ೪೫೫-೮೦).

ಧಾಮಕೀರ್ತಿಯು ಕದಂಬರಾಜ ಮೃಗೇಶವರ್ಮ (ಕ್ರಿ.ಶ. ೪೫೫-೮೦)ನ ಆಡಳಿತದಲ್ಲಿ ಭೋಜಕ ವೃತ್ತಿಯನ್ನು ನಿರ್ವಹಿಸುತ್ತಿದ್ದ. ಭೋಜಕ ಎಂದರೆ 'ಭೋಗ ಎಂಬ ವಿಭಾಗದ ಅಧಿಕಾರಿ'[೨೩೧] ಇವನು ಪರಲೂರು (ತ್ರಿಪರ್ವತ>ದೇವಗಿರಿ) ಭೋಗ ವಿಭಾಗದ ಆಡಳಿತಗಾರನಾಗಿದ್ದಂತೆ ತೋರುತ್ತದೆ. ಕಾಲಕಾಲಕ್ಕೆ ರಾಜ ಹೊರಡಿಸುವ ಆಜ್ಞೆಗಳು, ದಾನ ಕೊಟ್ಟ ವಿಷಯವಾಗಿ ಹೊರಡಿಸಿದ ಆಜ್ಞೆಗಳನ್ನು ಇವನು ಶಾಸನವನ್ನಾಗಿಸುತ್ತಿದ್ದ. ಅಂತೆಯೇ ಧಾಮಕೀರ್ತಿಯಲ್ಲಿ ಕವಿತ್ವವು ಮನೆ ಮಾಡಿಕೊಂಡಿತ್ತು. ಬೃಹತ್ ಪರಲೂರು (ದೇವಗಿರಿ) ಚೈತ್ಯಾಲಯಕ್ಕೆ ಮೃಗೇಶವರ್ಮ ಭೂದಾನ ಮಾಡಿದ ಕುರಿತಾಗಿ ಸಂಸ್ಕೃತ ಭಾಷೆ, ಶ್ಲೋಕ, ವೃತ್ತ, ಗದ್ಯದಿಂದ ಕೂಡಿದ ತಾಮ್ರಶಾಸನವನ್ನು ಧಾಮಕೀರ್ತಿ ರಚಿಸಿದ್ದಾನೆ. "ಧಾಮಕೀರ್ತ್ತಿ ಭೋಜಕೇನ ಲಿಖಿತೇಯಂ ಪಟ್ಟಿಕಾ ಇತಿ ಸಿದ್ಧಿರಸ್ತು"[೨೩೨] ಎಂಬ ವಾಕ್ಯು ಧಾಮಕೀರ್ತಿಯೇ ಕವಿ ಎಂಬುದನ್ನು ದೃಢಪಡಿಸುತ್ತದೆ. 'ಲಿಖಿತೇಯಂ ಪಟ್ಟಿಕಾ' ಎಂಬ ಕ್ರಿಯೆಯು ಧಾಮಕೀರ್ತಿಯೇ ಲಿಪಿಕಾರ ಎಂಬುದನ್ನು ಸಾಧಿಸುತ್ತದೆ. ರೂವಾರಿ ಹೆಸರು ದಾಖಲಾಗಿಲ್ಲ.

ಧಾಮಕೀರ್ತಿ ಮೊದಲು ಬೃಹತ್ ಪರಲೂರಿನ ಭೂಜಕ ವೃತ್ತಿಯನ್ನು ನಿರ್ವಹಿಸಿದ್ದು, ತದನಂತರ ಫಲಾಶಿಕಾ (ಹಲಸಿ) ಭೋಗ ವಿಭಾಗದ ಭೋಜಕನಾದಂತೆ ತೋರುತ್ತದೆ. ಹಲಸಿಯ ಎರಡನೆಯ ತಾಮ್ರಪಟವನ್ನು ಇವನೇ ರಚಿಸಿದ್ದಾನೆ.[೨೩೩] ಇಲ್ಲಿರುವ ಚೈತ್ಯಾಲಯಕ್ಕೆ ಮುನಿಯರ ಆಹಾರಕ್ಕೆ, ಪರ್ವಗಳಿಗೆ ಮೃಗೇಶವರ್ಮ ದಾನಕೊಟ್ಟಿದ್ದು ಶಾಸನಸಾರ. ಪರಲೂರು ಮತ್ತು ಫಲಾಶಿಕಾ ಕದಂಬರ ಕಾಲದ ಪ್ರಬಲ ಜೈನಕೇಂದ್ರಗಳು. ಅಂತೆಯೇ ಇಲ್ಲಿ ಮುನಿಸಂಘಗಳು ವಾಸವಾಗಿದ್ದವು. ಚೈತ್ಯಾಲಯಗಳಿದ್ದವು. ಈ ಎರಡೂ ಜೈನಕೇಂದ್ರಗಳ ಭೋಜಕ ವೃತ್ತಿಯನ್ನು ನೋಡಿಕೊಳ್ಳುತ್ತಿದ್ದ ಧಾಮಕೀರ್ತಿ ಜೈನನಾಗಿದ್ದ. ಇವನು ತನ್ನ ಅಂತಿಮ ಕಾಲದಲ್ಲಿ ಭೋಜಕ ವೃತ್ತಿಯನ್ನು ತ್ಯಜಿಸಿ ಹಲಸಿಯ ಚೈತ್ಯಾಲಯದಲ್ಲಿ ದೇವರ ಸೇವೆ ಮಾಡಿಕೊಂಡಿದ್ದ. ಅಂತೆಯೇ ಕದಂಬ ಅರಸ ರವಿವರ್ಮ (ಕ್ರಿ.ಶ.೪೮೫–೫೧೯) ಜಿನಾಲಯದ ಪೂಜೆ ಮಾಡಿಕೊಂಡಿರುವುದಕ್ಕಾಗಿ 'ಚತ್ವಾರಿ ನಿವರ್ತನ'[೨೩೪] ಭೂಮಿಯನ್ನು ಕೊಡುಗೆಯಾಗಿ ಕೊಟ್ಟ. ಹೀಗೆ ಜಿನಾಲಯದಲ್ಲಿ ಸೇವೆ ಗೈಯುತ್ತಿದ್ದ ಧಾಮಕೀರ್ತಿಯು ಇಹಲೋಕವನ್ನು ತ್ಯಜಿಸಿದ್ದು ಫಲಾಶಿಕದಲ್ಲಿ ಎಂದು ತೋರುತ್ತವೆ.

### ೦೨. ನರವರ (ಸು ೫ನೆಯ ಶತಮಾನ).

ವಿಜಯ ಶಿವಮೃಗೇಶವರ್ಮನ ನಾಲ್ಕನೆಯ ವರ್ಷದ ದೇವಗಿರಿ ತಾಮ್ರಶಾಸನವನ್ನು ನರವರ ಎಂಬ ಶಾಸನ ಕವಿ ಬರೆದಿದ್ದಾನೆ. ಇವನು ಬನವಾಸಿ ಕದಂಬರ ಆಸ್ಥಾನದಲ್ಲಿ ಸೇನಾಪತಿ ಆಡಳಿತ ವೃತ್ತಿಯಲ್ಲಿದ್ದ. ಶಾಸನದಲ್ಲಿ 'ನರವರ ಸೇನಾಪತಿನಾ ಲಿಖಿತಾ'[೨೩೫] ಎಂಬ ವಾಕ್ಯದಿಂದ ಇವನೇ ಲಿಪಿಕಾರನೂ ಇದ್ದಂತೆ ತೋರುತ್ತದೆ. ತಾಮ್ರಶಾಸನವಾದ್ದರಿಂದ ಕವಿಯೇ ಲಿಪಿಕಾರನಾಗಿರುವ ಸಾಧ್ಯತೆ ಹೆಚ್ಚು. ಇವನ ಬಗ್ಗೆ ಇತರೆ ವಿವರಗಳು ಅಲಭ್ಯ. ಸಂಪೂರ್ಣ ಸಂಸ್ಕೃತ ಭೂಯಿಷ್ಠವಾದ ಶಾಸನವು ಬೃಹತ್ ಪರಲೂರ ಚೈತ್ಯಾಲಯಕ್ಕೆ, ಅಲ್ಲಿರುವ ನಿರ್ಗ್ರಂಥ ಮತ್ತು ಶ್ವೇತಪಟ ಮಹಾ ಶ್ರಮಣ ಸಂಘಗಳಿಗೆ ಕಾಲವಙ್ಗಾ ಎಂಬ ಗ್ರಾಮದಿಂದ ಬರುವ ಆದಾಯವನ್ನು ಮೂರು ಭಾಗ ಮಾಡಿ ದತ್ತಿ ಕೊಟ್ಟ ವಿವರವನ್ನು ತಿಳಿಸುತ್ತದೆ.

### ೦೩. ಅನಾಮಿಕ ಕವಿ (ಕ್ರಿ.ಶ. ೧೦೬೬).

ಚಾಳುಕ್ಯ ಒಂದನೆಯ ಸೋಮೇಶ್ವರನ ಕ್ರಿ.ಶ. ೧೦೬೬ನೆಯ ಬೆಣ್ಣಿಯೂರು (ಮೋಟೇಬೆನ್ನೂರು) ಜಿನಶಾಸನದಲ್ಲಿ ಶಾಸನ ಕವಿಯ ಹೆಸರು ಇರುವ ಭಾಗ ತ್ರುಟಿತಗೊಂಡಿದೆ. ಶಾಸನದಲ್ಲಿ ಬರುವ ಶಾಪಾಶಯದ ನಂತರ 'ದೇವಣನ್ದಿಭಟ್ಟಾರಕರ ಗು...... ಬಮ್ಮೋಜನಬೆಸಂ ಎಂಬ ವಾಕ್ಯದಲ್ಲಿ ದೇವಣನ್ದಿಭಟ್ಟಾರಕರ ಗುಡ್ಡನಾದ ಒಬ್ಬ ಅನಾಮಿಕ ವ್ಯಕ್ತಿ ಕವಿ ಎಂದು ತೋರುತ್ತದೆ. ದೇವಣನ್ದಿಭಟ್ಟಾರಕ ಹೆಸರೇ ಹೇಳುವಂತೆ ಇವನೊಬ್ಬ ಜಿನಮುನಿ. ಇವನ ಗುಡ್ಡನೂ ಸಹ ಜೈನನೇ ಆಗಿದ್ದಾನೆ. ಅಂತೆಯೇ ಅವನು ಮೂಲಸಂಘ ದೇಸಿಗಣ ಚಂದ್ರಿಕಾವಾಟ ವಂಶದ ವರ್ಣನೆ ಮತ್ತು ಗುರ್ವಾವಳಿಯನ್ನು ಸೋದಾಹರಣವಾಗಿ ಕಟ್ಟಿಕೊಟ್ಟಿದ್ದಾನೆ. ಕಂದ, ಚಂಪಕಮಾಲೆ, ಮಹಾಸ್ರಗ್ಧರಾ ವೃತ್ತಗಳು ಮತ್ತು ಗದ್ಯದಿಂದ ರಚಿತವಾದ ಶಾಸನವು ಕವಿತ್ವದ ಕನ್ನಡಿಯಾಗಿದೆ.

ಸಂಸ್ಕೃತ ಪದಗಳ ಮಿಶ್ರಣದ ಈ ಕನ್ನಡ ಶಾಸನವು ಆಯ್ಚಿಮಯ್ಯ ಎಂಬುವನು ಶಾಂತಿನಾಥ ಜಿನಾಲಯ ನಿರ್ಮಿಸಿದ ಪ್ರಯುಕ್ತ ರಚನೆಗೊಂಡಿದೆ.

## ೦೪. ಮೂಕಣ್ಣರಿಷ್ವೇಣ (ಕ್ರಿ.ಶ. ೧೦೭೬-೧೧೨೫).

ಚಾಳುಕ್ಯ ಆರನೆಯ ವಿಕ್ರಮಾದಿತ್ಯ (ಕ್ರಿ.ಶ. ೧೦೭೬-೧೧೨೫) ನ ಕಾಲಾವಧಿಯಲ್ಲಿ ರಚಿತವಾದ ಬೆಳವಂತಿ (ಬೆಳವತ್ತಿ-ಹಾನಗಲ್ಲು ತಾ)ಯ ಜಿನಶಾಸನದಲ್ಲಿ ಮೂಕ್ಣರಿಷ್ವೇಣ ಕವಿಯ ಉಲ್ಲೇಖಿತವಿದೆ. 'ಮೂಕಣ್ಣರಿಷ್ವೇಣ ಲಿಖಿತಂ'[೨೩೭] ಅನ್ನುವವಾಕ್ಕು ಅಷ್ಟೇ ಇದ್ದಿದ್ದರಿಂದ ಕವಿ ಇವನೇ ಎಂದು ನಿರ್ಧರಿಸಬಹುದು. ಇವನೊಬ್ಬ ಜೈನ ಕವಿ ಎಂದು ನಿರ್ಧರಿಸುವುದು ಕಷ್ಟಸಾಧ್ಯ. ಇವನ ಹೆಸರಿನ ಪೂರ್ವಪದವು ಮೂಕಣ್ಣ > ಮುಕ್ಕಣ್ಣ ಎಂದು ಶಿವನನ್ನು ಪ್ರತಿನಿಧಿಸಿದರೆ, ಉತ್ತರ ಪದವು ಅರಿಷ್ವೇಣ > ಅರಿಷೇಣ ಜೈನನಾಮವನ್ನು ಪ್ರತಿನಿಧಿಸುತ್ತದೆ. ಆದ್ದರಿಂದ ಇವನ ಧರ್ಮವನ್ನು ನಿರ್ಧರಿಸುವುದು ದಂಧ್ವವಾಗಿದೆ. ಅಪವಾದ ಎನ್ನುವಂತೆ ಬ್ರಹ್ಮಶಿವ ಒಬ್ಬ ಪ್ರಸಿದ್ಧ ಜೈನಕವಿ ಷೇಣ ಎಂಬ ಗುಣವಾಚಕ ಮಲ್ಲಿಷೇಣ, ನಂದಿಷೇಣ ಜೈನ ಹೆಸರುಗಳಲ್ಲಿ ಪ್ರಚಲಿತವಿತ್ತು.

ಬೆಳವಂತಿಯಲ್ಲಿ ನಿರ್ಮಾಣವಾದ ಬ್ರಹ್ಮಜಿನಾಲಯದ ನಿಮಿತ್ತ ಮೂಕಣ್ಣರಿಷ್ವೇಣ ಈ ಶಾಸನವನ್ನು ರಚಿಸಿದ್ದಾನೆ. ಬಸದಿಯ ನಿಮಾಪಕ ಸವಣೂರು ಬೊಮ್ಮಿಸೆಟ್ಟಿಯ ವರ್ಣನೆ, ಬೆಳವಂತಿಯ ವರ್ಣನೆ, ಮೂಲಸಂಘ ಸೂರಸ್ತಗಣದ ವರ್ಣನೆ, ಮುನಿಗಳ ವರ್ಣನೆಗಳನ್ನು ಕಂದಪದ್ಯ ಮತ್ತು ಚಂಪಕ, ಉತ್ಪಲಮಾಲಾ ವೃತ್ತಗಳಿಂದ ಕವಿ ಸೊಗಸಾಗಿ ಕಟ್ಟಿಕೊಟ್ಟಿದ್ದಾನೆ. 'ಇನ್ತು ನೆಗರ್ತ್ತೆಗಂ ನೆಲೆಯಾಗಿ ಬೆಳ್ವಂತಿಯೊಳೀ ಬ್ರಹ್ಮಜಿನಾಳಯಮಂ ಮಾಡಿಸಿದಾ' ಎನ್ನುವ ವಚನದಲ್ಲಿಯೂ ಕವಿ ಶಬ್ದ ಬಂಧುರತೆಯ ಲಾಲಿತ್ಯವನ್ನು ಮೆರೆದಿದ್ದಾನೆ.

## ೦೫. ಶಾಂತಿರಾಜ (ಕ್ರಿ.ಶ.೧೧೬೮).

ಇವನೊಬ್ಬ ಜೈನಕವಿ. ಕಳಚೂರ್ಯ್ಯ ಬಿಜ್ಜಳದೇವ (ಕ್ರಿ.ಶ. ೧೧೩೦-೬೮) ಆಳ್ವಿಕೆಯಲ್ಲಿ ಕ್ರಿ.ಶ. ೧೧೬೮ ರಲ್ಲಿ ರಚಿತವಾದ ಗೊಟ್ಟಗಡಿ (ನದಿಹರಳಹಳ್ಳಿ)ಯ ಜಿನಶಾಸನವನ್ನು ಈತ ರಚಿಸಿದ್ದಾನೆ. ಶಾಂತಿರಾಜ ಒಬ್ಬ ಉನ್ನತಮಟ್ಟದ ಶ್ರೇಷ್ಠದರ್ಜೆಯ ಕವಿ. ಇವನ ಕಾವ್ಯ ಕೃತಿಗಳು ಇದ್ದವು ಎಂಬುದಕ್ಕೆ ಆಧಾರವಿಲ್ಲ. ಆದರೆ ಇವನ ಶಾಸನವೇ ಒಂದು ಪ್ರಬುದ್ಧ ಚಂಪೂ ಕಾವ್ಯದಂತಿದೆ. ಕಂದ ಪದ್ಯಗಳು ಮತ್ತೇಭವಿಕ್ರೀಡಿತ, ಚಂಪಕ, ಉತ್ಪಲಮಾಲೆಗಳನ್ನು ಹೆಚ್ಚಾಗಿ ಈ ಶಾಸನದಲ್ಲಿ ಕವಿ ಬಳಸಿಕೊಂಡಿದ್ದಾನೆ. ಅಲ್ಲಲ್ಲಿ ಶ್ಲೋಕಗಳು ಉದ್ಧೃತಗೊಂಡಿವೆ. ದೇವಸ್ತುತಿ, ವಿಷಯ, ದೇಶ, ನಾಡು, ಹಳ್ಳಿಯ ವರ್ಣನೆ, ರಾಜ ಮಾಂಡಳಿಕ, ಗಾವುಂಡರ ಪ್ರಶಸ್ತಿಗಳು, ಜಿನಧರ್ಮದ ಶ್ರೇಷ್ಠತೆ, ಸಂಘ, ಗಣ, ಅನ್ವಯ, ಮುನಿಗಳು ಪರಂಪರೆಯ ಅನಾವರಣ, ವಾರ, ಮಾಸ, ಹುಣ್ಣಿಮೆ, ಸಂವತ್ಸರ, ಗ್ರಹಣಗಳ ಸ್ಪಷ್ಟ ಉಲ್ಲೇಖ, ದಾನ ಭೂದಾನದ ಮೇರೆಗೆ, ಶಾಪಾಶಯ ವಿವರಗಳೆಲ್ಲವನ್ನು

ಶಾಂತಿರಾಜ ಕವಿ ಸಮರ್ಪಕವಾಗಿ ಕಟ್ಟಿಕೊಟ್ಟಿದ್ದಾನೆ. ಇಡೀ ಶಾಸನ ಒಂದು ಚಂಪೂ ಕಾವ್ಯವನ್ನು ಓದಿದಂತೆ ಭಾಸವಾಗುತ್ತದೆ. ಶಾಸನದ ವಿಷಯ ನಿರೂಪಣೆಯ ಕ್ರಮಬದ್ಧತೆಯಿಂದ ಶಾಂತಿರಾಜ ಒಬ್ಬ ವೃತ್ತಿನಿರತ ಶಾಸನ ಕವಿ ಎಂಬುದರಲ್ಲಿ ಸಂದೇಹವೇ ಇಲ್ಲ. 'ಧರೆ ಪೊಗಳೆ ಶಾಂತಿರಾಜಂ ವಿರಚಿಸಿದಂ ಸುಕವಿ ತಿರ್ದ್ದಿ ಕವಿ ಪರಮಾತ್ಮ ಬರೆಯಿಸಿದಂ' ಎನ್ನುವಲ್ಲಿ ಇವನೇ ನಿಂತು ಶಾಸನ ಬರೆಯುವಲ್ಲಿ ಲಿಪಿಕಾರನು ತಪ್ಪು ಬರೆದಿದ್ದರೆ ತಿದ್ದಿ ತೀಡಿ ಶಾಸನವನ್ನು ಅಂದಗೊಳಿಸುವಲ್ಲಿ ಪ್ರಮುಖ ಪಾತ್ರವಹಿಸಿದ್ದಾನೆ. ಇವನು ರಚಿಸಿದ ಶಾಸನದಲ್ಲಿ ಬರುವ ಬನವಾಸಿ ವರ್ಣನೆಯು ಪಂಪನ 'ಕೋಗಿಲೆಯಾಗಿ ಮರಿದುಂಬಿಯಾಗಿ' ಎಂಬ ಪದ್ಯವನ್ನು ನೆನಪಿಗೆ ತರಿಸುತ್ತದೆ.

ಪಿಕವರದಿಂ ತೆಂಬೆಲರಿಂ
ಶುಕಶತಚಾರು ಪ್ರಚಾರದಿಂದೆಳೆನೀರಿಂ
ವಿಕಸಿತ ವನರುಹ ವನದಿಂ
ಸಕಳೇಂದ್ರಿಯ ತೃಪ್ತಿಚತುರ ವಿಷಯಂ ವಿಷಯಂ

ಕಳಕಂಠದಿನಾಮ್ರವನಂ
ಗಿಳಿಮಿಡಿಂಗಂಧ ಶಾಳಿವನವಳೀಕುಳದಿಂ
ಲಲಿತ ಲಿಲಿಕಾವನಂ ಕ
ಣ್ಗೊಳಿಸಿಗಮದೇಜಿಸೊಳ್ಮರಾಳದಿಂ ವನಜವನಂ[೨೩೮]

## ಬ. ಲಿಪಿಕಾರರು.

ಒಂದು ಶಾಸನದ ಬೌದ್ಧಿಕ ಸಾಹಿತ್ಯದ ರೂಪ ಎಷ್ಟು ಮುಖ್ಯವೋ ಅದನ್ನು ತಪ್ಪಿಲ್ಲದಂತೆ ಕಲ್ಲಿನ ಮೇಲೆ ಭೌತಿಕ ಅಕ್ಷರಗಳಲ್ಲಿ ರೂಪಕ್ಕೆ ಒಡಮೂಡಿಸುವುದು ಅಷ್ಟೇ ಮಹತ್ತರ ಕೆಲಸ. ಈ ಜವಾಬ್ದಾರಿ ಲಿಪಿಕಾರನದು. ಕನ್ನಡ ನಾಡಿನ ಸಾವಿರಾರು ಸುಂದರ ಶಾಸನಗಳ ಬರೆವಣಿಗೆಯಲ್ಲಿ ಇವರ ಪಾತ್ರ ಅನನ್ಯ. ಲಿಪಿಕಾರ ಅಕ್ಷರವಂತನಾಗಿದ್ದರೆ ದೋಷರಹಿತ ಶಾಸನ ರಚಿಸಲು ಸಾಧ್ಯ. ಈ ಕುರಿತಾಗಿ "ದಾವಣಗೆರೆಯ ಕೊಡಗನೂರಿನ ಶಾಸನ ಮತ್ತು ತಳಲೂರು ಶಾಸನ ಲಿಪಿಕಾರರ ಭಾಷಾಜ್ಞಾನ ಹೇಗಿರಬೇಕೆಂದು ವಿವರಿಸಿವೆ. ಕನ್ನಡ ಅಕ್ಷರಗಳ ಪೊಕ್ಕಳು, ತಲೆಕಟ್ಟು, ಅವಯವಗಳ ಶರೀರ ರಚನೆ, ಬಹುರೇಖೆಯನ್ನು ಬಳಸದಿರುವುದು, ಯತಿಯನ್ನು ಬಳಸುವ ವಿಧಾನಗಳನ್ನು ಈ ಎರಡೂ ಶಾಸನಗಳು ತಿಳಿಸಿಕೊಡುತ್ತವೆ".[೨೩೯]

ಶಾಸನಗಳಲ್ಲಿ 'ಬರೆದಂ', 'ಲಿಖಿಸಿದಂ' ಎಂಬ ಪದಗಳ ಬಳಕೆ ಕಟ್ಟುನಿಟ್ಟು ಇಲ್ಲದೆ ಒಮ್ಮೊಮ್ಮೆ ಕವಿ, ಲಿಪಿಕಾರ ಮತ್ತು ರೂವಾರಿಗಳಿಗೂ ಆರೋಪಿತವಾಗಿವೆ. ಹೀಗಾಗಿ ಶಾಸನಗಳಿಂದ

ಲಿಪಿಕಾರರನ್ನು ಬೇರಳಿಟ್ಟು ಗುರುತಿಸುವುದು ಕಷ್ಟದ ಕಾರ್ಯ.[೨೪೦] ಹಾವೇರಿ ಪರಿಸರದಲ್ಲಿ ನಾಲ್ಕು ಜನ ಮಾತ್ರ ಲಿಪಿಕಾರರ ನಾಮವಿದ್ದು ಅವರನ್ನು ಗುರುತಿಸುವುದು ಸುಲಭ.

### ೦೧. ಮಾದೋರ (೦೮–೯ನೆಯ ಶತಮಾನ).

ರಾಷ್ಟ್ರಕೂಟರ ಮೂರನೆಯ ಗೋವಿಂದ (ಕ್ರಿ.ಶ ೭೯೨–೮೧೪) ಕಾಲದಲ್ಲಿ ರಚಿತವಾದ ಮೇದೂರು ಜೈನಶಾಸನದಲ್ಲಿ 'ಬರೆದಂ ಮಾದೋರ'[೨೪೧] ಎಂದು ಲಿಪಿಕಾರ ತನ್ನ ಅಂಕಿತವನ್ನು ಹಾಕಿದ್ದಾನೆ. ಇವನ ಬಗ್ಗೆ ಹೆಚ್ಚಿನ ಮಾಹಿತಿ ಅಲಭ್ಯ. ಇವನೊಬ್ಬ ಅಕ್ಷರಜ್ಞಾನ ಇರುವ ಲಿಪಿಕಾರ. ಅಕ್ಷರಗಳ ತಲೆಕಟ್ಟು, ಗುಂಡಗಿನ ರೂಪದಲ್ಲಿ ಒಡಮೂಡಿಸಿದ್ದಾನೆ. ಶಾಸನದಲ್ಲಿ ಯಾವುದೇ ವ್ಯಾಕರಣ ದೋಷ ಕಂಡುಬರುವುದಿಲ್ಲ. ೧೬ ಸಾಲುಗಳನ್ನು ಹೊಂದಿರುವ ಈ ಶಾಸನ ಒಂದು ಪುಟ್ಟ ಶಾಸನ ಶಾಪಾಶಯ ಶ್ಲೋಕಗಳನ್ನು ಹೊರತುಪಡಿಸಿ ಉಳಿದೆಲ್ಲ ಭಾಗ ಗದ್ಯದಲ್ಲಿದೆ.

### ೦೨. ಕುನ್ದಮಯ್ಯ (೧೦ನೇ ಶತಮಾನ).

ರಾಷ್ಟ್ರಕೂಟರ ಅತೇದಿ ಜಿನಶಾಸನವೊಂದು ಮೋಟೆಬೆನ್ನೂರು ಮಾದರಗೇರಿಯಲ್ಲಿದೆ.[೨೪೨] ಇದೊಂದು ತ್ರುಟಿತ ಶಾಸನವಾಗಿದ್ದು ಇಲ್ಲಿದ್ದ ಬಸದಿಗೆ ದಾನಕೊಟ್ಟ ನಿಮಿತ್ತ ರಚನೆಯಾಗಿದೆ. ಈ ಶಾಸನವನ್ನು ಬರೆದ ಕವಿ ಕುನ್ದಮಯ್ಯ ಶಾಸನದಲ್ಲಿ 'ಸ್ವಸ್ತಿ ಶ್ರೀ ಇನ್ದರ ಪಿಟ್ಟಮ್ಮನ ಸೇನಬೋವ ಕುನ್ದಮಯ್ಯನ ಕರಣ'. ಎಂದಿದ್ದು ಇವನೊಬ್ಬ ರಾಜಸ್ವದ ಅಧಿಕಾರಿಯಾಗಿದ್ದಾನೆ. ಇನ್ದರ ಪಿಟ್ಟಮ್ಮ ಇವನ ತಂದೆ ಇರಬೇಕು. ಸೇನಭೋವ ಎಂಬುದು ಇವನ ವೃತ್ತಿ. ಸೇನಭೋವ ಎಂದರೆ ಗ್ರಾಮಪತಿ. ಇಂದಿನ ಗ್ರಾಮಲೆಕ್ಕಿಗ ಶಾಸನ ತ್ರುಟಿತವಾದ್ದರಿಂದ ಕವಿ ಪ್ರತಿಭೆಯನ್ನು ಗುರುತಿಸಲು ಅಸಾಧ್ಯ. ಶಾಪಾಶಯ ಮಾತ್ರ ಸ್ಪಷ್ಟವಾಗಿದೆ.

### ೦೩. ಸಾಕ್ಷರ ತಿಳಕ ಶಂಕಣಾರ್ಯ್ಯ (ಕ್ರಿ.ಶ. ೧೧೬೮).

ಸಾಕ್ಷರ ತಿಳಕ ಎಂಬ ವಿಶೇಷ ಬಿರುದು ಲಿಪಿಕಾರ ವಿದ್ಯಾವಂತನೆಂದು ತೋರ್ಪಡಿಸುತ್ತದೆ. ಈ ವಿಶೇಷಣ ಶಂಕಣಾರ್ಯ್ಯನಿಗಿತ್ತು. ಇವನು ಗೊಟ್ಟಗಡಿ ನದಿಹರಳಹಳ್ಳಿಯ ಜೈನಶಾಸನವನ್ನು ರಚಿಸಿದ್ದಾನೆ. ಇದು ಕಳಚೂರ್ಯ್ಯ ಬಿಜ್ಜಳನ ಆಡಾಳಿತವಧಿಯಲ್ಲಿ ರಚನೆಯಾಗಿದೆ.[೨೪೩] ಕಾಲ ಕ್ರಿ.ಶ. ೧೧೬೮. ಲಿಪಿಕಾರನಿಗೆ ಸಂದಿರುವ 'ಸಾಕ್ಷರ ತಿಳಕ' ಎಂಬ ಬಿರುದು ಯೋಗ್ಯವಾಗಿದೆ. ಶಾಸನದ ಅಕ್ಷರಗಳು ತಪ್ಪಿಲ್ಲದ ಮುದ್ದಾದ ಬರವಣಿಗೆ, ಅಚ್ಚುಕಟ್ಟುತನವನ್ನು ಗಮನಿಸಿದಾಗ ಶಂಕಣಾರ್ಯ್ಯ ಒಬ್ಬ ಶ್ರೇಷ್ಠ ದರ್ಜೆಯ ಲಿಪಿಕಾರ. ಈ ಶಾಸನದ ತ್ರುಟಿತ ಪಾಠ ಸೌ.ಇ.ಇ.ಸಂ. ೧೮ ನಂ.೧೮೦ ರಲ್ಲಿ ಪ್ರಕಟವಾಗಿದೆ. ಇದರಲ್ಲಿ ಶಂಕಣಾರ್ಯ್ಯನ ಹೆಸರನ್ನು ಮತ್ತು ಅವನ ಬಿರುದನ್ನು 'ಸಾಳ್ವರ ತಿಳಕಂ (ಸ)ಕಳಾರ್ಯ್ಯ' ಎಂದು ತಪ್ಪಾಗಿ ಓದಲಾಗಿದೆ. ಕವಿಯ ಪ್ರತಿಭೆಯನ್ನು ಸ್ಮರಿಸಿರುವ ಶಂಕಣಾರ್ಯ್ಯನ ವಿನೀತತೆಯ ಗುಣ ಇತರೆ ಲಿಪಿಕಾರರಿಗೆ ಮಾದರಿ. 'ಸುಕವಿ ತಿರ್ದ್ದಿ ಕವಿ ಪರಮಾತ್ಮಂ

ಬರೆಯಿಸಿದಂ ಬರದಂ ಸಾಕ್ಷರ ತಿಳಕಂ ಶಂಕಣಾರ್ಯ್ಯನೀ ಶಾಸನಮಂ' ಎನ್ನುವ ಮಾತುಗಳಲ್ಲಿ ಈ ಭಾವವನ್ನು ಕಾಣಬಹುದು.

### ೧೪. ಸಗರೇಂದ್ರ (೧೮-೧೯ ನೇ ಶತಮಾನ).

ಬಾಳೂರಿನ ಶಿಥಿಲಗೊಂಡ ಪಾರ್ಶ್ವನಾಥ ಬಸದಿಯ ಒಂದು ಕಂಭದಲ್ಲಿ ೧೬ನೆಯ ಶತಮಾನದ 'ಶ್ರೀ ಜಿನಾಯನ್ಮಃ ಶಿರಸನಾಥ ಕಾಳೋ ಸಗರೇಂದ್ರ ಕರ ಲಿಖಿದ'[೨೪೪] ಎನ್ನುವ ಒಂದು ಸಾಲಿನ ಶಾಸನವಿದೆ. ಸಗರೇಂದ್ರ ಎನ್ನುವನು ಇದನ್ನು ಬರೆದು ಕೆತ್ತಿದ್ದಾನೆ. ಇದು ಒಂದು ಸಾಧಾರಣವಾದ ಶಾಸನ. ಅಕ್ಷರಗಳು ಸ್ಪುಟವಾಗಿವೆ. ಇವನೊಬ್ಬ ಸಾಮಾನ್ಯ ಲಿಪಿಕಾರ.

### ಕ. ರೂವಾರಿಗಳು.

ಶಾಸನಕವಿ ಭಾವನೆ ಮತ್ತು ಲಿಪಿಕಾರನ ಅಕ್ಕರಗಳಿಗೆ ಮೂರ್ತರೂಪ ಕೊಡುವವನು ರೂವಾರಿ. ಲಿಪಿಕಾರ ಬಣ್ಣದಿಂದ ಬರೆದ ಅಕ್ಷರಗಳನ್ನು ಆಳವಾಗಿ ಕೊರೆದು ಶಾಶ್ವತ ದಾಖಲೆ ಮಾಡುವುದು ರೂವಾರಿ ಕರ್ತವ್ಯವಾಗಿರುತ್ತದೆ. ಇದರ ಜೊತೆ ಜೊತೆಗೆ ಶಾಸನಗಳಿಗೆ ಅಂದವಾದ ಶಿಲ್ಪಗಳನ್ನು (ಉಬ್ಬುಶಿಲ್ಪ) ನಿರ್ಮಿಸುವುದು ಒಂದು ಸಂಸ್ಕೃತಿಯಾಗಿತ್ತು. ಈ ಕಾರ್ಯವನ್ನೂ ರೂವಾರಿಗಳೆ ನಿರ್ವಹಿಸಿದಂತಿದೆ. ಶಾಸನದ ಕೊನೆಗೆ ಅಂಕಿತಗೊಂಡ ಇವರು ಶ್ರಮ ಸಂಸ್ಕೃತಿಯ ಬದುಕಿನವರು. ಮಾಡಿದ, ಕರಣ, ಬೆಸಂ, ರೂವಾರಿ, ಮಾಡಿದಂ, ಖಂಡರಿಸು, ಶಿಲಾಕರ್ಮ, ಬರೆಪ, ತಿದ್ದು ಮುಂತಾದ ಕ್ರಿಯಾ ವಿಶೇಷಣ ಪದಗಳಿಂದ ಇವರು ಗುರುತಿಸಿಕೊಂಡಿರುತ್ತಾರೆ. 'ಸಾಮಾನ್ಯವಾಗಿ ರೂವಾರಿಗಳ ಹೆಸರಿನ ಹಿಂದೆ ಕಲ್ಕುಟಿಗ, ಕಲ್ಲಂ ಕಡಿದಾತ, ಕಂಡರಣೆಕಾಱ, ಸರಸ್ವತೀಗಣಗಾತ್ರ, ಸರಸ್ವತೀಗಣಪುತ್ರ, ಸರಸ್ವತೀಗಣದಾಸಿ, ಶಾಸನಾಚಾರ್ಯ, ಸೂತ್ರಧಾರಿ, ವಿಶ್ವಕರ್ಮ, ಅಕ್ಕಸಾಲಿ, ಬಿನ್ನಣಿ, ಬಡಗಿ, ಶಿಲ್ಪಿ, ಆಚಾರಿ, ಕಮ್ಮಾರ, ಕಂಚಗಾರ, ಗವುಂಡ ಮತ್ತು ರೂವಾರಿಯೆಂಬ ವಿಶೇಷಣಗಳು ಬರುತ್ತವೆ'[೨೪೫] ಈ ಪದಗಳು ಅವರ ವೃತ್ತಿನಾಮಗಳು ಹೌದು.

ಹಾವೇರಿ ಪರಿಸರದ ಜೈನಶಾಸನಗಳ ನಿರ್ಮಾಣ ಕಾರ್ಯದಲ್ಲಿ ರೂವಾರಿಗಳ ಶ್ರಮಸಂಸ್ಕೃತಿ ಇದೆ. ಇಲ್ಲಿನ ಒಟ್ಟು ೧೫೦ ಶಾಸನಗಳಲ್ಲಿ ಅಂಕಿತವನ್ನು ಹಾಕುವುದರ ಮೂಲಕ ಗುರುತಿಸಿಕೊಂಡವರು ಕೇವಲ ಐದು ಜನ ಮಾತ್ರ. ಆದರೆ ಉಳಿದ ೧೪೫ ಜೈನ ಶಾಸನಗಳು ನಿರ್ಮಾಣವಾಗಲು ಇವರ ಪಾತ್ರ ಅನನ್ಯ.

### ೦೧. ಕಿಱುಗುಡ್ಡ (೦೮-೦೯ನೇ ಶತಮಾನ).

ರಾಷ್ಟ್ರಕೂಟರ ಮೂರನೆಯ ಗೋವಿಂದನ ಮೇದೂರ ಜೈನಶಾಸನದಲ್ಲಿ ಇವನ ಉಲ್ಲೇಖವಿದೆ. 'ಕಿಱುಗುಡ್ಡನ್ಮಾಡಿದ'.[೨೪೬] ಅಂದವಾದ ಅಕ್ಷರಗೆತ್ತನೆಯ ಶಾಸನವಿದು. ಕರಿಕಲ್ಲಿನಲ್ಲಿ ಈ ಶಾಸನವನ್ನು ಕಿಱುಗುಡ್ಡ ಕೆತ್ತಿದ್ದಾನೆ. ಹಾಗೆ ನೋಡಿದರೆ ಕರಿಗಲ್ಲಿನಲ್ಲಿ ಶಾಸನವನ್ನು ಕೆತ್ತುವುದು ಒಂದು

ಸಾಹಸದ ಕೆಲಸವೇ ಸರಿ. ಶಾಸನದ ಮೇಲ್ಭಾಗ ಒಡೆದು ಹೋದದ್ದರಿಂದ ಶಾಸನ ಶಿಲ್ಪದ ವಿವರಗಳು ಅಲಭ್ಯ. ಇಲ್ಲೇ ಇರುವ ಗೋವಿಂದನ ಕಾಲಾವಧಿಯ ಇನ್ನೊಂದು ಜಿನಶಾಸನವನ್ನು ಇವನೇ ಕೆತ್ತಿರಬೇಕು. ಎರಡೂ ಶಾಸನಗಳಲ್ಲಿ ಅಕ್ಷರ ಸಾಮ್ಯತೆ ಏಕರೂಪದಲ್ಲಿದೆ.

### ೦೨. ಬಮ್ಮೋಜ (ಕ್ರಿ.ಶ. ೧೦೬೬).

ಮೋಟೆಬೆನ್ನೂರು ಕುಂಬಾರಗೇರಿಯಲ್ಲಿರುವ ಜಿನಶಾಸನವೊಂದಿದ್ದು, ಕಲ್ಯಾಣ ಚಾಳುಕ್ಯರ ೧ನೆಯ ಸೋಮೇಶ್ವರನ ಕಾಲಕ್ಕೆ ನಿರ್ಮಾಣಗೊಂಡಿದೆ. ೪೧ ಸಾಲಿನ ವಿಸ್ತಾರವಾದ ಈ ಶಾಸನವನ್ನು 'ಬಮ್ಮೋಜ' ಎಂಬ ರೂವಾರಿ ಮಾಡಿದ್ದಾನೆ. ಶಾಸನದ ಕೊನೆಗಿರುವ 'ಬಮ್ಮೋಜನ ಬೆಸಂ'[೨೪೭] ಎಂದಿರುವುದರಿಂದ ಇದು ಬಮ್ಮೋಜನ ಕಾರ್ಯ ಎಂದು ದಿಟವಾಗುತ್ತದೆ. ಅಕ್ಷರಗಳನ್ನು ಆಳವಾಗಿ ಕೆತ್ತಿರುವುದು, ಶಾಸನಶಿಲ್ಪಗಳನ್ನು ಅಂದವಾಗಿ ಕೆತ್ತಿರುವುದನ್ನು ಗಮನಿಸಿದಾಗ ಇವನೊಬ್ಬ ವೃತ್ತಿನಿರತ ಶಿಲ್ಪಿ ಎಂದು ತೋರುತ್ತದೆ. ಕ್ರಮಬದ್ಧ ಕೆತ್ತನೆಯ ಈ ಶಾಸನವು ಸಿಂಹ, ಹಾಲೂಡುತ್ತಿರುವ ಹಸು, ಸೂರ್ಯ, ಚಂದ್ರ ಮುಕ್ಕೊಡೆಗಳು ಚಿತ್ರಿತವಾಗಿವೆ. ಜಿನನ ಬಿಂಬವನ್ನು ಸಂಪೂರ್ಣ ಕೆತ್ತಿ ತೆಗೆದು ಅಲ್ಲಿ ಶಿವಲಿಂಗದ ಗೀರು ಶಿಲ್ಪವನ್ನು ಒಡಮೂಡಿಸಲಾಗಿದೆ. ಇದು ಇತ್ತೀಚಿನ ಮಾರ್ಪಾಡು. ಬಮ್ಮೋಜ ಅಲ್ಲಿ ಜಿನಬಿಂಬವನ್ನೇ ಕೆತ್ತಿದ್ದ ಎಂಬುದಕ್ಕೆ ಮೇಲಿರುವ ಮುಕ್ಕೊಡೆ ಮತ್ತು ಜಿನಶಿಲ್ಪದ ರೂಪ ಸಾಕ್ಷಿಯಾಗಿ ನಿಲ್ಲುತ್ತವೆ.

### ೦೩. ದೇವರಾಸಿ (೧೨ನೆಯ ಶತಮಾನ).

ಅರಟಾಳ (ಶಿತಾ) ದ ಪಾರ್ಶ್ವನಾಥ ಬಸದಿಯ ಮೂಲಮೂರ್ತಿ ಪಾರ್ಶ್ವನಾಥನ ಪಾದಪೀಠದ ಶಾಸನದಲ್ಲಿ ರೂವಾರಿ ದೇವರಾಸಿ ಎಂದಿದೆ.[೨೪೮] ಶಾಸನ ತ್ರುಟಿತಗೊಂಡಿದೆ. ೬ ಸಾಲಿನ ಶಾಸನವನ್ನು ದೇವರಾಸಿ ಕೆತ್ತುವ ಜೊತೆಗೆ ಪಾರ್ಶ್ವನಾಥನ ವಿಗ್ರಹವನ್ನು ನಿರ್ಮಿಸಿದಂತೆ ತೊರುತ್ತದೆ. ಈ ವಿಷಯದಿಂದ ಮೂರ್ತಿಶಿಲ್ಪಿಗಳೂ ಸಹ ಶಾಸನಶಿಲ್ಪಿಗಳಾಗಿದ್ದರು ಎಂದು ದಿಟವಾಗುತ್ತದೆ. ಶಾಸನದ ಅಕ್ಷರಗಳು ಆಳವಾಗಿದ್ದು, ಹಾಳಾಗಿವೆ. ಪಾರ್ಶ್ವನಾಥನ ಶಿಲ್ಪ ಅಮೃತಶಿಲೆಯಲ್ಲಿ ನಿರ್ಮಾಣವಾಗಿದ್ದು ಕ್ರಮಬದ್ಧವಾಗಿದೆ. ಅಂತೆಯೇ ಶಾಸನವನ್ನು ಅಮೃತಶಿಲೆಯಲ್ಲಿಯೇ ದೇವರಾಸಿ ನಿರ್ಮಿಸಿದ್ದಾನೆ.

### ೦೪. ಗೋಸೋಜ (೧೨ನೆಯ ಶತಮಾನ).

ಆಡೂರಿ (ಹಾನತಾ)ನ ಒಂದು ನಿಸಿಧಿ ಶಾಸನದಲ್ಲಿ 'ಗೋಸೋಜನು ಮಾಡಿದಂ' ಎಂದಿದೆ.[೨೪೯] ಆದ್ದರಿಂದ ಬಂಕಾಪುರದ ಹಡವಳ ಚಟ್ಟಯ್ಯನ ಹೆಂಡತಿಯಾದ ಭಾಗವೆಯ ನಿಸಿಧಿ ಶಾಸನವನ್ನು ಇವನೇ ನಿರ್ಮಾಣಮಾಡಿದ್ದಾನೆ. ಶಾಸನ ಮತ್ತು ಶಿಲ್ಪಕ್ಕೆ ಬಳಸಿದಕಲ್ಲು ಬಳಪದ ಶಿಲೆಯಾದ್ದರಿಂದ ಅಕ್ಷರಗಳನ್ನು ಆಳವಾಗಿ ಕೆತ್ತಿದ್ದಾನೆ. ಅಕ್ಷರಗಾತ್ರಗಳು ಒಂದೇ ಸಮನಾಗಿರದೆ ದೊಡ್ಡ-ಚಿಕ್ಕ ಗಾತ್ರದಲ್ಲಿವೆ. ಇದು ಗೋಸೋಜನ ಪ್ರಮಾದವಲ್ಲ. ಲಿಪಿಕಾರ ಬರೆದುಕೊಟ್ಟಂತೆ ಅವನು

ಕೆತ್ತಿದ್ದಾನಷ್ಟೆ. ಈ ಸ್ಮಾರಕದ ವ್ರತಧಾರಿ, ನಿರ್ಯಾಪಕಾಚಾರ್ಯಮುನಿ, ಶೃತಪೀಠ, ಜಿನ, ಚಾಮರಧಾರಿಣಿಯರು, ಮುಕ್ಕೊಡೆ, ಸೂರ್ಯಚಂದ್ರರ ಶಿಲ್ಪಗಳನ್ನು ಗೋಸೋಜನೆ ಮಾಡಿದ್ದಾನೆ. ಇವನೊಬ್ಬ ವೃತ್ತಿನಿರತ ಶಾಸನಶಿಲ್ಪಿಯಾದಂತೆ ಮೂರ್ತಿ ಶಿಲ್ಪಿಯಾದಂತಿಲ್ಲ. ಏಕೆಂದರೆ ಇಲ್ಲಿರುವ ಎಲ್ಲ ಉಬ್ಬುಶಿಲ್ಪಗಳಲ್ಲಿ ದೇಹರಚನೆ ಸರಿಯಾಗಿದ್ದರೆ ಮುಖಭಾವಗಳು ಅಂದಗೆಟ್ಟಿವೆ. ಕಣ್ಣು, ಬಾಯಿ, ಮೂಗು ಹುಬ್ಬುಗಳನ್ನು ಚಿತ್ರಿಸುವಲ್ಲಿ ಕಲಾನೈಪುಣ್ಯತೆ ಕಂಡು ಬರುವುದಿಲ್ಲ. ಇಲ್ಲಿರುವ ದೇವಗಿರಿ ಯಾದವರ ರಾಮದೇವನ ಕಾಲದ ಇತರೆ ಆರು ನಿಸಿಧಿಗಳನ್ನು ಇವನೇ ನಿರ್ಮಿಸಿದಂತೆ ತೋರುತ್ತದೆ. ಈ ಎಲ್ಲ ಸ್ಮಾರಕಗಳ ಶಿಲ್ಪಗಳು ಮುಖಭಾವವನ್ನು ಚಿತ್ರಿಸುವಲ್ಲಿ ಸೋತಿವೆ. ಶಿಲ್ಪಿಗಿರುವ ಕಲೆಯ ಅವಜ್ಞೆತೆಯೇ ಇದಕ್ಕೆ ಕಾರಣ.

### ೦೫. ಚೌಡೋಜ (ಕ್ರಿಶ ೧೪೫೧).

ಹೀರೂರಿ (ಹಾನತಾ)ನ ಬಸವಣ್ಣ ದೇವಾಲಯದ ಗೋಡೆಯಲ್ಲಿರುವ ಗುಣಭೂಷಿತದೇವರ ಗುಡ್ಡಿ ವದ್ದಯ ಎಂಬುವಳ ನಿಸಿಧಿ ಶಾಸನವನ್ನು ಚೌಡೋಜ ನಿರ್ಮಿಸಿದ್ದಾನೆ 'ಗುಡುಗುಡಿ ಚೌಡೋಜ ಮಾಡಿದರು'[೨೫೦] ಎಂದು ಚೌಡೋಜ ತನ್ನ ಊರು ಗುಡಗುಡಿ ಎಂದು ಹೇಳಿಕೊಂಡಿದ್ದಾನೆ. ಗುಡುಗುಡಿ ಹಾನಗಲ್ಲು ತಾಲ್ಲೂಕಿನ ಒಂದು ಗ್ರಾಮ. ಇವನೊಬ್ಬ ವೃತ್ತಿನಿರತ ಶಾಸನಶಿಲ್ಪಿಯಾಗಿದ್ದು ಬಹಳಷ್ಟು ಕಡೆ ಶಾಸನ ನಿರ್ಮಿಸಿದ್ದಂತೆ ತೋರುತ್ತದೆ. ಆದ್ದರಿಂದ ವದ್ದಯ ನಿಸಿಧಿ ಶಾಸನ ಮತ್ತು ಶಿಲ್ಪಗಳು ಪ್ರಮಾಣಬದ್ಧವಾಗಿವೆ.

### ಈ. ಜೈನ ಶಾಸನಶಿಲ್ಪ.

"ಶಿಲ್ಪಕ್ಕೆ ಶಿಲ್ಪ, ಶಾಸನಕ್ಕೆ ಶಾಸನವಾಗಿ ಮೂಡಿ ಬಂದಿರುವ ಶಾಸನ ಶಿಲ್ಪವು ಅಲ್ಪ ಹಾಗೂ ಶಾಸನಶಾಸ್ತ್ರ ದೃಷ್ಟಿಯಿಂದ ಅಮೂಲ್ಯವಾಗಿದೆ."[೨೫೧] ಇವುಗಳ ಅಧ್ಯಯನ ಇತ್ತೀಚಿಗೆ ಪ್ರಾಮುಖ್ಯತೆ ಪಡೆದುಕೊಳ್ಳುತ್ತಿದೆ. ಈ ನಿಟ್ಟಿನಲ್ಲಿ ಹೊರಬಂದ ಅಮೂಲ್ಯ ಕೃತಿಗಳೆಂದರೆ ಆರ್. ಶೇಷಶಾಸ್ತ್ರಿಯವರ 'ಕರ್ನಾಟಕದ ವೀರಗಲ್ಲುಗಳು', ಡಿ.ವಿ.ಪರಮಶಿವಮೂರ್ತಿಯವರ 'ಕನ್ನಡ ಶಾಸನ ಶಿಲ್ಪ'. ಶಾಸನ ಶಿಲ್ಪಗಳ ಬಗ್ಗೆ ವಿಸ್ತೃತ ಅಧ್ಯಯನ ಕೈಗೊಂಡ ಕೃತಿಗಳಿವು.

ಜೈನ ಧರ್ಮದಂತೆ ಜೈನ ಶಾಸನಗಳೂ ಅದರ ಶಿಲ್ಪಗಳೂ ಹಿಂದೂ ಧರ್ಮ ಪರಂಪರೆಯಿಂದ ವಿಭಿನ್ನ. ಆದರೆ ಅದರ ಪ್ರಭಾವಲಯ ಈ ಧರ್ಮದ ಮತ್ತು ಶಾಸನ ಶಿಲ್ಪಗಳ ಮೇಲಾಗಿದೆ ಎಂಬುದನ್ನು ಅಲ್ಲಗಳೆಯುವಂತಿಲ್ಲ. "ಶಾಸನಶಿಲ್ಪವು ತಾಂತ್ರಿಕವಾಗಿ ಉಬ್ಬುಶಿಲ್ಪದ ಒಂದು ಪ್ರಕಾರ. ಭಾರತೀಯ ಶಿಲ್ಪಶಾಸ್ತ್ರದಲ್ಲಿ ಉಬ್ಬು ಶಿಲ್ಪವು ಬಹಳ ದೊಡ್ಡ ವಿಭಾಗವಾಗಿದೆ. ನಮ್ಮ ಪ್ರಾಚೀನ ದೇವಾಲಯಗಳ ಹೊರಗೆ ಮತ್ತು ಒಳಗೆ ಅನೇಕ ವಿಧದ ಉಬ್ಬುಶಿಲ್ಪಗಳು ಕಂಡುಬರುತ್ತವೆ. ಹೊಯ್ಸಳ ಶೈಲಿಯ ದೇವಾಲಯಗಳನ್ನು ಉಬ್ಬುಶಿಲ್ಪಗಳಿಲ್ಲದೆ ಕಲ್ಪಿಸಲೂ ಅಸಾಧ್ಯ. ಶಾಸನಗಳಂತೂ ಪೂರ್ಣವಾಗಿ ಉಬ್ಬುಶಿಲ್ಪದ ಮಾದರಿಗಳೇ ಆಗಿವೆ. ಹೀಗಾಗಿ ಶಾಸನ ಶಿಲ್ಪದ ಅಧ್ಯಯನವೆಂದರೆ

ಶಾಸನಗಳ ಮೇಲಿರುವ ಉಬ್ಬುಶಿಲ್ಪಗಳ ಅಧ್ಯಯನವೆಂದೇ ಅರ್ಥ."[೨೫೨] ಜೈನಧರ್ಮದ ಕೃತಿಗಳಲ್ಲಿ ಉಬ್ಬು ಶಿಲ್ಪಗಳ ಬಗ್ಗೆ ವಿವರಣೆಗಳಿಲ್ಲ. ಸೋಮದೇವ ಸೂರಿಯ ಯಶಸ್ತಿಲಕ, ನೇಮಿಚಂದ್ರನ ತ್ರಿಲೋಕಸಾರ ವಸುನಂದಿಯ ಪ್ರತಿಷ್ಠಾಪಾಠ. ಆಶಾಧರ ಸೂರಿಯ ಪ್ರತಿಷ್ಠಸಾರೋದ್ಧಾರ, ಜಿನೇಂದ್ರನ ಕಲ್ಯಾಣಾಭ್ಯುದಯ ಮತ್ತು ವರಾಹಮಿಹಿರನ ಬೃಹತ್ಸಂಹಿತೆ ಕೃತಿಗಳಲ್ಲಿ ತೀರ್ಥಂಕರ ಪ್ರತಿಮಾ ಲಕ್ಷಣಗಳನ್ನು, ಅವುಗಳ ಉದ್ದ-ಅಗಲದ ಪರಿಮಾಣಗಳನ್ನು, ವಿವಿಧ ಲೋಹ, ಕಲ್ಲು, ಲೆಪ್ಪದಲ್ಲಿ ಕಂಡರಿಸುವ ವಿಧಾನಗಳನ್ನು ತಿಳಿಸಿದ್ದಾರೆಯೇ ಹೊರತು ಉಬ್ಬುಶಿಲ್ಪದ ಬಗ್ಗೆ ಪ್ರತ್ಯೇಕವಾಗಿ ಹೇಳಿಲ್ಲ. ಇವರೆಲ್ಲ ಹೇಳದೇ ಇರುವ ಹೊಸದೊಂದು ಶಿಲ್ಪ ಜೈನ ಶಾಸನಗಳಲ್ಲಿ ಒಡಮೂಡಿದೆ. ಅದೇ ಶಾಸನ ಶಿಲ್ಪ.

## ಶಿಲ್ಪ-ಉಬ್ಬು ಶಿಲ್ಪ.

"ಶಿಲ್ಪ ಎಂಬುದು ನಾಲ್ಕು ದಿಕ್ಕುಗಳಿಂದಲೂ ನೋಡಬಹುದಾದ ನಿರ್ಮಾಣಕ್ಕೆ ಹೇಳುವ ಮಾತು. ಇದನ್ನು ಯಾವ ಬದಿಯಲ್ಲಿ ಬೇಕಾದರೂ ನಿಂತು ವಿವಿಧ ಮುಖಗಳನ್ನು ಪರಿಚಯ ಮಾಡಿಕೊಳ್ಳಬಹುದು. ಇಲ್ಲವೆ ಅದನ್ನೇ ಯಾವ ಕಡೆಗೆ ಬೇಕಾದರೂ ತಿರುಗಿಸಿ ನೋಡಬಹುದು. ಇದನ್ನೆ 'ದುಂಡು ಶಿಲ್ಪ' ಅಥವಾ 'ಪೂರ್ಣಶಿಲ್ಪ' ಎನ್ನುವುದು. ಆದರೆ ಉಬ್ಬುಶಿಲ್ಪ ಹೀಗಿರುವುದಿಲ್ಲ. ಇದಕ್ಕೆ ಸ್ವತಂತ್ರವಾದ ಮೈ ಇರುವುದಿಲ್ಲ. ಇದು ಹಿನ್ನೆಲೆಯೊಂದಿಗೆ ಅಂಟಿಕೊಂಡಿರಲೇಬೇಕು. ಅಲ್ಲದೆ ಇದನ್ನು ಎದುರಿನಲ್ಲಿ ನಿಂತು ನೋಡಬಹುದೇ ಹೊರತು, ಶಿಲ್ಪವನ್ನು ನೋಡುವಂತೆ ಯಾವ ಬದಿಯಿಂದಲಾದರೂ ನೋಡಲು ಸಾಧ್ಯವಿಲ್ಲ. ಉಬ್ಬುಶಿಲ್ಪವನ್ನು ಹಿನ್ನೆಲೆಯಿಂದ ತೀರಾ ಮುಂದಕ್ಕೆ ಚಾಚಿರುವಂತೆಯೂ ಕೆತ್ತಲಾಗುವುದಿಲ್ಲ. ಕೈಗಳನ್ನು, ಆಯುಧಗಳನ್ನು, ಇತರೆ ಭಾಗಗಳನ್ನು ಪೂರ್ಣಶಿಲ್ಪದ ರೀತಿ ಕೆತ್ತಲಾಗುವುದಿಲ್ಲ. ಇಲ್ಲಿ ಕೈಗಳು, ಆಯುಧಗಳು ಮುಂತಾದವು ಪೂರ್ಣವಾಗಿ ಹಿನ್ನೆಲೆಗೆ ಅಂಟಿರುತ್ತವೆ."[೨೫೩] ಬಾದಾಮಿಯ ಬಹುತೇಕ ಜೈನ ಗುಹಾಶಿಲ್ಪಗಳು ಈ ರೀತಿಯವು. ಈ ಕ್ರಮವನ್ನು ಜೈನ ಶಾಸನಗಳಲ್ಲೂ ಬಳಸಲಾಗಿದೆ. ಒಟ್ಟಿನಲ್ಲಿ 'ಚಪ್ಪಟೆಯಾದ ಹಿನ್ನೆಲೆಯಿಂದ ಮುಂದಕ್ಕೆ ಉಬ್ಬಿದಂತೆ ಕಾಣುವ ಶಿಲ್ಪವೆ ಉಬ್ಬುಶಿಲ್ಪ'[೨೫೪] ಎನ್ನಬಹುದು. ಹಾವೇರಿ ಪರಿಸರದಲ್ಲಿ ಈ ರೀತಿಯ ಜೈನ ಶಾಸನ ಶಿಲ್ಪಗಳನ್ನು ೧. ದಾನಶಾಸನ ಶಿಲ್ಪ, ೨. ನಿಸಿಧಿ ಶಾಸನ ಶಿಲ್ಪ, ೩. ವೀರಗಲ್ಲು ಇತರೆ ಸ್ಮಾರಕ ಶಿಲ್ಪಗಳು ಎಂದು ವಿಭಾಗಿಸಿ ಅಭ್ಯಸಿಸಲಾಗಿದೆ.

### ೧. ದಾನ ಶಾಸನ ಶಿಲ್ಪ.

"ಜೈನರ ದಾನಶಾಸನ ಶಿಲ್ಪಗಳಲ್ಲಿ ಸಾಮಾನ್ಯವಾಗಿ ತೀರ್ಥಂಕರನು ನಿಂತ ಅಥವಾ ಕುಳಿತ ಭಂಗಿಯಲ್ಲಿರುವ ಚಿತ್ರಣವಿರುತ್ತದೆ. ಶಾಸನದ ಲಲಾಟದ ಎಡ ಹಾಗೂ ಬಲ ಭಾಗಗಳಲ್ಲಿ ಸೂರ್ಯ-ಚಂದ್ರರನ್ನು ಚಿತ್ರಿಸಲಾಗಿದ್ದು, ಜಿನಮೂರ್ತಿಯ ತಲೆಯ ಮೇಲೆ ಸ್ವಲ್ಪ ಅಂತರದಲ್ಲಿ ಮುಕ್ಕೊಡೆಯನ್ನು, ಈ ಕೊಡೆಯ ಎರಡೂ ಬದಿಗೆ ಚಾಮರಗಳನ್ನು ಚಿತ್ರಿಸಲಾಗಿರುತ್ತದೆ".[೨೫೫] ಇವುಗಳ ಜೊತೆಗೆ ತೀರ್ಥಂಕರ ಯಕ್ಷಿ, ಕರುವಿಗೆ ಹಾಲುಡುತ್ತಿರುವ ಹಸು, ಗಜ, ಚಾಮರದ ಚಿತ್ರಣಗಳೂ,

ತೀರ್ಥಂಕರರ ಲಾಂಛನಗಳು ಹಾವೇರಿ ಪರಿಸರದ ಜೈನ ದಾನ ಶಾಸನ ಶಿಲ್ಪಗಳಲ್ಲಿ ಕಾಣಬಹುದು. ಇಲ್ಲಿ ದೊರೆಯುವ ದಾನ ಶಾಸನ ಶಿಲ್ಪಗಳ ಬೆರಳೆಣಿಕೆಯಷ್ಟಿದ್ದರೂ ವೈವಿಧ್ಯವಾಗಿವೆ. ಇವುಗಳ ಸ್ವರೂಪ ಆಧರಿಸಿ ನಾಲ್ಕು ವಿಭಾಗ ಮಾಡಿಕೊಳ್ಳಬಹುದು.

೧. ರಾಜ್ಯಸ್ವ ಪ್ರಧಾನ ದಾನ ಶಾಸನಶಿಲ್ಪ.
೨. ಧಾರ್ಮಿಕ ಪ್ರಧಾನ ದಾನ ಶಾಸನಶಿಲ್ಪ.
೩. ಘಟನಾ ಪ್ರಧಾನ ದಾನ ಶಾಸನಶಿಲ್ಪ.
೪. ಲಾಂಛನ ಪ್ರಧಾನ ದಾನ ಶಾಸನಶಿಲ್ಪ.

### ೦೧. ರಾಜ್ಯಸ್ವ ಪ್ರಧಾನ ದಾನ ಶಾಸನಶಿಲ್ಪ.

ರಾಜರಿಂದ ನೇರವಾಗಿ ಜಿನಾಲಯಕ್ಕೆ ಸಂದ ಅಥವಾ ರಾಜಸ್ವದ ಹಿನ್ನೆಲೆಯಲ್ಲಿ ಸಂದ ದಾನ ಶಾಸನಗಳಲ್ಲಿ ಅವರ ಲಾಂಛನಗಳನ್ನು ಹಾಕಿಸಿರುವುದು ಹಾವೇರಿ ಪರಿಸರದ ಜೈನ ಶಾಸನಗಳಲ್ಲಿ ಕಂಡುಬರುತ್ತದೆ. ಬಾದಾಮಿ ಚಲುಕ್ಯ ಶಾಸನಗಳಲ್ಲಿ ಈ ಕ್ರಮ ಅಳವಡಿಕೆಯಾಗಿದೆ. ಕ್ರಿ.ಶ. ೭೦೮ರ ಶಿಗ್ಗಾವಿ ತಾಮ್ರಪಟದಲ್ಲಿ 'ವರಹ' ಲಾಂಛನದ ಉಬ್ಬು ಶಿಲ್ಪವಿದ್ದು ಅದು ಚಲುಕ್ಯ ಅಧಿಪತ್ಯವನ್ನು ಬಿಂಬಿಸುತ್ತದೆ. ವರ್ತುಲಾಕಾರದ ತಾಮ್ರದ ಬಿಲ್ಲೆಯನ್ನು ತಗ್ಗುಗೊಳಿಸಿ ವರಹವನ್ನು ಕೆತ್ತಲಾಗಿದೆ. ಬಲಮುಖವಾಗಿರುವ ವರಹದಲ್ಲಿ ದೇಹ, ಎರಡು ಕಾಲುಗಳು, ಬಾಲವನ್ನು ಚಿತ್ರಿಸಲಾಗಿದೆ. ಚಲುಕ್ಯರು ಆರಾಧಿಸುತ್ತಿದ್ದ ಅಥವಾ ಬಳಸುತ್ತಿದ್ದ 'ಪುಷ್ಕರ' ಚಿತ್ರದ ಶಿಲ್ಪ ಆಡೂರು ಶಿಲಾಶಾಸನದಲ್ಲಿ ಬಳಕೆಗೊಂಡಿದ್ದು ಕುತುಹಲಕಾರಿಯಾಗಿದೆ. "ಪುಷ್ಕರ ಎಂದರೆ ಜಲಗರ್ಭದಿಂದ ಉದಯಿಸುವ ವಿಶ್ವ, ಅದು ಸೃಷ್ಟಿಯನ್ನು ಸಂಕೇತಿಸುವುದು. ಇದರ ಮೇಲೆ ವೃತ್ತಾಕಾರದ ಒಂದು ಸುವರ್ಣಚಕ್ರ (ಸೂರ್ಯ)ವನ್ನು ಮೇಲಿರಿಸಿದಾಗ, ಅದು ದಿನಕರ-ದೋಣಿಯಾಗಿ ರೂಪುಗೊಂಡು ಚಲಿಸುವ ಜಲದ ಮೇಲೆ ನಲಿದಾಡುವ ಜೀವಿಯನ್ನು ಸಂಕೇತಿಸುವುದು."[೨೪೬] ಆಡೂರು ಶಾಸನದಲ್ಲಿ ಈ ರೀತಿಯ ಸಪ್ತ ದಳದ ಉದಯೋನ್ಮುಖ ಚಕ್ರವಿದೆ. "ಚಕ್ರ ಲೌಕಿಕ ಹಾಗೂ ಧಾರ್ಮಿಕ ಶಕ್ತಿಯ ಸಂಕೇತ; ಪದ್ಮ ಇದರ ಅಡಿಗಲ್ಲು. ಈ ಕಾರಣದಿಂದಾಗಿ ಪದ್ಮಪೀಠಗಳ ಮೇಲೆ ನಿಂತ ಹಾಗೂ ಕುಳಿತ ದೇವತೆಗಳ ಹಾಗೂ ಚಕ್ರವರ್ತಿಗಳ ನಿರೂಪಣೆ ಭಾರತೀಯ ಕಲೆಯಲ್ಲಿ ಸರ್ವೇಸಾಮಾನ್ಯ."[೨೪೭] ಸಾಮಾನ್ಯವಾಗಿ ತೀರ್ಥಂಕರರು ಹಾಕಿದ ಪದ್ಮಾಸನ ಭಂಗಿಯಲ್ಲಿ ಅವರ ಕೆಳಗೆ ಪದ್ಮ (ಕಮಲ)ದ ಚಿತ್ರಣವಿರುವುದನ್ನು ಗಮನಿಸಬೇಕು.

### ೦೨. ಧಾರ್ಮಿಕ ಪ್ರಧಾನ ದಾನ ಶಾಸನಶಿಲ್ಪ.

ಒಬ್ಬ ವ್ಯಕ್ತಿ ಬಸದಿಯೊದಕ್ಕೆ ದಾನ ನೀಡಿದಾಗ ಶಾಸನವನ್ನು ಕೆತ್ತಿಸುವುದು ರೂಢಿ. ಹಾಗೆ ಶಾಸನ ಮಾಡುವ ಸಂದರ್ಭದಲ್ಲಿ ಅದರ ಮೇಲ್ಭಾಗಕ್ಕೆ ಅದೇ ಬಸದಿಯ ತೀರ್ಥಂಕರನ ಉಬ್ಬುಶಿಲ್ಪ ಕೆತ್ತಿಸುವುದು ಒಂದು ಅಲಿಖಿತ ನಿಯಮ. ಆದರೆ ಅಲ್ಲಿ ತೀರ್ಥಂಕರರ ಲಾಂಛನವನ್ನು ಕೆತ್ತಿರುವುದಿಲ್ಲ.

ಕಾರಣ ಶಾಸನ ಅದೇ ಬಸದಿಯಲ್ಲಿರುವುದರಿಂದ ಅದು ಅನವಶ್ಯಕವೆಂದು ಶಿಲ್ಪಿಗೆ ಹೊಳೆದಿರಬೇಕು. ಅಂತಾಗಿ ಲಾಂಛನವಿರದ ಇಂಥಹ ಬಿಂಬಗಳನ್ನು 'ಜಿನ' ಎಂದು ಕರೆಯುವ ವಾಡಿಕೆಯು ಬಂದಿರಬೇಕು. ಈ ತರಹದ ಶಿಲ್ಪಗಳು ಕದರಮಂಡಲಗಿ (ಬ್ಯಾತಾ), ಮೇದೂರು (ಹಿತಾ), ಅರಟಾಳ (ಶಿತಾ), ಬಾಳೇಹಳ್ಳಿ (ಹಾನತಾ), ದೇವಗಿರಿ (ಹಾತಾ) ಗಳಲ್ಲಿ ಕಂಡು ಬರುತ್ತವೆ.

"ಶಾಸನ ಶಿಲ್ಪಗಳಲ್ಲಿ ವಿವರಣೆಗಿಂತ ಸಾಂಕೇತಿಕ ಅರ್ಥಸೂಚನೆಗೇ ಹೆಚ್ಚಿನ ಒತ್ತು ಕೊಟ್ಟಿದೆ. ಹೀಗಾಗಿ, ಶಿಲ್ಪ ವಿನ್ಯಾಸ ಕ್ರಮದಲ್ಲಿ ಚಲನಶೀಲತೆಗಿಂತ ಹೆಚ್ಚಾಗಿ ಸಾಂಕೇತಿಕ ಅರ್ಥ ಗೌರವಕ್ಕೆ ಪೋಷಕ ಅಂಶಗಳೇ ಹೆಚ್ಚಾಗಿರುತ್ತವೆ. ಅಂತೆಯೇ ಶಾಸನಶಿಲ್ಪದಲ್ಲಿ ಯಾವುದೂ ಅನವಶ್ಯಕವಾಗಿ ಬಂದಿಲ್ಲ. ಎಲ್ಲದಕ್ಕೂ ಅವರದೇ ಆದ ಅರ್ಥ ಮಹತ್ವವಿರುತ್ತದೆ."[೨೫೮] ಸಾಮಾನ್ಯವಾಗಿ ಜಿನನ ಜೊತೆಗೆ ಹಾಲೂಡುತ್ತಿರುವ ಹಸು, ಚಾಮರವನ್ನು ಬೀಸುತ್ತಿರುವ ಸ್ತ್ರೀಯರು, ಮುನಿ, ಸೂರ್ಯಚಂದ್ರರ ಶಿಲ್ಪಗಳು ಹಾವೇರಿ ಪರಿಸರದ ಜೈನ ದಾನಶಿಲ್ಪಗಳಲ್ಲಿ ಕಂಡುಬರುತ್ತವೆ. ಕರುವಿಗೆ ಹಾಲುಣಿಸುತ್ತಿರುವುದು ಸಮೃದ್ಧಿಯ ಸಂಕೇತವಾದರೆ, ಚಾಮರ ಬೀಸುವ ಕ್ರಿಯೆ ವ್ಯಕ್ತಿ ಶ್ರೇಷ್ಠತೆಯ ಸಂಕೇತ. ಇನ್ನು ಮುನಿಯ ಶಿಲ್ಪವನ್ನು ಅವನು ದಾನ ಕೊಡುವಂತೆ ಪ್ರೇರಪಣೆ ನೀಡಿದ ಸಂಕೇತವಾಗಿ ತರಲಾಗಿರುತ್ತದೆ. ಸೂರ್ಯ-ಚಂದ್ರರ ಶಿಲ್ಪಗಳು ಶಾಸನಗಳೇ ಹೇಳುವಂತೆ 'ಆಚಂದ್ರಾರ್ಕ' ಇರುವವರಿಗೆ ಕೊಟ್ಟ ದಾನ ಶಾಶ್ವತದವಾದದ್ದೆಂಬ ಭಾವ ಸ್ಫುರಣೆಗೆ ಭಾಜನವಾಗಿವೆ. ಮೋಟೆಬೆನ್ನೂರು ಮತ್ತು ಹೊನ್ನತ್ತಿ[೨೫೯] ಜೈನ ಶಾಸನಗಳಲ್ಲಿ ಜಿನಶಿಲ್ಪದ ಬದಲಾಗಿ ಶಿವಲಿಂಗದ ಉಬ್ಬುಶಿಲ್ಪ ಮತ್ತು ಗೀರುಶಿಲ್ಪಗಳು ಒಡಮೂಡಿದ್ದು ಕೌತುಕ ತರಿಸುತ್ತದೆ. ವಾಸ್ತವವಾಗಿ ಇಲ್ಲಿ ಜಿನಬಿಂಬಗಳೇ ಇದ್ದವು. ಮತೀಯ ದಾಳಿಯ ಮನಸ್ಸುಗಳು ಈ ಬದಲಾವಣೆ ತಂದಿರಲಿಕ್ಕೆ ಸಾಕು.

೧೨ನೆಯ ಶತಮಾನದಲ್ಲಿ ಮತೀಯ ದಾಳಿಗಳು ಸಹಜವೆನಿಸಿದ್ದವು. ಅಬ್ಬಲೂರಿನ ಏಕಾಂತರಾಮಯ್ಯನ ಶಿರಸ್ಸು ಪವಾಡ ಮೆರೆಯುವ ಒಂದು ಶಾಸನದಲ್ಲಿ ಆ ಊರ "ಜಿನನೊಡೆದು ಬಸದಿಯನಳಿದು ಬಿಸುಟು ನೆಲನಂ ಖಂಡಿಸಿ ವೀರಸೋಮನಾಥದೇವರಂ ಪ್ರತಿಷ್ಠೆ ಮಾಡಿ ಶಿವಾಗಮೋಕ್ತವಾಗೆ ಪರ್ಬತ ಪ್ರಮಾಣದ ದೇಗುಲಮಂ ತ್ರಿಕೂಟವಾಗೆ ಮಾಡಿಸಿದ"[೨೬೦] ಎಂಬ ವಾಕ್ಕು ಬಸದಿಯು ಪರಿವರ್ತನೆ ಬಗ್ಗೆ ಸಾರಿ ಹೇಳುತ್ತದೆ. ಇವಷ್ಟೇ ಅಲ್ಲದೆ ಹಿರೇಕೋಣತಿ (ಹಿತಾ)ಯ ನಾರಾಯಣ ದೇಗುಲ, ಮಲ್ಲೂರು (ಬ್ಯಾತಾ), ಹಾನಗಲ್ಲು (ಹಾತಾ), ಅಕ್ಕೂರು (ಹಾತಾ), ಹಾವೇರಿ (ಹಾತಾ), ಹೊನ್ನತ್ತಿ (ರಾತಾ), ಹಿರೇಅಣಜಿ (ಬ್ಯಾತಾ), ರಟ್ಟೀಹಳ್ಳಿ (ಹಿತಾ) ವೀರಭದ್ರ ದೇವಾಲಯಗಳು, ನದಿಹರಳಹಳ್ಳಿ (ರಾತಾ) ಸೋಮೇಶ್ವರ, ನೆಗಳೂರು (ಹಾತಾ) ಈಶ್ವರ ದೇವಾಲಯಗಳು ಮೊದಲು ಜಿನಾಲಯಗಳಾಗಿದ್ದವು. ಈಗಲೂ ಈ ಮಂದಿರಗಳಲ್ಲಿ ಲಲಾಟದಲ್ಲಿ ಜಿನಶಿಲ್ಪ, ಜಿನಶಾಸನಗಳು, ಜಿನಬಿಂಬಗಳು ದೊರೆಯುವುದರಿಂದ ಅವು ಜಿನಾಲಯಗಳೇ ಆಗಿದ್ದವು ಎಂಬುದರಲ್ಲಿ ಸಂದೇಹವೇ ಇಲ್ಲ.

ತಾಳಿಕೋಟೆಯ ಕ್ರಿ.ಶ. ೧೧೮೪ರ ಒಂದು ಶಾಸನವು ಕರ್ನಾಟಕದಲ್ಲಿ ಬಸದಿಗಳು ಪರಿವರ್ತಿತವಾಗಿ ಶಿವಲಿಂಗ ಪ್ರತಿಷ್ಠಾಪಿತವಾಗಿವೆ ಎಂಬುದಕ್ಕೆ ಒಂದು ಪಟ್ಟಿಯನ್ನೇ ಕೊಡಲಾಗಿದೆ.

> "ಪರಿಯಳಿಗೆ ಅಣಿಲೆವಾಡ ಉಣಕಲ್ಲು ಸಂಪಗಾವಿ ಅಬ್ಬಲೂರು ಮಾರುಡಿಗೆ
> ಅಣಪೂರು ಕರಹಾಡ ಕೆಂಬಾವಿ ಬಮ್ಮುಕೂರು ಮೊದಲಾಗಿ ಅನನ್ತದೇಶ
> ದೇಶಾನ್ತರದಲಿದಿರಾದ ಪರಸಮಯಿಗಳಂ ಪಡಲ್ಪಡ್ಸಿ ಲೋಕಮನಾಂಕಂಪಂ
> ಗೊಳ್ಸಿ ಬಸದಿಗಳಿಂ ಹೊಸೆದು ಮುಕ್ಕಿ ಶಿವಲಿಂಗ ಸಿಂಹಾಸನಮಂ [ಕ] ಣ್ಣೊಗ್ಗಿಸಿ[೨೬೧]

ಒಟ್ಟು ಹತ್ತು ಊರುಗಳ ಜಿನಾಲಯಗಳು ಶಿವಾಲಯಗಳಾಗಿವೆ. ಶಾಸನ ತ್ರುಟಿತವಾಗಿದೆ. ಸಾಕಷ್ಟು ವಿವರಗಳು ಅಪೂರ್ಣವಾಗಿವೆ. ಜೈನರನ್ನು ಮತ್ತು ಅವರ ಆಲಯಗಳನ್ನು ಪರಿವರ್ತಿಸಿದ್ದಕ್ಕೆ ಅಥವಾ ಜೈನರನ್ನು ಮುಕ್ಕಿದ್ದ ಸಾಹಸಿಗೆ ಬಿರುದಾವಳಿಗಳೊಂದಿಗೆ ಉತ್ಕೀರ್ತಿಸಲಾಗುತ್ತಿತ್ತು. ಅದರಲ್ಲಿ ಗೊಗ್ಗರಸ ಒಬ್ಬ. ಇವನು ಜೈನ ಎಂಬ ಮೃಗದ ಬೇಟೆಗಾರ, ಆ ಧರ್ಮದ ಆಗಮಗಳಿಗೆ ಧೂಮಕೇತು, ಜೈನ ಧರ್ಮಕ್ಕೆ ಕೊಡಲಿಪೆಟ್ಟು ಕೊಟ್ಟವನು, ಜೈನರಿಗೆ ಸರ್ಪದಂತೆ ಕಾಡಿದವನು, ಅವರನ್ನು ಅಂತ್ಯಗೊಳಿಸಿದವನು ಎಂಬುದಾಗಿ ಅಣ್ಣಿಗೆರೆಯ ಒಂದು ಶಾಸನ ದಾಖಲಿಸುತ್ತದೆ. ಈ ಪ್ರಶಸ್ತಿಯನ್ನು ಕವಿ ಮಾತಲ್ಲೆ ಆಲಿಸುವುದಾದರೆ

> ಜಯಿನಮ್ರಿಗ ಬೇಂಟೆಕಾಱಂ
> ಜಯಿನಾಗಮ ಧೂಮಕೇತು ಜಯಿನಕುಠಾರಂ
> ಜಯಿನಫಣಿ ವಯಿನತೇಯಂ
> ಜಯಿನಾನ್ತಕನೆನಿಸಿ ನೆಗಳ್ದನೀ ಗೊಗ್ಗರಸಂ[೨೬೨]

ಹೀಗೆಯೇ ಜಿನಸ್ಮಾರಕಗಳನ್ನು ಬದಲಾಯಿಸುವ ಪ್ರಕ್ರಿಯೆ ಹನ್ನೆರಡನೆಯ ಶತಮಾನದಲ್ಲಿ ಕಂಡುಬರುವ ಒಂದು ಪ್ರಮುಖ ಚಿತ್ರಣ. ಅಂತೆಯೇ ಈ ಪ್ರಭಾವ ಹಾವೇರಿ ಜೈನ ಶಾಸನ ಶಿಲ್ಪಗಳ ಮೇಲೂ ಆಗಿದೆ.

### ೦೩. ಘಟನಾ ಪ್ರಧಾನ ದಾನ ಶಾಸನಶಿಲ್ಪ.

ಒಬ್ಬ ವ್ಯಕ್ತಿಯ ಗುಣಾವಳಿಯನ್ನು ಕುರಿತು ಶಾಸನ ಮತ್ತು ಶಿಲ್ಪ ಒಂದೇ ಅರ್ಥವನ್ನು ಸ್ಫುರಿಸುತ್ತಿದ್ದರೆ ಅಂತಹ ಶಿಲ್ಪಗಳನ್ನು ವ್ಯಕ್ತಿ ವೈಭವಿತ ದಾನ ಶಾಸನ ಶಿಲ್ಪ ಎನ್ನಬಹುದು. ಈ ತರಹದ ಒಂದು ಶಿಲ್ಪ ಕಾಗಿನೆಲೆಯಲ್ಲಿದ್ದು, ಆ ಊರ ಗೌಡನಾದ ಆದಿತ್ಯವರ್ಮನ ಸಾಹಸ ಶೌರ್ಯವನ್ನು ಶಾಸನ ಮತ್ತು ಶಿಲ್ಪ ಕೊಂಡಾಡಿವೆ.

ಪಱಗುಂ ನೆರ್ಕ್ಕನೆ ವೈರಿಯೆಂಬ ತೊಡರಂ ವಿದ್ವಿಷರಂ ಸಜ್ಜಿನ
ಲ್ಲೆಱೆಸೀಟುಡ್ಡಿಕ್ಕಿಯೆ ದುಷ್ಟ ದಾಯಿಗರ ನಿಟ್ಟೆಲ್ವಂ ಬಿರಿಲ್ಲೆಂಬಿನಂ
ಮುಱುದೀಡಾಡಿ ನಭೋನ್ತದೊಳ್ ನಿಲಿಸಿ ಕೋಡೇಱುಂ ನಿಜೋತ್ಸಾಹದಿಂ
ಮೆಱೆಗುಂ ಕಾಳನ ಗನ್ಧವಾರಣ ಮೇಲೆ ಜೀಹಯ್ಯಬಾಪ್ಪೆಂಬಿನಂ[೨೬೩]

ಮತ್ತೇಭವದ ವರ್ಣನೆಯನ್ನು ಅದೇ ಭಾವದ ಮತ್ತೇಭ ವಿಕ್ರೀಡಿತದಲ್ಲಿ ಸೆರೆಹಿಡಿದಿದ್ದು ಕವಿಯ ಕಾವ್ಯ ಕೌಶಲ್ಯ. ಕವಿಯನ್ನೂ ಮೀರಿಸುವ ಮತ್ತೇಭವ ರಂಗೇರಿದ ಚಿತ್ರಣ ಶಿಲ್ಪದಲ್ಲಿ ಕಲಾಸೌಂದರ್ಯಕ್ಕೆ ಹಿಡಿದ ಕನ್ನಡಿ. ಶಿಲ್ಪದಲ್ಲಿ ಮದಗಜವು ಶಾಸನದಲ್ಲಿ ಹೇಳಿರುವಂತೆ ರಣರಂಗದಲ್ಲಿದ್ದು ಶತ್ರುಗಳನ್ನು ಹೇಳುವ ಬೆನ್ನೆಲುಬನ್ನು ಮುರಿಯವ, ಸೊಂಡಿಲಲ್ಲಿ ಮೇಲೆತ್ತಿ ನೆಲಕ್ಕೆ ಕುಕ್ಕುವ, ಕಾಲಲ್ಲಿ ತುಳಿದ ಚಿತ್ರಣ ಸೊಗಸಾಗಿದೆ. ಇದೆಲ್ಲವು ಆದಿತ್ಯವರ್ಮನ ಗುಣವಾಗಿತ್ತು ಎಂಬುದು ಶಾಸನ ಕವಿಯ ಮತ್ತು ಶಾಸನ ಶಿಲ್ಪಿಯ ಅಂಬೋಣ. ತದನಂತರ ಇದೇ ಶಾಸನದಲ್ಲಿ ಆದಿತ್ಯ ವರ್ಮನನ್ನು

ಅರಿಬಿರುದ ಸುಭಟಗಿರಿ ನಿ
ರ್ಭ್ಭರಶಿಖರೋದ್ದಳನತಟ ತಡಿದ್ರವ ತೀಕ್ಷ್ಣೋ
ತ್ಕರ ವಜ್ರನೆನಿಸಿ ಮಚ್ಚರಿ
ಸುವರಾರ್ಣ್ನೆಗಟ್ಟಿ ವೈರಿನಾರಾಯಣನೊಳ್.

ಎಂಬಲ್ಲಿ ಆದಿತ್ಯವರ್ಮನನ್ನು ಆನೆಯ ಮೇಲೆ ಸತ್ತಿಗೆ ಸಹಿತ ಕೂರಿಸಲಾಗಿದೆ. ವೈರಿನಾರಾಯಣ ಎಂದಾಗ ಉಗ್ರನರಸಿಂಹನ ಶಿಲ್ಪ ತೋರಿಸಲಾಗಿದೆ. ಮೇಷಪಾಷಾಣಗಚ್ಛದ ಬಸದಿಯನ್ನೂ ಶಾಸನ ಶಿಲ್ಪದಲ್ಲಿ ಒಡಮೂಡಿಸಲಾಗಿದೆ. ಒಟ್ಟಿನಲ್ಲಿ ಶಾಸನ ಮತ್ತು ಶಿಲ್ಪಗಳ ಅಪೂರ್ವ ಸಂಗಮದ ಅತ್ಯುತ್ತಮದ ಮಾದರಿ ಕಾಗಿನೆಲೆಯ ಆದಿತ್ಯವರ್ಮನ ಶಾಸನ ಮತ್ತು ಶಿಲ್ಪ.

## ೦೪. ಲಾಂಛನ ಪ್ರಧಾನ ದಾನ ಶಾಸನಶಿಲ್ಪ.

ದಾನಶಾಸನ ಶಿಲ್ಪವು ಸಾಮಾನ್ಯವಾಗಿ ಧರ್ಮದ ಚೌಕಟ್ಟಿಗೆ ಒಳಪಟ್ಟಿದ್ದಾಗಿರುತ್ತದೆ. ಅಂತೆಯೇ ಅಲ್ಲಿ ಆ ಸಂಬಂಧಿ ವಿಷಯಗಳನ್ನು ಹೊರತಾಗಿ ಮತ್ತೇನನ್ನು ತಂದಿಲ್ಲ. ಜೈನ ಶಾಸನಗಳೂ ಇದಕ್ಕೆ ಹೊರತಲ್ಲ. ಕರುವಿಗೆ ಹಾಲೂಡುತ್ತಿರುವ ಹಸು, ಜಿನ, ಮುನಿ ಅಥವಾ ದಾನಿಗನ ಚಿತ್ರಣ ತಂದಿರುವುದು ಹಾವೇರಿ ಪರಿಸರದ ಜೈನ ಶಿಲ್ಪಗಳ ಸಾಮಾನ್ಯ ಲಕ್ಷಣ. ಇವುಗಳ ಹೊರತಾಗಿ ತೀರ್ಥಂಕರ ಯಕ್ಷಿ, ಲಾಂಛನ, ಸಿಂಹಲಾಂಛನದ ಶಿಲ್ಪಗಳು ಒಡಮೂಡಿವೆ.

ಕ್ರಿ.ಶ. ೧೧೬೮ರ ನದಿಹರಳಹಳ್ಳಿಯ ಶಾಸನದಲ್ಲಿ ಜಿನನ ಪಕ್ಕದಲ್ಲಿ ಚಕ್ರೇಶ್ವರಿ ಯಕ್ಷಿಯನ್ನು ಶಿಲ್ಪಿಸಲಾಗಿದೆ.[೨೬೪] ಈ ಯಕ್ಷಿಯ ಸಹಾಯದಿಂದ ಶಾಸನದ ಶಿಲ್ಪದಲ್ಲಿರುವ ಜಿನನ ಶಿಲ್ಪ

ವೃಷಭನಾಥನದೆಂದು ಗುರುತಿಸಲು ಸಾಧ್ಯ. ಶಾಸನವೂ ಈ ತೀರ್ಥಂಕರನ ಜಿನಾಲಯದ ಬಗ್ಗೆ ಅನುಮೋದಿಸುತ್ತಿದ್ದು ಈ ವಿಚಾರ ಇನ್ನು ಖಚಿತವಾಗುತ್ತದೆ. ಅಂತೆಯೇ ಶಾಸನ ಶಿಲ್ಪದಲ್ಲಿ ಕೆತ್ತನೆಯಾಗುವ ಶಿಲ್ಪ ಆಯಾ ಬಸದಿಯಲ್ಲಿರುವ ಮೂಲ ತೀರ್ಥಂಕರನ ಪ್ರತಿರೂಪವೇ ಆಗಿರುತ್ತದೆ ಎಂಬ ತೀರ್ಮಾನಕ್ಕೆ ಬರಬಹುದು. ಇನ್ನು ಚಕ್ರೇಶ್ವರಿಯ ಶಿಲ್ಪಾಲಂಕಾರ ಗಮನಿಸತಕ್ಕದ್ದು. ಚತುರ್ಭುಜೆಯಾದ ಚರ್ಕೇಶ್ವರಿ ಯಕ್ಷಿ ಆಯುಧ, ಪಾಶ, ಫಲವನ್ನು ಒಂದೊಂದು ಕೈಯಲ್ಲಿ ಹಿಡಿದಿದ್ದು ಅಭಯ ಮುದ್ರೆಯಲ್ಲಿ ಆಸೀನಳಾಗಿದ್ದಾಳೆ. ಕಿರೀಟ, ಕೌಸ್ತುಭ, ಕಂಠಿಹಾರ, ಓಲೆ, ಕಂಕಣ, ಒಡ್ಯಾಣ, ಚಪಲಹಾರ, ಉಂಗುರ, ಕಾಲಂದುಗೆಗಳಿಂದ ಚಕ್ರೇಶ್ವರಿ ಶಿಲ್ಪ ಸಾಲಂಕೃತಗೊಂಡಿದೆ.

ಮೋಟೇಬೆನ್ನೂರು ಒಂದು ಶಾಸನದಲ್ಲಿ ಸಿಂಹದ ಉಬ್ಬುಶಿಲ್ಪವಿದ್ದು, ಅದನ್ನು ಮಹಾವೀರ ತೀರ್ಥಂಕರನ ಲಾಂಛನ ಎನ್ನುವಂತಿಲ್ಲ. ಏಕೆಂದರೆ ಶಾಸನದಲ್ಲಿ ನಿರೂಪಿತವಾಗಿರುವ ಬಸದಿ ಶಾಂತಿನಾಥನದ್ದಾಗಿದೆ. ಶಾಂತಿನಾಥನ ಲಾಂಛನ ಜಿಂಕೆಯಾಗಿದ್ದು ಸಿಂಹದ ಶಿಲ್ಪವನ್ನು ಧಾರ್ಮಿಕ ಪ್ರಕ್ರಿಯೆಯಲ್ಲಿಯೇ ಗಮನಿಸಬೇಕು. ಸಿಂಹ, ಸಿಂಹಪೀಠ (ಸಿಂಹಾಸನ) ಜೈನ ಶಿಲ್ಪಗಳಲ್ಲಿ ಬಹುವಾಗಿ ಬಳಕೆಯಾಗಿವೆ. ಮುಖ್ಯವಾಗಿ ತೀರ್ಥಂಕರರು ಕುಳಿತು ಪೀಠ ಸಿಂಹಗಳ ಶಿಲ್ಪಗಳಿಂದ ಅಲಂಕೃತವಾಗಿರುತ್ತದೆ. ಸಾಮಾನ್ಯವಾಗಿ ಐದು ಸಿಂಹಶಿಲ್ಪಗಳು ಈ ಪೀಠಗಳಲ್ಲಿದ್ದು ಒಂದು ಮಧ್ಯದಲ್ಲಿ ಮುಮ್ಮುಖವಾಗಿ ನೆಗೆಯುವ ರೀತಿ ಆಸೀನವಾಗಿರುತ್ತದೆ. ಇದರ ಇಕ್ಕೆಲಗಳಲ್ಲಿ ಎರಡರಂತೆ ಬಲ ಮತ್ತು ಎಡ ಬದಿಗೆ ಕತ್ತು ತಿರುಗಿಸಿ ಚಲಿಸುವ ಸಿಂಹ ಶಿಲ್ಪಗಳಿರುತ್ತವೆ. ಸಿಂಹ ಗಾಂಭೀರ್ಯದ ಸಂಕೇತ, ಒಂಟಿತನದ ಸಾಹಸ ಗುಣಿ, ಅಂತೆಯೇ ಈ ಪ್ರಾಣಿಯ ಲಾಂಛನಗಳನ್ನು ಧಾರ್ಮಿಕ ಸಾಧನೆಯ ಸಿಂಹಗಳಾದ ತೀರ್ಥಂಕರರ ಪೀಠಗಳಲ್ಲಿ ಬಳಸಲಾಗುತ್ತದೆ. ಅಶೋಕ ಸ್ತಂಭದ ಸಿಂಹಗಳು ಮತ್ತು ಉಳಿದ ಪ್ರಾಣಿಗಳನ್ನು ಜೈನಧಾರ್ಮಿಕ ಹಿನ್ನೆಲೆಯಲ್ಲೇ ಗಮನಿಸಬೇಕು. ಪ್ರಸ್ತುತ ಮೋಟೇಬೆನ್ನೂರು ಶಾಸನದ ಸಿಂಹ ಜೈನಧರ್ಮದ ಲಾಂಛನವಾಗಿ ನಿರೂಪಿತಗೊಂಡಿದ್ದು ಎಡಗಾಲನ್ನು ಮೇಲೆತ್ತಿ ಗಾಂಭಿರ್ಯ ಮುಖಮುದ್ರೆಯಲ್ಲಿ ನಿಂತಿದೆ.

ದಾನ ಶಾಸನಶಿಲ್ಪದಲ್ಲಿ ತೀರ್ಥಂಕರ ಶಿಲ್ಪದ ಜೊತೆಗೆ ಲಾಂಛನ ಪ್ರದಾನವಾದ ಶಿಲ್ಪವೊಂದು ಹೂವಿನಶಿಗ್ಲಿ (ಸತಾ)ಯಲ್ಲಿ ಕಂಡುಬರುತ್ತದೆ. ದೊಡ್ಡದಾದ ಮತ್ತು ಮಧ್ಯದಿಂದ ಅನುಕ್ರಮವಾಗಿ ಚಿಕ್ಕದಾಗುವ ನಾಲ್ಕು ವರ್ತುಲಗಳ ಶಂಖದ ಮೇಲೆ ಚಿಕ್ಕದಾದ ಕಾಯೋತ್ಸರ್ಗದ ತೀರ್ಥಂಕರ ಬಿಂಬವನ್ನು ನಿಲ್ಲಿಸಲಾಗಿದೆ. ಶಂಖವು ೨೨ನೆಯ ತೀರ್ಥಂಕರನಾದ ನೇಮಿನಾಥನದ್ದಾಗಿದ್ದು ಅಂತೆಯೇ ಶಂಖದ ಮೇಲಿರುವ ಬಿಂಬ ನೇಮಿನಾಥನದ್ದು. ಇಲ್ಲಿರುವ ಜಿನಾಲಯ ಮತ್ತು ಶಾಸನ ನೇಮಿನಾಥನಿಗೆ ಸಂಬಂಧಿಸಿದ್ದು ಎಂದು ಶಿಲ್ಪಿ ಈ ಶಿಲ್ಪದ ಮೂಲಕ ಸಾಕ್ಷತ್ಕರಿಸಿದ್ದಾನೆ. ಶಂಖ ಲಾಂಛನವನ್ನು ಹಿರಿದಾಗಿ ಚಿತ್ರಿಸಿದ್ದು ಆ ತೀರ್ಥಂಕರ ಥಟ್ಟನೆ ಸ್ಮೃತಿಗೆ ಬರಲೆಂದೇ ಶಿಲ್ಪಿ ಈ ಜಾಣತೆಯನ್ನು ಮೆರೆದಿದ್ದಾನೆ. ಏಕೆಂದರೆ ೨೪ ತೀರ್ಥಂಕರರು ದಿಗಂಬರರಾಗಿದ್ದು ಅವರ ಶಿಲ್ಪಗಳು ನೋಡಲು ಒಂದೇ ತೆರನಾಗಿರುತ್ತವೆ. ಅವರ ಲಾಂಛನದಿಂದ ಮಾತ್ರ ಯಾವ ತೀರ್ಥಂಕರನ ಬಿಂಬ

ಎಂದು ಗುರುತಿಸಲು ಸಾಧ್ಯ. ಅಂತಾಗಿ ಪ್ರಸ್ತುತ ಶಾಸನ ಶಿಲ್ಪಿ ಈ ಸೂಕ್ಷ್ಮತೆಯನ್ನು ಗಮನಿಸಿ ತೀರ್ಥಂಕರನನ್ನು ಗುರುತಿಸಲು ಲಾಂಛನವನ್ನು ಪಿರಿದಾಗಿಸಿದ್ದಾನೆ.

ಹಾವೇರಿ ಪರಿಸರದಲ್ಲಿ ದೊರೆಯುವ ದಾನ ಶಾಸನಗಳ ಸಂಖ್ಯೆ ಕಿರಿದಾಗಿದ್ದರೂ ವೈವಿಧ್ಯತೆಯಲ್ಲಿ ಪಿರಿದಾಗಿವೆ. ಬೆಳವತ್ತಿ (ಹಾನತಾ), ನೇರಲಗೆ (ಹಾತಾ), ಗುತ್ತಲ (ಹಾತಾ), ದೇವಗಿರಿ (ಹಾತಾ), ಸಿರಗಂಬಿ (ಹಿತಾ), ರಾಣೆಬೆನ್ನೂರು (ರಾತಾ) ಮುಂತಾದ ದಾನ ಶಾಸನಗಳು ದೊರೆತಿಲ್ಲ ಅವು ಕಾಲಗರ್ಭದಲ್ಲಿ ಸಿಲುಕಿಕೊಂಡಿವೆ. ಕೆಲವು ನಾಶವಾಗಿವೆ. ಅದೃಷ್ಟವಶಾತ್ ಅವುಗಳ ಪಾಠವನ್ನು ನಮ್ಮ ಹಿರಿಯ ತಲೆಮಾರಿನ ಸಂಶೋಧಕರು ದಾಖಲಿಸಿದ್ದರಿಂದ ಅವು ಇನ್ನೂ ಅಕ್ಷರ ಶಿಲ್ಪಗಳಾಗಿ ನಮ್ಮೊಡನಿವೆ.

### ಬ. ನಿಸಿಧಿ ಶಾಸನಶಿಲ್ಪ.

ಜೈನಧರ್ಮದ ಮುನಿ, ಶ್ರಾವಕ-ಶ್ರಾವಿಕೆಯರು ಸಲ್ಲೇಖನ ವ್ರತದಿಂದ ದೇಹತ್ಯಾಗ ಮಾಡಿ, ಆತ್ಮವನ್ನು ಕಲ್ಯಾಣಗೊಳಿಸಲು ಸಮಾಧಿ ಹೋದ ನೆನಪಿಗಾಗಿ ನೆಟ್ಟ ಕಲ್ಲುಗಳೇ ನಿಸಿಧಿಗಳು. ನಿಸಿಧಿ, ನಿಸಿಧಿಗೆ, ನಿಶಿದಿ, ನಿಸ್ತಿಕೆ, ನಿಸಿಧಿಗೆ, ನಿಶೆಧಿಗೆ, ನಿಷಿದ್ಯಾಲಯ ಎಂಬ ಪದಗಳು ನಿಸಿಧಿಗಳಿಗಿರುವ ವಿವಿಧ ರೂಪಗಳು. ಪದಗಳು ಬೇರೆ ಬೇರೆಯಾದರೂ ಅರ್ಥ ಒಂದೆ; ಸಲ್ಲೇಖನ ಸ್ಮಾರಕ, ಪ್ರಾಣತ್ಯಾಗದ ಕುರುಹು. ಪ್ರಾಣ ತ್ಯಾಗದ ಪ್ರಕ್ರಿಯೆ ಜೈನರಲ್ಲಿ ಮಾತ್ರವಿರದೆ ಹಿಂದೂ ಸಂಪ್ರದಾಯದಲ್ಲಿಯೂ ಹಾಸುಹೊಕ್ಕಾಗಿತ್ತು. ವೀರಗಲ್ಲು, ಮಹಾಸತಿಯ ಸ್ಮಾರಕಗಳು ಪ್ರಾಣ ತ್ಯಾಗದ ಸಂಕೇತಗಳೇ ಆಗಿವೆ.

ಪ್ರಾಣತ್ಯಾಗದ ಸಂಪ್ರದಾಯಗಳು ಜೈನ-ಹಿಂದೂ ಧರ್ಮಗಳ ಸಂಸ್ಕೃತಿಯಾಗಿದ್ದರೂ ಈ ಕ್ರಿಯೆಯನ್ನು "ಧರ್ಮದ ಒಂದು ಅಂಗವನ್ನಾಗಿ ಮಾಡಿದವರು ಜೈನರು.[೨೬೫] ಜೈನರು ಪ್ರಾಣತ್ಯಾಗವನ್ನು ಒಂದು ವ್ರತದಂತೆ ಅಚರಿಸಿ ಅದಕ್ಕೆ ಸಲ್ಲೇಖನ ವ್ರತವೆಂದೇ ಕರೆದರು. ಸಲ್ಲೇಖನ ವ್ರತದಿಂದ ಸಮಾಧಿಯಾಗುವ ಕ್ರಿಯೆಯನ್ನು ಧರ್ಮದ ಚೌಕಟ್ಟಿಗೆ ತಂದು ಅದನ್ನು 'ಮಹಾಮರಣ'ವೆಂದೇ ಆಚರಿಸಿದರು. ಮರಣವನ್ನು ಆಹ್ವಾನಿಸಿದರು. ಇದು ಆತ್ಮಹತ್ಯೆಯಲ್ಲ; ಆತ್ಮ ಜಾಗೃತಿ. ದೇಹದಿಂದ ಆತ್ಮವನ್ನು ಬಿಡುಗಡೆಗೊಳಿಸುವ ಕ್ರಿಯೆ. ಈ ಪ್ರಕ್ರಿಯೆಯನ್ನು ಯಾವ ಸಂದರ್ಭದಲ್ಲಿ ಆಹ್ವಾನಿಸಬೇಕೆಂಬುದನ್ನು ಸಮಂತಭದ್ರಾಚಾರ್ಯರ್ಯರು 'ರತ್ನಕರಂಡಕ'ದಲ್ಲಿ ಈ ರೀತಿ ವ್ಯಾಖ್ಯಾಯಿಸುತ್ತಾರೆ.

> ಉಪಸರ್ಗೇ ಧುರ್ಭಿಕ್ಷೆ ಜರಸಿ ರುಜಯಾಂ ಚ ನಿಃ ಪ್ರತಿಕಾರೆ
> ಧರ್ಮಾಯ ತನು ವಿಮೋಚನಮಾಹುಃ ಸಲ್ಲೇಖನ ಮಾರ್ಯಾಃ॥.[೨೬೬]

ತೊಂದರೆಗಳು (ದೇವ, ನಾರಕ, ತಿರ್ಯಕ್, ಮಾನುಷ) ಬರಗಾಲ, ಮುಪ್ಪು, ಗುಣವಾಗದ ರೋಗಗಳು ಬಂದು, ಅವುಗಳಿಗೆ ಪರಿಹಾರವೇ ಕಾಣದಾದಾಗ ಧರ್ಮದ ಮೂಲಕ ಪ್ರಾಣವನ್ನು ವಿಮೋಚನೆಗೊಳಿಸಬೇಕು. ಇದಕ್ಕೆ ಸಲ್ಲೇಖನ ಎನ್ನುವರು. ಸಮಾಧಿ ಮರಣ ಎಂದರೂ ಇದೆ. ಹೀಗೆ ಧಾರ್ಮಿಕ ವಿಧಿಗಳ ಮೂಲಕ ಪ್ರಾಣತ್ಯಾಗ ಮಾಡಿದವರ ನೆನಪಿಗಾಗಿ ಅಥವಾ ಅವರ ಪರಮಾರ್ಥ ಸಾಧನೆಯ ಶ್ರೇಷ್ಠತೆಗಾಗಿ ನಿರ್ಮಿತವಾದವುಗಳೇ ನಿಸಿಧಿ ಸ್ಮಾರಕಗಳು. ಮನುಷ್ಯ ಅಕ್ಷರ ರೂಪವನ್ನು ಕಂಡುಕೊಂಡ ಮೇಲೆ ಕರ್ನಾಟಕದಲ್ಲಿ ಇಂಥ ಸ್ಮಾರಕಗಳು ಯಥೇಚ್ಛವಾಗಿ ನಿರ್ಮಾಣವಾದವು. ಈ ಹಿಂದೆ ಪಾದಗಳ ಆಕಾರದಲ್ಲಿ ನಿರ್ಮಿತವಾಗುತ್ತಿದ್ದ ನಿಸಿಧಿಗಳು ಪಾದದ ಸುತ್ತ ಅಕ್ಷರ ರೂಪ ಕಂಡುಕೊಂಡವು. ಅಕ್ಷರಗಳು ನಿಸಿಧಿ ಹೋದವರನ್ನು ಉಲ್ಲೇಖಿಸುತ್ತಲೋ, ಗುಣಗಾನದ ಸ್ವರೂಪವನ್ನೂ ಕಂಡುಕೊಂಡವು. ಇದರ ನಂತರದ ಹಂತವೇ ಚಿತ್ರಶಿಲ್ಪ. ಚಿತ್ರಶಿಲ್ಪದ ನಿಸಿಧಿಗಳು ಯಥೇಚ್ಛವಾಗಿ ದೊರೆಯುತ್ತವೆ. ಅಕ್ಷರ ರೂಪದ ಪಾದಗಳು ಶ್ರವಣಗೊಳಗೊಳ ಮುಂತಾದ ಕ್ಷೇತ್ರಗಳಲ್ಲಿ ಲಭ್ಯ. ಈ ಹಿಂದೆ ಅದೆಷ್ಟೋ ವ್ರತಿಗಳು ಸಲ್ಲೇಖನದಿಂದ ಸಮಾಧಿ ಹೊಂದಿದ್ದಾರೆ. ಅವರ ಕುರಿತಾದ ಸ್ಮಾರಕಗಳೇ ಇಲ್ಲ. ಅದೆಷ್ಟು ಮುನಿಗಳು ಸಮಾಧಿಯಾಗಿದ್ದಾರೋ? ಅಗಣಿತ ಮುನಿ–ಶ್ರಾವಕರಿಗೆ ಸ್ಮಾರಕ ಇರದಿದ್ದರೂ ಅವರ ಪ್ರಾಣತ್ಯಾಗ ಒಂದು ಶ್ರೇಷ್ಠತೆಯೇ ಎಂದು ಜೈನಧರ್ಮ ಹೇಳುತ್ತದೆ.

ಪ್ರಾರಂಭದಲ್ಲಿ ನಿಸಿಧಿಗಳು 'ಪಾದಗಳ' ಆಕೃತಿಯಲ್ಲಿ ಕೆತ್ತಲ್ಪಟ್ಟು, ಮುನಿಗಳಿಗೆ ಮಾತ್ರ ಸೀಮಿತವಾಗಿದ್ದವು. ಕಾಲಾನಂತರ ಇದು ಒಂದು ಸಂಸ್ಕೃತಿಯಾಗಿ ಮಾರ್ಪಟ್ಟು (ಪಾದದ ಆಕಾರ 'ಚಿತ್ರಶಿಲ್ಪ'ವಾಗಿ) ರಾಜರು, ದಂಡನಾಯಕರು ವರ್ತಕರು, ನಾಳ್ಗಾವುಂಡರು ಸಾಮಾನ್ಯ ಶ್ರಾವಕ–ಶ್ರಾವಕಿರ ಹೆಸರಲ್ಲಿ ಶಾಸನ ಸಹಿತವಾಗಿ ನಿಸಿಧಿಗಳು ತಲೆಯೆತ್ತತೊಡಗಿದವು. ನಿಸಿಧಿ ಮೊದಲು ಸೀಮಿತವಾಗಿ ನಂತರ ಸಾರ್ವತ್ರಿಕವಾಗಿ ಪ್ರಸರಣಗೊಳ್ಳಲು ಬಹುಮುಖ್ಯ ಉದ್ದೇಶ ಸಲ್ಲೇಖನ ವ್ರತಧಾರಿಗಳಿಗೆ ಗೌರವ ಕೊಡುವ ಮತ್ತು ಪ್ರಾಣತ್ಯಾಗದ ಸಂಕೇತಗಳಾಗಿ ಈ ಸ್ಮಾರಕಗಳನ್ನು ನಿಲ್ಲಿಸಲಾಯಿತು. ಈ ಕ್ರಮ ಶ್ರಾವಕ–ಶ್ರಾವಕಿಯರಿಗೆ ಸಲ್ಲೇಖನ ತೆಗೆದುಕೊಳ್ಳಲು ಪ್ರೇರಣೆಯೂ ಹೌದು. ವೀರಗಲ್ಲಿನಲ್ಲಿ ಬರುವ

'ಜಿತೇನ ಲಭ್ಯತೇ ಲಕ್ಷ್ಮೀ ಮೃತೇನಾಪಿ ಸುರಾಂಗನಾ
ಕ್ಷಣವಿಧ್ವಂಸಿನಿ ಕಾಯೇ ಕಾ ಚಿಂತಾ ಮರಣೇ ರಣೇ'.[೨೬೭]

ಎಂಬ ಶ್ಲೋಕದ ಪ್ರಕಾರ ಲೌಕಿಕ ಪ್ರೇರಣೆ, ಮರಣೋತ್ತರ ಸ್ವಾರ್ಗಿಕ ಕನ್ಯಾ ಪ್ರೇರಣೆ ನಿಸಿಧಿಗಳಲ್ಲಿರಲ್ಲ. ಅವು ವ್ಯಕ್ತಿ ಪಾರಮಾರ್ಥಿ ಸಾಧನೆಯ ಪರಾಕಾಷ್ಠೆಗೆ ನಿರ್ಮಿತವಾದವು.

ನಿಸಿಧಿಗಳನ್ನು ಬಸದಿಯ ಒಳಗೆ, ಹೊರಗೆ, ಹೊಲದಲ್ಲಿ, ಗುಡ್ಡ, ಬೆಟ್ಟಗಳಲ್ಲಿ ಊರ ಹೊರಗೆ, ಊರ ಆಯಕಟ್ಟಿನ ಜಾಗೆಗಳಲ್ಲಿ ನಿರ್ಮಿಸಲಾಗುತ್ತಿತ್ತು. ಇವು ರಚನೆಯಾದ ಸ್ಥಳದಲ್ಲಿಯೂ ವ್ರತಧಾರಿ ಸಮಾಧಿಮರಣ ಹೊಂದಿದ್ದು ಇದೆ. ರಾಣೇಬೆನ್ನೂರು ತಾಲೂಕಿನ ಹೊನ್ನತ್ತಿ ಗ್ರಾಮದಲ್ಲಿ ನಿಸಿಧಿ ಇರುವ ಜಾಗದಲ್ಲಿ ತುಂಡು ಮೊಳೆಗಳು ಮತ್ತು ಚಿತಾಭಸ್ಮವಿರುವುದು ಕಂಡು ಬಂತು.[೨೬೮] ಮೂಡಬಿದರೆಯಲ್ಲಿರುವ ಭಟ್ಟಾರಕ ನಿಸಿಧಿಗಳೆಲ್ಲವೂ ಅವರ ಶವಗಳನ್ನು ಅಗ್ನಿಸಂಸ್ಕಾರ ಮಾಡಿದ ಸ್ಥಳಗಳಲ್ಲಿಯೆ ನಿರ್ಮಿತವಾಗಿವೆ. ಅದೇ ರೀತಿ ಚಾಮರಾಜನಗರ ತಾಲ್ಲೂಕಿನ ಮಲೆಯೂರಿನಲ್ಲಿಯೂ ಸಮಾಧಿ ಮರಣ ಹೊಂದಿದ ವ್ಯಕ್ತಿಗಳನ್ನು ದಹಿಸಿದ ಸ್ಥಳದಲ್ಲಿ ನಿಸಿಧಿಗಳನ್ನು ನಿರ್ಮಿಸಲಾಗಿದೆ.[೨೬೯] ಹಾವೇರಿ ಜಿಲ್ಲೆಯ ಬಹುತೇಕ ನಿಸಿಧಿ ಸ್ಮಾರಕಗಳು ವ್ಯಕ್ತಿ ಸಲ್ಲೇಖನ ಹೋದ ಜಾಗೆಯಲ್ಲಿ ನೆಡದೆ ಬೇರೆ ಸ್ಥಳದಲ್ಲಿ ಸ್ಥಾಪಿಸಿದ್ದು ಗಮನಕ್ಕೆ ಬರುತ್ತದೆ. ನಿಸಿಧಿಗಳನ್ನು ಎಲ್ಲಿ ನೆಡಬೇಕೆಂಬುದಕ್ಕೆ ಶಾಸ್ತ್ರ ಕ್ರಮವಿಲ್ಲ. ಅದು ಆ ಕ್ಷಣದ ಸೌಲಭ್ಯದ ಹೊಳವು. ಪಾದಗಳಿಂದ ಶುರುವಾದ ನಿಸಿಧಿ ಸ್ಮಾರಕಗಳು ಶಾಸನ ಸಹಿತ ಉಬ್ಬು ಚಿತ್ರಗಳ ವಿನ್ಯಾಸದವರೆಗೂ ಬೆಳೆದುಬಂದಿವೆ. ಹಾವೇರಿ ಜಿಲ್ಲೆಯಲ್ಲಿ ಬಹುತೇಕ ಶಾಸನ ಸಹಿತ ಉಬ್ಬು ಶಿಲ್ಪ (ಚಿತ್ರಶಿಲ್ಪ)ಗಳ ವಿನ್ಯಾಸದಲ್ಲಿಯೇ ನಿಸಿಧಿಗಳು ರಚನೆಯಾಗಿವೆ. ಪ್ರದೇಶದಿಂದ ಪ್ರದೇಶಕ್ಕೆ ಇವುಗಳ ಶಿಲ್ಪ ವಿನ್ಯಾಸ, ಸಂಸ್ಕೃತಿ ಬದಲಾಗಿದ್ದು, ಅವುಗಳ ಶಿಲ್ಪ ವಿನ್ಯಾಸವನ್ನು ಇಲ್ಲಿ ಅಭ್ಯಸಿಸಲಾಗಿದೆ.

ಎಂ.ಚಿದಾನಂದಮೂರ್ತಿಯವರು ತಮ್ಮ ಸಂಶೋಧನಾ ಕೃತಿಯಾದ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ'ದಲ್ಲಿ ನಿಸಿಧಿಗಳ ಬಗ್ಗೆ ಅಭ್ಯಸಿಸಿ ಅವುಗಳ ಶಿಲ್ಪ ವಿನ್ಯಾಸದ ಮಾದರಿಗಳನ್ನು ಕೊಟ್ಟಿಲ್ಲ. ಸನ್ಯಸನವನ್ನು ಸ್ವೀಕರಿಸಿದ ದಂಪತಿಗಳ, ವ್ಯಕ್ತಿಗಳ ಚಿತ್ರಣವನ್ನು ಅಲ್ಲಲ್ಲಿ ಪರಾಮರ್ಶಿಸಿದ್ದಾರೆ. ನಿಸಿಧಿ ಶಿಲ್ಪ ಮತ್ತು ವಿನ್ಯಾಸವನ್ನು ಚರ್ಚಿಸಿದ ಮೊದಲ ಕೃತಿ ಡಿ.ವಿ.ಪರಮಶಿವಮೂರ್ತಿಯವರ 'ಕನ್ನಡ ಶಾಸನ ಶಿಲ್ಪ', ಈ ಕೃತಿಯು ನಿಸಿಧಿಗಳ ತೌಲನಿಕ ಅಧ್ಯಯನವನ್ನು ಮಾಡಿದ್ದಲ್ಲದೆ, ನಿಸಿಧಿಗಳ ಪ್ರಕಾರ ಹಂತಗಳ ರಚನೆಯನ್ನೂ ಒಳಗೊಂಡಿದೆ. ಈ ಕೃತಿಯಲ್ಲಿ ನಿಸಿಧಿಗಳನ್ನು ಮೂರು ಹಂತಗಳಲ್ಲಿ ವಿಭಾಗಿಸಲಾಗಿದೆ. ೧ ಕಂಬಗಳ ಆಕಾರ, ೨ ಫಲಕದ ಆಕಾರ, ೩ ಪಾದಗಳ ಆಕಾರ. ಈ ವಿಭಾಗ ಕ್ರಮದಲ್ಲಿ ಪಾದಗಳ ಆಕಾರ ಮೊದಲು ಬರಬೇಕಿತ್ತು. ನಿಸಿಧಿಗಳು ಮೊದಲು ಪ್ರಾರಂಭವಾಗಿದ್ದು ಪಾದಗಳನ್ನು ರಚಿಸುವುದರ ಮೂಲಕ ಅದೂ ಶಾಸನ ರಹಿತ. ಮಲೆಯೂರಿನ ಕನಕಗಿರಿಯಲ್ಲಿರುವ ಪೂಜ್ಯಪಾದ ನಿಸಿದಿ ಮತ್ತು ಶ್ರವಣಬೆಳಗೊಳದ ಭದ್ರಾಬಾಹುಮುನಿಯ ನಿಸಿಧಿ ಪಾದಗಳು ಇದಕ್ಕೆ ಸ್ಪಷ್ಟ ನಿದರ್ಶನ, ಪೂಜ್ಯಪಾದ ಪಾದುಕನಿಸಿಧಿ ೫ನೆಯ ಶತಮಾಕಕ್ಕೆ ಸಂದರೆ, ಭದ್ರಬಾಹು ಪಾದುಕಾ ನಿಸಿಧಿ ೬ನೆಯ ಶತಮಾನದಲ್ಲಿ ರಚಿತವಾಗಿದೆ.[೨೭೦] ಪಾದಗಳ ನಿಸಿಧಿ ನಂತರ ಕಂಭ ಮತ್ತು ಫಲಕ ನಿಸಿಧಿಗಳು ಹುಟ್ಟಿದುವು. ಆದ್ದರಿಂದ ಈ ವಿಭಾಗ ಕ್ರಮದಲ್ಲಿ ಮೊದಲಿಗೆ ಪಾದಗಳ ಆಕಾರ ಬರಬೇಕಿತ್ತು.

ಸಂಪೂರ್ಣವಾಗಿ ನಿಸಿಧಿ ಮತ್ತು ನಿಸಿಧಿ ಶಾಸನಗಳ ಬಗ್ಗೆ ಅಧ್ಯಯನ ಮಾಡಿದ ಮೊದಲ ಕೃತಿ ಎಂ.ಜಿ. ಮಂಜುನಾಥ ಅವರ "ನಿಸಿಧಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ". ಈ ಕೃತಿಯು ನಿಸಿಧಿ ಹುಟ್ಟು ವಿಕಾಸದೊಂದಿಗೆ, ಆಚರಣೆಯ ಸಂದರ್ಭ, ಭಾಷೆ, ಶೈಲಿ, ಸಾಹಿತ್ಯಿಕ ಅಂಶಗಳ ಜೊತೆಗೆ 'ನಿಸಿಧಿಶಿಲ್ಪ'ವನ್ನು ಅಧ್ಯಯನದ ಭಾಗಗಳನ್ನು ಒಳಗೊಂಡಿದೆ. ನಿಸಿಧಿ ಶಾಸನ ಶಿಲ್ಪವನ್ನು ಈ ಕೃತಿಯಲ್ಲಿ ಆರು ಭಾಗಗಳಾಗಿ ವಿಂಗಡಿಸಿ ಅಧ್ಯಯನ ಮಾಡಲಾಗಿದೆ. ೧ ಪಾದಗಳನ್ನು ಕೊರೆಸುವುದು, ೨ ಶಾಸನವನ್ನು ಬರೆಸುವುದು, ೩ ಸ್ಥಂಭವನ್ನು ನಿರ್ಮಿಸಿ ಕೆಳಭಾಗದಲ್ಲಿ ಶಾಸನ, ಮೇಲ್ಭಾಗದಲ್ಲಿ ಶಿಲ್ಪವನ್ನು ಕೊರೆಸುವುದು, ೪ ಸ್ಥೂಪದ ಆಕಾರದ ಸ್ಮಾರಕ ನಿರ್ಮಿಸುವುದು, ೬ ಮಂಟಪವನ್ನು ನಿರ್ಮಿಸುವುದು. ಈ ಕೃತಿಯು ಶಿಲ್ಪವನ್ನು ಆರು ವಿಭಾಗ ಮಾಡಿಕೊಂಡರೂ ಅಲ್ಲಿ ನಿಸಿಧಿ ಶಾಸನ ಶಿಲ್ಪಗಳನ್ನು ಕೊಟ್ಟಿಲ್ಲ. ಈ ಕ್ರಮ ಡಿ.ವಿ. ಪರಮಶಿವಮೂರ್ತಿಯವರ 'ಕನ್ನಡ ಶಾಸನ ಶಿಲ್ಪ' ದಲ್ಲಿ ಬಂದಿದೆ. ಎಂ.ಜಿ.ಮಂಜುನಾಥರವರ ನಿಸಿಧಿ ಶಿಲ್ಪ ವಿಭಾಗ ಕ್ರಮದ ಎಲ್ಲ ಮಾದರಿಗಳು ನನ್ನ ಅಧ್ಯಯನ ವ್ಯಾಪ್ತಿಯ ಪರಿಸರದಲ್ಲಿ ಲಭ್ಯವಿರುವುದಿಲ್ಲ. ಇಲ್ಲಿ ಫಲಕದ ಆಕೃತಿಗಳೇ ಹೆಚ್ಚಾಗಿದ್ದು ಡಿ.ವಿ.ಪರಮಶಿವಮೂರ್ತಿಯವರ ವಿಭಾಗ ಕ್ರಮವನ್ನೇ ಅಲ್ಪ ವ್ಯತ್ಯಾಸದೊಂದಿದೆ. ಅಭ್ಯಸಿಸಲಾಗಿದೆ.

## ೦೧. ಪಾದಗಳ ವಿನ್ಯಾಸ ನಿಸಿಧಿಗಳು.

ಪಾದಪೂಜೆ ಭಾರತದ ಅನನ್ಯ ಸಂಸ್ಕೃತಿ. ವಿಶಿಷ್ಟ ಆಚರಣೆ. ಈಗಲೂ ನಮ್ಮ ಸಂಸ್ಕೃತಿಯಲ್ಲಿ ಊರಿಗೆ ಹೊರಡುವಾಗ, ಶುಭ ಸಂದರ್ಭದಲ್ಲಿ, ಮದುವೆ ಸಮಾರಂಭಗಳಲ್ಲಿ ಹಿರಿಯರ ಪಾದಗಳಿಗೆ ನಮಸ್ಕರಿಸುವ ರೂಢಿಯಿದೆ. ಅಳಿಯನ ಕಾಲು (ಪಾದ) ತೊಳೆದು ಕನ್ಯಾದಾನ ಮಾಡುವ ಪದ್ಧತಿ ಇಂದಿಗೂ ಚಾಲ್ತಿಯಲ್ಲಿದೆ. ಮಠಾಧೀಶರನ್ನು, ಮುನಿಗಳನ್ನು, ಪಂಡಿತರನ್ನು, ಗುರುಗಳನ್ನು ನಾವು ಪಾದ ಮುಟ್ಟಿಯೇ ನಮಸ್ಕರಿಸುತ್ತೇವೆ. ದೇವತಾಮೂರ್ತಿಗಳನ್ನು ನಮಸ್ಕರಿಸುವುದು ಪಾದ ಮುಟ್ಟಿಯೇ. ಪಾದಗಳು ಹಿಂದೂ-ಜೈನ ಸಂಸ್ಕೃತಿಗಳಲ್ಲಿ ಪೂಜೆಗೊಳ್ಳುತ್ತಲ್ಲೇ ಬಂದಿವೆ. ಇತ್ತೀಚೆಗೆ ಬಹುತೇಕ ದೇವಾಲಯಗಳ ಆವರಣದಲ್ಲಿ ಪಾದುಕೆಗಳ ನಿರ್ಮಾಣವಾಗುತ್ತಿವೆ. ಗರ್ಭಗೃಹ ಪ್ರವೇಶದ ಅನಾನುಕೂಲತೆಯ ದೃಷ್ಟಿಯಿಂದ ದೇವರ ಪಾದುಕೆಗಳನ್ನು ಹೊರಗೆ ನಿರ್ಮಿಸುತ್ತಾರೆ. ರಾಮನ ಪಾದ, ಕೃಷ್ಣನ ಪಾದ, ಭೈರನ ಪಾದ, ಹನುಮನ ಪಾದ, ಗ್ರಾಮದೇವತೆ ಪಾದ ಇತ್ಯಾದಿ. ರಾಮನ ವನವಾಸದ ಸಂದರ್ಭದಲ್ಲಿ ಭರತ ಅವನ ಪಾದುಕೆಗಳನ್ನು ಸಿಂಹಾಸನದ ಮೇಲಿಟ್ಟು ರಾಜ್ಯಭಾರ ನಡೆಸಿದ್ದು ಪಾದಗಳಿಗೆ ಇರುವ ಮಹತ್ತನ್ನು ತಿಳಿಸುತ್ತದೆ.

ಜೈನರಲ್ಲಿ ಬಸದಿಯ ಮುಂದೆ ಪಾದುಕೆಗಳನ್ನು ಇಡುವ ಸಂಸ್ಕೃತಿ ಇಲ್ಲ. ಆದರೆ ಪಾದಗಳನ್ನು ಪೂಜಿಸುವ ಮತ್ತು ಶ್ರೇಷ್ಠತೆಯ ದೃಷ್ಟಿಯಿಂದ ನಿಸಿಧಿಗಳಲ್ಲಿ ಖಂಡರಿಸಲಾಗಿದೆ. ಆರಂಭದ ನಿಸಿಧಿಗಳು ಪಾದಗಳ ರೂಪದಲ್ಲಿಯೇ ಪ್ರತಿಷ್ಠಾಪನೆಯಾಗಿವೆ. ಬಹುಶಃ ಈ ಗುರುತುಗಳು ಮುನಿಗಳು ಸಲ್ಲೇಖನ ವ್ರತ ತೆಗೆದುಕೊಂಡ ಸ್ಥಳಗಳಾಗಿರಬಹುದು. 'ಅತ್ಯಂತ ಪ್ರಾಚೀನ ಪಾದ

ಚಿನ್ಹೆಗಳುಳ್ಳ ನಿಸಿಧಿಯೆಂದರೆ ಚಾಮರಾಜನಗರ ತಾಲ್ಲೂಕಿನ ಮನೆಯೂರಿನ ಕನಕಗಿರಿ ಪರ್ವತದಲ್ಲಿರುವ ಪೂಜ್ಯಪಾದರ ನಿಸಿದಿ. ಕ್ರಿ.ಶ. ೫ನೆಯ ಶತಮಾನದಲ್ಲಿದ್ದ ಪೂಜ್ಯಪಾದರು ಚಾರಣಋದ್ಧಿಯನ್ನು ಹೊಂದಿದ ಮಹಾನ್ ತಪಸ್ವಿಗಳು. ಅವರು ಕನಕಗಿರಿ ಪರ್ವತದ ಮೇಲೆ ಸಮಾಧಿ ಮರಣ ಹೊಂದಿದಾಗ ಆ ಸ್ಥಳದಲ್ಲಿ ಅವರ ನಿಸಿಧಿ ನಿಮಿತ್ತವಾಗಿ ಅವರ ಪಾದ ಚಿನ್ಹೆಯನ್ನು ನಿರ್ಮಿಸಲಾಗಿದೆ"[೨೭೧] ಪೂಜ್ಯಪಾದರು ಸಮಾಧಿ ಮರಣವನ್ನು ಹೊಂದಿದ ಶ್ರೇಷ್ಠತೆ ಕನಕಗಿರಿಗೆ ಲಭಿಸಿದರೆ ಅವರು ತಮ್ಮ ಕಣ್ಣುಗಳನ್ನು ಮರಳಿ ಪಡೆದ ಪಾರಮ್ಯ ಬಂಕಾಪುರಕ್ಕಿದೆ.

ಪೂಜ್ಯ ಪಾದರು ಒಮ್ಮೆ ಪೂರ್ವ ವಿದೇಹಕ್ಕೆ ಪಾದಲೇಪೌಷಧಿ ವಿದ್ಯೆಯಿಂದ ಹೋದರು. ಅಲ್ಲಿ ಸಮವಸರಣದಲ್ಲಿದ್ದ ಜಿನಪತಿಗಳಿಗೆ ವಂದಿಸಿ, ಅವರು ಕೊಟ್ಟ ಉಪದೇಶವನ್ನು ಪುಸ್ತಕದಲ್ಲಿ ಬರೆದುಕೊಂಡು ಮರಳಿ ಬರುವಾಗ ಅತಿಯಾದ ಬಿಸಿಲ ಬೇಗೆಯಿಂದ ತಮ್ಮ ದೃಷ್ಟಿ ಕಳೆದುಕೊಂಡರು. ಹಾಗೆ ಕಳೆದುಕೊಂಡ ದೃಷ್ಟಿಯನ್ನು ಬಂಕಾಪುರದಲ್ಲಿ ಪಡೆದುಕೊಂಡರು. ಬಂಕಾಪುರದಲ್ಲಿದ್ದ ಶಾಂತಿನಾಥ ತೀರ್ಥಂಕರ ಮೇಲೆ ಶಾಂತ್ಯಾಷ್ಟಕವನ್ನು ರಚಿಸಿದ್ದರಿಂದ ದೃಷ್ಟಿ ಮರಳಿ ಲಭಿಸಿತು ಎಂದು ದೇವಚಂದ್ರ ತನ್ನ ರಾಜಾವಳಿ ಕಥಸಾರದಲ್ಲಿ ಹೇಳಿದ್ದಾನೆ.[೨೭೨] ದೇವಚಂದ್ರನ ಈ ಹೇಳಿಕೆಯಿಂದ ಪೂಜ್ಯಪಾದರು ಬಂಕಾಪುರದಲ್ಲಿ ಸ್ವಲ್ಪ ದಿನಗಳ ಕಾಲ ತಂಗಿದ್ದರು ಎಂಬುದು ದಿಟಾವಾಗುತ್ತದೆ. ಯಾಕೆಂದರೆ ಬಂಕಾಪುರದ ಶಾಂತಿಜಿನೇಶ್ವರನ ಬಗ್ಗೆ ಕೃತಿಯೊಂದನ್ನು ಬರೆಯಲು ಸಾಕಷ್ಟು ಸಮಯ ಬೇಕು. ಬಹುಶಃ ಅವರು ಬಂಕಾಪುರದಲ್ಲಿ ತಂಗಿದ್ದ ದಿನಗಳು ಚಾತುರ್ಮಾಸದ ದಿನಗಳಾಗಿರಬಹುದು. ಪೂಜ್ಯಪಾದರು ಹಾವೇರಿ ಪರಿಸರದಲ್ಲಿ ಸಂಚರಿಸಿದ್ದಾರೆ. ಈ ಭಾಗದಲ್ಲಿ ಜೈನ ಧರ್ಮದ ಪ್ರಸರಣಕ್ಕೂ ಕಾರಣರಾಗಿದ್ದಾರೆ. ಅದರ ನಿಸಿಧಿ ನಿಮಿತ್ತ ಪಾದಗಳು ಕನಕಗಿರಿಯಲ್ಲಿದ್ದರೂ ಅವರಿಗೆ ದೃಷ್ಟಿ ಮರಳಿ ಲಭಿಸುವಂತೆ ಮಾಡಿದ ಅನನ್ಯತೆ ಹಾವೇರಿ ಪರಿಸರಕ್ಕಿದೆ.

ಪೂಜ್ಯಪಾದ ನಿಸಿಧಿಯಷ್ಟೇ ಶ್ರೇಷ್ಟವಾದ ಇನ್ನೊಂದು ಪಾದ ನಿಸಿಧಿ ಶ್ರವಣಬೆಳಗೊಳದಲಿದೆ. ಅದು ಅಂತಿಮ ಶ್ರುತಕೇವಲಿ ಭದ್ರಬಾಹು ಮುನಿಗಳದು. ಈ ಪಾದಗಳು ಆರನೆಯ ಶತಮಾನದಲ್ಲಿ ರಚಿತವಾದುವು ಎಂದು ಎಂ.ಜಿ.ಮಂಜುನಾಥರವರು ಹೇಳುತ್ತಾರೆ. ಜೋಡಿಪಾದ ಅದರ ಸುತ್ತಲೂ ಕಮಲದಳಗಳನ್ನು ಹೊಂದಿದ ಭದ್ರಬಾಹುಗಳ ನಿಸಿಧಿಯು ಶ್ರವಣಬೆಳಗೊಳದಲ್ಲಿರುವ ನಿಸಿಧಿಗಳಲ್ಲೇ ಪ್ರಥಮವಾದದ್ದು. ಕಾಲಾನಂತರ ಪಾದ ನಿಸಿಧಿಯ ಕೆಳಗೆ, ಸುತ್ತಲೂ ಶಾಸನ ನಿರ್ಮಾಣವಾಗತೊಡಗಿದವು. "ಶ್ರವಣಬೆಳಗೊಳದಲ್ಲಿ ಈ ರೀತಿಯ ಪಾದ ಶಾಸನಗಳು ಸುಮಾರು ಹದಿನೈದು ದೊರೆತಿವೆ. ಇವುಗಳಲ್ಲಿ ಚಂದ್ರಗಿರಿಯಲ್ಲಿರುವ ಒಂದು ಜೊತೆ ಪಾದಗಳ ಚಿತ್ರ ಬಹಳ ಸುಂದರವಾಗಿವೆ. ಒಂದೂವರೆ ಅಡಿ ಉದ್ದವಿರುವ ಈ ಪಾದಗಳು ಅರಳಿದ ತಾವರೆಯ ಹೂವಿನ ನಡುವೆಯಿರುವಂತೆ ಚಿತ್ರಣಗೊಂಡಿವೆ."[೨೭೩] ಪಾದಗಳ ಆಕೃತಿಯ ನಿಸಿಧಿಗಳು ಕ್ರಿ.ಶ. ಆರನೆಯ ಶತಮಾನದ ಹೊತ್ತಿಗೆ ಸಾಕಷ್ಟು ಪ್ರಚಲಿತಗೊಂಡು ಅದು ಪಂಪನ ನಿಸಿಧಿವರೆಗೂ ಚಾಲ್ತಿಯಲ್ಲಿದ್ದಂತೆ ತೋರುತ್ತದೆ.

ಹಾವೇರಿ ಪರಿಸರದಲ್ಲಿ ಏಕೈಕ ಪಾದದಾಕೃತಿಯ ನಿಸಿಧಿ ಗುಡ್ಡದ ಬೇವಿನಹಳ್ಳಿ (ರಾತಾ)ಯಲ್ಲಿ ದೊರೆಯುತ್ತದೆ. ಸತ್ತಳಿಗೆ-೭೦ ಪ್ರಾಚೀನ ಆಡಳಿತ ಘಟಕದ ನೆರೆಯ ಕಂಪಣ ನಾಗರಖಂಡ-೭೦. ಇಲ್ಲಿ ಜಕ್ಕಣಬ್ಬೆ ನಾಳ್ಗಾವುಂಡಿಯಾಗಿ ಕ್ರಿ.ಶ. ೯೧೨-೯೧೮ರಲ್ಲಿ ಆಳಿದ ಉಲ್ಲೇಖಗಳು ದೊರೆಯುತ್ತವೆ.[೨೬೪] ಈ ಜಕ್ಕಣಬ್ಬೆ ಪ್ರಸ್ತುತ ಗುಡ್ಡದ ಬೇವಿನಹಳ್ಳಿಯ ಪಾದ ನಿಸಿಧಿಯನ್ನು ಮಾಡಿಸಿದ್ದಾಳೆ. ಜಗದೀಶ ಅವರು ಇದನ್ನು ಪಾದಗಟ್ಟಿ ಶಾಸನವೆಂದಿದ್ದಾರೆ.[೨೬೫] ಇದರ ಪಾಠವನ್ನು ಗಮನಿಸಿದಾಗ ಸ್ಪಷ್ಟವಾಗಿ ಇದು ನಿಸಿಧಿ ಎಂದು ಗುರುತಿಸಬಹುದು.

೧ ಶ್ರೀಪರಮಗುಣಯುಕ್ತರಮಳಿನ ಚರಿತರ್
೨ ಶ್ರೀ ಮಹದೇವರಾಳ್ವಿಕೆಯ ವಿಸ್ತರದೆ ಗುರುಭ
೩ ಕ್ತಿಯಿನ್ದೆ ವಿರಚಿಸಿದಳ್ ಜಕ್ಕಣಬ್ಬೆ ಪಿರಿ
೪ ದಾದರದಿం॥ ಶ್ರೀ ಚಲ್ಲಪಯ್ಯ ಮಾಡಿದರ್ ದೇಗುಲಮಂ.[೨೬೬]

ಶ್ರೀ ಪರಮಗುಣಯುಕ್ತರ್, ಅಮಳಿನ ಚರಿತರ್, ಜಕ್ಕಣಬ್ಬೆ (ಯಕ್ಷಿ > ಯಕ್ಕಿ > ಜಕ್ಕಿ), ಚಲ್ಲಪಯ್ಯ ಎಂಬ ಗುಣವಾಚಕ ಮತ್ತು ನಾಮವಾಚಕ ಪದಾವಳಿಗಳು ಹೆಚ್ಚಾಗಿ ಜೈನ ಶಾಸನಗಳಲ್ಲಿ ಬಳಕೆಯಾಗಿವೆ. ಗುಣವಾಚಕಗಳು ಜಿನಮುನಿಗೆ ಆರೋಪಿತವಾದವುಗಳು ಅವರು ಪರಮ ಸದ್ಗುಣಿಗಳು, ಶುದ್ಧ ಚಾರಿತ್ರ್ಯರೂ ಹೌದು ಅಂತೆಯೇ ಅಂತಹ ಗುರುವಾದ ಮುನಿಯೊಬ್ಬರ ಸಲ್ಲೇಖನ ಮರಣದ ಪ್ರಯುಕ್ತ ಜಕ್ಕಣಬ್ಬೆ ಈ ನಿಸಿಧಿಯನ್ನು ಮಾಡಿಸಿದ್ದಾಳೆ. ಚಲ್ಲಪಯ್ಯ (ಕೆಲ್ಲ > ಚಲ್ಲ) ಎಂಬುವನು ದೇಗುಲವನ್ನೂ ಕಟ್ಟಿಸಿದ. ದೇಗುಲ ಎಂದರೆ ಬಸದಿಯೆಂದೇ ತಿಳಿಯಬೇಕು. ಆದರೆ ಈ ಸ್ಮಾರಕಗಳನ್ನು ಎಲ್ಲಿ ಮಾಡಿಸಿದರೆಂದು ತಿಳಿಯದು. ಒಟ್ಟಿನಲ್ಲಿ ಇದೊಂದು ಪಾದಾದಾಕೃತಿಯ ನಿಸಿಧಿಯಾಗಿದೆ.

ಚೌಕಾಕಾರದ ಈ ನಿಸಿಧಿಯು ಸ್ವತಂತ್ರ ಶಿಲೆಯಲ್ಲಿ ರಚನೆಯಾಗಿದೆ. ಆದ್ದರಿಂದಲೇ ಎಲ್ಲೋ ಬಿದ್ದಿದ್ದ ಈ ಕಲ್ಲನ್ನು ಊರ ಹೊಲವೊಂದರಲ್ಲಿರುವ ಈಶ್ವರ ದೇವಾಲಯದ ಮುಂದೆ ತಂದು ಇಡಲಾಗಿದೆ. ಉಬ್ಬು ಆಕೃತಿಯ ಕಮಲ ದಳಗಳ ಮೇಲೆ ಜೋಡಿ ಪಾದಗಳ ಉಬ್ಬು ಶಿಲ್ಪವನ್ನು ಈ ನಿಸಿಧಿಯಲ್ಲಿ ಕಾಣಬಹುದು. ಪಾದಯುಗಳ ಶಿಲ್ಪಗಳು ಪ್ರಮಾಣಬದ್ಧವಾಗಿದ್ದು ವೃತ್ತಿನಿರತ ಶಿಲ್ಪಿ ಕೆತ್ತಿದಂತೆ ತೋರುತ್ತದೆ. ಚೌಕಾಕಾರಾದ ಕಮಲದಳಗಳ ನಾಲ್ಕು ಕಡೆಯ ಅಂಚುಗಳಿಗೆ ಮೇಲಿನ ಶಾಸನವನ್ನು ಕೆತ್ತಲಾಗಿದೆ. ಈ ಶಾಸನ ಕಲ್ಯಾಣ ಚಾಳುಕ್ಯರ ಲಿಪಿ ಸಾಮ್ಯತೆ ಹೊಂದುತ್ತಿದ್ದು ೯-೧೦ನೆಯ ಶತಮಾನದ ರಚನೆ ಎನ್ನಬಹುದು. ಪಾದಯುಗಳ ಶಿಲ್ಪ ಶ್ರವಣಬೆಳಗೊಳದಲ್ಲಿರುವ ಭದ್ರಬಾಹುಗಳ ಪಾದ ನಿಸಿಧಿಯ ಚೆಲುವನ್ನು ಹೊಂದಿವೆ. ಈ ಒಂದು ಪಾದ ನಿಸಿಧಿ ಹೊರತುಪಡಿಸಿ ಮತ್ತಾವುದೇ ಪಾದನಿಸಿಧಿಗಳು ಹಾವೇರಿ ಪ್ರದೇಶದಲ್ಲಿ ಇದೂವರೆಗೂ ಲಭ್ಯವಾಗಿಲ್ಲ.

## ೦೨. ಫಲಕದ ಆಕಾರದ ನಿಸಿಧಿಗಳು.

ಹಾವೇರಿ ಪರಿಸರದಲ್ಲಿ ದೊರೆತ ನಿಸಿಧಿಗಳಲ್ಲಿ ಫಲಕದ ಆಕಾರ ಅತ್ಯಧಿಕ ಪ್ರಸರಣ ಹೊಂದಿದೆ. ಇಲ್ಲಿ ೯೮% ರಷ್ಟು ನಿಸಿಧಿಗಳು ಫಲಕಾಕೃತಿಯಲ್ಲಿ ಇವೆ. ಕರಿಕಲ್ಲು, ಬಳಪದ ಕಲ್ಲು, ಕರಿಸಂಗಮುರಿ ಕಲ್ಲುಗಳನ್ನು ನಿಸಿಧಿ ರಚನೆಯಲ್ಲಿ ಬಳಸಲಾಗಿದೆ. ಕೆಲವೊಂದು ನಿಸಿಧಿಗಳು ವೃತ್ತಿನಿರತ ಶಿಲ್ಪಗಳ ಕೈಚಳಕದ ನಯ-ನಾಜೂಕಿನಲ್ಲಿ ಒಡಮೂಡಿದರೆ, ಇನ್ನೂ ಕೆಲವು ಸ್ಥಳೀಯ ಶಿಲ್ಪಿಗಳಿಂದ ನಿರ್ಮಾಣಗೊಂಡು ನಯವಂತಿಕೆಯನ್ನು ಕಳೆದುಕೊಂಡಿವೆ. ಮುನಿಗಳು, ಶ್ರಾವಕ, ಶ್ರಾವಕಿಯರ ಸಮಾಧಿ ಮರಣವನ್ನು ಉಲ್ಲೇಖಿಸುವ ನಿಸಿಧಿಗಳು, ಸಮಾಧಿ ಮರಣ ಹೊಂದಿದ ವ್ಯಕ್ತಿಯ ಘನತೆಗೆತಕ್ಕಂತೆ ಶಿಲ್ಪವಿನ್ಯಾಸವನ್ನು ಹೊಂದಿವೆ. 'ಘನತೆ' ಎಂಬ ಪದವನ್ನು ಇಲ್ಲಿ ಆರ್ಥಿಕ ದೃಷ್ಟಿಕೋನದಿಂದ ನೋಡಬೇಕು.

ಹಾವೇರಿ ಪರಿಸರದಲ್ಲಿ ಆರ್ಥಿಕ ಮತ್ತು ಅಧಿಕಾರಯುಕ್ತವಾಗಿದ್ದ ವ್ಯಕ್ತಿಗಳ ನಿಸಿಧಿಗಳು ಉನ್ನತ ಶಿಲ್ಪ ವೈಭವದಿಂದ ಕೂಡಿದ್ದು ಗಮನಕ್ಕೆ ಬರುತ್ತದೆ. ಮೂರು ಅಡಿಗಳಿಂದ ಹಿಡಿದ ಐದು ಅಡಿಗಳ ಎತ್ತರತದ ವಿನ್ಯಾಸ ಹೊಂದಿದ ಈ ಬಗೆಯ ನಿಸಿಧಿಗಳು ಮೂರು ಹಂತದ ಶಿಲ್ಪ ಪಟ್ಟಿಕೆಯನ್ನು ಹೊಂದಿವೆ. ಹಾವೇರಿ ತಾಲ್ಲೂಕು ಸಂಗೂರುನಲ್ಲಿರುವ ವಿಜಯನಗರದ ದಂಡನಾಯಕ ಸಂಗಮನ ಮತ್ತು ಅವನ ಕುಟುಂಬದ ನಿಸಿಧಿ ಈ ಮಾದರಿಗೆ ಒಂದು ಸಮರ್ಥ ಉದಾಹರಣೆ. ಸಂಗಮ ದಂಡನಾಯಕನಾದ್ದರಿಂದ ಆರ್ಥಿಕವಾಗಿ ಪ್ರಬಲವಾಗಿದ್ದ. ಅಂತೆಯೇ ಅವನ ಮತ್ತು ಆತನ ಪರಿವಾರದ ಉಲ್ಲೇಖ ಹೊಂದಿರುವ ನಿಸಿಧಿ ಅದ್ದೂರಿತನದಿಂದ ರಚಿತವಾಗಿದೆ. ಇಲ್ಲಿ ಕೆತ್ತಿರುವ ಶಿಲ್ಪಗಳು ಚಲನಾತ್ಮಕ ಮಾದರಿಯವಾಗಿದ್ದು ವೃತ್ತಿನಿರತ ಶಿಲ್ಪಿಯಿಂದಲೇ ರಚಿತವಾಗಿರುವುದನ್ನು ಸಾರುತ್ತವೆ. ಸಂಗಮನ ರಾಜಪೋಷಾಕುಗಳು ಅಲಂಕಾರಯುಕ್ತವಾದ ಪರಿವಾರದ ಸ್ತ್ರೀಯರು, ಚಾಮರಧಾರಿಣಿಯರು, ವ್ರತ ತೆಗೆದುಕೊಳ್ಳುವ ಸಂದರ್ಭದಲ್ಲಿ ಪ್ರಕೃತಿಯೂ ಸ್ಪಂದಿಸುತ್ತಿದೆ ಎನ್ನುವಂತೆ ಹಿನ್ನಲೆಯಲ್ಲಿರುವ ತೆಂಗಿನಮರಗಳು, ಪಕ್ಷಿಗಳು ಈ ಶಿಲ್ಪದಲ್ಲಿ ನೈಜ ಎಂಬಂತೆ ಮೂಡಿಬಂದಿವೆ. ಜಿನಸನ್ನಿಧಿಯಲ್ಲಿಯೂ ಸಂಗಮ ರಾಜಪೋಷಾಕುಗಳನ್ನು ಧರಿಸಿರುವುದು, ವ್ರತ ತೆಗೆದುಕೊಳ್ಳುವ ಸಂದರ್ಭದಲ್ಲಿ ಸತ್ತಿಗೆಯ ಆಶ್ರಯದಲ್ಲಿ ಕುಳಿತಿರುವುದು ಆರ್ಥಿಕ ಪ್ರಭಲತೆಯನ್ನು ಸೂಚಿಸುತ್ತದೆ. ಇಲ್ಲಿನ ಶಿಲ್ಪವೈಭವದಲ್ಲಿ ಜಿನನಿಗೆ ಪ್ರತೇಕ ಸ್ಥಾನ ಕಲ್ಪಿಸಿ ಮಂಟಪ ಖಂಡರಿಸಿ ಬಸದಿಯಲ್ಲಿ ಕುಳಿತಂತೆ ಚಿತ್ರಿಸಲಾಗಿದೆ. ಶಿಖರದಲ್ಲಿ ಸಿಂಹ ಲಾಂಛನ ಪ್ರಜ್ವಲಿಸುತ್ತಿದೆ. ಅಲ್ಲದೆ ಸಂಗಮನ ಗುಣಾವಳಿಯನ್ನು ಶಾಸನದಲ್ಲಿ ಅಲಂಕಾರಯುಕ್ತವಾಗಿ ವರ್ಣಿಸಲಾಗಿದೆ.

ಆರ್ಥಿಕವಾಗಿ ಪ್ರಭಲವಾದ ವ್ಯಕ್ತಿಗಳ ನಿಸಿಧಿಗಳು ಕಲಾತ್ಮಕತೆಯಿಂದ ಕೂಡಿದ್ದು ಸಾಕಷ್ಟು ಖರ್ಚು-ವೆಚ್ಚವನ್ನು ಮಾಡಲಾಗುತ್ತದೆ. ಈ ವೈಭವ ಸಾಮಾನ್ಯ ಶ್ರಾವಕರ ನಿಸಿಧಿಯಲ್ಲಿ ಕಂಡುಬರುವುದಿಲ್ಲ. ಇಲ್ಲಿ ಒಂದೇ ಹಂತದ ಶಿಲ್ಪವಿದ್ದು ಮಧ್ಯ ಜಿನ, ಅಕ್ಕಪಕ್ಕ ವ್ರತಧಾರಿ ಮತ್ತು ವ್ರತ ಬೋಧಿಸುವ ಮುನಿಯನ್ನು ಚಿತ್ರಿಸಲಾಗಿರುತ್ತದೆ. ಹಿರೇಕೆರೂರು ತಾಲ್ಲೂಕಿನ ಆಲದಗೆರೆ ಗ್ರಾಮದಲ್ಲಿ

ಇರುವ ಮಾಯಕ್ಕನ ನಿಸಿಧಿ ಇದಕ್ಕೊಂದು ಸ್ಪಷ್ಟ ನಿದರ್ಶನ. ಮಾಯಾಕ್ಕಳ ನಿಸಿಧಿ ಶಿಲ್ಪದಲ್ಲಿ ವೈಭವವಿಲ್ಲ. ಶಾಸನದಲ್ಲಿ ಹೊಗಳಿಕೆಗಳಿಲ್ಲಿ. ವ್ರತಧಾರಿಯ ಉದ್ದೇಶ, ಹೆಸರು, ಗುರು, ಗುರುವಿನ ಸಂಘ, ಗಣ, ಪರಂಪರೆಯ ವಿವರಗಳನ್ನು ನಿತ್ಯವಾಗಿವೆ. ಕಾಲ ಮತ್ತು ರಾಜ ಪರಂಪರೆಯ ಪ್ರಸ್ತಾಪಗಳು ಸಾಮಾನ್ಯ ನಿಸಿಧಿಗಳಲಿ 'ಬಹುಳ' ಎಂಬಂತೆ ಪ್ರಸ್ತಾಪವಾಗಿವೆ. ಮಾಯಕ್ಕಳ ನಿಸಿಧಿ ಶಿಲ್ಪ ವಿನ್ಯಾಸವು ಸರಳವಾಗಿದೆ. ಮಧ್ಯ ಜಿನ, ಬಲಗಡೆ ಮುನಿ, ಎಡಗಡೆ ಅಂಜಲಿಬದ್ಧವಾದ ಮಾಯಕ್ಕಳನ್ನು ಚಿತ್ರಿಸಲಾಗಿದೆ. ನಿಸಿಧಿ ಸಾಮಾನ್ಯವಾಗಿ ಖಂಡರಿಸಲ್ಪಟ್ಟಿದ್ದರೂ, ವೈಭವವಾಗಿ ಚಿತ್ರಿತವಾಗಿದ್ದರೂ ಅದರ ಉದ್ದೇಶ ಆತ್ಮಾರ್ಪಣೆ ಮಾಡಿಕೊಂಡ ವ್ಯಕ್ತಿಯ ನೆನಕೆ ಮಾತ್ರವೇ ಎಂಬಂಶ ಗಮನಿಸತಕ್ಕದ್ದು.

ಹಾವೇರಿ ಜಿಲ್ಲೆಯಲ್ಲಿ ಫಲಕದ ಆಕಾರದ ನಿಸಿಧಿಗಳು ವಿಪುಲವಾಗಿ ಹರಡಿಕೊಂಡಿವೆ ಈ ಮಾದರಿ ನಿಸಿಧಿಗಳು ಇದುವರೆಗೂ ೧೩೭ ಕಂಡುಬಂದಿವೆ. ಶೀಘ್ರ ಮತ್ತು ಸುಲಭದ ಕೆತ್ತನೆಯಾಗಿದ್ದರಿಂದ ಫಲಕಾಕಾರದ ನಿಸಿಧಿಗಳು ಇಲ್ಲಿ ವಿಪುಲವಾಗಿವೆ. ಕಂಭದಾಕೃತಿ ಸಾಮಾನ್ಯ ವ್ಯಕ್ತಿಗಳಿಗೆ ಎಟಕುವಂತದಲ್ಲ. ಖರ್ಚು ಜಾಸ್ತಿ. ಆದ್ದರಿಂದ ಆ ಮಾದರಿಯನ್ನು ಕೈಬಿಟ್ಟರು. ಪಾದದಾಕೃತಿ ನಿಸಿಧಿ ಸುಲಭದ್ದಾಗಿದ್ದರೂ ಉಬ್ಬು ಶಿಲ್ಪದ ಬಳಕೆ ಇರುವುದಿಲ್ಲ. ಸಲ್ಲೇಖನ ವ್ರತಧಾರಿ ಸಮಾಧಿಯಾದ ಬಗೆಯನ್ನು ಶಾಸನದಲ್ಲಿ ಮತ್ತು ಅವನು ವ್ರತ ತೆಗೆದುಕೊಂಡ ಸಂಭ್ರಮದ ಚಿತ್ರಣವನ್ನು ಕಟ್ಟಿಕೊಡುವುದು ಶಿಲ್ಪಿಯ ಬಹುಮುಖ್ಯ ಉದ್ದೇಶ. ಜೊತೆಗೆ ಈ ರೀತಿಯ ಉಬ್ಬುಗೆತ್ತನೆಯ ನಿಸಿಧಿಗಳಿಂದ ಮುಂದಿನ ಪೀಳಿಗೆಯೂ ಸಲ್ಲೇಖನ ಸಮಾಧಿಯ ವ್ರತವನ್ನು ತೆಗೆದುಕೊಳ್ಳಲು ಮಾನಸಿಕ ಪ್ರೇರಣೆಯೂ ಆಗಿದ್ದವು. ಈ ರೀತಿಯ ಚಿತ್ರಣ ಪಾದದಾಕೃತಿಯದ್ದಾಗಿರಲಿಲ್ಲ. ಅದು ಫಲಕದ ಆಕೃತಿಯಲ್ಲಿ ಮಾತ್ರ ಸಾಧ್ಯ.

ಫಲಕಗಳ ಮೇಲೆ ಶಿಲ್ಪಗಳನ್ನು ಕೆತ್ತುವ ಮೂಲ ಉದ್ದೇಶ ಅನಕ್ಷರಸ್ಥರಿಗೆ ಅರ್ಥವಾಗಲೆಂದು "ಇಂದಿಗೂ ಹಳ್ಳಿಗಳಲ್ಲಿ ಲಭ್ಯವಿರುವ ಸ್ಮಾರಕ ಶಿಲೆಗಳನ್ನು ಗುರುತಿಸುವುದು ಅದರ ಮೇಲಿನ ಚಿತ್ರಗಳಿಂದಲೇ ಹೊರತು, ಅದರಲ್ಲಿನ ಬರಹದಿಂದಲ್ಲ"[೨೭೭] ಪಾದದಾಕೃತಿಯ ನಿಸಿಧಿಯಲ್ಲಿ ಚಿತ್ರಶಿಲ್ಪವಿರುವುದಿಲ್ಲ. ಶಾಸನ ಇದ್ದರೂ ಅದು ಅನಕ್ಷರಸ್ಥರಿಗೆ ಅರ್ಥವಾಗುವುದಿಲ್ಲ. "ಈ ಒಂದು ಅಂಶದಿಂದಲೇ ಶಿಲ್ಪಿಗಳು ಬರಹದ ಜೊತೆಯಲ್ಲಿ ಶಿಲ್ಪಕ್ಕೂ ಏಕೆ ಪ್ರಾಮುಖ್ಯತೆ ನೀಡಿದರೆಂಬುದನ್ನು ತಿಳಿಯಬಹುದು."[೨೭೮] ಆದ್ದರಿಂದ ಫಲಕ ಆಕೃತಿಯ ನಿಸಿಧಿಗಳು ತಮ್ಮ ಪ್ರಸರಣ ಹೆಚ್ಚಿಸಿಕೊಂಡುವು. ಅಕ್ಷರಸ್ಥ ಅಲ್ಲಿನ ಶಾಸನ ಮತ್ತು ಚಿತ್ರಣಗಳ್ನನು ಒಟ್ಟೊಟ್ಟಿಗೆ ಅರ್ಥೈಯಿಸಿಕೊಂಡರೆ ಅನಕ್ಷರಸ್ಥ ನಿಸಿಧಿಯಲ್ಲಿರುವ ಉಬ್ಬುಶಿಲ್ಪಗಳನ್ನು ನೋಡಿ ಸ್ಮಾರಕದ ಉದ್ದೇಶವನ್ನು ಅರ್ಥೈಯಿಸಿಕೊಳ್ಳುತ್ತಿದ್ದ.

ಫಲಕದ ಆಕೃತಿಯ ನಿಸಿಧಿಗಳು ವೈವಿಧ್ಯ ಉಬ್ಬುಗೆತ್ತನೆಗಳಿಂದ ಕೂಡಿದ್ದು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿ ರಚಿತವಾಗಿವೆ. ಈ ತರಹದ ನಿಸಿಧಿಗಳು ಸಾಮಾನ್ಯವಾಗಿ ಮೂರು ವಿಧಗಳಲ್ಲಿ

ರಚನೆಯಾಗಿವೆ. ಇವುಗಳನ್ನು ೧. ಒಂದು ಹಂತದ ನಿಸಿಧಿಗಳು, ೨. ಎರಡು ಹಂತದ ನಿಸಿಧಿಗಳು, ೩. ಮೂರು ಹಂತದ ನಿಸಿಧಿಗಳೆಂದು ವಿಭಾಗ ಮಾಡಬಹುದು. ಪ್ರಸ್ತುತ ಪರಿಸರದಲ್ಲಿ ಮೂರೂ ಹಂತದ ಮಾದರಿಗಳು ಲಭ್ಯವಿದ್ದು, ಅವುಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಮೂರು ಹಂತದ ಮಾದರಿಗಳಲ್ಲಿ ಮುನಿ, ಶ್ರಾವಕ ವ್ಯಕ್ತಿಗಳ ಸ್ಮಾರಕಗಳಿದ್ದು ಮೂರು ಹಂತದ ಮೂರು ವಿಭಾಗದ ಅಡಿಯಲ್ಲಿ ಉಪವಿಭಾಗವಾಗಿ ೧ ಮುನಿಗಳ ನಿಸಿಧಿ ಶಿಲ್ಪ, ೨ ಶ್ರಾವಕರ ನಿಸಿಧಿ ಶಿಲ್ಪ. ಎಂದು ಮಾಡಿಕೊಳ್ಳಲಾಗಿದೆ.

## ಅ. ಒಂದು ಹಂತದ ನಿಸಿಧಿಶಿಲ್ಪ.

ಒಂದು ಹಂತದ ನಿಸಿಧಿ ಸರಳ ಮಾದರಿಯದ್ದು, ವ್ಯಕ್ತಿಯ ಅಥವಾ ಸ್ಮಾರಕ ನಿರ್ಮಾಣಕಾರರ ಆರ್ಥಿಕತೆ ಅವಲಂಬನೆಗೆ ಅನುಗುಣವಾಗಿ ಇವು ರಚಿತವಾದಂತೆ ತೋರುತ್ತವೆ. ಇಲ್ಲಿ ಒಂದೇ ಹಂತದ ಶಿಲ್ಪವಿದ್ದು, ಕೆಲವೊಂದು ಸರಳ ಶಿಲ್ಪಗೆತ್ತನೆ ಹೊಂದಿದರೆ, ಇನ್ನೂ ಕೆಲವೂ ಅದರಲ್ಲೇ ವಿವಿಧ ವಿನ್ಯಾಸಗಳನ್ನು ಹೊಂದಿರುತ್ತವೆ. ಹಾವೇರಿ ಪರಿಸರದಲ್ಲಿ ಒಂದು ಹಂತದ ನಿಸಿಧಿಗಳು ಇದುವರೆಗೂ ೨೩ ಲಭಿಸಿವೆ. ಇದರಲ್ಲಿ ಲಿಪಿಸಹಿತ ೧೬ ನಿಸಿಧಿಗಳಿದ್ದರೆ ೦೭ ಲಿಪಿರಹಿತವಾಗಿವೆ. ಈ ಎಲ್ಲ ನಿಸಿಧಿಗಳ ರಚನೆಯ ಕಾಲ ೧೨-೧೩ನೆಯ ಶತಮಾನ.

## ೦೧. ಮುನಿಗಳ ನಿಸಿಧಿಶಿಲ್ಪ

ಸವಣೂರಿನ ಹನುಮಂತ ದೇವಾಲಯದ ಪಕ್ಕ ಇರುವ 'ಮಲಧಾರಿ ನರೇಂದ್ರ' ಮುನಿಯ ನಿಸಿಧಿ, ಒಂದು ಹಂತದ ನಿಸಿಧಿ ಮಾದರಿಯಲ್ಲಿ ಪ್ರಥಮವಾದದ್ದು. ಹನ್ನೆರಡನೆಯ ಶತಮಾನದ ರಚನೆಯಾದ ಈ ಶಿಲ್ಪ ಶ್ರೇಷ್ಠ ಮಾದರಿಯದ್ದು. ಎತ್ತರ ಪೀಠದ ಮೇಲೆ ಜಿನ, ಹಿಂದೆ ಪ್ರಭೆ, ಮೇಲೆ ಮುಕ್ಕೊಡೆ, ಅಕ್ಕ-ಪಕ್ಕ ದಪ್ಪನೆಯ ಕುಚ್ಚು ಹೊಂದಿದ ಹಿಡಿಕೆಯುತ್ತ ಚಾಮರಗಳಿವೆ. ಇವುಗಳ ಪಕ್ಕ ಚಂದ್ರಾರ್ಕರಿದ್ದಾರೆ. ಚಂದ್ರಶಿಲ್ಪ ತ್ರುಟಿತವಾಗಿದೆ.

ಕಮಂಡಲಯುಕ್ತ ಮುನಿಗಳಿಬ್ಬರು ಕಂಕುಳದಲ್ಲಿ ಪಿಂಛಿ ಹಿಡಿದು ಜಿನಪೀಠದ ಅಕ್ಕಪಕ್ಕದಲ್ಲಿ ಅರ್ಧಲೀಲಾಸನದಲ್ಲಿ ಅಸೀನರಾಗಿದ್ದಾರೆ. ಎಡಬದಿಯಲ್ಲಿ ಮಲಧಾರಿ ನರೇಂದ್ರ ಮುನಿ, ಬಲದಲ್ಲಿ ಅವನ ಗುರುವಿನ ಉಬ್ಬುಶಿಲ್ಪವಿದೆ. ಗುರುವಿನ ಹೆಸರು ಶಾಸನದಲ್ಲಿ ವ್ಯಕ್ತವಾಗಿಲ್ಲ. ಮಲಧಾರಿ ನರೇಂದ್ರಮುನಿ "ಸಂನ್ಯಸನೆಯ್ದಪನಾದರದಿಂದೆ"[೨೭೯] ಎಂಬುದನ್ನು ನಿಸಿಧಿ ಶಾಸನ ಸಾರುತ್ತದೆ. ಗುರುಶಿಷ್ಯರಿಗೆ ಸಮಾನ ಪೀಠಗಳನ್ನು ಈ ಶಿಲ್ಪದಲ್ಲಿ ಕೆತ್ತಲಾಗಿದೆ. ಸಮಾಧಿ ಮರಣ ಹೊಂದಿದ ವ್ಯಕ್ತಿ ಶಿಷ್ಯನಾದರೂ ತಾನು ಕೈಗೊಂಡ ಆತ್ಮಾರ್ಪಣೆಯ ಕಾರ್ಯದಿಂದ ಅವನು ಗುರುವಿಗೆ ಸಮಾನನಾಗುತ್ತಾನೆ. ಆದ್ದರಿಂದಲೇ ವ್ರತಧಾರಿಗೆ ಇಲ್ಲಿ ಸಮಾನ ಪೀಠ ಹಾಕಲಾಗಿದೆ. ಕೆಲವೊಂದು ಸಾರಿ ವ್ರತಧಾರಿ ಜಿನನಿಗೂ ಸಮಾನವಾಗುತ್ತಾನೆ ಎಂಬುದನ್ನು ಜಿನ ವ್ರತದಾರಿಗೆ ಸಮಾನ ಪೀಠಗಳನ್ನು ಹಾಕಿದ್ದು ಸುಣಕಲ್ಲುಬಿದರೆ, ಆಲದಗೆರೆ,[೨೮೦] ಹುಂಚ ಇತ್ಯಾದಿ ನಿಸಿಧಿ ಸ್ಮಾರಕಗಳಲ್ಲಿ

ಕಾಣಬಹುದು. ಪ್ರಸ್ತುತ ಮಲಧಾರಿ ನರೇಂದ್ರ ಮುನಿಯ ನಿಸಿಧಿಯ ಗುರು–ಶಿಷ್ಯರ ಶಿಲ್ಪಗಳ ಕಾಲುಗಳು–ಕೈಗಳು ಹೊರಚಾಚಿದಂತೆ ಚಿತ್ರಿಸಲಾಗಿದೆ. ಉಬ್ಬುಶಿಲ್ಪದ ಹೊಸ ಸಾಧ್ಯತೆಯ ಖಂಡರಿಸುವಿಕೆಯು ಇಲ್ಲಿ ವ್ಯಕ್ತವಾಗಿದೆ. ಮುನಿ–ಜಿನರ ಮುಖಗಳು ಮುಕ್ಕಾಗಿದ್ದರೂ ಶಿಲ್ಪ ವಿನ್ಯಾಸದಲ್ಲಿ ಜೀವಂತಿಕೆ ತುಂಬಿದೆ. ಮುನಿ ಮತ್ತು ವ್ರತಧಾರಿಗಿಂತ ಜಿನನ ಸ್ಥಾನ ಔನತ್ಯವಾದುದು ಎಂಬುದನ್ನು ಪೀಠದ ಮೂಲಕ ಪ್ರತ್ಯೇಕಿಸಿದ್ದು ಶಿಲ್ಪಿಯ ಜಾಣತನ.

ಮುನಿಗಿಂತ ಜಿನನಿಗೆ ಎತ್ತರ ಮತ್ತು ಪ್ರತ್ಯೇಕತೆಯನ್ನು ಕಲ್ಪಿಸಿರುವ ಮತ್ತೊಂದು ಮುನಿ ನಿಸಿಧಿ ಹಾನಗಲ್ಲು ತಾಲ್ಲೂಕಿನ ಯಳವಟ್ಟಿಯಲ್ಲಿದೆ. ಊರಕೆರೆಯ ರಸ್ತೆಯ ಪಕ್ಕದ ದಿಬ್ಬದ ಮೇಲಿರುವ ಈ ನಿಸಿಧಿ ಲಿಪಿರಹಿತವಾಗಿದೆ. ಜಿನನನ್ನು ಬಸದಿಯಲ್ಲಿ ಕುಳಿತಂತೆ ಸ್ಪಷ್ಟ ಕೆತ್ತನೆಯ ಕಂಭಗಳು, ಬೋಧಿಗೆಗಳನ್ನು ಈ ಶಿಲ್ಪದಲ್ಲಿ ಕಾಣಬಹುದು. ಎರಡು ಅಂಕಣದ ಈ ಶಿಲ್ಪ ಮಧ್ಯದಲ್ಲಿ ಪೂರ್ಣಪ್ರಮಾಣದ ಕಂಭವನ್ನು ಎಡ ಬಲ ತುದಿಗೆ ಅರ್ಧ ಗಂಭಗಳನ್ನು ಹೊಂದಿದೆ. ಒಂದು ಅಂಕಣದಲ್ಲಿ ಮುನಿಯ ಅರ್ಧಲೀಲಾಸನದಲ್ಲಿ ಪಿಂಛಿ, ತಾಳೆಗರಿ, ಕಮಂಡಲ, ಶೃತಪೀಠದೊಂದಿಗೆ ಕುಳಿತಿದ್ದರೆ, ಮತ್ತೊಂದು ಕಡೆ ಜಿನ ಪದ್ಮಾಸನದಲ್ಲಿ ಕುಳಿತಿದ್ದಾನೆ. ಸಾಂಪ್ರದಾಯದಂತೆ ಮುಕ್ಕೊಡೆ ಮತ್ತು ಚಾಮರಗಳು ಇಲ್ಲಿವೆ.

ಮುನಿ ಮತ್ತು ಶ್ರಾವಕನ ನಿಸಿಧಿ ಒಂದೆ ಶಿಲ್ಪದಲ್ಲಿ ಕೆತ್ತನೆಯಾಗಿರುವ ಮತ್ತು ಅವರು ಸಮಾಧಿ ಮರಣವನ್ನು ಹೊಂದಿರುವ ವಿಷಯವನ್ನು ಪ್ರಸ್ತಾಪಿಸಿರುವ ನಿಸಿಧಿ ಹಿರೇಕೇರೂರು ತಾಲ್ಲೂಕಿನ ಆಲದಗೆರೆಯಲ್ಲಿದೆ. ಜಯಕೀರ್ತಿ ಭಟ್ಟಾರಕರ ಶಿಷ್ಯರಾದ ಮಾಣಿಕದೇವ ಮತ್ತು ಚಾಳಚಂದ್ರ ತ್ರೈವಿದ್ಯಾದೇವನ ಗುಡ್ಡ ಮಲ್ಲಯ್ಯ ಸಮಾಧಿಯಾದ ಪ್ರಸ್ತಾಪ ಈ ಅಪ್ರಕಟಿತ ನಿಸಿಧಿ ಶಾಸನದಲ್ಲಿದೆ.[೨೮೧]

ಇಲ್ಲಿನ ಶಿಲ್ಪ ಬಸದಿ ಮಾದರಿಯದ್ದು ಶಿಲ್ಪದ ಮಧ್ಯ ಪದ್ಮಪೀಠದ ಮೇಲೆ ಜಿನ ಶಿಲ್ಪವಿದೆ. ಜಿನಶಿಲ್ಪ ಗರ್ಭಗೃಹದಲ್ಲಿ ಇದೆ ಎನ್ನುವಂತೆ ವ್ರತಧಾರಿಗಳ ಶಿಲ್ಪಗಳಿಗಿಂತ ಹಿಂದೆ ಇದೆ ಎಂದು ಭಾಸವಾಗುವಂತೆ ಕೆತ್ತಲಾಗಿದೆ. ಇಡೀ ಶಿಲ್ಪದ ಮೇಲೆ ಗೋಪುರ ಅದರ ಮೇಲೆ ಸ್ತೂಫಿಯ (ಕಳಶ) ಚಿತ್ರಣ ಸೊಗಸಾಗಿ ಮೂಡಿ ಬಂದಿದೆ. ಬಹುಶಃ ಈ ಊರಲ್ಲಿ ಇದೇ ರೀತಿಯ ಜಿನಾಲಯವಿದ್ದಂತೆ ತೋರುತ್ತದೆ. ಊರಲ್ಲಿರುವ ನಾಲ್ಕು ನಿಸಿಧಿಗಳ ಶಿಲ್ಪದಲ್ಲಿ ಜಿನನ ಪದ್ಮಾಸನ ಶಿಲ್ಪವೇ ಇರುವುದರಿಂದ ಊರ ಬಸದಿಯಲ್ಲಿ ಕುಳಿತಿರುವ ವಿಗ್ರಹ ಇತ್ತು. ಅಂತೆಯೇ ಅದು ಶಿಲ್ಪದಲ್ಲಿಯೂ ವ್ಯಕ್ತವಾಗಿದೆ.

ಮುನಿ ಮತ್ತು ಶ್ರಾವಕನ ನಿಸಿಧಿ ಇದಾಗಿದ್ದರಿಂದ, ಇಬ್ಬರ ಶಿಲ್ಪಗಳನ್ನು ಪ್ರತ್ಯೇಕಿಸಲಾಗಿದೆ. ಜಿನನ ಬಲಗಡೆ ಮಲ್ಲಯ್ಯ ಅಂಜಲಿಬದ್ಧನಾಗಿ ಕುಳಿತಿದ್ದಾನೆ. ತುರುಬು, ತೋಳಬಂಧಿ, ಕರ್ಣಾಭರಣ, ಕಂಠಾಭರಣ ಮಲ್ಲಯ್ಯನ ಶಿಲ್ಪದಲ್ಲಿವೆ. ಎಡಗಡೆ ಶಿಲ್ಪದಲ್ಲಿ ಜಯಕೀರ್ತಿ ಭಟ್ಟಾರಕರು

ತನ್ನ ಶಿಷ್ಯ ಮಾಣಿಕದೇವನಿಗೆ ಸಮಾಧಿ ವಿಧಿಯನ್ನು ಬೋಧಿಸುತ್ತಿದ್ದಾನೆ. ಗುರುಶಿಷ್ಯರಿಬ್ಬರ ಶಿಲ್ಪದ ಭಂಗಿ ಸಲ್ಲೇಖನ ವ್ರತವನ್ನು ನಗುನಗುತ್ತಲೇ ಸಹಜವೆಂಬಂತೆ ಕೊಡುವ ಮತ್ತು ಸ್ವೀಕರಿಸುವ ಭಾವವನ್ನು ಸ್ಫುರಿಸುತ್ತಿದೆ.

## ೦೨. ಶ್ರಾವಕರ ನಿಸಿಧಿಶಿಲ್ಪ.

ಆರಂಭದಲ್ಲಿ ಮುನಿಗಳಿಗಷ್ಟೇ ಸೀಮಿತವಾಗಿದ್ದ ಸಮಾಧಿ ಮರಣದ ಕ್ರಿಯೆ ಆ ಕಾಲಾನಂತರ ಶ್ರಾವಕರನ್ನೂ ಆಕರ್ಷಿಸಿತು. ಕರ್ನಾಟಕದ ಮೊದಮೊದಲು ಇಚ್ಛಾಮರಣದ ಕೇಂದ್ರ ಬಹುತೇಕ ಶ್ರವಣಬೆಳಗೊಳದ ಕಟವಪ್ರ (ಚಂದ್ರಗಿರಿ) ಆಗಿದ್ದು, "೭ನೆಯ ಶತಮಾನದ ಅಂತ್ಯದ ಸುಮಾರಿಗಾಗಲೇ ಏಳುನೂರು ಪುಣ್ಯಪುರುಷರು ಕಟವಪ್ರದ ಶೀತಲ ಶಿಲೆಗಳ ಮೇಲೆ ಇಚ್ಛಾಮರಣ ಹೊಂದಿದರು. ಅವರ ಹೆಸರನ್ನಾಗಲಿ ಅವರ ಗೌರವಾರ್ಥ ಮಾಡಿಸಿದ ಸ್ಮಾರಕಗಳನ್ನಾಗಲಿ ತಿಳಿಸಿಲಾಗಿಲ್ಲವಾದರೂ, ಸ್ವಯಂ ಪ್ರೇರಣೆಯಿಂದ ಜೀವವನ್ನು ಅಂತ್ಯಗೊಳಿಸುವವರಿಗೆ ಈ ಮರಣ ಬೆಟ್ಟವು ಅತ್ಯಂತ ಪ್ರೀತಿಯ ತಾಣವಾಗಿತ್ತೆಂಬುದರಲ್ಲಿ ಅನುಮಾನವಿಲ್ಲ. ದೇಹದಂಡ ನೆಕಾರರೇ ಇತಿಹಾಸ ನಿರ್ಮಿಸಿದ ಇಂತಹ ಮತ್ತೊಂದು ಕೇಂದ್ರವು ಈ ಪ್ರಪಂಚದಲ್ಲೆಲ್ಲೂ ಇಲ್ಲ"[೨೮೨] ಮುನಿಗಳ ಸಮಾಧಿ ಬೆಟ್ಟವಾದ ಕಟವಪ್ರವು ಶ್ರಾವಕರನ್ನು ಆಕರ್ಷಿಸಿದ್ದು ಅತಿಶಯವಲ್ಲ ಮುನಿಸೇವೆಗೆಂದು ಬಂದ ಶ್ರಾವಕರು ಮುನಿಗಳ ಕಠೋರ ವ್ರತಾಚರಣೆ, ಲೌಖಿಕ ನಶ್ವರತೆಯನ್ನು ಕಣ್ಣಾರೆ ಕಂಡು ಅದರೆಡೆಗೆ ಆಕರ್ಷಿತರಾಗಿದ್ದು ಸಹಜ. ಅಂತೆಯೇ ಅವರೂ ದೇಹ ದಂಡನೆ ಸಮಾಧಿ ಮರಣದಂತಹ ಕ್ರಿಯೆಗೆ ತಮ್ಮ ದೇಹವನ್ನು ಅಣಿಗೊಳಿಸಿದರು. ಹಾಗೆ "ದೇಹ ದಂಡಿಸಿದ ಮೊದಲ ಶ್ರಾವಕಿ ಮನಸಿಜಾ ಎಂಬ ರಾಣಿ"[೨೮೩] ಇವಳ ಕಾಲ ೮ನೆಯ ಶತಮಾನ ಭಾಗಶಃ ಮನಸಿಜಾ ರಾಣಿಯ ಅನಂತರ ಸಾಕಷ್ಟು ಶ್ರಾವಕರು ಸಲ್ಲೇಖನದತ್ತ ಆಕರ್ಷಿತರಾದರು ಎಂದು ತೋರುತ್ತದೆ.

ಮುನಿಗಳು ತಮ್ಮ ಶ್ರದ್ಧಾಕೇಂದ್ರವಾದ ಕಟವಪ್ರದಿಂದ ನಾಡಿನಾದ್ಯಂತ ಸಂಚಾರ ಮಾಡಲು ಪ್ರಾರಂಭಿಸಿದಾಗ ಅವರಿಗೆ ತಾವು ಇರುವ ಭೂಮಿಯೇ ಕಟವಪ್ರವಾಯಿತು. ಅದೇ ಅವರ ದೇಹದಂಡನೆಯ ಸ್ಥಳವೂ ಆಯಿತು. ಅಲ್ಲಿಯೇ ಅವರು ಅಂತಿಮ ಜೀವನವನ್ನು ಕಳೆದು ಆತ್ಮಾರ್ಪಣೆಯನ್ನೂ ಮಾಡಿಕೊಂಡರು. ಸವಣೂರಿನಲ್ಲಿ ಮಲಧಾರಿ ನರೇಂದ್ರ ಮುನಿ, ಆಲದಗೆರೆಯಲ್ಲಿ ಮಾಣಿಕದೇವ, ನೆಗಳೂರಲ್ಲಿ ಸಕಳಚಂದ್ರದೇವ[೨೮೪] ಮುನಿಗಳು ಆತ್ಮಾರ್ಪಣೆ ಮಾಡಿಕೊಳ್ಳುವ ಮೂಲಕ ಹಾವೇರಿ ಪರಿಸರವನ್ನು ಕಟವಪ್ರದಷ್ಟೇ ಪವಿತ್ರ ಸ್ಥಳ ಎಂದು ಸಾರಿದರು.

ಈ ಪರಿಸರದಲ್ಲಿ ಇದುವರೆಗೂ ಒಟ್ಟು ಹದಿನೈದು ಶ್ರಾವಕರ ಒಂದು ಹಂತದ ನಿಸಿಧಿ ಶಿಲ್ಪಗಳು ದೊರೆತಿವೆ. ಮಧ್ಯ ಜಿನ ಅಕ್ಕಪಕ್ಕ ವ್ರತಧಾರಿ ಮತ್ತು ವ್ರತ ಬೋಧಿಸುವ ನಿರ್ಯಪಕಾಚಾರ್ಯರ ಚಿತ್ರಣ, ಸಹಜವಾಗಿ ಬಂದು, ಮುಕ್ಕೊಡೆ, ಚಾಮರಗಳು, ಶ್ರುತಪೀಠ, ಪಿಂಛಿ,

ಕಮಂಡಲ, ಸೂರ್ಯಚಂದ್ರರ ಉಬ್ಬುಶಿಲ್ಪಗಳು ಸರ್ವೇಸಾಮಾನ್ಯವಾಗಿವೆ. ಈ ಎಲ್ಲ ಶಿಲ್ಪಗಳ ಕೆಲವೊಂದು ವೈಶಿಷ್ಟ್ಯವನ್ನು ಮಾತ್ರ ಕೊಡಲಾಗಿದೆ.

ಉಬ್ಬುಗೆತ್ತನೆಗಳು ದುಂಡು ಶಿಲ್ಪದ ಮಾದರಿಗಿಂತ ಸಂಪೂರ್ಣ ಭಿನ್ನ. ದುಂಡು ಶಿಲ್ಪಗಳು (ನಾಲ್ಕು ಆಯಾಮಗಳಲ್ಲಿ ನೋಡುವ ವಿಧ) ಮಾದರಿಯವುಗಳಾದರೆ, ಫಲಕ ಉಬ್ಬುಗೆತ್ತನೆಗಳು ಏಕಮುಖಿಯಾದವುಗಳು. ಮುಮ್ಮುಖ ವಿಕ್ಷಣೆ ಮಾತ್ರ ಇವುಗಳಲ್ಲಿ ಸಾಧ್ಯ. ಆದರೂ ಶಾಸನ ಶಿಲ್ಪಗಳು ಕರಕುಶಲತೆಯಲ್ಲಿ ಕಡಿಮೆಯಿಲ್ಲ ಎಂಬಂತೆ ಮೋಟೇಬೆನ್ನೂರು (ಬ್ಯಾತಾ), ಹಿರೇಕೋಣತಿ (ಹಿತಾ) ಹಿರೇಅಣಜಿಯ ಅನಾಮಧೇಯ ಸ್ತ್ರೀ ನಿಸಿಧಿ ಶಿಲ್ಪಗಳು ತೋರಿಸಿಕೊಟ್ಟಿದ್ದಾರೆ.[೧೮೫] ಇಲ್ಲಿನ ಶಿಲ್ಪಗಳು ಅರ್ಧ ದುಂಡುಶಿಲ್ಪ ಮಾದರಿಯವು. ತ್ರಿಡಿ (ಮೂರು ಆಯಾಮಗಳಲ್ಲಿ ನೋಡುವ ವಿಧ) ಮಾದರಿಯ ಶಿಲ್ಪಗಳೂ ಹೌದು. ಶಿಲ್ಪದ ಹಿನ್ನೆಲೆಯನ್ನು ಸಾಕಷ್ಟು ತಗ್ಗಿಗೊಳಿಸಿದ್ದರಿಂದ ಈ ಮಾದರಿಯ ಶಿಲ್ಪಗೆತ್ತನೆಯ ನೈಪುಣ್ಯತೆ ಒಡಮೂಡಿದೆ. ಶಾಸ್ತ್ರೋಕ್ತವಾಗಿ ಶಿಲ್ಪವಿದ್ಯೆಯನ್ನು ಕಲಿತವರ ಜೊತೆಗೆ ಶಾಸನಶಿಲ್ಪಗಳು ಪೈಪೋಟಿಗೆ ಇಳಿದಂತೆ ಈ ನಿಸಿಧಿ ಶಿಲ್ಪಗಳಲ್ಲಿ ತೋರಿಸಿಕೊಟ್ಟಿದ್ದಾರೆ. ಅಂತೆಯೇ ಇಲ್ಲಿನ ಎಲ್ಲ ಶಿಲ್ಪಗಳು ಜೀವಂತ ವ್ಯಕ್ತಿಗಳೇ ಕುಳಿತಂತೆ ಕಾಣುತ್ತವೆ.

ಶಾಸನ ಶಿಲ್ಪಗಳ ಕಲಾಕುಶಲತೆ ಸುತಕೋಟೆ ಮತ್ತು ಹಿರೇಕೋಣತಿಯ (ಹಿತಾ) ನಿಸಿಧಿಗಳಲ್ಲಿ ವ್ಯಕ್ತವಾಗಿದೆ.[೧೮೬] ಸುತಕೋಟೆಯ ನಿಸಿಧಿ ಶಿಲ್ಪದಲ್ಲಿ ಚಿತ್ರಿತ ಸ್ತೂಪಿಯಾಕಾರದ ಮಂಟಪವು ಶ್ರೇಷ್ಠ ಕಲಾ ಮಾದರಿ. ಉತ್ತುಂಗದಲ್ಲಿ ಸಿಂಹ ಲಾಂಛನ ಅದಕ್ಕೆ ಹೊಂದಿಕೊಂಡಂತೆ ತೋರಣಗಳು ಸೊಗಸಾಗಿವೆ. ಜೀವಂತಿಕೆಯ ಲಕ್ಷಣಗಳು ಹಿರೇಕೋಣತಿಯ ಶಿಲ್ಪಗಳಲ್ಲಿದ್ದು, ವ್ರತಧಾರಿ ಸ್ತ್ರೀಯು ಅಲಂಕರಣಗೊಂಡಿದ್ದಾಳೆ. ಅಂಜಲಿಮುದ್ರೆ, ಕೈಬಳೆ, ತೋಳುಬಂಧಿ, ಕಂಠಿಹಾರಗಳು, ಬೆಂಡೋಲೆ, ಕುರುಳ ಏರು ಅಲಂಕರಣಗಳನ್ನು ನಯವಾಗಿ ಕೆತ್ತಲಾಗಿದೆ. ಜೊತೆಗೆ ಸ್ತ್ರೀಯ ಮುಖಭಾವ ಆತ್ಮವಿಶ್ವಾಸದಿಂದ ಕೂಡಿದ್ದು, ಸಾವನ್ನು ಸಂಭ್ರಮದಿಂದ ಸ್ವಾಗತಿಸುವಂತೆ ಚಿತ್ರಿಸಲಾಗಿದೆ. ಒಬ್ಬ ಶಿಲ್ಪಿಯ ಕಲೆ ಸಾಕಾರಗೊಂಡು ಸಾರ್ಥಕವಾಗುವುದು ಇಂಥಾ ಪ್ರತಿಕೃತಿಗಳನ್ನು ನಿರ್ಮಾಣ ಮಾಡಿದಾಗ ಮಾತ್ರ ಸಾಧ್ಯ.

ಕೆಲವೊಂದು ಶಿಲ್ಪಗಳು ಅಪೂರ್ಣ ಕಲಾ ನೈಪುಣ್ಯತೆಯನ್ನು ಹೊಂದಿರುತ್ತಾರೆ ಎಂಬುದಕ್ಕೆ ಕಬನೂರು (ಶಿತಾ), ಬಾಳೂರು (ಹಾನತಾ), ಚಿನ್ನಮುಳಗುಂದ (ಹಿತಾ) ದ ನಿಸಿಧಿ ಶಿಲ್ಪಗಳು ಉದಾಹರಣೆಯಾಗಿ ನಿಲ್ಲುತ್ತವೆ. ಕಲ್ಲಿನ ಆಯ್ಕೆ, ಶಿಲ್ಪಗಳಲ್ಲಿ ಭಾವ ತುಂಬುವಿಕೆ, ಸ್ಪಷ್ಟವಾದ ದೇಹಗಳ ವಿನ್ಯಾಸ ಸಮಬದ್ಧವಾಗಿ ಈ ಶಿಲ್ಪಗಳಲ್ಲಿ ಒಡಮೂಡಿಲ್ಲ. ಶಿಲ್ಪಿಯ ಅಪೂರ್ಣ ಕಲಾಜ್ಞಾನ ಇಂತಹ ಮಾದರಿಗಳು ಸೃಷ್ಟಿಯಾಗಲಿಕ್ಕೆ ಮುಖ್ಯ ಕಾರಣ. ಈ ತರಹದ ಇನ್ನೆರಡು ಮಾದರಿಗಳು ಹಿರೇಕೋಣತಿ (ಹಿತಾ), ಚಿಲ್ಲೂರು (ಸತಾ) ಗಳಲ್ಲಿದ್ದು ಚಿಲ್ಲೂರು ನಿಸಿಧಿಯಲ್ಲಿ ಮಾತ್ರ ಮೇಲ್ಭಾಗದಲ್ಲಿ

ಒಂದು ಪೂರ್ಣ ಕುಂಭವನ್ನು ಕೆತ್ತಲಾಗಿದೆ. ಕುಂಭದಿಂದ ಹೊರಟ ಬಳ್ಳಿಗಳು ಹೊರಬಿದ್ದು ಅಷ್ಟದಳದ ಪುಷ್ಪವನ್ನು ಚಿತ್ರಿಸಲಾಗಿದೆ. ನಿಸಿಧಿಗೆ ಈ ಅಲಂಕರಣ ಸೊಗಸಾಗಿ ಹೊಂದಿಕೊಂಡಿದೆ.

ಕೆಲವೊಂದು ಶಿಲ್ಪಿಗಳಲ್ಲಿ ಸಲ್ಲೇಖನ ವ್ರತ ಸ್ವೀಕರಿಸುವ ಜಾಗವನ್ನು ಎಷ್ಟು ಸೂಕ್ಷ್ಮವಾಗಿ ಗ್ರಹಿಸುತ್ತಾರೆ ಎನ್ನುವುದಕ್ಕೆ ಆಲದಗೆರೆ (ಹಿತಾ) ಮೂರು ನಿಸಿಧಿ ಶಿಲ್ಪಗಳು, ಸುಣಕಲ್ಲ ಬಿದಿರೆ (ರಾತಾ) ಯ ಬೊಪ್ಪಿಸೆಟ್ಟಿಯ ನಿಸಿಧಿಶಿಲ್ಪ ಸಾಕ್ಷಿಯಾಗುತ್ತವೆ. ಸಾವನ್ನು ಆಹ್ವಾನಿಸಿದ ಪ್ರಕ್ರಿಯೆಗಳು ಮೊದಮೊದಲು ಬಯಲು ಬಸದಿಯಲ್ಲಿ ನಡೆಯುತ್ತಿದ್ದವು ಎನ್ನುವುದಕ್ಕೆ ಕಳ್ವಪ್ಪು (ಶ್ರವಣಬೆಳಗೊಳದ ಚಿಕ್ಕಬೆಟ್ಟ) ಸಾಕ್ಷಿಯಾದರೆ, ಅದರಿಂದ ದೂರ ಇರುವ ಊರುಗಳ ಬಸದಿಯಲ್ಲಿ ನಡೆಯುತ್ತಿದ್ದವು ಎಂಬುದಕ್ಕೆ ಮೇಲೆ ಹೆಸರಿಸಿದ ಊರುಗಳ ನಿಸಿಧಿ ಶಿಲ್ಪಗಳು ಸಾಕ್ಷಿಯಾಗಿ ನಿಲ್ಲುತ್ತವೆ. ಈ ಅಂಶ ದೃಢಗೊಳ್ಳಲು ಇಲ್ಲಿನ ಶಿಲ್ಪ ವಿನ್ಯಾಸ. ಸಹಾಯಕವಾಗಿ ನಿಲ್ಲುತ್ತವೆ. ಬಸದಿಯಲ್ಲಿ ನಡೆಯುವ ಸಲ್ಲೇಖನ ಸ್ವೀಕರಿಸುವ ಪ್ರಕ್ರಿಯೆಯನ್ನು ಗಮನಿಸಿದ ಶಿಲ್ಪಿ ಆ ಮಾದರಿಯ ವಿನ್ಯಾಸವನ್ನು ನಿಸಿಧಿ ಶಿಲ್ಪಗಳಲ್ಲಿ ತಂದಿದ್ದಾನೆ. ಈ ಶಿಲ್ಪಗಳಲ್ಲಿ ಬಸದಿ ಮಾದರಿ ಶಿಲ್ಪಿತವಾಗಿದ್ದು ಮಧ್ಯೆ ಜಿನ ಅಕ್ಕಪಕ್ಕ ವ್ರತಧಾರಿ ಮತ್ತು ನಿರ್ಯಾಪಕಾಚಾರ್ಯ ಮುನಿಯನ್ನು ಚಿತ್ರಿಸಲಾಗಿದೆ. ಈ ಮೂರು ಶಿಲ್ಪಗಳನ್ನು ಬೇರ್ಪಡಿಸಲು ಮಧ್ಯಕ್ಕೆ ಕಂಭಗಳನ್ನು ತಂದು ಜಿನನನ್ನು ಗರ್ಭಗೃಹದಲ್ಲಿರುವಂತೆ, ಉಳಿದ ಇರ್ವರನ್ನು ಗರ್ಭಗೃಹದಿಂದ ಹೊರಗೆ ಕುಳಿತಂತೆ ಒಡಮೂಡಿಸಲಾಗಿದೆ. ಈ ಚಿತ್ರಣದ ಮೇಲ್ಭಾಗದಲ್ಲಿ ಬಸದಿಗೆ ಇರುವಂತೆ ಗೋಪುರಗಳನ್ನು ಚಿತ್ರಿಸಲಾಗಿದೆ. ಸುಣಕಲ್ಲಬಿದರೆಯ ಶಿಲ್ಪದಲ್ಲಂತೂ ಕಂಭಗಳನ್ನು ಸ್ಪಷ್ಟವಾಗಿ ತೋರಿಸಲಾಗಿದೆ. ಕಂಭದ ಮೇಲಿನ ಬೋದಿಗೆಗಳೂ ಸ್ಪಷ್ಟವಾಗಿ ಕಂಡರಿಸಲ್ಪಟ್ಟಿವೆ. ಸಲ್ಲೇಖನ ಪ್ರಕ್ರಿಯೆ ಪೂರ್ವಾಪರ ತಿಳಿದ ಶಿಲ್ಪಿಗೆ ಮಾತ್ರ ಈ ರೀತಿಯ ಚಿತ್ರಣ ಕೊಡಲಿಕ್ಕೆ ಸಾಧ್ಯ. ಶಿಲ್ಪಿಯ ಇನ್ನೊಂದು ಸೂಕ್ಷ್ಮಪ್ರಜ್ಞೆ ಇದೇ ಶಿಲ್ಪಗಳಲ್ಲಿ ವ್ಯಕ್ತವಾಗಿದೆ. ವ್ರತಧಾರಿ, ನಿರ್ಯಾಪಕಾಚಾರ್ಯ ಮತ್ತು ಜಿನ ಮೂವರೂ ಸರಿಸಮಾನರು ಎಂಬ ಭಾಗವನ್ನು ಸಾರಲು ಮೂವರಿಗೂ ಸಮಾನ ಪೀಠಗಳನ್ನು ಹಾಕಿದ್ದಾನೆ. ಅಂದರೆ ಸಾವನ್ನು ಆಹ್ವಾನಿಸಿದ ವ್ಯಕ್ತಿ ಮುನಿ ಜಿನನಷ್ಟೇ ಸಮಾನರು ಎಂಬುದು ಶಿಲ್ಪಿಯ ಭಾವ. ಇದೇ ಭಾವವನ್ನು ಬಾಳೇಹಳ್ಳಿಯ ಚಾವೋಜನ ನಿಸಿಧಿ ಶಿಲ್ಪದಲ್ಲಿ ವ್ಯಕ್ತವಾಗಿದೆ.[೨೮೭] ಸಲ್ಲೇಖನ ಸ್ವೀಕಾರದಿಂದ ಮಾತ್ರವೇ ಜಿನ-ಮುನಿಸ್ಥಾನಗಳ ಲಭ್ಯವಾಗಲು ಸಾಧ್ಯವಿಲ್ಲವೆಂದು ವ್ರತಧಾರಿಗೆ ಪೀಠ ಹಾಕದೆಯೇ ಬಿಟ್ಟಿದ್ದಾನೆ. ಹಿರೇಕೋಣತಿಯೊಂದರ ನಿಸಿಧಿ ಶಾಸನ ಶಿಲ್ಪಿ.[೨೮೮] ಶಿಲ್ಪ ಕೆತ್ತಲು ವಿಶಾಲವಾದ ಕಲ್ಲು ದೊರೆಯದಾದಾಗ ಜಿನ ಮಾತ್ರ ಶ್ರೇಷ್ಠ, ವ್ರತಧಾರಿ, ಯಾಪಕಾಚಾರ್ಯ ಮುಖ್ಯವಲ್ಲ ಎಂದು ಹಾವಣಗಿ ಕೇಸವದೇವನ ನಿಸಿಧಿ ಶಿಲ್ಪದಲ್ಲಿ ವ್ಯಕ್ತವಾಗಿದೆ. ಜಿನನ ಸರಿಸಮಾನರು ಯಾರೂ ಅಲ್ಲ ಎಂದು ಆ ಶಿಲ್ಪಕ್ಕಷ್ಟೇ ಪೀಠ ಹಾಕಿದ ಒಂದು ನಿಸಿಧಿ ಶಿಲ್ಪ ಬಾಳೂರಿ (ಹಾನತಾ) ನಲ್ಲಿದೆ.[೨೮೯]

ಸಾವನ್ನು ಆಹ್ವಾನಿಸುವಾಗ ವ್ರತಧಾರಿಯು ಅಂಜಲಿಮುದ್ರಾಭಂಗಿಯಲ್ಲೂ, ನಿರ್ಯಾಪಕಾಚಾರ್ಯ ಅರ್ಧಲೀಲಾಸನದಲ್ಲಿ ಕೂರುವುದು ರೂಢಿ. ಜಿನನನ್ನು ಮಾತ್ರ 'ಪದ್ಮಾಸನ

ಮತ್ತು ಪರ್ಯಂಕಾಸನದಲ್ಲಿ ಚಿತ್ರಿಸಲಾಗಿರುತ್ತದೆ. ಯಳವಟ್ಟಿಯಲ್ಲಿ ನಿಸಿಧಿ ಶಿಲ್ಪಗಳಲ್ಲಿ ಕೇತಯ್ಯ ಮತ್ತು ಸಿವಿರಸೆಟ್ಟಿಯರು ಯೋಗಪಟ್ಟಿಕೆಯನ್ನು ಧರಿಸಿ ಸಾವಿನ ವ್ರತವನ್ನು ಸ್ವೀಕರಿಸುತ್ತಿರುವ ಅಪರೂಪದ ಚಿತ್ರಣ ಕಂಡು ಬರುತ್ತದೆ. ಯೋಗ ಪಟ್ಟಿಕೆ ಜಿನಧರ್ಮಕ್ಕೆ ಹೊಸದೇನಲ್ಲ.

ಯೋಗಪಟ್ಟಿಕೆ ಎಂಬುದೊಂದು ಯೋಗಬಂಧ. ಇದೊಂದು ದೀರ್ಘವಾಗಿ ಆಚರಿಸುವ ಆಸನವಾಗಿದ್ದು ಮನಸ್ಸಿನ ಏಕಾಗ್ರತೆ ಸಾಧಿಸಲು ಸಹಾಯಕವಾಗಿದೆ. ಈ ಯೋಗವು ಎರಡೂ ಕಾಲನ್ನು 'X' ಆಕಾರದಲ್ಲಿ ಇರಿಸಿ ಸಾಧನೆ ಮಾಡಲಾಗುತ್ತದೆ. ಹೀಗೆ ಕುಳಿತಾಗ ಸೊಂಟವು, ಕಾಲುಗಳು ನೋಯದಿರಲಿ ಎಂದು ಅವುಗಳನ್ನು ಬಳಸಿ ಸುತ್ತಾಕಾರದಲ್ಲಿ ಒಂದು ಬಟ್ಟೆಯ ಪಟ್ಟಿಯನ್ನು ಕಟ್ಟಿಕೊಳ್ಳಲಾಗುತ್ತದೆ. ಆದ್ದರಿಂದಲೆ ಇದಕ್ಕೆ ಯೋಗಪಟ್ಟಿಕ್ಕೆ ಎಂದು ಹೆಸರು ರೂಢಿಗೆ ಬಂದಂತೆ ತೋರುತ್ತದೆ. ಪಟ್ಟಿ ಎಂದರೆ ಕಟ್ಟು ಎಂದರ್ಥ. ಜಿನಮುನಿಗಳಿಗೆ ಬಟ್ಟೆ ನಿಷಿದ್ಧ ಇರುವುದರಿಂದ ಅವರು ಬಾಳೇ ದಿಂಡಿನ ಪಟ್ಟಿಯನ್ನು ಉಪಯೋಗಿಸುತ್ತಿದ್ದರೆಂದು ಸಾಂದರ್ಭಿಕವಾಗಿ ಭೇಟಿಯಾದಾಗ ನಾಡೋಜ ಹಂಪನಾರವರು ಮತ್ತು ಸ್ವಸ್ತಿ ಶ್ರೀ ಚಾರುಕೀರ್ತಿಭಟ್ಟಾರಕರು ಹೇಳಿದರು.

ಯೋಗಪಟ್ಟಿಯ ಯೋಗವು ಉಗ್ರವಾದ ತಪೋಭಂಗಿಯಾಗಿದ್ದು ಜೈನ, ಶೈವ, ವೈಷ್ಣವ ಧರ್ಮದ ಮುನಿಗಳು ಅನುಸರಿಸಿದ್ದಾರೆ. ಈ ಕ್ರಮ ದೈವ ಶಿಲ್ಪಗಳಲ್ಲೂ ಕಂಡುಬರುತ್ತವೆ. ದೇವರಾಯನದುರ್ಗದ ಯೋಗನರಸಿಂಹ, ಶೃಂಗೇರಿ ದೇವದಳದ ಸುತ್ತಲಿರುವ ಹಠಯೋಗಿಗಳ ಶಿಲ್ಪ ಹಂಪಿಯ 'ಉಗ್ರ(ಯೋಗ)ನರಸಿಂಹ' ಧಾರವಾಡದ ಪ್ರಾಚ್ಯ ಮತ್ತು ಪುರಾತತ್ವ ಇಲಾಖೆಯಲ್ಲಿ ವಸ್ತು ಸಂಗ್ರಹಾಲಯದಲ್ಲಿರುವ ಯೋಗನರಸಿಂಹ. ಶಬರಿಮಲೈಯಲ್ಲಿರುವ ಅಯ್ಯಪ್ಪ ಯೋಗಪಟ್ಟಿಕೆಯಲ್ಲಿ ಕುಳಿತಿವೆ. ಈ ಕ್ರಮವನ್ನು ಹೆಚ್ಚು ಶೈವಯತಿಗಳು ಬಳಸುತ್ತಿದ್ದರು ಎಂಬ ವಾದಗಳು ಇವೆ. ಈ ಪ್ರಭಾವದಿಂದಲೇ ಸಾಕಷ್ಟು ಬಸದಿಗಳು 'ಯೋಗವಟ್ಟಿಗೆ', 'ಜೋಗವಟ್ಟಿಗೆ'ಯ ಜಿನಾಲಯಗಳಾದವು ಎಂಬ ಅಭಿಪ್ರಾಯಗಳೂ ಇವೆ. ಆಧಾರವಾಗಿ "ಗೊಂಕಜಿನಾಲಯದಾಚಾರ್ಯ್ಯರಪ್ಪ ಪ್ರಭಾಚಂದ್ರ ಪಂಡಿತದೇವರಿಗ್ಗಿಳಿಯ ಜೋಗವಟ್ಟಿಗೆಯ ಸ್ಥಾನಮೆನ್ದು ಜೋಗವಟ್ಟಿಗೆಮನಿಕ್ಕಿದರು ಬಸದಿಯ ಮೇಲೆ ಶೂದ್ರಕನ ಸಿಂಹದ ಚಕ್ರದ ಚಿನ್ನೆಮೆಂಬಿವಂ ತಿಸುಳದ ಘಂಟೆಯಂ ಪಜುನಾಗದೆನಿಪ್ಪವನೇಳುಕೋಟಿ ತಾಪಸರ್ಗ್ಗೆ ಮಹಾವಿರೋಧಿ ಯವನೇಶ್ವರವೈರಿಯೆನುತವಿಕ್ಕಿದಂರ್ಮ್ಮಿಸು[ಗುವೆ] ಜೋಗವಟ್ಟಿಗೆಯನಾ ಮುನಿಸಂಖ್ಯೆಯ ಕೋಟಿತಾಪಸರು"[೨೯೦] ಎಂಬ ವಾಕ್ಕಿನ ತೇರದಾಳದ ಶಾಸನವೊಂದನ್ನು ಕೊಡಬಹುದು. ಆದರೆ ಯೋಗಪಟ್ಟಿಕೆಯನ್ನು ಬಹು ಹಿಂದೆಯೇ ಜೈನಯತಿಗಳು ಬಳಸುತ್ತಿದ್ದರು ಎಂಬುದಕ್ಕೆ ಆಧಾರಗಳಿವೆ. ಶ್ರವಣಬೆಳಗೊಳದ ಮಲ್ಲಿಷೇಣ, ಗೋಪನಂದಿ, ಶುಭಚಂದ್ರ, ದೇವನ ನಿಸಿಧಿಗಳಲ್ಲಿ, ಸಿದ್ಧರಗುಂಡು ಶಿಲ್ಪಗಳಲ್ಲಿ ಯೋಗಪಟ್ಟಿಗೆ ಪ್ರಯೋಗಗೊಂಡಿರುವುದು ಮೇಲಿನ ಹೇಳಿಕೆಗೆ ಸಮಕಾಲೀನವಾದರೆ ಐಹೊಳೆಯ ಶಾಮಯಕ್ಷನ ಶಿಲ್ಪದ ಯೋಗಪಟ್ಟಿಕೆಯ ಪ್ರಾಚೀನ.[೨೯೧]

ಆದ್ದರಿಂದ ಯೋಗಪಟ್ಟಿಕೆಯನ್ನು ಕೇವಲ ಒಂದು ಧರ್ಮದ ಯತಿಗಳು ಬಳಸದೆ ಅದು ಧರ್ಮಾತೀತವಾಗಿತ್ತು. ಪ್ರಸ್ತುತ ಯಳವಟ್ಟಿಯ ಕೇತಯ್ಯ ಮತ್ತು ಸಿವಿರಶೆಟ್ಟಿಯೆಂಬ[೨೯೨] ಶ್ರಾವಕರು ಬಳಸಿದ್ದು ಅಪರೂಪ. ಸಲ್ಲೇಖನದಂತಹ ವ್ರತಬೋಧ್ಯ ವಿಧಾನ ಧೀರ್ಘವಾದ ಕ್ರಿಯೆ ಎಂದೂ ಈ ಯೋಗಪಟ್ಟದಿಂದ ಮನಗಾಣಬೇಕಾಗುತ್ತದೆ.

## ಆ. ಎರಡು ಹಂತಗಳ ನಿಸಿಧಿ ಶಿಲ್ಪ.

ಎರಡು ಹಂತದ ಶಿಲ್ಪಗಳನ್ನು ಹೊಂದಿದ ನಿಸಿಧಿ ಶಿಲ್ಪಗಳು ಹಾವೇರಿ ಪರಿಸರದಲ್ಲಿ ಇದುವರೆಗೂ ಒಟ್ಟು ಳಳ ದೊರೆತಿವೆ. ಇವುಗಳಲ್ಲಿ ಒಂದು ಮುನಿ, ಒಂದು ಕಂತಿಯ, ಉಳಿದವು ಶ್ರಾವಕರ ಶಿಲ್ಪಗಳಾಗಿವೆ. ಸಂಬಂಧಿಸಿದ ಹೆಸರೆ ಹೇಳುವಂತೆ ಇವುಗಳು ಎರಡು ಹಂತದ ಶಿಲ್ಪಗಳಾಗಿದ್ದು. ಶಿಲ್ಪಗಳಲ್ಲಿ ಸಲ್ಲೇಖನದ ಘಟನಾವಳಿಯನ್ನು ವಿಸ್ತಾರವಾಗಿ ವಿನ್ಯಾಸ ಮಾಡುವ ಸ್ವಾತಂತ್ರ್ಯ ದೊರೆಯಿತು. ಒಂದು ಹಂತದಲ್ಲಿ ಈ ಚಿತ್ರಣ ಸಾಧ್ಯವಿಲ್ಲ. ಅಲ್ಲಿ ಬಸದಿಯ ತೀರ್ಥಂಕರ ಮುಂದೆಯೇ ಸಾವನ್ನು ಆಹ್ವಾನಿಸುವ ಪ್ರಕ್ರಿಯೇ ನಡೆಯುತ್ತಿದ್ದ ಮಾದರಿಯನ್ನು ಒಂದೇ ಹಂತದಲ್ಲಿ ಚಿತ್ರಿಸಲಾಗಿದೆ. ಎರಡು ಹಂತದ ಶೈಲಿ ಕೊಂಚ ಭಿನ್ನ. ವ್ರತಧಾರಿಗೆ ಮುನಿಯು ವ್ರತಬೋಧಿಸುವ ಚಿತ್ರಣವೇ ಪ್ರತ್ಯೇಕವಾಗಿದ್ದು, ಜಿನಸನ್ನಿಧಿಯನ್ನು ಮೇಲಿನ ಹಂತದಲ್ಲಿ ಚಿತ್ರಿಸಲಾಗಿದೆ. ಹಾವೇರಿ ಪರಿಸರದಲ್ಲಿ ದೊರೆಯುವ ಎರಡು ಹಂತದ ನಿಸಿಧಿ ಶಿಲ್ಪಗಳು ವೈವಿಧ್ಯತೆಯಿಂದ ಕೂಡಿದ್ದು ಮರಣದ ಪ್ರಕ್ರಿಯೆಯನ್ನು ವೈಭವದಿಂದ ಕೊಂಡಾಡಿವೆ.

## ೦೧. ಮುನಿ ನಿಸಿಧಿ ಶಿಲ್ಪ.

ನೆಗಳೂರಿನಲ್ಲಿ ಮೈಲಾರ ದೇಗುಲದ ಬಳಿಯಿರುವ ನಿಸಿಧಿಯು ಸಕಳಚಂದ್ರ ಮುನಿಯದ್ದು.[೨೯೩] ಇದು ಎರಡು ಹಂತದ ಶಿಲ್ಪ ಹೊಂದಿದ್ದು ವಿಶೇಷವಾಗಿದೆ. ಮೊದಲ ಹಂತದಲ್ಲಿ ಕಮಂಡಲ ಅಂಜಲಿಬದ್ಧ ಮುನಿ, ಕಮಂಡಲ ಹಾಗೂ ಶೃತಪೀಠದ ಮೇಲೆ ಆರಾಧನಾ ಗ್ರಂಥಗಳನ್ನಿಡಲಾಗಿದೆ. ಎರಡನೆಯ ಹಂತ ಜಿನಸನ್ನಿಧಿಯದು. ಮಧ್ಯದಲ್ಲಿ ಮುಕ್ಕೊಡೆ ಸಹಿತ ಜಿನಬಿಂಬ ಅಕ್ಕಪಕ್ಕ ಸಕಳಚಂದ್ರದೇವ ಮತ್ತು ವ್ರತಬೋಧಿಸುವ ನಿರ್ಯಾಪಕಾಚಾರ್ಯರ ಶಿಲ್ಪಗಳಿವೆ. ಇಬ್ಬರೂ ಮುನಿಗಳೇ ಎಂಬುದಕ್ಕೆ ಶಿಲ್ಪಿ ಕಮಂಡಲಗಳು ಮತ್ತು ಮಯೂರಪಿಂಛಿಗಳನ್ನು ಶಿಲ್ಪಿಸಿದ್ದಾನೆ. ಶಾಸನದಲ್ಲಿ ಸಕಳಚಂದ್ರದೇವನಿಗೆ ಅಗಣ್ಯಪುಣ್ಯ, ಸಕಳಸೈಯಮಿ, ಚಾರಿತ್ರಿಕ, ಶ್ರುತವಿದ್ಯಾತಪೋನಿಧಿಗಳು ಎಂಬ ಬಿರುದಾವಳಿ ಹೊಂದಿದ ಮುನಿಯೊಬ್ಬರು ವ್ರತಬೋಧಿಸಿದ್ದಾರೆ. ನಾಮಧೇಯ ತ್ರುಟಿತಗೊಂಡಿದೆ. ಸಲ್ಲೇಖನ ತೆಗೆದುಕೊಳ್ಳುವವರು ಮುನಿಯಾಗಿದ್ದರೂ ವ್ರತವನ್ನು ಬೋಧಿಸಲು ಒಬ್ಬ ಗುರು (ನಿರ್ಯಾಪಕಾಚಾರ್ಯ) ಬೇಕೆ ಬೇಕು ಎಂದು ಶಿಲ್ಪ ಹೇಳುತ್ತದೆ. ಅಂತೆಯೇ ಶಿಲ್ಪದಲ್ಲಿ ನಿರ್ಯಾಪಕಾಚಾರ್ಯ ಒಂದು ಕೈ ಎತ್ತಿ ವ್ರತಬೋಧಿಸುತ್ತಿದ್ದಾನೆ. ಆ ವ್ರತಗಳನ್ನು ಜಿನಸುಮ್ಮುಖದಲ್ಲಿ ಸ್ವೀಕರಿಸುವಂತೆ ಕೈ ಚಾಚಿದಂತೆ ಸಕಲಚಂದ್ರದೇವನನ್ನು ಚಿತ್ರಿಸಲಾಗಿದೆ.

ಬಾಳಂಬೀಡದ ನಿಸಿಧಿಯೊಂದರಲಿ 'ಮಾಧವಚಂದ್ರ ಭಟ್ಟಾರಕದೇವರ ಶಿಷತಿ ಗುಣಮತಿಅವ್ವೆಗಳು ವುದಯವಾದ ಜಾವಕ್ಕೆ ಸಮಾಧಿ ವಿಧಿಯಂ ಮುಡಿಪಿ ಸ್ವರ್ಗ್ಗಪ್ರಾಪ್ತರಾದರು'[೨೯೪] ಎಂಬ ಒಕ್ಕಣೆಯಿಂದ ಗುಣಮತಿ ಅವ್ವೆ ಕಂತಿಯಾಗಿದ್ದಳು ಎಂಬಂಶ ಸುಲಭ ಗ್ರಹಿಕೆ. ಮೇಲಾಗಿ 'ಗಳು' ಎಂಬ ಬಹುವಚನ ಪ್ರತ್ಯಯ ಗುರುಹಿರಿಯರಿಗೆ ಬಳಸುವುದರಿಂದ ನಿಸ್ಸಂದೇಹವಾಗಿ ಗುಣಮತಿ ಅವ್ವೆ ಒಬ್ಬ ಕಂತಿಯಾಗಿದ್ದಳು. ಈ ಕಂತಿಯ ನಿಸಿಧಿ ಶಿಲ್ಪ ಎರಡು ಹಂತದ್ದಾಗಿದ್ದು ಮೊದಲು ಮಾಧವಚಂದ್ರರಿಂದ ಕಂತಿ ವ್ರತ ಸ್ವೀಕರಿಸುತ್ತಿದ್ದಾಳೆ. ಇದನ್ನು ಶೃತಪಡಿಸಲು ಶಿಲ್ಪಿ ಮಧ್ಯದಲ್ಲಿ ಆರಾಧನ ಗ್ರಂಥಗಳನ್ನು ಹೊತ್ತಿರುವ ಶೃತಪೀಠವನ್ನು ತಂದಿದ್ದಾನೆ. ಮೇಲಿನ ಹಂತದಲಿ ಕಂತಿ–ಜಿನ, ಮುನಿಗಳ ಶಿಲ್ಪವಿದ್ದು, ಕಂತಿ ನಿರ್ಯಾಪಕಾಚಾರ್ಯರಿಂದ ಪಡೆದ ವ್ರತಗಳನ್ನು ಅನಿಷ್ಠಾನಿಸಿಕೊಳ್ಳುತ್ತಿದ್ದಾಳೆ. ಇದೊಂದು ಸಾಧಾರಣ ಶಿಲ್ಪವಾಗಿದ್ದರೂ ಸಲ್ಲೇಖನ ವ್ರತದ ಅನುಷ್ಠಾನದ ಚಿತ್ರಣವನ್ನು ಸೊಗಸಾಗಿ ನಿರೂಪಿಸಿದೆ.

## ೦೨. ಶ್ರಾವಕರ ನಿಸಿಧಿ ಶಿಲ್ಪ.

ಎರಡು ಹಂತದ ಶ್ರಾವಕರ ನಿಸಿಧಿ ಶಿಲ್ಪಗಳು ಒಟ್ಟು ೪೨ ಇದ್ದು ವೈಶಿಷ್ಟ್ಯದಿಂದ ಕೂಡಿವೆ. ಶಿಲ್ಪಿಗಳು ಸಾಂದರ್ಭಿಕ ಸನ್ನಿವೇಶವನ್ನು ಚಿತ್ರಿಸುವಲ್ಲಿ ಹೆಚ್ಚು ಆಸಕ್ತಿ ತೋರಿದ್ದಾರೆ. ಅಂತೆಯೇ ಶಿಲ್ಪಗಳಲ್ಲಿ ವಿವಿಧ ರೀತಿಯ ವಿನ್ಯಾಸಗಳು ಚಿತ್ರಿತವಾಗಿವೆ. ಒಂದನೇ ಹಂತದಲ್ಲಿ ವ್ರತಧಾರಿ ನಿರ್ಯಾಪಕಾಚಾರ್ಯರಿಂದ ವ್ರತಸ್ವೀಕರಿಸುವ ಚಿತ್ರಣ ಇದೆ. ಜೊತೆಗೆ ಚೌಕಾಕಾರದ ಎರಡು ಕೋಲುಗಳನ್ನು 'X' (ಶೃತಪೀಠ) ಆಕಾರದಲ್ಲಿ ಇಟ್ಟಂತೆ ಸೃಷ್ಟಿಸಿ ಅವುಗಳ ಮೇಲೆ ಆರಾಧನ ಗ್ರಂಥಗಳನ್ನು ಇಡಲಾಗಿದೆ. ಕೆಲವೊಂದು ಕಡೆ ಕಮಂಡವೂ ಇದೆ.

ಇನ್ನು ಎರಡನೆಯ ಹಂತದಲ್ಲಿ ಜಿನಸನ್ನಿಧಿನ್ನು ಮಾತ್ರ ಚಿತ್ರಿಸಲಾಗಿದೆ. ಮುಕ್ಕೊಡೆ, ಹಿಡಿಕೆಯುಕ್ತ ಚೌರಿ ಮತ್ತು ಕೆಲವೊಂದು ಶಿಲ್ಪಗಳಲ್ಲಿ ಸೂರ್ಯ, ಚಂದ್ರರ ಶಿಲ್ಪಗಳನ್ನು ಚಿತ್ರಿಸಲಾಗಿದೆ. ಈ ರೀತಿ ಚಿತ್ರಣ ಗರ್ಭಗೃಹ ಮತ್ತು ನವರಂಗ ಬೇರ್ಪಡಿಸುವುದಾಗಿದ್ದು, ಜಿನನನ್ನು ಪ್ರತ್ಯೇಕವಾಗಿಯೇ ತೋರಿಸಲಾಗಿದೆ. ಇಂಥಹ ಮಾದರಿಯ ಶಿಲ್ಪಗಳು ವೀರಾಪುರ (ಹಾನತಾ) ದಲ್ಲಿ ಎರಡು, ಬಾಳೂರಲ್ಲಿ (ಹಾನತಾ) ನಾಲ್ಕು, ಮೋಟೇಬೆನ್ನೂರಲ್ಲಿ (ಬ್ಯಾತಾ) ನಾಲ್ಕು, ಕಡಕೋಳ (ಸತಾ)ದಲ್ಲಿ ಒಂದು, ಕನವಳ್ಳಿ (ಹಾತಾ) ಯಲ್ಲಿ ಒಂದು, ಕಬನೂರಲ್ಲಿ (ಶಿತಾ) ಒಂದು ಇಚ್ಚಂಗಿಯಲ್ಲಿ(ಹಾತಾ) ಒಂದು ಒಟ್ಟು ೧೪ ಶಿಲ್ಪಗಳು ಕಂಡುಬರುತ್ತವೆ. ಇವುಗಳಲ್ಲಿ ವೀರಾಪುರದ ಒಂದು ಶಿಲ್ಪ ಮನೋಹರವಾಗಿದ್ದು ಚಲನಶೀಲತೆಯಿಂದ ಕೂಡಿದೆ.[೨೯೫] ವ್ರತವನ್ನು ಸ್ವೀಕರಿಸುವ ಮತ್ತು ಕೊಡುವ ಪ್ರಕ್ರಿಯೆ ಕಣ್ಣು ಮುಂದೆ ನಡೆಯುತ್ತಿದೆ ಎಂಬಂತೆ ಚಿತ್ರಿಸಿರುವುದು ಶಿಲ್ಪಿಯ ನೈಪುಣ್ಯತೆ. ವ್ರತಧಾರಿ ಚಿಕ್ಕಚಂದಪ್ಪನು 'ಯೋಗಪಟ್ಟಿಕೆ'ಯನ್ನು ಹಾಕಿಕೊಂಡು ಅರ್ಧಾಸನದಲ್ಲಿ ಕುಳಿತು ಕೈ ಮುಗಿದು ನಿರ್ಯಾಪಾಕಾಚಾರ್ಯನಿಂದ ವ್ರತ ಸ್ವೀಕರಿಸುತ್ತಿದ್ದಾನೆ. ಮಧ್ಯದಲ್ಲಿ ಶೃತಪೀಠದ ಮೇಲೆ ಮೂರು ಆರಾಧನಾ ಗ್ರಂಥಗಳಿದ್ದು, ಬಲಗಡೆ ಅರ್ಧಾಸನದಲ್ಲಿ ಕುಳಿತ

ನಿರ್ಯಾಪಕಾಚಾರ್ಯ ಒಂದು ಕೈ ಎತ್ತಿ ವ್ರತ ಬೋಧಿಸುತ್ತಿದ್ದಾನೆ. ಇವನ ಹಿಂದೆ ಇನ್ನೊಬ್ಬ ಮುನಿ ಅರ್ಧಾಸನದಲ್ಲಿ ಕುಳಿತು 'ತಲೆಬಾಗಿಸಿ' ಈ ಎಲ್ಲ ಪ್ರಕ್ರಿಯೆಯನ್ನು ಗಮನಿಸುತ್ತಿದ್ದಾನೆ. ಈ ಒಂದು ಶಿಲ್ಪದಿಂದಲೇ ಶಿಲ್ಪಿಯು ಸಲ್ಲೇಖನ ಪ್ರಕ್ರಿಯೆಯನ್ನು ಗಮನಿಸಿದ್ದಾನೆ ಎನ್ನಲು ಸಾಧ್ಯ. ಇಲ್ಲಿ ಎಲ್ಲರಿಗೂ ಸಮಾನಪೀಠಗಳಿದ್ದು ಜಿನನನ್ನು ಬಸದಿಯ ಗರ್ಭಾಗೃಹದಲ್ಲಿ ಇರುವಂತೆ ಚಿತ್ರಿಸಲಾಗಿದೆ ಇದೊಂದು, ಶ್ರೇಷ್ಠ ಮಾದರಿಯ ನಿಸಿಧಿ ಶಿಲ್ಪ.

ಮಾಕನೂರು (ರಾತಾ), ಹಿರೇಅಣಜಿ (ಬ್ಯಾತಾ), ಕಡಕೋಳ (ಸತಾ), ಬಾಳಂಬೀಡ (ಹಾನತಾ) ಒಂದೊಂದು ನಿಸಿಧಿಗಳಲ್ಲಿ ವ್ರತವನ್ನು ಸ್ವೀಕರಿಸುವ ಮತ್ತು ಅದನ್ನು ಜಿನನ ಮುಂದೆ ಅನುಷ್ಠಾನಿಸುವ ಶಿಲ್ಪಗಳಿವೆ. ಇವುಗಳಲ್ಲಿ ಕಡಕೋಳದ ನಿಸಿಧಿ ಶಿಲ್ಪವು ಒಂದು ಮುಖದಲ್ಲಿ ಉಬ್ಬುಗೆತ್ತನೆ ಹೊಂದಿದ್ದು ಮೂರುಕಡೆ ಇದೇ ಮಾದರಿಯ ಗೀರು ಶಿಲ್ಪಗಳ್ನನು ಹೊಂದಿದೆ. ಜಿನ ಸನ್ನಿಧಿಯ ಹಂತದಲ್ಲಿ ಚಾಮರಗಳನ್ನಷ್ಟೇ ಸೂಚಿಸುತ್ತಿದ್ದು, ಚಾಮರ ಸಹಿತ ಸ್ತ್ರೀಯರನ್ನು ಚಿತ್ರಿಸಿರುವುದು ಕಡಕೋಳ (ಸತಾ) ಎರಡು ನಿಸಿಧಿಗಳಲ್ಲಿ ಹೊನ್ನತ್ತಿಯ (ರಾತಾ)ನಿಸಿಧಿ ಶಿಲ್ಪದಲ್ಲಿ ಕಂಡುಬರುತ್ತವೆ. ಕಡಕೋಳದ ಸೊರೆಯನ ನಿಸಿಧಿಯಲ್ಲಿ[೨೯೬] ಚಾಮರಧಾರಣಿಯರು ಅಲಂಕಾರ ಭೂಷಿತೆಯರಾಗಿ ಸೊಂಟವನ್ನು ತುಸು ಬಾಗಿಸಿ ಜಿನನಿಗೆ ಗಾಳಿ ಬಿಸುತ್ತಿದ್ದರೆ, ಹೊನ್ನತ್ತಿಯ ಶಿಲ್ಪದಲ್ಲಿ ಜಿನನಿಗೆ ಎತ್ತರದ ಪೀಠ ಹಾಕಲಾಗಿದೆ. ಈ ತರಹದ ಶಿಲ್ಪ ಆಡೂರ (ಹಾನತಾ)ಲ್ಲಿ ಒಂದಿದ್ದು ಜಿನಸನ್ನಿಧಿಯಲ್ಲಿ ವ್ರತಧಾರಿ ಬಂಕಾಪುರದ ಹಡವಳ ಚಟ್ಟಿಯ್ಯನ ಹೆಂಡತಿ ಭಾಗವ್ವೆಯನ್ನು ಶಿಲ್ಪಿಸಲಾಗಿವೆ.[೨೯೭] ವ್ರತಧಾರಿ ಸ್ವರ್ಗ ಸೇರಿದಳು ಎನ್ನುವ ಕಲ್ಪನೆ ಇದು. ಈ ಶಿಲ್ಪದಲ್ಲಿ ಶಿಲ್ಪಿಯ ನಯನಾಜೂಕು ವ್ಯಕ್ತವಾಗದಿದ್ದರೂ ಶಿಲ್ಪಗಳು ಮಾತ್ರ ದುಂಡುಶಿಲ್ಪದ ಆಕೃತಿಯನ್ನು ಹೋಲುತ್ತವೆ. ಮುನಿಯ ಕಮಂಡಲವಂತೂ ನೈಜ್ಯ ಎಂಬಂತೆ ತೋರುತ್ತವೆ. ಬಹುಶಃ ಬಳಪದ ಕಲ್ಲಿನ ಉಪಯೋಗ ಈ ರೀತಿಯ ಶಿಲ್ಪ ಒಡಮೂಡಲಿಕ್ಕೆ ಸಾಧ್ಯ.

ಬಾಳೂರು (ಹಾನತಾ) ಅಪ್ರಕಟಿತ ಚಾಕ್ಕಿಗೌಡಿ ನಿಸಿಧಿ ಶಿಲ್ಪದಲ್ಲಿ ಸಲ್ಲೇಖನ ವ್ರತ ಸ್ವೀಕರಿಸಲು ಇರ್ವರು ಚಾಮರಧಾರಿಣಿಯರನ್ನು ಬಳಸಿ ಅವರ ಹೆಗಲ ಮೇಲೆ ಕೈ ಹಾಕಿಕೊಂಡು ಬಸದಿಗೆ ಬರುತ್ತಿದ್ದಾಳೆ.[೨೯೮] ಈ ಮೂವರ ಕಾಲುಗಳನ್ನು ನೆಗೆಯುವ ರೀತಿಯಲ್ಲಿ ಚಿತ್ರಿಸಿದ್ದರಿಂದ ಸ್ವರ್ಗಕ್ಕೆ ಹೋಗುವ ಕಲ್ಪನೆಯೂ ಇದಾಗಿರಬಹುದು. ಸಮಕಾಲೀನ ವೀರಗಲ್ಲುಗಳ ಪ್ರಭಾವ ಇದು. ಇದೇ ರೀತಿಯ ಚಿತ್ರಣ ಆಡೂರ 'ಕನಕಿಗಾವಂಡಿ'ಯ ನಿಸಿಧಿಯಲ್ಲಿದೆ.[೨೯೯] ಕ್ರಿ.ಶ. ೧೨೯೩ರ ಒಂದು ಆಡೂರು ನಿಸಿಧಿ ವ್ರತಧಾರಿಯಾದ ಯಾಧವೆಯನ್ನು ಅಲಂಕರಣದಿಂದ ಚಿತ್ರಿಸಿದೆ. ತೋಳುಬಂಧಿ, ಮಣಿಹಾರ, ತುರುಬುಗಂಟು, ಉಬ್ಬಿದ ಎದೆ, ಚೌಕಾಕಾರದ ಶೃತಪೀಠವನ್ನು ಇಲ್ಲಿ ಕಾಣಬಹುದು. ಇದೇ ಊರ ನಾಳಪ್ರಭುಗಳಾದ ಬಲ್ಲಗವುಡ ಮತ್ತು ಅವನ ಮೊಮ್ಮಗ ವಿಕ್ರಮಗಾವುಡರುಗಳ ನಿಸಿಧಿಶಿಲ್ಪ[೩೦೦] ಕಲಾತ್ಮಕವಾಗಿದ್ದು ಇವರಿಬ್ಬರೂ ಗಾವುಂಡರು ಆಡಳಿತಾಧಿಕಾರಿಗಳಾಗಿದ್ದರು ಎಂಬುದಕ್ಕೆ ಸೊಂಟದಲ್ಲಿ ಕತ್ತಿಯನ್ನು ತೋರಿಸಲಾಗಿದೆ. ಮೊದಲ ಹಂತದಲ್ಲಿ ಇರ್ವರು ಗಾಮುಂಡರುಗಳು

ಸೊಂಟದ ಕತ್ತಿ ಸಮೇತ ಅಂಜಲಿಬದ್ಧರಾಗಿ ನಿರ್ಯಾಪಾಕಾಚಾರ್ಯನಿಂದ ಸಾವಿನ ವ್ರತ ತೆಗೆದುಕೊಳ್ಳುತ್ತಿದ್ದಾರೆ. ನಿರ್ಯಾಪಾಕಾಚಾರ್ಯ ಮಯೂರಪಿಂಛಿ, ಕಮಂಡಲದೊಂದಿಗೆ ಕೈ ಎತ್ತಿ ವ್ರತಬೋಧಿಸುತ್ತಿದ್ದಾನೆ. ಎಲ್ಲಾ ಶಿಲ್ಪಗಳು ಅರ್ಧಾಸನದಲ್ಲಿವೆ. ಎರಡನೆ ಹಂತದಲ್ಲಿ ರಾಜಪೋಷಾಕಿನೊಂದಿಗೆ ಇರ್ವರು ಗಾವುಂಡರು ಕೈಮುಗಿದು ಜಿನಸನ್ನಿಧಿಯಲ್ಲಿ ಕುಳಿತಿದ್ದಾರೆ. ಜಿನ ಸಾಂಪ್ರದಾಯದಂತೆ ಪದ್ಮಾಸನ ಅಥವಾ ಪರ್ಯಂಕಾಸನದಲ್ಲಿರದೆ ಖಡ್ಗಾಸನದಲ್ಲಿದ್ದಾನೆ. ಪಕ್ಕದಲ್ಲಿ ಕರುವಿಗೆ ಹಾಲೂಡುತ್ತಿರುವ ಹಸುವಿದೆ. ಮುಕ್ಕೊಡೆ ಮತ್ತು ಸೂರ್ಯ ಚಂದ್ರರ ಶಿಲ್ಪಗಳು ಇಲ್ಲಿವೆ. ಕರುವಿಗೆ ಹಾಲುಡುತ್ತಿರುವುದು ದಾನಶಿಲ್ಪದ ಪ್ರಭಾವ. ಖಡ್ಗಾಸನಸ್ಥ ತೀರ್ಥಂಕರ ಈ ಊರ ಬಸದಿಯ ಮೂಲನಾಯಕ ಇರಬೇಕು. ಇಲ್ಲಿ ಶಂಭವನಾಥ ತೀರ್ಥಂಕರರ ಜಿನಾಲಯವಿದ್ದುದಾಗಿ ಸಂಗೂರು ಶಾಸನವೊಂದು ತಿಳಿಸುತ್ತದೆ.[೩೦೧] ಅಂತೆಯೇ ಇಲ್ಲಿರುವ ತೀರ್ಥಂಕರ ಶಂಭವನಾಥನಾಗಿದ್ದಾನೆ. ಹಾವೇರಿ ಪರಿಸರದ ನಿಸಿಧಿಗಳಲ್ಲಿ ಇದೊಂದೇ ಶಿಲ್ಪ ಖಡ್ಗಾಸನದಲ್ಲಿ ಕಂಡುಬರುತ್ತದೆ.

ಯಳವಟ್ಟಿ ಮತ್ತು ಹಿರೇಕಣಗಿ(ಹಾನತಾ) ವ್ರತಧಾರಿ ಸ್ತ್ರೀಯರಿರ್ವರನ್ನೂ ಟೊಂಕಪಟ್ಟಿ, ಕಂಠಾಭರಣ, ಬಳೆ, ಕೊರಳಹಾರ, ದೊಡ್ಡತುರುಬುಗಳಿಂದ ಅಲಂಕರಣಗೊಳಿಸಲಾಗಿದೆ. ಎರಡೂ ಶಿಲ್ಪಗಳಲ್ಲಿ ಹೂಗಳನ್ನು ಅಲಂಕರಿಸಿದ ಶೃತಪೀಠಗಳಿವೆ. ಪೂರ್ಣಕುಂಬ ತಂದಿರುವುದು ಶುಭ ಸಂಕೇತ. ಜಿನಸನ್ನಿಧಿಯಲ್ಲಿ ಚಾಮರಧಾರಿಣಿಯರ ಸಹಿತ ಜಿನ, ನಿರ್ಯಾಪಾಕಾಚಾರ್ಯ, ವ್ರತಧಾರಿಣಿಯರು ಕುಳಿತಿದ್ದಾರೆ. ಇದರ ಮೇಲ್ಭಾಗದಲ್ಲಿ ಬಸದಿಗೆ ಇರುವಂತೆ ಶಿಖರವನ್ನು ಚಿತ್ರಿಸಿ ಸ್ತೂಪಿಗಳನ್ನು ನಿರ್ಮಿಸಲಾಗಿವೆ. ಸ್ತ್ರೀಯರ ಉಡುಪನ್ನು ಲಂಬ ಅಡ್ಡಗೆರೆಗಳನ್ನು ಎಳೆಯುವದರ ಮೂಲಕ ಒಡಮೂಡಿಸಿದ್ದಾನೆ ಶಿಲ್ಪಿ. ಜಿನ ಹಾಗೂ ಮುನಿಗೆ ಉಷ್ಣೀಷಗಳನ್ನು ಚಿತ್ರಿಸಿರುವುದು ಶಿಲ್ಪದ ಕಲಾ ಸೌಂದರ್ಯವನ್ನು ಹೆಚ್ಚಿಸಿದೆ.

ಸಮಕಾಲೀನ ವೀರಗಲ್ಲುಗಳ ಶಿಲ್ಪದ ಪ್ರಭಾವ ನಿಸಿಧಿ ಶಿಲ್ಪಗಳ ಮೇಲೆ ಆಗದಿರಲಿಲ್ಲ. ತುರುಕಾಳಗದಲ್ಲಿ, ಸಿಡಿತಲೆ, ಯುದ್ಧದಲ್ಲಿ ಮಡಿದ ವೀರರನ್ನು ಸ್ವರ್ಗಕ್ಕೆ ಕರೆದೊಯ್ಯುವ ಚಿತ್ರಣ ೧೧–೧೨ನೆಯ ಶತಮಾನದ ವೀರಗಲ್ಲುಗಳಲ್ಲಿ ಸಹಜವಾಗಿ ಕಂಡುಬರುತ್ತವೆ. ಇದರಲ್ಲಿ ಎರಡು ವಿಧ ೧. ವೀರರನ್ನು (ವಿಮಾನ) ತೋಳುಗಳಿಂದ ಬಳಸಿದ ಅಪ್ಸರೆಯರು ಸ್ವರ್ಗಕ್ಕೆ ನೆಗೆಯುವ ಚಿತ್ರಣ. ೨. ವೀರನನ್ನು ಮಂಟಪದಲ್ಲಿ ಕುಳ್ಳಿರಿಸಿ ಅದನ್ನು ಹಿಡಿದ ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುವ ಚಿತ್ರಣ. ಎರಡನೆಯ ಬಗೆಯನ್ನು ನಿಸಿಧಿಗಳ ಶಿಲ್ಪಗಳಲ್ಲಿ ಬಳಸಿಕೊಳ್ಳಲಾಗಿದೆ. ಸಾಮಾನ್ಯವಾಗಿ ವೀರಗಲ್ಲು, ಮಹಾಸತಿಕಲ್ಲು, ನಿಸಿಧಿಗಲ್ಲುಗಳನ್ನು ಮಾಡುವವರು ವೃತ್ತಿನಿರತ ಶಿಲ್ಪಿಗಳು. ಅಂತೆಯೇ ವೀರಗಲ್ಲಿನ ಚಿತ್ರಣವನ್ನು ನಿಸಿಧಿಗಲ್ಲುಗಳ ಶಿಲ್ಪದಲ್ಲಿ ತಂದಿರಲಿಕ್ಕೆ ಸಾಕು. ಚಂದತೆಯ ದೃಷ್ಟಿಯಿಂದ ಕಲೆಯ ಶಿಲ್ಪಿಗಳು ಇಲ್ಲಿ ಪಲ್ಲಟಗೊಳಿಸಿದ್ದಾರೆ. ಹಿರೇಅಣಜಿ (ಬ್ಯಾತಾ)ಯ ಒಂದು ಮತ್ತು ಹಿರೇಕೋಣತಿ (ಹಿತಾ)ಯ ಮೂರು ನಿಸಿಧಿ ಶಿಲ್ಪಗಳಲ್ಲಿ ವ್ರತಧಾರಿ ಸ್ತ್ರೀಯರನ್ನು ಸ್ವರ್ಗಕ್ಕೆ

ಕರೆದೊಯ್ಯುವ ಮಂಟಪವನ್ನು ಬಳಸಲಾಗಿದೆ. ಶಿಲ್ಪಿಗಳಿಗೆ ಆಯಾ ಧರ್ಮದ ಸೂಕ್ಷ್ಮತೆಗಳು ಅರಿವಿದ್ದವು. ಅಂತೆಯೇ ಅವರು ನಿಸಿಧಿಗಳಲ್ಲಿ ಶಿಲ್ಪಗಳನ್ನು ಚಿತ್ರಿಸಿದ್ದ ಬಗೆ ವಿಭಿನ್ನ. ಮಂಟಪ (ವಿಮಾನ)ವನ್ನು ಹೊತ್ತೊಯ್ಯುವ ಅಪ್ಸರೆಯರು ಇಲ್ಲಿಲ್ಲ. ಬದಲಾಗಿ ಚಾಮರಧಾರಿ ಸ್ತ್ರೀಯರನ್ನು ತರಲಾಗಿದೆ. ಅಪ್ಸರೆಯರು ಮೋಹ ಭಾವದ ಪ್ರತೀಕವಾದರೆ, ಚಾಮರಧಾರಿಣಿಯರು ಸೇವಾಭಾವದ ಪ್ರತೀಕ. ಮಲ್ಲೂರು, ದೇವಗಿರಿ, ಶ್ರವಣಬೆಳಗೊಳದ ಅನೇಕ ಬಸದಿಯಲ್ಲಿರುವ ತೀರ್ಥಂಕರರ ಇಕ್ಕೆಲಗಳಲ್ಲಿ ಇವರ ಶಿಲ್ಪಗಳು ಒಡಮೂಡಿಸಿದ್ದು ಸೇವಾಪ್ರತೀಕದ ಸಂಕೇತವಾಗಿಯೇ ಎಂಬುವುದನ್ನು ಮನಗಾಣಬೇಕು.

ಮೇಲೆ ಹೇಳಿದ ನಾಲ್ಕು ಸ್ತ್ರೀ ನಿಸಿಧಿಗಳು ಒಂದೇ ಶಿಲ್ಪ ಮಾದರಿಯನ್ನು ಹೊಂದಿದ್ದು ಮೊದಲ ಹಂತದಲ್ಲಿ ವಿಮಾನದಲ್ಲಿ ಪ್ರಾಣತ್ಯಾಗ ಮಾಡಿದ ವ್ರತಧಾರಿ ಸ್ತ್ರೀಯರನ್ನು ಕುಳ್ಳಿರಿಸಿ, ಇಕ್ಕೆಲಗಳಲ್ಲಿ ಒಕ್ಕೈಯಿಂದ ವಿಮಾನ ಹಿಡಿದು ಇನ್ನೊಂದು ಕೈಯಲ್ಲಿ ಚಾಮರವನ್ನು ಹಿಡಿದ ಅಲಂಕೃತ ಚಾಮರಧಾರಿಣಿಯರು ನಭಕ್ಕೆ ನೆಗೆಯುತ್ತಿದ್ದಾರೆ. ಇನ್ನೂ ಎರಡನೆಯ ಹಂತದಲ್ಲಿ ಜಿನಸನ್ನಿಧಿಯು ಇದ್ದು ಮುಕ್ಕೊಡೆ ಚಾಮರ ಸಹಿತ ಅಸೀನನಾದ ಜಿನನ ಬಲಬದಿಯಲ್ಲಿ ವ್ರತಧಾರಿ ಸ್ತ್ರೀಯರಲ್ಲಿ ಕೈಮುಗಿದು ಕುಳಿತ ರೀತಿಯಲ್ಲಿ ಚಿತ್ರಿಸಲಾಗಿದೆ. ಎಡಬದಿಯಲ್ಲಿ ಅರ್ಧಾಸನಧಾರಿ ಕೈ ಎತ್ತಿ ವ್ರತಬೋಧಿಸುವಂತೆ ಮುನಿಯನ್ನು ಚಿತ್ರಿಸಲಾಗಿದೆ. ಈ ಕ್ರಮ ಬಸದಿಯ ಚಿತ್ರಣವಾಗಿದ್ದು ಶಿಲ್ಪಿ ಜಿನಸನ್ನಿಧಿಯನ್ನು ತೋರಿಸಿದ್ದಾನೆ. ಯಾಕೆಂದರೆ ಮುನಿ ವ್ರತವನ್ನು ಬೋಧಿಸುವವನೇ ಹೊರತು ಸ್ವತಃ ಸಾವನ್ನು ಆಹ್ವಾನಿಸುವುದಿಲ್ಲ. ಸ್ವರ್ಗದ ಕಲ್ಪನೆ ಜಿನಸನ್ನಿಧಿಯ ಕಲ್ಪನೆ ಭೂಮಿಯ ಊರ್ಧ್ವದಲ್ಲಿರುತ್ತದೆ. ಹೊರತು ಭೂಮಿಯ ಮೇಲೆ ಅಲ್ಲ. ಶಿಲ್ಪಿಯ ಅಪರಿಪೂರ್ಣ ಜ್ಞಾನ ಅಥವಾ ಸಮಕಾಲಿನ ವೀರುಗಲ್ಲುಗಳ ಪ್ರಭಾವ ಇಲ್ಲಾಗಿದೆ.

ಹಿರೇಕೋಣತಿ (ಹಿತಾ) ವಿಮಾನದ ಒಂದು ಶಿಲ್ಪದಲ್ಲಿ ವಿಮಾನದ ಕಂಭಗಳು ಸೊಗಸಾಗಿವೆ. ಗೀರು ಆಕೃತಿಯಿಂದ ಹೂಗಳನ್ನು ಸ್ತೂಪಿಗಳನ್ನು ಚಿತ್ರಿಸಲಾಗಿದೆ. ಇದರ ಅಕ್ಕಪಕ್ಕ ನಿಂತ ಚಾಮರಧಾರಿಗಳು ಅಲಂಕೃತಗೊಂಡು ಕಿರೀಟ, ಓಲೆ, ಕೊರಳಹಾರ, ಒಡ್ಯಾಣ, ಕಾಲ್ಗಡಗ ಹಾಕಿದ್ದಾರೆ. ಇದೇ ಊರಿನಲ್ಲಿರುವ ಇನ್ನೆರಡು ನಿಸಿಧಿ ಶಿಲ್ಪಗಳಲ್ಲೂ ಇದೇ ರೀತಿಯ ಚಿತ್ರವಿದೆ. ಹಿರೇಅಣಜಿ(ಬ್ಯಾತಾ) ನಿಸಿಧಿಯಲ್ಲಿ ಚಾಮರಧಾರಿಣಿಯರು ವಿಮಾನವನ್ನು ಒಂದು ಕೈಯಲ್ಲಿ ಹಿಡಿದು ಒಂದು ಕಾಲಲ್ಲಿ ಮೆಟ್ಟಿ ನಿಂತಿದ್ದಾರೆ. ಹೀಗೆ ಕಾಲು ಮೆಟ್ಟಿದ ಚಿತ್ರಣವು ವಿಮಾನವು ಸ್ವರ್ಗಕ್ಕೆ ಹಾರುತ್ತಿವೆ ಎಂದರ್ಥ. ಶಿಲ್ಪಿಯ ಬುದ್ಧಿವಂತಿಕೆಯನ್ನಿಲ್ಲಿ ಮೆಚ್ಚಲೇಬೇಕು.

ಬಸದಿಯ ತೀರ್ಥಂಕರನ ಸನ್ನಿಧಿ ಮತ್ತು ಸ್ವರ್ಗದ ಜಿನಸನ್ನಿಧಿಯ ಚಿತ್ರಣವನ್ನು ಯಳವಟ್ಟಿ (ಹಾನತಾ) ಕಲ್ಲಇ ನಿಸಿಧಿ ಶಿಲ್ಪದಲ್ಲಿ ತರಲಾಗಿದೆ.[೩೦೨] ಮೊದಲ ಹಂತದಲ್ಲಿ ಸಾಮಾನ್ಯವಾಗಿ ಎಲ್ಲ ನಿಸಿಧಿ ಶಿಲ್ಪಗಳಲ್ಲಿರುವಂತೆ ಮುನಿ ವ್ರತಧಾರಿಗೆ ಸಾವಿನ ವ್ರತವನ್ನು ತೋರಿಸುತ್ತಿದ್ದಾನೆ. ಮುನಿಯ

ಕೈಯಲ್ಲಿ ಆರಾಧನಾ ಗ್ರಂಥ (ಓಲೆ) ಇರುವುದು ವಿಶೇಷ. ಮುನಿಯ ತೊಡೆಗಳ ಭಾಗಕ್ಕೆ ನಗ್ನತೆ ಕಾಣದಂತೆ ಪಿಂಛಿಯನ್ನು ಚಿತ್ರಿಸಿರುವುದು ಶಿಲ್ಪಿಯ ಜಾಣ್ಮೆ, ಉಳಿದಂತೆ ತೀರ್ಥಂಕರನ ಇಕ್ಕೆಲಗಳಲ್ಲಿ ಚಾಮರಗಳಿವೆ. ಇದೇ ರೀತಿಯ ಚಿತ್ರಣವೂ ಎರಡನೆಯ ಹಂತದಲ್ಲಿದ್ದು ಶೃತಪೀಠ, ಮುಕ್ಕೊಡೆಗಳನ್ನು ಇಲ್ಲಿ ಮಾತ್ರ ಚಿತ್ರಿಸಲಾಗಿದೆ. ಸೂರ್ಯ-ಚಂದ್ರರ ಶಿಲ್ಪಗಳೂ ಇಲ್ಲಿವೆ.

ಇಲ್ಲಿರುವ ಎರಡೂ ಹಂತದ ಶಿಲ್ಪಪಟ್ಟಿಕೆಗಳು ನೋಡಲು ಒಂದೇ ತೆರನಾಗಿದ್ದರೂ ಅವು ವಿಭಿನ್ನ ಅರ್ಥ ಸೂಚಿಸುತ್ತವೆ. ಒಂದು ಇಹಲೋಕ; ಇನ್ನೊಂದು ಪರಲೋಕ. ಒಂದು ತೀರ್ಥಂಕರನ ಸನ್ನಿಧಿ ಮತ್ತೊಂದು ಜಿನಸನ್ನಿಧಿ, ತೀರ್ಥಂಕರನಿಗಿಂತಲೂ ಜಿನನ ಸ್ಥಾನ ಔನತ್ಯದ್ದು. ತೀರ್ಥಂಕರನ ನಂತರದ ಹಂತವೇ ಜಿನರೂಪ. ತೀರ್ಥಂಕರರನ್ನು ಬಸದಿಯಲ್ಲಿರುವಂತೆ ಚಿತ್ರಿಸಿದರೆ; ಜಿನ ಊರ್ಧ್ವದಲ್ಲಿದ್ದಂತೆ ಕಲ್ಪಿಸಲಾಗಿದೆ. ಅಂತೆಯೇ ಇಲ್ಲಿರುವ ಎರಡೂ ಶಿಲ್ಪ ಪಟ್ಟಿಗಳಲ್ಲಿ ಜಿನನಿಗೆ ಮಾತ್ರ ಮುಕ್ಕೊಡೆಯನ್ನು ಚಿತ್ರಿಸುವುದರ ಮೂಲಕ ಶಿಲ್ಪಿ ಇಹ-ಪರಗಳ ವ್ಯತ್ಯಾಸವನ್ನು ಅರ್ಥಗರ್ಭಿತವಾಗಿ ನಿರೂಪಿಸಿದ್ದಾನೆ.

ಇದೇ ರೀತಿಯ ಶಿಲ್ಪವೊಂದು ಬಾಳಂಬೀಡ(ಹಾನತಾ)ದಲ್ಲಿದ್ದು[೨೦೩] ಇಹದಲ್ಲಿ ಸಿಂಹ ಪೀಠದಲ್ಲಿ ತೀರ್ಥಂಕರನನ್ನು ಮುಕ್ಕೊಡೆ, ಪ್ರಭೆ, ದೊಡ್ಡ ಕುಚ್ಚುಯುಕ್ತ ಚಾಮರಗಳೆರಡನ್ನು ಚಿತ್ರಿಸಲಾಗಿದೆ. ಯಳವಟ್ಟಿ (ಹಾನತಾ) ಒಂದು ನಿಸಿಧಿಯಲ್ಲಿ ದೊಡ್ಡದಾಗಿ ಮುಕ್ಕೊಡೆಯನ್ನು ಚಿತ್ರಿಸಿ ಮುಕ್ಕೊಡೆ ಪ್ರಧಾನವಾಗಿಸಿದೆ.

ವೃತ್ತಿ ನಿರತ ನಿಪುಣ ಶಿಲ್ಪಿಯ ಒಂದು ನಿರ್ಮಿತಿ ಬಾಳೂರಿನ ನಿಸಿಧಿ ಶಿಲ್ಪ. ನಾಳ್ಪ್ರಭು ಕಸಪಗಾವುಂಡನ ನಿಸಿಧಿಯಿದು.[೨೦೪] ಇವನೊಬ್ಬ ಅಧಿಕಾರಿಯಾದ್ದರಿಂದ ನಿಸಿಧಿಯೂ ಮುತುವರ್ಜಿಯಿಂದ ನಿರ್ಮಿತಿಯಾಗಿದೆ. ಮೊದಲ ಹಂತದಲ್ಲಿ ಹಿರಿದಾದ ಶೃತಪೀಠ ಮಧ್ಯದಲ್ಲಿದ್ದು ಎಡಕ್ಕೆ ಇಬ್ಬರು ಮುನಿಗಳು ಬಲಕ್ಕೆ ಒಬ್ಬ ಮುನಿ ಅವನ ಹಿಂದೆ ಕಸಪಗಾವುಂಡ ಗರುಡಾಸನದಲ್ಲಿ ಕೈ ಮುಗಿದು ಕುಳಿತಿದ್ದಾನೆ. ಮುನಿಗಳ ಚಿತ್ರಣ ಅತ್ಯಂತ ಸೊಗಸಾಗಿದೆ. ಒಬ್ಬ ಮುನಿ ಅಭಯಹಸ್ತ ತೋರುತ್ತಿದ್ದರೆ, ಮತ್ತೊಬ್ಬ ಆರಾಧನ ಗ್ರಂಥ ಹಿಡಿದು ನಿರ್ಯಾಪಕಚಾರ್ಯನಾಗಿ ಕಾರ್ಯನಿರ್ವಹಿಸುತ್ತಿದ್ದಾನೆ. ಅವನ ಹಿಂದಿರುವ ಮುನಿ ಪದ್ಮಾಸನದಲ್ಲಿ ಕುಳಿತು ಮಂತ್ರಗಳನ್ನು ಆಲಿಸುವಂತೆ ತಲೆಬಾಗಿ ಕುಳಿತಿದ್ದಾನೆ. ಈ ಚಿತ್ರಣವು ಸಲ್ಲೇಖನ ವ್ರತ ಬೋಧಿಸುವಲ್ಲಿ ಬಹುಸಂಖ್ಯೆಯ ಮುನಿಗಳು ಇರುತ್ತಿದ್ದರೆಂಬುದನ್ನು ತೋರಿಸಿಕೊಡುತ್ತದೆ. ಕಸಪಗಾವುಂಡ ನಾಳ್ಪ್ರಭುವಾದ್ದರಿಂದ ಇವು ಸಹಜ-ಸಂಭ್ರಮವೂ ಹೌದು. ಎರಡನೆ ಹಂತ ಬಸದಿಯ ತೀರ್ಥಂಕರನ ಸನ್ನಿಧಿಯಾಗಿದ್ದು ಇಬ್ಬರು ಮುನಿಗಳು ಕಸಪಗಾವುಂಡ ಕುಳಿತಿದ್ದಾರೆ. ಸಿಂಹಪೀಠ ತೀರ್ಥಂಕರನ ಶಿಲ್ಪದ ಇಕ್ಕೆಲಗಳಲ್ಲಿ ಅಲಂಕೃತ ಚಾಮರಧಾರಿಣಿಯರು, ಅವರ ಪಕ್ಕ ಇನ್ನೂ ಎರಡು ಚಾಮರಗಳನ್ನು ಚಿತ್ರಿಸಲಾಗಿದೆ. ಈ ಹಂತ ಬಸದಿಯದೆಂದು ಕಂಭರಹಿತ ಬೋಧಿಗೆಗಳನ್ನು ಶಿಲ್ಪಿಯು

ಹಿನ್ನೆಲೆಯಲ್ಲಿ ತೋರಿಸಿದ್ದಾನೆ. ಮೇಲ್ಗಡೆ ನಾಗರ ಶೈಲಿಯ ಶಿಖರವಿದ್ದು ಕಳಶವನ್ನು ಹೊಂದಿದೆ. ಮನೋಜ್ಞ ನಿಸಿಧಿ ಶಿಲ್ಪಗಳಲ್ಲಿ ಇದೂ ಒಂದು.

### ಇ. ಮೂರು ಹಂತಗಳ ನಿಸಿಧಿಶಿಲ್ಪ.

ಸಲ್ಲೇಖನ ಅಥವಾ ಸಮಾಧಿ ಮರಣವನ್ನು ಬೋಧಿಸುವ ಹಂತ ಮತ್ತು ಅದನ್ನು ಬಸದಿಯ ತೀರ್ಥಂಕರನ ಸಮ್ಮುಖದಲ್ಲಿ ಸ್ವೀಕರಿಸುವ ಚಿತ್ರಣ ನಿಸಿಧಿ ಶಿಲ್ಪದ ಲಕ್ಷಣ. ಇದರ ಮಧ್ಯದಲ್ಲಿ ಬಂದು ಸೇರಿದ ವ್ರತಧಾರಿಯನ್ನು ವಿಮಾನದಲ್ಲಿ ಕುಳ್ಳಿರಿಸಿಕೊಂಡು ಚಾಮರಧಾರಿಣಿಯರು ನಭಕ್ಕೆ ಹಾರುವ ಚಿತ್ರಣ ಸಮಕಾಲೀನ ವೀರಗಲ್ಲುಗಳ ಪ್ರಭಾವ ಎಂದು ನಿಸ್ಸಂದೇಹವಾಗಿ ಹೇಳಬಹುದು. ಹಿರೇಕೋಣತಿ (ಹಿತಾ)ಯ ಸೇನಭಟ್ಟಾರಕರ ಗುಡ್ಡ,[೨೦೫] ಬಾಳೂರು(ಹಾನತಾ) ಮಲ್ಲವೆ,[೨೦೬] ಆಡೂರು(ಹಾನತಾ) ವಿಕ್ರಮನ ನಿಸಿಧಿಯ ಶಿಲ್ಪದಲ್ಲಿ ಈ ರೀತಿಯ ಚಿತ್ರಣವಿದೆ. ಇವುಗಳಲ್ಲಿ ಆಡೂರು ನಾಳ್ಪ್ರಭು ವಿಕ್ರಮಗೌಡನ ನಿಸಿಧಿಶಿಲ್ಪ ವಿಭಿನ್ನವಾಗಿದ್ದು, ಶಸ್ತ್ರಸಹಿತ(ಸೊಂಟಕತ್ತಿ)ನಾಗಿ ಸಮಾಧಿ ವ್ರತ ತೆಗೆದುಕೊಳ್ಳುತ್ತಿದ್ದಾನೆ. ಮತ್ತು ಅದನ್ನು ತೀರ್ಥಂಕರನ ಸನ್ನಿಧಿಯಲ್ಲಿ ಅನುಷ್ಠಾನಿಸುವಾಗಲೂ ಶಸ್ತ್ರಸಹಿತನಾಗಿಯೇ ಇದ್ದಾನೆ. ಇವನೊಬ್ಬ ಆಡಳಿತಾಧಿಕಾರಿ ಎಂದು ತೋರಿಸಲು ಶಸ್ತ್ರವನ್ನು ಸಂಕೇತವಾಗಿ ತರಲಾಗಿದೆ. ಈ ಶಿಲ್ಪದ ವಿಮಾನದಲ್ಲಿ ವಿಕ್ರಮಗಾವುಂಡ ಪತ್ನಿ ಸಹಿತವಾಗಿ ಕುಳಿತಿದ್ದಾನೆ. ಇವನ ಪತ್ನಿಯ ಸಮಾಧಿ ಮರಣದ ಉಲ್ಲೇಖ ಶಾಸನದಲ್ಲಿ ಇಲ್ಲ. ಶಿಲ್ಪದಲ್ಲಿ ಶೃತಪೀಠ ಎತ್ತರವಾಗಿದ್ದು, ಮುಕ್ಕೊಡೆ ಆಕರ್ಷಣವಾಗಿದೆ. ಕೆಳಹಂತದ ಕೊಡೆಯಲ್ಲಿ ಇಳಿಬಿದ್ದ ಝುಲ್ಲರಿಗಳನ್ನು ಚಿತ್ರಿಸಿ ಮೇಲೆ ಕಳಶವಿಡಲಾಗಿದೆ. ಶಿಲ್ಪದ ಬಿಂಬಗಳ ಮುಖಭಾವ ಭಾವರಹಿತವಾಗಿದ್ದು, ಶಿಲ್ಪಿಯು ಶಿಲ್ಪಕಲೆಯಲ್ಲಿ ಮಾಗಿದಂತೆ ಕಂಡುಬರುವುದಿಲ್ಲ.

ಕಲಕೇರಿ(ಹಾನತಾ) ಮಾದ್ಯೆಯ,[೨೦೭] ಸಾವಿಕೆರೆ(ಹಾನತಾ) ಬೇಳಪ್ಪನ[೨೦೮] ನಿಸಿಧಿಯು ಮೂರು ಹಂತದ್ದಾಗಿದ್ದು ಮೊದಲ ಹಂತದಲ್ಲಿಯೇ ವ್ರತಧಾರಿಯನ್ನು ವಿಮಾನದಲ್ಲಿ ಕುಳ್ಳಿಸಿಕೊಂಡು ಬರಲಾಗುತ್ತಿದೆ. ಬಹುಶಃ ಶಿಲ್ಪಿಗೆ ಈ ಚಿತ್ರಣ ಎಲ್ಲಿ ತರಬೇಕೆಂದು ಗೊತ್ತಾಗದೇ ಮೊದಲೇ ಚಿತ್ರಿಸಿದಂತಿದೆ. ಏಕೆಂದರೆ ಎರಡನೇ ಹಂತದಲ್ಲಿ ಸಲ್ಲೇಖನ ವ್ರತಬೋಧನೆ ಮತ್ತು ಮೂರನೇ ಹಂತದಲ್ಲಿ ಆ ವ್ರತದ ಅನುಷ್ಠಾನ ನಡೆಯುತ್ತಿದೆ. ವೀರಗಲ್ಲಿನ ವಿಮಾನದ ಚಿತ್ರಣ ಗಮನಿಸಿದ ಶಿಲ್ಪಿ ಆ ಪ್ರಕ್ರಿಯೆಯನ್ನು ನಿಸಿಧಿಯಲ್ಲಿ ತರಲು ವಿಫಲನಾಗಿದ್ದಾನೆ. ಇದೇ ತರಹದ ಚಿತ್ರಣ ಸಾವಿಕೆರೆಯಲ್ಲಿದ್ದು, ವಿಮಾನದ ಬದಲಾಗಿ ವ್ರತಧಾರಿಯನ್ನು ಪಲ್ಲಕ್ಕಿಯಲ್ಲಿ ಹೊತ್ತುಕೊಂಡು ಬರಲಾಗುತ್ತಿದೆ. ಸಲ್ಲೇಖನ ತೆಗೆದುಕೊಳ್ಳುವ ವ್ಯಕ್ತಿಯನ್ನು ಈಗಲೂ ಪಲ್ಲಕ್ಕಿಯಲ್ಲಿ ಉತ್ಸವ ಮಾಡಿದ್ದನ್ನು ಕಂಡಿದ್ದೇನೆ. ಪಲ್ಲಕ್ಕಿಯ ನಂತರದ ಹಂತ ವ್ರತಸ್ವೀಕಾರ, ತದನಂತರ ತೀರ್ಥಂಕರ ಸಮ್ಮುಖದಲ್ಲಿ ವ್ರತಾನುಷ್ಠಾನ ನಡೆಯುವ ಚಿತ್ರಣಗಳು ಸಮರ್ಥವಾಗಿ ಬಂದಿವೆ. ಮಾದ್ಯೆಯನ ನಿಸಿಧಿಯಲ್ಲಿ ಅವನ ಉಡುಪು, ಶೃತಪೀಠ, ಮುನಿಯ ಪಿಂಛಿ ಚಾಮರಧಾರಿಣಿಯರ ಚಿನ್ನಾಭರಣ

ನಿಲುಭಂಗಿ ಸೊಗಸಾಗಿವೆ. ಮಾದ್ಯೆನ ದೊಡ್ಡ ತುರುಬು ಅದಕ್ಕೆ ಕಟ್ಟಿದ ಗಂಟು ನವಿರಾಗಿ ಒಡಮೂಡಿದೆ.

ಹಾವೇರಿ ಜಿಲ್ಲೆಯ ಕುಸುರಿ ಕೆತ್ತನೆಯ ನಿಸಿಧಿ ಶಿಲ್ಪ ದೊರೆಯುವುದು ಸುತಕೋಟೆ(ಹಿತಾ)ಯಲ್ಲಿ. ಮೊದಲ ಹಂತ ವ್ರತಬೋಧನೆಯಲ್ಲಿ ಮುನಿ ಆರಾಧನಾ ಗ್ರಂಥವನ್ನು ಶೃತಪೀಠದಿಂದ ಮೇಲೆತ್ತಿ ಹಿಡಿದು ದೇವಿಸೆಟ್ಟಿಗೆ ವ್ರತಬೋಧಿಸುತ್ತಿದ್ದಾನೆ. ದೇವಿಸೆಟ್ಟಿಯ ಹಿಂದೆ ಒಬ್ಬ ಸಹಾಯಕ, ನಿರ್ಯಾಪಕಾಚಾರ್ಯನ ಹಿಂದೆ ಒಬ್ಬ ಕಮಂಡಲಧಾರಿ ಮುನಿ ನಿಂತಿದ್ದಾನೆ. ಶೃತಪೀಠ ಮತ್ತು ಆರಾಧನ ಗ್ರಂಥಗಳ ಮಧ್ಯ ಅಷ್ಟದಳದ ಹೂವಿನ ಶಿಲ್ಪವಿದೆ. ಎರಡನೆ ಹಂತದಲ್ಲಿ ಬಸದಿಯ ತೀರ್ಥಂಕರನ ಮುಂದೆ ದೇವಿಸೆಟ್ಟಿಯು ವ್ರತವನ್ನು ಅನುಷ್ಠಾನಗೊಳಿಸುತ್ತಿದ್ದು, ಹಿಂದೆ ಕಚ್ಚೆಧಾರಿ ಸೀರೆಯ ಸ್ತ್ರೀಯೊಬ್ಬಳಿದ್ದಾಳೆ. ನಿರ್ಯಾಪಕಾಚಾರ್ಯ ಮತ್ತು ದೇವಿಸೆಟ್ಟಿಯರು ಅರ್ಧಾಸನದಲ್ಲಿ ಕುಳಿತಿದ್ದಾರೆ. ಮೂರನೆಯ ಹಂತವನ್ನು ಶಿಲ್ಪಿ ವಿಶೇಷವಾಗಿ ತಂದಿದಾನೆ. ಇಲ್ಲಿ ಮುಕ್ಕೊಡೆಯನ್ನು ಬಿಡಿಬಿಡಿಯಾಗಿ ಒಂದರ ಮೇಲೊಂದನ್ನು ಇಡಲಾಗಿದೆ. ಇದರ ಮೇಲೆ ಸಿಂಹದ ಕೀರ್ತಿ ಮುಖವಿದೆ. ಮುಕ್ಕೊಡೆಯ ಪಕ್ಕ ಅಲಂಕೃತ ಚಾಮರಧಾರಿಣಿಯರು ತುಸು ಸೊಂಟ ಬಾಗಿಸಿ ಮುಕ್ಕೊಡೆಗೆ ಗಾಳಿ ಬಿಸುತ್ತಿದ್ದಾರೆ. ಮಕ್ಕೊಡೆಯನ್ನು ಇಲ್ಲಿ ಜಿನಸ್ವರೂಪವಾಗಿ ಸಂಕೇತಿಸಲಾಗಿದೆ. ಚಾಮರಧಾರಿಣಿಯರ ಸೀರೆ, ಸೊಂಟಪಟ್ಟಿ, ನೆರಿಗೆ, ಕುಚ್ಚು ಎಲ್ಲವೂ ಪ್ರಮಾಣಬದ್ಧವಾಗಿವೆ. ಇವರ ಪಕ್ಕ ಮಣಿಗಂಟುಗಳಿಂದ ಕೂಡಿದ ಹಂಸದಾಕೃತಿಯ ಅಲಂಕರಣವಿದೆ. ಇಡೀ ನಿಸಿಧಿ ಶಿಲ್ಪದ ಚೌಕಟ್ಟುಗಳು ಕುಸುರಿ ಕೆತ್ತನೆಯಿಂದ ಅಲಂಕೃತಗೊಂಡಿವೆ.

ಸಲ್ಲೇಖನ ವ್ರತ ಸ್ವೀಕರಿಸುವ ಸಂಭ್ರಮದಲ್ಲಿ ಇಡೀ ಒಂದು ಪರಿವಾರವೇ ಪಾಲ್ಗೊಂಡ ಚಿತ್ರಣ ಸಂಗೂರು ಸಂಗಮನ ನಿಸಿಧಿಯಲ್ಲಿದೆ.[೩೯] ಸಂಗಮ ಅವನ ಪತ್ನಿ ಸಹಿತವಾಗಿ ಕುಳಿತು ಸಂನ್ಯಸನ ಮರಣವನ್ನು ನಿರ್ಯಾಪಕಾಚಾರ್ಯರಿಂದ ಸ್ವೀಕರಿಸುತ್ತಿದ್ದಾನೆ. ಈ ಪ್ರಕ್ರಿಯೆಯನ್ನು ಕೈ ಮುಗಿದುಕೊಂಡು ಪರಿವಾರದವರು ಭಕ್ತಿಭಾವದಿಂದ ವೀಕ್ಷಿಸುತ್ತಿದ್ದಾರೆ. ಎರಡನೆಯ ಹಂತದಲ್ಲಿಯೂ ಇದೇ ಚಿತ್ರಣವಿದ್ದು, ಹಿನ್ನೆಲೆಯಲ್ಲಿ ಫಲಭರಿತ ವೃಕ್ಷಗಳು, ಅದರಲ್ಲಿ ಪಕ್ಷಿಗಳನ್ನು ಚಿತ್ರಿಸಲಾಗಿದೆ. ಈ ಚಿತ್ರಣದಿಂದ ಸಂನ್ಯಸನ ಪ್ರಕ್ರಿಯೇ ಬಯಲಲ್ಲೂ ನಡೆಯತ್ತಿತ್ತು ಎನ್ನಲಡ್ಡಿಯಿಲ್ಲ. ಮೂರನೆ ಹಂತದಲ್ಲಿ ಬಸದಿಯ ಚಿತ್ರಣವಿದ್ದು ತೀರ್ಥಂಕರನ ಸಮ್ಮುಖದಲ್ಲಿ ಸಂಗಮ ಕೈ ಎತ್ತಿ ಸಂನ್ಯಸನ ವ್ರತವನ್ನು ಅನುಷ್ಠಾನಿಸುತ್ತಿದ್ದರೆ ಅವನ ಹಿಂದೆ ಪತ್ನಿ ಕೈ ಮುಗಿದು ಮುನಿಯೆಡೆಗೆ ನೋಡುತ್ತಿದ್ದಾಳೆ. ಮತ್ತೊಂದು ಬದಿಯಲ್ಲಿ ನಿರ್ಯಾಪಕಾಚಾರ್ಯ ಅರ್ಧಾಸನದಲ್ಲಿ ಕಮಂಡಲ ಸಹಿತವಾಗಿ ಪೀಠದ ಮೇಲೆ ಕುಳಿತು, ಒಂದು ಕೈಯಲ್ಲಿ ಆರಾಧನ ಗ್ರಂಥವನ್ನು ಹಿಡಿದು ಮತ್ತೊಂದು ಕೈಯಿಂದ ವ್ರತಬೋಧಿಸುತ್ತಿದ್ದಾನೆ. ಮೂರು ಹಂತಗಳಲ್ಲಿಯೂ ಶೃತಪೀಠಗಳಿವೆ. ಬಸದಿಯ ತೀರ್ಥಂಕರನ ಪಕ್ಕ ಪುರುಷ ಚಾಮರಧಾರಿಗಳನ್ನು ಇಲ್ಲಿ ತಂದಿರುವುದು ವಿಶೇಷ. ಬಸದಿಯ ಮೇಲೆ ಸಿಂಹದ ಕೀರ್ತಿಮುಖ, ಗರ್ಭಗೃಹದ ಹೊರಗಡೆ ಕಂಭಗಳನ್ನು ತರಲಾಗಿದೆ. ಸಂಗಮ,

ನಿರ್ಯಾಪಕಾಚಾರ್ಯ ಮತ್ತು ಸಂಗಮನ ಮಗ ನೇಮಣ ಇನ್ನೊಬ್ಬ ಪರಿವಾರ ಸದಸ್ಯನಿಗೆ ತಲೆಯ ಮೇಲೆ ಸತ್ತಿಗೆಯನ್ನು ಚಿತ್ರಿಸಿದ್ದಾನೆ ಶಿಲ್ಪಿ. ಇಲ್ಲಿನ ಎಲ್ಲಾ ಶಿಲ್ಪಗಳಲ್ಲಿ ರಾಜಪೋಷಾಕು ತರಲಾಗಿದ್ದು ಮೇಲ್ನೋಟಕ್ಕೆ ಇದೊಂದು ರಾಜಸ್ವದ ಅಧಿಕಾರಿಯ ನಿಸಿಧಿಯೆಂದು ಬಿಂಬಿತವಾಗಿದೆ. ಮೇಲಾಗಿ ಸಂಗಮ ಒಬ್ಬ ವಿಜಯನಗರ ಆಡಳಿತದ ದಂಡಾನಾಯಕ ಆಗಿದ್ದರಿಂದ ಶಿಲ್ಪದಲ್ಲಿ ಈ ವಿಜೃಂಭಣೆ ಸಹಜವೆ. ಇದೊಂದು ಆರ್ಥಿಕವಾಗಿ ಪ್ರಬಲನಿದ್ದ ವ್ಯಕ್ತಿಯ ನಿಸಿಧಿ ಶಿಲ್ಪವೆಂದೇ ಗುರುತಿಸಬಹುದು. ಅಂತೆಯೇ ಒಬ್ಬ ವೃತ್ತಿನಿರತ ಶಿಲ್ಪಿ ಇದನ್ನು ನಿರ್ಮಿಸಿದ್ದಾನೆ. ಜೊತೆಗೆ ಇಡೀ ನಿಸಿಧಿ ಶಿಲ್ಪಗಳಿಗೆ ಜೀವ ತುಂಬಿ ಚಲನಶೀಲಗೊಳಿಸಿದ್ದಾನೆ.

ನಿಸಿಧಿ ಶಿಲ್ಪಗಳ ಅಧ್ಯಯನವನ್ನು ಆರ್ಥಿಕ ತಳಹದಿಯಲ್ಲೂ ಅಧ್ಯಯನ ಮಾಡಲು ಅವಕಾಶವಿದೆ. ಮಹಾಪ್ರಬಂಧದ ವ್ಯಾಪ್ತಿ ಒಂದು ಚೌಕಟ್ಟಿಗೆ ಒಳಪಟ್ಟಿರುವುದರಿಂದ ಆ ಅಂಶವನ್ನು ಸೂಚ್ಯವಾಗಿ ಕಾಣಿಸಲಾಗಿದೆ. ಶ್ರಾವಕ, ಶ್ರಾವಿಕೆ, ಮುನಿ, ವ್ಯಾಪಾರಿ, ಅಧಿಕಾರಿ ರಾಜ ಹೀಗೆ ನಾನಾ ನೆಲೆಗಟ್ಟಿನಲ್ಲಿ ನಿಸಿಧಿ ಶಿಲ್ಪಗಳ ಅಧ್ಯಯನ ಸಾಧ್ಯ.

### ೦೩. ಕಂಭದ ಆಕಾರದ ನಿಸಿಧಿ ಶಿಲ್ಪಗಳು.

"ಈ ರೀತಿಯ ನಿಸಿಧಿಕಲ್ಲುಗಳನ್ನು ಒಂದೇ ಸ್ಥಳದಲ್ಲಿ ಹೆಚ್ಚಾಗಿ ಶ್ರವಣಬೆಳಗೊಳದಲ್ಲಿ ನೋಡಬಹುದು. ಇವು ಸುಮಾರು ಮೂರು ಅಡಿಗಳಿಂದ ಆರು ಅಡಿಗಳವರೆಗೆ ಎತ್ತರವಾಗಿವೆ. ಕಂಬದ ಮೇಲಿನ ತುದಿ ಗೋಪುರಾಕಾರವಾಗಿದ್ದು, ಅದರ ಕೆಳಗೆ ಚೌಕಟ್ಟಾದ ಜಾಗವನ್ನು ಬಿಡಿಸಿಕೊಂಡು ಶಿಲ್ಪವನ್ನು ಕೆತ್ತಿದ್ದಾರೆ. ಈ ಭಾಗದ ಕೆಳಗೆ ಶಾಸನವಿರುತ್ತದೆ".[೩೧೦] ಶ್ರವಣಬೆಳಗೊಳದ ಮಲ್ಲಿಷೇಣಮುನಿಯ ನಿಸಿಧಿ ಸ್ತಂಭ ಅತ್ಯುತ್ತಮ ನಿಸಿಧಿ ಸ್ತಂಭಗಳಲ್ಲಿ ಒಂದು. ಹಾವೇರಿ ಪರಿಸರದಲ್ಲೂ ಈ ರೀತಿಯ ನಿಸಿಧಿ ಸ್ತಂಭಗಳು ಲಭ್ಯವಿದ್ದು ವಿರಳವಾಗಿವೆ. ಸವಣೂರು ತಾಲ್ಲೂಕಿನ ಕಡಕೋಳದಲ್ಲಿ ಒಂದು, ಹಿರೇಕೇರೂರು ತಾಲೂಕಿನ ಹಿರೇಕೋಣತಿಯಲ್ಲೊಂದು ನಿಸಿಧಿ ಸ್ತಂಭಗಳಿವೆ. ಹಾವೇರಿ ಪರಿಸರದ ಬಂಕಾಪುರದಲ್ಲಿ ಸಲ್ಲೇಖನ ತೆಗೆದುಕೊಂಡ ಗಂಗರ ಮಾರಸಿಂಹನ ಪರೋಕ್ಷವಿನಯಾರ್ಥದ ನಿಸಿಧಿ ಸ್ತಂಭ ಕಳ್ವಪ್ಪು (ಶ್ರಬೆ–ಚಿಕ್ಕಬೆಟ್ಟ)ವಿನಲ್ಲಿದ್ದು ಅದನ್ನೂ ಅಧ್ಯಯನಕ್ಕೊಳಪಡಿಸಲಾಗಿದೆ.

ಕ್ರಿ.ಶ. ೧೨೩೧ರ ಕಡಕೋಳದ ಚಂದಯನು ಸಮಾಧಿ ಮರಣ ಹೊಂದಿದ ಪ್ರಯುಕ್ತ ಅವನ ಹೆಸರಿನಲ್ಲಿ ಒಂದು ನಿಸಿಧಿ ಸ್ತಂಭವನ್ನು ಇದೇ ಊರಲ್ಲಿ ನಿಲ್ಲಿಸಲಾಗಿದೆ. ಇದರಲ್ಲಿರುವ ಶಾಸನದಲ್ಲಿ ಈ ಸ್ಮಾರಕವನ್ನು 'ಚಂದಯನ ನಿಷಧಿಗೆಯ ಕಂಭ'[೩೧೧] ಎಂಬ ಉಲ್ಲೇಖಿಸಲಾಗಿದೆ. ಇಲ್ಲಿನ ಶಿಲ್ಪದಲ್ಲಿ ಕೆಳಗಿನ ಹಂತದಲ್ಲಿ ಎರಡು ಉಬ್ಬು ಶಿಲ್ಪಗಳು ಮೇಲಿನ ಹಂತದಲ್ಲಿ ಮುನಿ, ಜಿನ, ಚಂದಯರ ಉಬ್ಬುಶಿಲ್ಪಗಳಿವೆ. ಹಿನ್ನೆಲೆಯನ್ನು ತಗ್ಗುಗೊಳಿಸದೆ ಮುಂಚಾಚಿದ ಉಬ್ಬು ಶಿಲ್ಪಗಳಿವು.

ಇದೇ ರೀತಿಯ ಗೀರುಶಿಲ್ಪಗಳನ್ನು ಕಂಭದ ಮೂರು ಬದಿಗಳಲ್ಲಿ ಚಿತ್ರಿಸಲಾಗಿದೆ. ಕಂಭದ ತುದಿಯಲ್ಲಿ ಸ್ತೂಫಿಯನ್ನು ರಚಿಸಿದ್ದು ಇದೊಂದು ಸಾಧಾರಣ ನಾಲ್ಕು ಅಡಿಯ ನಿಸಿಧಿ ಸ್ತಂಭ.

ಹಿರೇಕೋಣತಿಯ ನಿಸಿಧಿ ಸ್ತಂಭ ವಿಶೇಷವಾಗಿದ್ದು ನಾಲ್ಕು ಬದಿಯಲ್ಲಿ ಶಿಲ್ಪಗಳನ್ನು ಹೊಂದಿ ಮೂರು ಬದಿಯಲ್ಲಿ ಶಾಸನವನ್ನು ಒಳಗೊಂಡಿದೆ.[೩೧೨] ಸುಮಾರು ಮೂರು ಅಡಿಯ ಕಂಬ ನಾಗರ ಶೈಲಿಯ ರೀತಿ ಶಿಖರವನ್ನು ಹೊಂದಿದೆ. ವ್ಯಕ್ತಿಯೊಬ್ಬನ ಸಮಾಧಿ ಮರಣವನ್ನು ಶಾಸನ ದಾಖಲಿಸುತ್ತದೆ. ಚತುರ್ಮುಖದ ಎಲ್ಲ ಭಾಗಗಳಲ್ಲೂ ಮಧ್ಯ ತೀರ್ಥಂಕರ ಬಿಂಬ ಇಕ್ಕೆಲಗಳಲ್ಲಿ ವ್ರತಧಾರಿ ಮತ್ತು ನಿರ್ಯಾಪಕಾಚಾರ್ಯರ ಉಬ್ಬುಶಿಲ್ಪಗಳಿವೆ. ಒಂದು ಬದಿಯಲ್ಲಿ ಕಾಯೋತ್ಸರ್ಗದ ತೀರ್ಥಂಕರ ಶಿಲ್ಪವಿದ್ದು ಮೂರರಲ್ಲಿ ಪರ್ಯಂಕಾಸನದಲ್ಲಿವೆ. ಕಾಯೋತ್ಸರ್ಗದ ತೀರ್ಥಂಕರ ಇಲ್ಲಿನ ಬಸದಿಯ ಮೂಲನಾಯಕನಾಗಿರುವ ಸಾಧ್ಯತೆಯೇ ಹೆಚ್ಚು. ಇಂದಿನ ನಾರಾಯಣದೇವಾಲಯ ಮೂಲದಲ್ಲಿ ಪಾರ್ಶ್ವನಾಥ ಜಿನಾಲಯ. ಜಿನಾಲಯದ ಬಯಲಲ್ಲೇ ನಿಸಿಧಿ ಕಂಭ ಇದ್ದಿದ್ದರಿಂದ ಸಲ್ಲೇಖನ ಕ್ರಿಯೆ ಇಲ್ಲಿಯೇ ನಡೆದಿರಬೇಕು. ಇದೊಂದು ಸರಲ ಮಾದರಿ ಶಿಲ್ಪದ ನಿಸಿಧಿ ಕಂಬ.

ನಿಸಿಧಿ ಕಂಬಗಳನ್ನು ವ್ಯಕ್ತಿ ಮರಣಹೊಂದಿದ ಜಾಗದಲ್ಲಿಯೇ ನೆಡಬೇಕಾಗಿಲ್ಲ. ಆ ಸ್ಮರಣಾರ್ಥ, ಪರೋಕ್ಷವಿನಯಾರ್ಥವಾಗಿ ಪರವೂರು, ಪರಸ್ಥಳದಲ್ಲೂ ನೆಡಬಹುದು. ಗಂಗ ರಾಜ ಮಾರಸಿಂಹನ ನಿಸಿಧಿ ಕಂಬ ಇದಕ್ಕೊಂದು ಸ್ಪಷ್ಟ ಉದಾಹರಣೆ. ಮಾರಸಿಂಹ ಬಂಕಾಪುರದಲ್ಲಿದ್ದ ಅಜಿತಸೇನಾಚಾರ್ಯರ ಪಾದ ಸನ್ನಿಧಿಯಲ್ಲಿ ಸಮಾಧಿ ವಿಧಾನದಿಂದ ಮಡಿದ ಎಂಬುದಕ್ಕೆ

> ಬಂಕಾಪುರದೊಳಜಿತಸೇನ ಭಟ್ಟಾರಕರ ಶ್ರೀಪಾದಸನ್ನಿಧಿಯೊಳಾರಾಧನಾ
> ವಿಧಿಯಂ ಮೂಱುದೆವಸಂ ನೋನ್ತು ಸಮಾಧಿಯಂ ಸಾಧಿಸಿದಂ.[೩೧೩]

ಎಂಬ ಶಾಸನದ ವಾಕ್ಕುಗಳೆ ಸಾಕ್ಷಿಯಾಗಿ ನಿಲ್ಲುತ್ತವೆ. ಮಾರಸಿಂಹ ಬಂಕಾಪುರದಲ್ಲಿ ಮಡಿದರೂ ಅವನ ನಿಸಿಧಿ ಸ್ತಂಭ ನಿಂತಿದ್ದು ಮಾತ್ರ ಶ್ರವಣಬೆಳಗೊಳದ ಚಿಕ್ಕ ಬೆಟ್ಟ (ಕಳ್ವಪ್ಪು-ಚಂದ್ರಗಿರಿ)ದಲ್ಲಿ. ಇದಕ್ಕೆ ಕೂಗೆ ಬ್ರಹ್ಮದೇವರ ಕಂಬ ಎಂತಲೂ ಕರೆಯುತ್ತಾರೆ. ಸ್ತಂಭದ ಮೇಲಿರುವ ಯಕ್ಷನ ವಿಗ್ರಹ ಬ್ರಹ್ಮನದಾಗಿರದೆ ಅದು ಸರ್ವಾಹ್ಣ ಯಕ್ಷನದ್ದಾಗಿದೆ. ಈ ಕಂಭದ ಮೇಲಿನ ಶಾಸನವು ಇದು ಮಾನಸ್ತಂಭ ಎಂದು ಹೇಳುತ್ತದೆ. ಮಾರಸಿಂಹನ ಗೌರವಾರ್ಥ ನೆಟ್ಟ ಈ ಮಾನಸ್ತಂಭವನ್ನು ಅವನ ಸಮಾಧಿ ಮರಣದ ಪ್ರಸ್ತಾಪದ ನಿಮಿತ್ತ ನಿಸಿಧಿ ಸ್ತಂಭ ಎನ್ನಲೂ ಅಡ್ಡಿಯಿಲ್ಲ.

ಮಾರಸಿಂಹನ ನಿಸಿಧಿ "ಸ್ತಂಭವು ಸುಮಾರು ಐದು ಅಡಿ ಎತ್ತರದ ವೇದಿಕೆಯನ್ನು ಒಳಗೊಂಡು ೩೦ ಅಡಿ ಇದೆ. ಇದರ ಶಿಖರಾಗ್ರವನ್ನು ಅಲಂಕರಿಸಿರುವ ಯಕ್ಷ ವಿಗ್ರಹವು ಸುಮಾರು ೩ ಅಡಿ ಎತ್ತರವಿದೆ. ಸ್ತಂಭ ವೇದಿಕೆಯು ಮೂರು ಮಜಲಿನಲ್ಲಿ ಏರಿದೆ. ತೀರಾ ಕೆಳಗಿನದು

ಚೌಕಾಕಾರವಾಗಿದ್ದು, ಅದು ೧ ೧/೨ ಅಡಿ ಎತ್ತರದ ಅಷ್ಟಕೋನಾಕೃತಿಯ ಪಟ್ಟಿಕೆಗಳನ್ನು ಹೊಂದಿದೆ. ಈ ಪಟ್ಟಿಕೆಗಳ ಮೇಲಂಚಿನಲ್ಲಿ ಪದ್ಮವಿದೆ. ಕಮಲಗರ್ಭದಿಂದ ಮೇಲೇಳುವ ಅಷ್ಟಮುಖಿ ಸ್ತಂಭವನ್ನು ಸಮತಲ ಪಟ್ಟಿಗಳು ಸಮಾನಾಂತರದಲ್ಲಿ ವಿಭಜಿಸಿವೆ. ಕುಂಭಾಕಾರದ ಶಿಖರಾಗ್ರವು ಮತ್ತೆ ಬೋಧಿಗೆಯನ್ನು ಹೊಂದಿದೆ. ಬಲಗೈಯಲ್ಲಿ ಪದ್ಮವನ್ನು ಎಡಗೈಯಲ್ಲಿ ಫಲವನ್ನು ಹಿಡಿದು, ಅರ್ಧಪರ್ಯಂಕಾಸನದಲ್ಲಿರುವ ಸರ್ವಾಹ್ಣ ಯಕ್ಷನು ಬಟ್ಟ ಬಯಲಿನಲ್ಲಿ ಕುಳಿತಿರುವನು. ಸಾಂಕೇತಿಕವಾಗಿ ಸ್ತಂಭವನ್ನು ಹೊತ್ತು ನಿಂತಿದ್ದ ಗಜಗಳು ಈಗ ಭಗ್ನಗೊಂಡಿವೆ. ಈ ಸ್ತಂಭದ ಪೀಠದಲ್ಲಿ ೯೭೪ರ ಶಾಸನವಿದ್ದು, ಅದು ಗಂಗ ವಂಶಾವಳಿಯನ್ನು, ಗಂಗಮಾರಸಿಂಹನು ರಾಜ್ಯತ್ಯಜಿಸಿ ಬಂಕಾಪುರದಲ್ಲಿ ಅಜಿತಸೇನ ಭಟ್ಟಾರಕರ ಸಮ್ಮುಖದಲ್ಲಿ ಸಮಾಧಿ ವಿಧಿಯಿಂದ ಸಾವನ್ನು ಸ್ವಾಗತಿಸಿದ್ದನ್ನು ತಿಳಿಸುವುದು".[೩೧೪]

ಈ ಸ್ತಂಭವು ಗಂಗಕಾಲದ ಕಲಾ ನೈಪುಣ್ಯತೆಯನ್ನು ಪ್ರತಿಬಿಂಬಿಸುವ ಕೆಲವೇ ಕೆಲವು ಉದಾಹರಣೆಗಳಲ್ಲೊಂದಾಗಿದೆ. ಸ್ತಂಭಾಗ್ರದಲ್ಲಿರುವ ಮಾಟವಾದ ಕುಂಭ ಮತ್ತು ಬೋದಿಗೆಗಳು, ಸಮಪ್ರಮಾಣದ ಫಲಕ, ಪೀಠವನ್ನು ಅಲಂಕರಿಸಿದ ಗಜಗಳು ಮತ್ತು ಸ್ತಂಭದ ಮೇಲಿರುವ ಯಕ್ಷ ವಿಗ್ರಹ–ಇವು ಗಂಗ ರೂವಾರಿಯ ಉನ್ನತ ಕಲಾ ಪ್ರೌಢಿಮೆಯನ್ನು ಪ್ರತಿಬಿಂಬಿಸುವುವು. ಈ ಸ್ತಂಭದಲ್ಲಿಯ ಪ್ರಮಾಣಬದ್ಧತೆ ಹಾಗೂ ತಾಂತ್ರಿಕ ಸಮತೋಲನವು ಗಮನಾರ್ಹವಾದ ಅಂಶಗಳಾಗಿವೆ. ಸಮವಸರಣದಲ್ಲಿರುವಂತೆ ಇಲ್ಲಿಯೂ ಭಕ್ತರನ್ನು ಎದುರುಗೊಳ್ಳುತ್ತಿರುವ ಈ ಸ್ತಂಭವು 'ಮಿಥ್ಯಾಜ್ಞಾನಿಯ ಮಾನವಂ ಸ್ತಂಭಿಸುವ ಮಾನಸ್ತಂಭ'ವನ್ನು ಸಂಕೇತಿಸುವಂತಿದೆ.[೩೧೫]

ಮಾರಸಿಂಹ ಸ್ಮರಣಾರ್ಥ ನಿಲ್ಲಿಸಲಾದ ಸ್ತಂಭ ಒಂದು ಅತ್ಯುತ್ತಮ ಕಲಾಕೃತಿ ಎನ್ನುವುದರಲ್ಲಿ ಸಂದೇಹವೇ ಇಲ್ಲ. ಮೇಲಾಗಿ ಮಾರಸಿಂಹ ಒಬ್ಬ ರಾಜನಾಗಿದ್ದರಿಂದ ಈ ಕಲಾಸೌಂದರ್ಯ ಸಹಜವೇ ಆಗಿದೆ. ಆರ್ಥಿಕ ಬಲ ಹೆಚ್ಚಿದಂತೆ ಕಲಾಸೌಂದರ್ಯವೂ ಉನ್ನತಗೊಳ್ಳುತ್ತದೆ ಎಂಬ ಮಾತು ಮಾರಸಿಂಹನ ಸ್ತಂಭದಲ್ಲಿ ಸಾಬೀತಾಗುತ್ತದೆ. ಹಾವೇರಿ ಪರಿಸರಕ್ಕೆ ಇದೊಂದು ಹೆಮ್ಮೆಯೂ ಹೌದು. ಏಕೆಂದರೆ ಶ್ರವಣಬೆಳಗೊಳದಂತಹ ಗಣ್ಯತೀರ್ಥಕ್ಷೇತ್ರವನ್ನು ಬಿಟ್ಟು ಒಬ್ಬ ರಾಜ ಬಂಕಾಪುರ ದಲ್ಲಿ ಸಮಾಧಿಯಾದ ಎಂದರೆ ಆ ಸಂದರ್ಭದಲ್ಲಿ ಬಂಕಾಪುರ ಧಾರ್ಮಿಕ ಚಟುವಟಿಕೆಯಲ್ಲಿ ಶ್ರವಣಬೆಳಗೊಳವನ್ನು ಮೀರಿಸಿತ್ತು ಎಂದೇ ಅರ್ಥ. ಆದರೆ ಮಾರಸಿಂಹನ ನಿಸಿಧಿ ಬಂಕಾಪುರದಲ್ಲಿ ನೆಡದೆ ಶ್ರವಣಬೆಳಗೊಳದಲ್ಲಿ ನಿರ್ಮಿಸಿದ್ದು ಅದಕ್ಕಿರುವ ಐತಿಹಾಸಿಕತೆಯ ಹಿನ್ನೆಲೆಯಿಂದ ಎಂಬುವುದನ್ನು ಮನಗಾಣಬೇಕು.

ಹಾವೇರಿ ಪರಿಸರದಲ್ಲಿ ಸ್ತಂಭ ನಿಸಿಧಿಗಳಿಗಿಂತ ಫಲಕ ನಿಸಿಧಿ ಸ್ಮಾರಕಗಳೇ ಹೆಚ್ಚು. ನಿಸಿಧಿ ಶಿಲ್ಪಗಳಲ್ಲಿ ಹೆಚ್ಚಿನ ವಿವರಣೆ ಕೊಡಲು ಶಿಲ್ಪಿಗೆ ಅವಕಾಶ ಇರದೇ ಇರುವುದರಿಂದ ಅವುಗಳನ್ನು ಫಲಕದ ಆಕಾರದಲ್ಲಿಯೇ ನಿರ್ಮಿಸಿದರು. ಮೇಲಾಗಿ ಕಂಭ ಸ್ಮಾರಕಗಳನ್ನು ನಿರ್ಮಿಸುವುದು

ಆರ್ಥಿಕತೆಗೆ ಸವಾಲೂ ಹೌದು. ಇಲ್ಲಿ ಮಧ್ಯಮ ವರ್ಗದ ಶ್ರಾವಕರೇ ಬಹು ಸಂಖ್ಯೆಯಲ್ಲಿ ಸಮಾಧಿ ಮರಣ ಹೊಂದಿದ್ದರಿಂದ ಅವರ ಫಲಕ ನಿಸಿಧಿ ಶಿಲ್ಪಗಳೇ ಹೆಚ್ಚಾಗಿವೆ.

## ೦೪. ವೀರಗಲ್ಲುಗಳು ಹಾಗೂ ಇತರೆ ಸ್ಮಾರಕ ಶಿಲ್ಪಗಳು.

ಅಹಿಂಸಾ ವ್ರತಿಗಳಾದ ಜೈನರು ವೀರತ್ವದಲ್ಲಿ ಹಿಂದೆ ಬಿದ್ದಿಲ್ಲ. ಮೂಲತಃ ಕ್ಷತ್ರಿಯರೇ ಆದ ಇವರು ಅಹಿಂಸಾ ವ್ರತಿಗಳಾಗಿದ್ದು ಲೋಕದ ಹಿತಕ್ಕಾಗಿ. ಹಾಗೆಂದ ಮಾತ್ರಕ್ಕೆ ಅವರಲ್ಲಿ ಕ್ಷಾತ್ರ ತೇಜಸ್ಸು ಕಡಿಮೆಯಾಗಿರಲಿಲ್ಲ. ಅಮೋಘವರ್ಷ, ಬಿಟ್ಟಿದೇವರಂಥ ಪ್ರಸಿದ್ಧ ರಾಜರು ಜೈನರೆ ಚಾವುಂಡರಾಯ, ಗಂಗರಾಜ, ಹುಳ್ಳಮಯ್ಯ, ರವಿಕೀರ್ತಿ, ಶೃತಕೀರ್ತಿ, ಮಲ್ಲಪ, ಸಂಕಮ ದಂಡನಾಯಕರೆಲ್ಲರೂ ಜೈನರೆ ಪಂಪ ಕಲಿಯೂ ಹೌದು, ಕವಿಯೂ ಹೌದು. ಇವರು ರಣರಂಗದಲ್ಲಿ ವೀರತ್ವ ಪ್ರದರ್ಶಿಸಿದ ಕಲಿಗಳು. ಅಂತೆಯೇ ರಣರಂಗದಲ್ಲಿ ಹೋರಾಡಿದ ಮರಣವನ್ನು ಅಪ್ಪಿದ ಜೈನ ಸೇನಾನಿಗಳು ಸಾಕಷ್ಟಿದ್ದಾರೆ. ಇವರ ನೆನಪಿಗೋಸ್ಕರ ನೆಟ್ಟ ಸ್ಮಾರಕಗಳೇ ವೀರಗಲ್ಲುಗಳು. ಗಂಗರ ಮಾರಸಿಂಹನ ನಿಸಿಧಿ ಸ್ತಂಭವು ಮಾನಸ್ತಂಭ ಆಗುವುದರ ಜೊತೆಗೆ ಅವನ ಕ್ಷಾತ್ರ ತೇಜಸ್ಸಿನ ವರ್ಣನೆಯಿಂದ ಅದೊಂದು ವೀರಸ್ತಂಭವೂ ಎನ್ನಿಸಿಕೊಳ್ಳುತ್ತದೆ. ಹಾಗೇ ನೋಡಿದರೆ ವೀರತ್ವದಿಂದ ಸಾವನ್ನು ಆಹ್ವಾನಿಸಿದ ನಿಸಿಧಿ ಸ್ಮಾರಕಗಳೆಲ್ಲವೂ ವೀರಸ್ಮಾರಕಗಳೆ. ಆದರೆ ಸಮಕಾಲೀನ ವೀರಗಲ್ಲುಗಳ ಸ್ವರೂಪವೇ ಬೇರೆ ಇದ್ದು ಆ ದೃಷ್ಟಿಯಲ್ಲಿ ವೀರಗಲ್ಲುಗಳು ಪ್ರತ್ಯೇಕ ಅಧ್ಯಯನಕ್ಕೆ ಯೋಗ್ಯವಾದವುಗಳು.

ಜೈನರಲ್ಲಿ ವೀರಗಲ್ಲುಗಳ ಸಂಖ್ಯೆ ಅತ್ಯಂತ ಕಡಿಮೆ. ರಣರಂಗದಲ್ಲಿ ಹೋರಾಡಿದ ವೀರರೂ ಸಾವಿನ ಕೊನೆಯ ಕ್ಷಣದಲ್ಲಿ ಸಲ್ಲೆಖನದಂಥ ವ್ರತಗಳನ್ನು ತೆಗೆದುಕೊಳ್ಳಲು ಅವಕಾಶ ಇತ್ತು. ಅಂತೆಯೇ ವ್ಯಕ್ತಿ ರಣರಂಗದಲ್ಲಿಯೇ ಪಂಚಣಮೋಕಾರ ಜಪಿಸಿ ಮಡಿದರೂ ಅದು ಸಮಾಧಿ ಮರಣವೆ. ಕೆಲವು ಜನ ಯುದ್ಧದಲ್ಲಿ ಗಾಯಗೊಂಡು ಇನ್ನೇನು ಬದುಕುವುದಿಲ್ಲ ಎಂದಾಗ ಮುನಿಗಳಿಂದ ಸಮಾಧಿ ವ್ರತ ತೆಗೆದುಕೊಂಡು ಮಡಿದ ಉದಾಹರಣೆಗಳು ಹಾವೇರಿ ಪರಿಸರದಲ್ಲಿ ಲಭ್ಯವಿದೆ. ಇವುಗಳು ಸ್ವತಂತ್ರ ವೀರಗಲ್ಲು ಎನ್ನಿಸಿಕೊಳ್ಳದೇ ವೀರ ನಿಸಿಧಿ ಶಿಲ್ಪಗಳೆನಿಸುತ್ತವೆ.

ಆಡೂರಿ(ಹಾನತಾ)ನ ಒಂದು ನಿಸಿಧಿ ಶಾಸನವು 'ಶ್ರೀಮಂನಾಳ್ಪ್ರಭು ಹರಿಯಮಗಾವುಂಡನ ಮಾನಿಸ ಗಾಮಯ್ಯನು ಸಸ್ತ್ರಹತನಾಗಿ ಸ್ವರ್ಗ್ಗಸ್ತನಾದ'[೩೧೬] ಎಂದು ತಿಳಿಸಿದರೂ ಶಿಲ್ಪ ಮಾತ್ರ ನಿಸಿಧಿಯದ್ದಾಗಿದೆ. ಈ ಶಿಲ್ಪದಲ್ಲಿ ಗಾಮಯ್ಯ ಪತ್ನಿ ಸಹಿತ ಸಮಾಧಿ ಮರಣವನ್ನು ಮುನಿಯಿಂದ ಆಹ್ವಾನಿಸುವ ಮತ್ತು ಪತ್ನಿ ಸಹಿತವಾಗಿ ತೀರ್ಥಂಕರರ ಸನ್ನಿಧಿಯಲ್ಲಿ ಅದನ್ನು ಅನುಷ್ಠಾನಿಸುವ ಎರಡು ಹಂತದ ಚಿತ್ರಣಗಳಿವೆ. ಸಾಂಪ್ರದಾಯದಂತೆ ಶೃತಪೀಠ, ಕಮಂಡಲ, ಮುಕ್ಕೊಡೆ, ಚಾಮರಗಳು, ಸೂರ್ಯ ಚಂದ್ರರ ಶಿಲ್ಪಗಳಿವೆ. ಗಾಮಯ್ಯ ವೀರ ಎನ್ನುವುದಕ್ಕೆ ಅವನ ಸೊಂಟದಲ್ಲಿ ಕತ್ತಿಯನ್ನು ಚಿತ್ರಿಸಲಾಗಿದೆ. ಶಿಲ್ಪ ನಿಸಿಧಿಯೆಂದೂ ಸಾರಿದರೂ ಗಾಮಯ್ಯ ಮಾತ್ರ ಯುದ್ಧದಲ್ಲಿ

ಮಡಿದದ್ದಾಗಿ ಶಾಸನವೇ ಸಾರುತ್ತದೆ. ಬಹುಶಃ ಈ ಪರಿಸರದಲ್ಲಿ ಯುದ್ಧದಿಂದ ಮಡಿದ ವ್ಯಕ್ತಿಗಳಿಗೆ ನಿಸಿಧಿ ಸ್ಮಾರಕಗಳನ್ನೇ ನಿರ್ಮಿಸಿದ್ದಂತೆ ಕಾಣುತ್ತದೆ.

ಕದರಮಂಡಲಿಗಿ(ಬ್ಯಾತಾ)ಯ ಒಂದು ಶಿಲ್ಪದಲ್ಲಿ ವೀರಗಲ್ಲಿನ ಅಪೂರ್ಣ ಆಧಾರಗಳಿದ್ದು ಶಾಸನವು 'ಸಾಂತಿಭಟ್ಟಾರಕರು ಕುಡಲು ಸುರಗೌಡ ಸುರಲೋಕ ಪ್ರಾಪ್ತ[ನಾದ]'[೩೧೭] ಎಂದಿದೆ. ಇದು ವೀರನಿಸಿಧಿ ಎಂದು ಸ್ಪಷ್ಟವಾಗಿ ಹೇಳಲು ಆಧಾರ ಇರದಿದ್ದರೂ ಶಿಲ್ಪದಲ್ಲಿ ಆ ಲಕ್ಷಣಗಳು ಎದ್ದು ತೋರುತ್ತಿವೆ. ಶಿಲ್ಪದ ಮೊದಲ ಹಂತದಲ್ಲಿ ಸುರಗೌಡ ಕತ್ತಿ–ಗುರಾಣಿಗಳೊಂದಿಗೆ ಶೃತಪೀಠ ಕಮಂಡಲದೊಂದಿಗೆ ಕುಳಿತು ವ್ರತ ಸ್ವೀಕರಿಸುತ್ತಿದ್ದಾನೆ. ಎರಡನೆಯ ಹಂತದಲ್ಲಿ ಆತನನ್ನು ಚಾಮರಧಾರಿಣಿಯರು ವಿಮಾನದಲ್ಲಿ ಕುಳ್ಳಿರಿಸಿಕೊಂಡು ನಭಕ್ಕೆ ನೆಗೆಯುತ್ತಿದ್ದಾರೆ. ಜೊತೆಗೆ ವಾದ್ಯಕಾರರೂ ಇದ್ದಾರೆ. ಮೂರನೆಯ ಹಂತದಲ್ಲಿ ಜಿನಸನ್ನಿಧಿಯಿದ್ದು ಸುರಗೌಡ ಒಬ್ಬನೇ ಜಿನನ ಪಕ್ಕಕ್ಕೆ ಕುಳಿತಿದ್ದಾನೆ. ಇದು ಸ್ಪಷ್ಟವಾಗಿ ಸಮಕಾಲೀನ ವೀರಗಲ್ಲುಗಳ ಅನುಕರಣೆ. ನಿಸಿಧಿ ಶಿಲ್ಪಗಳಲ್ಲಿ ತಂದ ತೀರ್ಥಂಕರನ ಸನ್ನಿಧಿ ಬದಲಾಗಿ ಜಿನಸನ್ನಿಧಿ ತಂದಿರುವುದರಿಂದ ಇದು ವೀರ ನಿಸಿಧಿ ಸ್ಮಾರಕ ಶಿಲ್ಪ ಎಂದೇ ಅರ್ಥೈಯಿಸಿಕೊಳ್ಳಬೇಕಾಗುತ್ತದೆ. ಸುರಗೌಡ ಯುದ್ಧದಲ್ಲಿ ಗಾಯಗೊಂಡು ಸಲ್ಲೇಖನ ಸ್ವೀಕರಿಸುವ ಪ್ರಕ್ರಿಯೆಯನ್ನು ಇಲ್ಲಿ ಗಮನಿಸಬಹುದು. ಈ ಎರಡು ವೀರ ನಿಸಿಧಿಗಳ ಹೊರತಾಗಿ ಹಾವೇರಿ ಪರಿಸರದಲ್ಲಿ ಮತ್ತಾವುದೆ ಜೈನ ವೀರಗಲ್ಲುಗಳು ಇದುವರೆಗೂ ದೊರೆತಿಲ್ಲ.

### ಇತರೆ ಸ್ಮಾರಕ ಶಿಲ್ಪಗಳು.

ಮಹಾಸತಿ ಹೋಗುವುದು ಹಿಂದೂ ಧರ್ಮ ಸಂಪ್ರದಾಯದ ಪ್ರಾಚೀನ ಸಾಮಾಜಿಕ ಜೀವನದ ಒಂದು ಪ್ರಕ್ರಿಯೆ. ಯುವ ಪತಿವ್ರತೆಯರು ತಮ್ಮ ಗಂಡ ಮಡಿದ ಪ್ರಯುಕ್ತ ಅವನ ಚಿತೆಯಲ್ಲೇ ಅಥವಾ ಪ್ರತ್ಯೇಕವಾದ ಕೊಂಡದಲ್ಲಿ ಹಾರಿ ಪ್ರಾಣ ತ್ಯಜಿಸುವುದು ಒಂದು ಕಟ್ಟುಪಾಡಾಗಿತ್ತು. ಅಬಲೆ, ಯುವವಿಧವೆಯರು ಪರಪುರುಷರಿಂದ ಮಾನಹಾನಿಗೆ ಒಳಗಾಗಬಾರದೆಂದು ಈ ಕ್ರಮ ಜಾರಿಗೆ ಬಂದಂತೆ ತೊರುತ್ತದೆ. ತತ್ಪರಿಣಾಮವಾಗಿ ಮಹಾಸತಿಯ ಕಲ್ಲುಗಳು ಕರ್ನಾಟಕದಲ್ಲಿ ಯಥೇಚ್ಛವಾಗಿ ಲಭ್ಯವಿದೆ. ಜೈನರಲ್ಲಿ ಸಲ್ಲೇಖನ, ಸಂನ್ಯಸನ, ಸಮಾಧಿ ಮರಣಗಳಂತಹ ಸಾವನ್ನು ಆಹ್ವಾನಿಸುವ ಧಾರ್ಮಿಕ ಪ್ರಕ್ರಿಯೆಗಳಿದ್ದುದರಿಂದ ಮಹಾಸತಿಯಾಗುವ ಪ್ರಮೇಯ ಸ್ತ್ರೀಯರಿಗೆ ಒದಗುತ್ತಿರಲಿಲ್ಲ. ಆದರೂ ದಾನಚಿಂತಾಮಣಿ ಅತ್ತಿಮಬ್ಬೆಯ ತಂಗಿ ಗುಂಡಮಬ್ಬೆ ಪತಿ ನಾಗಮಯ್ಯನ ಚಿತೆಯೇರಿ 'ಅಂತು ಗುಂಡೆಲ್ಲ ಪೊಗಟ' ಗುಂಡಮಬ್ಬೆ ಮಹಾಸತೀ ಸಮುಚಿತ ಚಾರದೊಳಮಾಭರಣದೊಳಂ ನೆಗಱ'[೩೧೮] ಎನ್ನುವಲ್ಲಿ ಮಹಾಕವಿ ರನ್ನ ಗುಂಡಮಬ್ಬೆ ಮಹಾಸತಿಯಾದಳು ಎಂದು ತೋರಿಸಿಕೊಟ್ಟಿದ್ದಾನೆ. ಇಂಥಹ ಉದಾಹರಣೆಗಳು ಅಪರೂಪ ಎನ್ನಿಸಿದರೂ ಜೈನರಲ್ಲಿ ಸತಿಸಹಗಮನ ಪದ್ಧತಿ ಇತ್ತು ಎಂಬುದನ್ನು ಮನಗಾಣಬೇಕು. ಈ ಪದ್ಧತಿಗೆ ಆಧಾರವಾಗಿ ಹಾವೇರಿ ಪರಿಸರದಲ್ಲಿ ಒಂದು ಜೈನ ಸತಿ ಶಿಲ್ಪ ದೊರೆತಿದೆ.

ಸದ್ಯ ಕನ್ನಡ ಸಂಶೋಧನಾ ಸಂಸ್ಥೆ (ಕೆ.ಆರ್.ಐ) ಧಾರವಾಡದಲ್ಲಿ ಇರುವ ಬಾಳೂರಿನ ನಿಸಿಧಿ ಶಾಸನ ಶಿಲ್ಪವೊಂದರಲ್ಲಿ ಅಪರೂಪದ ಜೈನ ಮಹಾಸತಿ ಚಿತ್ರಣಗೊಂಡಿದ್ದಾಳೆ. ಇದರಲ್ಲಿರುವ ಶಾಸನವು ಕ್ರಿ.ಶ. ೧೧೯೭ರದ್ದಾಗಿದ್ದು ಬಾಳೂರು ಮುದ್ದುಗೌಡನು ಸಮಾಧಿ ಮರಣವನ್ನು ಆಹ್ವಾನಿಸಿದ್ದಾಗಿ ತಿಳಿದುಬರುತ್ತದೆ.[೫೯] ಇದು ಎರಡು ಹಂತದ ಶಿಲ್ಪವನ್ನು ಒಳಗೊಂಡಿದ್ದು ಮೊದಲ ಹಂತದಲ್ಲಿ ಎತ್ತರ ಪೀಠದಲ್ಲಿ ಮುನಿಯೊಬ್ಬ ಶೃತಪೀಠದ ಮುಂದೆ ಕುಳಿತು ಮುದ್ದುಗೌಡನಿಗೆ ವ್ರತ ಬೋಧಿಸುತ್ತಿದ್ದಾನೆ. ಈ ಕ್ರಿಯೆಯ ಬಲಭಾಗದಲ್ಲಿ ಮುದ್ದುಗೌಡ ಕೈಮುಗಿದು ಕುಳಿತು ವ್ರತ ಸ್ವೀಕಾರ ಮಾಡುತ್ತಿದ್ದಾನೆ. ಈ ಶಿಲ್ಪದ ಹಿಂದೆ ಮುದ್ದುಗೌಡನ ಸತಿ ಬಲಗೈಯನ್ನು ಎತ್ತಿ ತೋರಿಸುತ್ತಾ ನಿಂತಿದ್ದಾಳೆ. ಎರಡನೆ ಹಂತದಲ್ಲಿ ಬಲಭಾಗಕ್ಕೆ ನಿಂತ ಜಿನಶಿಲ್ಪ ಪಕ್ಕದಲ್ಲಿ ಎತ್ತರದ ಪೀಠವೊಂದರಲ್ಲಿ ಮುದ್ದುಗೌಡ ಕೈಮುಗಿದು ಕುಳಿತಿದ್ದಾನೆ. ಅವನ ಪಕ್ಕದಲ್ಲಿ ಅವನ ಸತಿಯೂ ಕೈ ಮುಗಿದು ನಿಂತಿದ್ದಾಳೆ.

ಮುದ್ದುಗೌಡನ ಹೆಂಡತಿ ಮಹಾಸತಿಯಾದಳು ಎಂಬುದಕ್ಕೆ ಶಿಲ್ಪಿಯು ಸಮಕಾಲೀನ ಮಹಾಸತಿ ಶಿಲ್ಪಗಳಂತೆಯೇ ಒಂದು ಕೈಯನ್ನು ಮೇಲೆ ಎತ್ತಿ ತೋರಿಸಿದ್ದಾನೆ. ಕೈಯಲ್ಲಿ ಲಿಂಬೆಹಣ್ಣು, ತಲೆಯ ಹಿಂದೆ ಕೇದಿಗೆಯ ಅಲಂಕರಣವನ್ನು ತಂದಿದ್ದಾನೆ. ಮಹಾಸತಿಯ ಕೈ ಎತ್ತುವಿಕೆಯ ಗುರುತು ಹರಸುವಿಕೆಯ ಸಂಕೇತ. ಜೈನಧರ್ಮ ಮಹಾಸತಿಯ ಪದ್ಧತಿಯನ್ನು ಅಳವಡಿಸಿಕೊಳ್ಳದಿದ್ದರೂ ಸಮಕಾಲೀನ ಪ್ರೇರಣೆ ಪ್ರಭಾವದಿಂದ ಮಹಾಸತಿಯಾದ್ದಕ್ಕೆ ಬಾಳೂರು ಮುದ್ದುಗೌಡನ ಹೆಂಡತಿ ಸಾಕ್ಷಿಯಾಗಿ ನಿಲ್ಲುತ್ತಾಳೆ. ಈ ಶಿಲ್ಪ ಸ್ವತಂತ್ರ ಮಹಾಸತಿ ಶಿಲ್ಪವಾಗಿರದೇ ಇರುವುದರಿಂದ ಇದೊಂದು 'ನಿಸಿಧಿ ಮಹಾಸತಿ ಶಿಲ್ಪ'ವೆಂದು ಅನ್ನಲಡ್ಡಿಯಿಲ್ಲ.

ಜೈನ ಶಾಸನ ಶಿಲ್ಪಗಳ ರಚನೆಗೆ ಶಾಸ್ತ್ರಕ್ರಮಗಳಿರದಿದ್ದರೂ ಸಾಂದರ್ಭಿಕವಾಗಿ ವ್ಯಕ್ತವಾದ ಸಲಹೆಗಳು, ಸಮಕಾಲೀನ ಶಾಸನ ಶಿಲ್ಪಗಳ ಪ್ರಭಾವಗಳು ಮಾರ್ಗದರ್ಶಿಗಳಾದವು. ಒಂದು ಕಾಲದಲ್ಲಿ ಹುಟ್ಟಿದ ಜೈನ ಶಾಸನ ಶಿಲ್ಪ ಪದ್ಧತಿ ಪರಂಪರೆಯ ಬಳುವಳಿಯಾಗಿ ಮುಂದುವರೆದುಕೊಂಡು ಬಂದು ಚತುರುಮತಿ ಶಿಲ್ಪಿಗಳ ಹಸ್ತ ಕೌಶಲ್ಯದಿಂದ ಅವಸ್ಥಾಭೇಧಗಳನ್ನು ಕಂಡುಕೊಂಡಿತು. ಬಸದಿಯ ತೀರ್ಥಂಕರರ ಪಾದಪೀಠದ ಮೇಲು ಶಾಸನವಿದ್ದು ಆ ಶಿಲ್ಪಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಿಲ್ಲ. ಶಾಸನಗಳಿಗೆ ವ್ಯಕ್ತವಾದ ಶಿಲ್ಪಗಳನ್ನು ಮಾತ್ರ ಅಧ್ಯಯನದ ವ್ಯಾಪ್ತಿಗೆ ತರಲಾಗಿದೆಯೆ ಹೊರತು ಶಿಲ್ಪಕ್ಕೆ ಅನುಗುಣವಾಗಿ ಬಂದ ಶಿಲ್ಪಶಾಸನಗಳನಲ್ಲ. ಅದು ಒಂದು ಪ್ರತ್ಯೇಕ ಅಧ್ಯಯನ.

ಶಾಸನಗಳು ಕೇವಲ ಅಕ್ಷರ ಪ್ರತಿನಿಧಿಗಳಾಗಿ ಅಷ್ಟೇ ಇರದೆ ಅವು ವಿಸ್ತರಿಸಿಕೊಂಡ ಬಗೆ, ಆಳದಲ್ಲಿ ಹುದಿಗಿಸಿ ಇಟ್ಟುಕೊಂಡ ಸಾಹಿತ್ಯ, ಶಿಲ್ಪ ವೈವಿಧ್ಯತೆಯ ತವರುಮನೆಗಳಾಗಿವೆ. ಅಷ್ಟೇ ಅಲ್ಲದೆ ವ್ಯಕ್ತಿವರ್ಣನೆ, ಗುಣಾವಳಿಗಳು, ಭಾಷೆ, ರಚನೆ, ಹೊಗಳಿಕೆ, ಕಾಲ ನಿರ್ಣಯದ ಪಂಚಾಂಗ

ದೃಷ್ಟಿಯಲ್ಲಿ ಕಾರ್ಯ ನಿರ್ವಹಿಸಿವೆ. ಸಾಮಾಜಿಕ ಬದ್ಧತೆಯ ಶಾಪಾಶಯಗಳನ್ನು ತರುವಲ್ಲಿ ಅವು ವಿಫಲವಾಗದೆ ನಿತ್ಯ ಎನ್ನುವಂತೆ ಶಾಪಗಳನ್ನೂ ಅಳವಡಿಸಿಕೊಂಡವು. ಕವಿಗಳು-ಲಿಪಿಕಾರರು-ರೂವಾರಿಗಳೆಂಬ ಶ್ರಮ ಸಂಸ್ಕೃತಿಯ ಹರಿಕಾರರಿಗೆ ಅನ್ನದ ಮಾರ್ಗ ತೋರಿದ್ದು ಶಾಸನಗಳ ಇನ್ನೊಂದು ಪರಿಧಿ. ಈ ಎಲ್ಲಾ ಆಯಾಮಗಳ ಅಧ್ಯಯನ ಭೂಮಿಕೆಯನ್ನು ಹಾವೇರಿ ಜಿಲ್ಲೆಯ ಜೈನ ಶಾಸನಗಳು ಅಳವಡಿಸಿಕೊಂಡಿರುವುದು ಅಧ್ಯಯನ ಯೋಗ್ಯವೇ ಸರಿ.

## ಅಡಿ ಟಿಪ್ಪಣಿಗಳು

೧. ಸೌ.ಇ.ಇ.೧೮. ನಂ-೨೯೪ ಕೆನಗೊಂಡ. ಕ್ರಿ.ಶ.೧೧೭೭ ಪು ೩೭೮.
೨. ಕನ್ನಡ ವಿಷಯ ವಿಶ್ವಕೋಶ-ಇತಿಹಾಸ ಮತ್ತು ಪುರಾತತ್ವ. ಪು ೨೨೨.
೩. ಸೂರ್ಯನಾಥ ಕಾಮತ್-ಕರ್ನಾಟಕದ ಸಂಕ್ಷಿಪ್ತ ಇತಿಹಾಸ. ಪು ೪೮.
೪. ಸೌ.ಇ.ಇ.೧೮.ನಂ-೧೫೯ ಹಾವೇರಿ. ಕ್ರಿ.ಶ ೧೧೫೭. ಪು ೨೧೭
೫. ಎ.ಕ.೨. ನಂ-೧ ಚಿಕ್ಕಬೆಟ್ಟ (ಶ್ರವಣಬೆಳಗೊಳ) ೬-೭ನೇ ಶ. ಪು ೦೩-೦೪.
೬. ಹನುಮಾಕ್ಷಿ ಗೋಗಿ-ಜಿನಸಮಯ. ಅನುಬಂಧ ಶಾಸನಗಳು ನಂ-೦೯.
೭. ಅದೇ., ಅನುಬಂಧ ಶಾಸನಗಳು ನಂ-೦೯.
೮. ಅದೇ., ಅನುಬಂಧ ಶಾಸನಗಳು. ನಂ-೦೯.
೯. ಮಿರ್ಜಿ ಅಣ್ಣಾರಾಯ-ಜೈನಧರ್ಮ. ಪು ೨೩೮.
೧೦. ಹನುಮಾಕ್ಷಿ ಗೋಗಿ, ಪೂರ್ವೋಕ್ತ, ಅನುಬಂಧ ಶಾಸನಗಳು ನಂ-೦೯.
೧೧. ಅದೇ., ಪು೭೭ ಮತ್ತು ೮೭.
೧೨. ಕೆ.ಎಸ್.ಪಾಟೀಲ ಅವರು ಕೊಟ್ಟ ಪಾಠ.
೧೩. ಬಾ.ರಾ. ಗೋಪಾಲ-ಬನವಾಸಿ ಕದಂಬರು. ಪು ೧೬-೧೮.
೧೪. ಎ.ಇಂ.೩೨ ನಂ-೩೮ ಶಿಗ್ಗಾವಿ. ಕ್ರಿ.ಶ. ೭೦೮. ಪು ೩೧೭-೩೨೪.
೧೫. ರವಿಕುಮಾರ ಕೆ.ನವಲಗುಂದ- ಉಪಸರ್ಗ್ಗ. ಪು ೧೯.
೧೬. ಸೌ.ಇ.ಇ.೧೮.ನಂ-೧೫೧ ನೇರಲಗೆ. ಪು ೨೦೨.
೧೭. ಅದೇ., ನಂ-೩೪೫ ಕಾಗಿನೆಲೆ. ಪು ೩೪೪. ಮತ್ತು ನಂ-೧೮೦. ನದಿಹರಳಹಳ್ಳಿ. ಪು ೨೪೯.
೧೮. ಕ.ಇ.೦೧. ನಂ- ೦೩.ಆಡೂರು ಕ್ರಿ.ಶ. ೭೫೦. ಪು ೦೮.
೧೯. ಎಂ.ಬಿ.ನೇಗಿನಹಾಳ-ನೇಗಿನಹಾಳ ಪ್ರಬಂಧಗಳು. ಪು ೪೫೦.
೨೦. ಅದೇ., ಪು ೪೫೦-೪೫೩.
೨೧. ರವಿಕುಮಾರ. ಕೆ. ನವಲಗುಂದ. ಪೂರ್ವೋಕ್ತ. ಪು ೮೨.
೨೨. ಶಿವಕೋಟ್ಯಾಚಾರ್ಯ ವಿರಚಿತ ವಡ್ಡಾರಾಧನೆ (ಸಂ)ಡಿ.ಎಲ್. ನರಸಿಂಹಾಚಾರ್. ಪು ೧೩೮.
೨೩. ಹನುಮಾಕ್ಷಿ ಗೋಗಿ, ಪೂರ್ವೋಕ್ತ. ಪು ೭೩.
೨೪. ರವಿಕುಮಾರ ಕೆ.ನವಲಗುಂದ, ಪೂರ್ವೋಕ್ತ. ಪು ೩೮.
೨೫. ಬಾ.ರಾ.ಗೋಪಾಲ. ಪೂರ್ವೋಕ್ತ, ಪು ೬೪.
೨೬. ಕದಂಬರ ಒಂದು ನಾಣ್ಯ.
೨೭. ದೇವಚಂದ್ರ ಸಂಪುಟ ರಾಜಾವಳಿ ಕಥಾಸಾರ-ಸಂ.ಪ್ರೊ.ಎಚ್.ಜೆ.ಲಕ್ಕಪ್ಪಗೌಡ. ಪು ೧೨೧.
೨೮. ಹಂಪನಾಗರಾಜಯ್ಯ-ಚಂದ್ರಕೊಡೆ. ಪು ೪೭೭.
೨೯. ಎ.ಇಂ.೩೨. ನಂ-೩೮ ಪೂರ್ವೋಕ್ತ, ಪು ೩೧೭-೩೨೪
೩೦. ಕ.ಇ.೦೧.ನಂ-೦೩ ಪೂರ್ವೋಕ್ತ, ಪು ೦೮.
೩೧. ರವಿಕುಮಾರ ಕೆ.ನವಲಗುಂದ ಪೂರ್ವೋಕ್ತ, ಪು ೧೦೨-೧೦೬.
೩೨. ಸೌ.ಇ.ಇ.೧೮. ನಂ-೩೯೦ ಹಾವೇರಿ. ೧೩ನೇ ಶ. ಪು ೪೬೮.
೩೩. ರವಿಕುಮಾರ ಕೆ.ನವಲಗುಂದ, ಪೂರ್ವೋಕ್ತ, ಪು ೧೦೧.
೩೪. ಬಂಧುವರ್ಮ ಸಂಪುಟ, ಜೀವಸಂಬೋಧನಂ ಹರಿವಂಶಾಭ್ಯುದಯಂ-ಸಂ. ಬಿ.ಎಸ್.ಸಣ್ಣಯ್ಯ. ಪು ೩೭೨.
೩೫. ಅದೇ., ಪು ೩೭೨.

೩೬. ತುಳುನಾಡಿನ ಜೈನಶಾಸನಗಳು (ಸಂ). ದೇವರಕೊಂಡಾರೆಡ್ಡಿ, ಜಯಪ್ರಕಾಶ ಮಾವಿನಕುಳಿ. ಪು ೪೦-೪೧.
೩೭. ಬಾ.ರಾ.ಗೋಪಾಲ. ಪೂರ್ವೋಕ್ತ., ಪು ೧೯-೨೦ ಮತ್ತು ೬೩-೬೪.
೩೮. ಶಾಸನ ಸಾಹಿತ್ಯ ಸಂಚಯ-ಸಂ. ಎ.ಎಂ.ಅಣ್ಣಿಗೇರಿ., ಮೇವುಂಡಿ ಮಲ್ಲಾರಿ. ಪು ೬೫.
೩೯. ಅಪ್ಪಣ್ಣ ಎನ್.ಹಂಜೆ-ಅರಟಾಳದ ಪಾರ್ಶ್ವನಾಥ ಜಿನಾಲಯ ವಾಸ್ತು-ಶಿಲ್ಪ-ಶಾಸನ ಪು ೧೯.
೪೦. ಹನುಮಾಕ್ಷಿ ಗೋಗಿ, ಪೂರ್ವೋಕ್ತ. ಪು ೮೭.
೪೧. ಸೌ.ಇ.ಇ.೧೮. ನಂ-೨೯೩ ಗುತ್ತಲ. ಕ್ರಿ.ಶ. ೧೧೬೨. ಪು ೩೭೭.
೪೨. ರವಿಕುಮಾರ ಕೆ.ನವಲಗುಂದ, ಪೂರ್ವೋಕ್ತ, ಪು ೧೦೬.
೪೩. ಹನುಮಾಕ್ಷಿ ಗೋಗಿ, ಪೂರ್ವೋಕ್ತ, ಅನುಬಂಧ ಶಾಸನ ನಂ-೦೯.
೪೪. ಅದೇ., ಪು ೭೩.
೪೫. ಹಂಪ ನಾಗರಾಜಯ್ಯ, ಪೂರ್ವೋಕ್ತ, ಪು ೧೧೯.
೪೬. ಬಾ.ರ.ಗೋಪಾಲ, ಪೂರ್ವೋಕ್ತ, ಪು ೧೬-೧೮ ಮತ್ತು ೧೮-೨೦, ಎ.ಇಂ.೩೨. ನಂ-೩೮ ಶಿಗ್ಗಾವಿ, ಕ್ರಿ.ಶ.೭೦೮, ಪು ೩೧೭-೩೨೮.
೪೭. ಕ.ಇ೦೬.ನಂ-೦೧ ಮೇದೂರು. ಕ್ರಿ.ಶ. ೭೯೩-೮೧೪. ಪು೦೨.
೪೮. ಸೌ.ಇ.ಇ.೧೮.ನಂ- ೩೧೫ ರಾಣೆಬೆನ್ನೂರು, ಕ್ರಿ.ಶ. ೮೫೯-೬೦. ಪು ೩೧೪-೩೧೫.
೪೯. ಪಿ.ವಿ.ನಾರಾಯಣ-ಚಂಪೂ ನುಡಿಗನ್ನಡಿ ಪು ೩೨೭.
೫೦. ಸೌ.ಇ.ಇ.೧೮. ನಂ- ೩೮೨ ಕಡಕೋಳ. ಕ್ರಿ.ಶ. ೧೨೭೯. ಪು ೪೬೩.
೫೧. ರವಿಕುಮಾರ ಕೆ.ನವಲಗುಂದ, ಪೂರ್ವೋಕ್ತ. ಪು ೯೬.
೫೨. ಸೌ.ಇ.ಇ.೧೮.ನಂ-೨೭೪ ಸಂಗೂರು. ಕ್ರಿ.ಶ. ೧೫೯೬. ಪು ೩೫೭.
೫೩. ಕ.ಇ೦೬.ನಂ-೫೦ ಹಿರೇಕೋಣತಿ. ಕ್ರಿ.ಶ. ೧೨೭೮. ಪು ೧೪೯.
೫೪. ಹನುಮಾಕ್ಷಿ ಗೋಗಿ, ಪೂರ್ವೋಕ್ತ, ಅನುಬಂಧ ಶಾಸನಗಳು ನಂ-೦೯.
೫೫. ಸೌ.ಇ.ಇ.೧೮.ನಂ-೧೫೧ ನೇರಲಗಿ. ಕ್ರಿ.ಶ. ೧೧೪೮. ಪು ೨೦೧
೫೬. ಹನುಮಾಕ್ಷಿ ಗೋಗಿ, ಪೂರ್ವೋಕ್ತ, ಅನುಬಂಧ ಶಾಸನಗಳು ನಂ-೦೮.
೫೭. ಕ.ಇ.೦೧. ನಂ-೦೩ ಆಡೂರು. ಕ್ರಿ.ಶ. ೭೫೦. ಪು ೦೮.
೫೮. ರವಿಕುಮಾರ ಕೆ. ನವಲಗುಂದ, ಪೂರ್ವೋಕ್ತ, ಪು ೩೮.
೫೯. ಹನುಮಾಕ್ಷಿ ಗೋಗಿ, ಪೂರ್ವೋಕ್ತ, ಅನುಬಂಧ ಶಾಸನಗಳು ನಂ- ೦೮
೬೦. ಸೌ.ಇ.ಇ.೧೮.ನಂ-೩೮ ಕದರಮಂಡಲಗಿ. ೯-೧೦ನೇ ಶ. ಪು ೨೪.
೬೧. ಅದೇ., ನಂ-೧೫೧ ನೇರಲಗೆ. ಕ್ರಿ.ಶ. ೧೧೪೮. ಪು ೨೦೨.
೬೨. ಹನುಮಾಕ್ಷಿ ಗೋಗಿ, ಪೂರ್ವೋಕ್ತ. ಪು ೭೩.
೬೩. ರವಿಕುಮಾರ ಕೆ. ನವಲಗುಂದ, ಪೂರ್ವೋಕ್ತ, ಪು ೧೯.
೬೪. ಸೌ.ಇ.ಇ.೧೮.ನಂ-೩೮. ಕದರಮಂಡಲಗಿ. ೯-೧೦ನೇ.ಶ. ಪು ೨೪.
೬೫. ಬಾ.ರಾ.ಗೋಪಾಲ, ಪೂರ್ವೋಕ್ತ. ಪು ೧೭ ಮತ್ತು ೬೩.
೬೬. ಎ.ಇಂ.೩೨. ನಂ-೩೮. ಶಿಗ್ಗಾವಿ. ಕ್ರಿ.ಶ. ೭೦೮. ಪು ೩೧೯-೩೨೫.
೬೭. ಕ.ಇ೦೬. ನಂ-೦೧ ಮೇದೂರು. ಕ್ರಿ.ಶ. ೭೯೩-೮೧೪. ಪು ೦೨.
೬೮. ಇತಿಹಾಸ ದರ್ಶನ ಸಂ- ೨೭. ಪು ೮೭.
೬೯. ಹನುಮಾಕ್ಷಿ ಗೋಗಿ, ಪೂರ್ವೋಕ್ತ. ಪು ೮೭.
೭೦. ಸೌ.ಇ.ಇ.೧೮. ನಂ-೧೫೧ ನೇರಲಗಿ. ಕ್ರಿ.ಶ. ೧೧೪೮. ಪು ೨೦೧.

೭೧. ಸೌ.ಇ.ಇ.೧೮. ನಂ–೨೯೩. ಗುತ್ತಲ. ಕ್ರಿ.ಶ. ೧೧೬೨. ಪು ೩೭೭.

೭೨. ರವಿಕುಮಾರ ಕೆ.ನವಲಗುಂದ. ಪೂರ್ವೋಕ್ತ. ಪು ೧೦೬.

೭೩. ಶಾಸನ ಅಧ್ಯಯನ ಸಂ–೦೧. ಸಂಚಿಕೆ–೦೧. ಪು ೭೧.

೭೪. ಧಾರ್ಮಿಕ ವಿಧಿವಿಧಾನಗಳ ಮೂಲಕ ವ್ಯಕ್ತಿಯೇ ಸಾವನ್ನು ಕರೆಯುವುದು. ಜೈನರು ಈ ಪದ್ಧತಿಯನ್ನು ಬಹುವಾಗಿ ಆಚರಿಸಿದರು. ಈಗಲೂ ಈ ಪದ್ಧತಿ ಇದೆ. ಸಲ್ಲೇಖನ, ಸಮಾಧಿ, ಸಂನ್ಯಸನ ಇತ್ಯಾದಿ ವ್ರತಗಳನ್ನು ಆಚರಿಸಿ ಪ್ರಾಣತ್ಯಾಗ ಮಾಡಿದ ಅದೆಷ್ಟೋ ಮುನಿಗಳು ಶ್ರಾವಕರು, ಶ್ರಾವಕಿಯರು ಕರ್ನಾಟಕ ಪ್ರದೇಶದಲ್ಲಿದ್ದಾರೆ. ಶಾಸನಗಳೂ ಈ ರೀತಿಯ ಮರಣಿಗರನ್ನು ಉತ್ಕೀರ್ತಿಸಿವೆ.

೭೫. ಸತಿಸಹಗಮನ ಮೊದಮೊದಲು ಬಲವಂತವಾಗಿದ್ದು, ತದನಂತರ ಧರ್ಮದ ಒಂದು ಕಟ್ಟುಪಾಡದಂತೆ ತೋರುತ್ತದೆ. ಬೆಳತೂರಿನ ದೇಕಬ್ಬೆ ಇದಕ್ಕೊಂದು ಉದಾಹರಣೆಯಾಗಿ ನಿಲ್ಲುತ್ತಾಳೆ.

೭೬. ಎಂ.ಚಿದಾನಂದಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ಪು ೧೦೦.

೭೭. ಹಾವೇರಿ ಪರಿಸರದ ವಿವಿಧ ನಿಸಿಧಿ ಸ್ಮಾರಕಗಳಲ್ಲಿ ಈ ಪದಗಳಿವೆ. 'ಚಂದಯನ ನಿಷಧಿಗೆ' ಕಡಕೋಳ, 'ಚಾಮೋಜನ ನಿಸಿಧಿಗೆ' –ಬಾಳೇಯಹಳ್ಳಿ ಇತ್ಯಾದಿ.

೭೮. ಷ.ಶೆಟ್ಟರ್– ಸಾವಿಗೆ ಆಹ್ವಾನ. ಪು ೧೦೫.

೭೯. ಅದೇ., ಪು ೧೧೦.

೮೦. ಶ್ರೀ ಸಮಂತ ಭದ್ರಾಚಾರ್ಯ ಕೃತ ರತ್ನಕರಂಡಕ ಶ್ರಾವಕಾಚಾರ (ಸಂ). ಬಾ.ಬ್ರ ಸೋಮದೇವ ಭೈಯಾಜಿ.ಪು ೧೨೧.

೮೧. ಕೆ.ಐ.೦೫. ನಂ–೨೧ ತೇರದಾಳ. ಕ್ರಿ.ಶ. ೧೧೨೫. ಪು ೭೯.

೮೨. ವೆಂಕಟಾಚಲಶಾಸ್ತ್ರಿ ಟಿ.ವಿ., ರಾಘವೇಂದ್ರರಾವ್ ಕೆ. –ಸಂ. ಬ್ರಹ್ಮಶಿವ ವೃತ್ತಿ ವಿಲಾಸ ಸಂಪುಟ. ಪು ೫೩.

೮೩. ರವಿಕುಮಾರ ಕೆ.ನವಲಗುಂದ. ಪೂರ್ವೋಕ್ತ. ಪು ೩೯.

೮೪. ಅದೇ., ಪು ೩೬ ಮತ್ತು ೫೧.

೮೫. ಷ.ಶೆಟ್ಟರ್., ಪೂರ್ವೋಕ್ತ. ಪು ೧೧೫.

೮೬. ರವಿಕುಮಾರ ಕೆ.ನವಲಗುಂದ. ಪೂರ್ವೋಕ್ತ. ಪು ೨೨, ಹನುಮಾಕ್ಷಿ ಗೋಗಿ – ಜಿನಸಮಯ. ಪು ೭೫.

೮೭. ಎ.ಕ.೦೨ ನಂ–೩೬೪ ದೊಡ್ಡ ಬೆಟ್ಟ (ಶ್ರವಣಬೆಳಗೊಳ). ಪು ೨೩೧.

೮೮. ಬಾ.ಬ್ರ, ಸೋಮದೇವ ಭೈಯಾಜಿ, ಪೂರ್ವೋಕ್ತ. ಪು ೧೧೭.

೮೯. ಎ.ಕ.೦೨.ನಂ–೬೪.ಚಿಕ್ಕಬೆಟ್ಟ (ಶ್ರವಣಬೆಳಗೊಳ). ಪು ೨೩.

೯೦. ಹನುಮಾಕ್ಷಿ ಗೋಗಿ, ಪೂರ್ವೋಕ್ತ. ಅನುಬಂಧ ಶಾಸನಗಳು ನಂ– ೦೯.

೯೧. ಅದೇ., ಪು ೮೫–೮೬.

೯೨. ರವಿಕುಮಾರ ಕೆ.ನವಲಗುಂದ. ಪೂರ್ವೋಕ್ತ. ಪು ೧೦೩.

೯೩. ಸೌ.ಇ.ಇ.೧೮. ನಂ–೧೫೧ ನೇರಲಗಿ ಕ್ರಿ.ಶ.೧೧೪೮. ಪು ೨೦೨.

೯೪. ಎ.ಇಂ.೩೨.ನಂ– ೩೮ ಶಿಗ್ಗಾವಿ. ಕ್ರಿ.ಶ. ೭೦೮. ಪು ೩೧೭–೩೨೪.

೯೫. ಸೌ.ಇ.ಇ.೧೮ ನಂ–೩೮.ಕದರಮಂಡಲಗಿ. ೦೯–೧೦ನೇ ಶ. ಪು ೨೪.

೯೬. ರವಿಕುಮಾರ ಕೆ.ನವಲಗುಂದ. ಪೂರ್ವೋಕ್ತ. ಪು ೧೦೨.

೯೭. ಹನುಮಾಕ್ಷಿ ಗೋಗಿ ಪೂರ್ವೋಕ್ತ. ಅನುಬಂಧ ಶಾಸನಗಳು. ನಂ–೧೦.

೯೮. ರವಿಕುಮಾರ ಕೆ.ನವಲಗುಂದ. ಪೂರ್ವೋಕ್ತ. ಪು ೧೦೩.

೯೯. ಸೌ.ಇ.ಇ.೧೮ ನಂ–೩೮ ಪೂರ್ವೋಕ್ತ. ಪು೨೪.

೧೦೦. ಅಪ್ಪಣ್ಣ ಎನ್.ಹಂಜೆ, ಪೂರ್ವೋಕ್ತ ಪು ೧೯.

೧೦೧. ಹನುಮಾಕ್ಷಿ ಗೋಗಿ, ಪೂರ್ವೋಕ್ತ. ಪು ೮೬

೧೦೨. ಸೌ.ಇ.ಇ.೧೮ ನಂ-೧೫೧ ಪೂರ್ವೋಕ್ತ. ಪು ೧೦೨-೧೦೩.

೧೦೩. ರವಿಕುಮಾರ ಕೆ.ನವಲಗುಂದ. ಪೂರ್ವೋಕ್ತ. ಪು ೨೦೦.

೧೦೪. ಸೌ.ಇ.ಇ.೧೮ ನಂ-೩೫೧ ಅಕ್ಕೂರು. ೧೨ನೇ ಶ. ಪು ೪೪೩. ಮತ್ತು ಅದೇ., ನಂ-೨೭೪ ಸಂಗೂರು. ಕ್ರಿ.ಶ.೧೩೯೬. ಪು ೩೫೬.

೧೦೫. ಬಾ.ರಾ.ಗೋಪಾಲ, ಪೂರ್ವೋಕ್ತ, ಪು ೬೩.

೧೦೬. ಹನುಮಾಕ್ಷಿ ಗೋಗಿ. ಪೂರ್ವೋಕ್ತ. ಪು ೮೪.

೧೦೭. ಟಿ.ವಿ. ವೆಂಕಟಾಚಲಶಾಸ್ತ್ರಿ (ಸಂ)-ಪಂಪಭಾರತ, ಪು ೨೮.

೧೦೮. ಸೌ.ಇ.ಇ.೧೮ ನಂ-೨೭೪ ಸಂಗೂರು. ಕ್ರಿ.ಶ. ೧೩೯೬. ಪು ೩೫೬.

೧೦೯. ಹುಲಗೂರು (ಶಿಗ್ಗಾವಿ ತಾ) ಗರಡಿ ಮನೆಯಲ್ಲಿರುವ ಶಾಸನ. ೧೨ನೇ ಶ. ಮತ್ತು ಸೌ.ಇ.ಇ.೧೮ ನ-೧೫೧ ನೇರಲಗಿ. ಕ್ರಿ.ಶ. ೧೧೪೮. ಪು ೨೦೧.

೧೧೦. ರವಿಕುಮಾರ ಕೆ.ನವಲಗುಂದ. ಪೂರ್ವೋಕ್ತ. ಪು ೧೦೨-೧೦೩.

೧೧೧. ಇತಿಹಾಸ ದರ್ಶನ ಸಂ-೨೭. ಪು ೮೨.

೧೧೨. ಹನುಮಾಕ್ಷಿ ಗೋಗಿ, ಪೂರ್ವೋಕ್ತ. ಅನುಬಂಧ ಶಾಸನಗಳು ನಂ- ೦೮.

೧೧೩. ಅದೇ., ಪು ೭೧.

೧೧೪. ಸೌ.ಇ.ಇ.೧೮ ನಂ-೧೫೧ ನೇರಲಗಿ, ಕ್ರಿ.ಶ. ೧೧೪೮. ಪು ೨೦೧.

೧೧೫. ರವಿಕುಮಾರ ಕೆ.ನವಲಗುಂದ. ಪೂರ್ವೋಕ್ತ. ಪು ೧೦೪.

೧೧೬. ಅದೇ., ೮೨.

೧೧೭. ಅದೇ., ೬೬.

೧೧೮. ಮಲ್ಲಿಕಾರ್ಜುನ ಕೆ.ಮಾಳಿ., ವಿ.ಎಸ್.ಬಿರಾದರ್., ಬಿ.ಎಸ್.ನರೋಡೆ ಅಶೋಕ (ಸಂ)-ಡಾ.ಆರ್.ಸಿ.ಹಿರೇಮಠರ ಶಾಸನ ಅಧ್ಯಯನ. ಪು ೫೩.

೧೧೯. ಬ್ರಹ್ಮಶಿವ-ವೃತ್ತಿವಿಲಾಸ ಸಂಪುಟ (ಸಂ). ಟಿ.ವಿ.ವೆಂಕಟಾಚಲಶಾಸ್ತ್ರಿ, ಡಿ.ವಿ.ರಾಘವೇಂದ್ರರಾವ್ ಪು೧೧೮.

೧೨೦. ಬಾ.ರಾ. ಗೋಪಾಲ, ಪೂರ್ವೋಕ್ತ ಪು ೧೯.

೧೨೧. ಸೌ.ಇ.ಇ.೧೮ ನಂ-೭೧. ಮೋಟೆಬೆನ್ನೂರು. ಕ್ರಿ.ಶ.೧೦೬೬. ಪು ೬೫.

೧೨೨. ರವಿಕುಮಾರ ಕೆ.ನವಲಗುಂದ. ಪೂರ್ವೋಕ್ತ. ಪು ೧೯.

೧೨೩. ಸೌ.ಇ.ಇ.೧೮ ನಂ- ೧೫೧. ನೇರಲಗಿ. ಕ್ರಿ.ಶ.೧೧೪೮. ಪು ೨೦೦.

೧೨೪. ಹಂಪ ನಾಗರಾಜಯ್ಯ, ಪೂರ್ವೋಕ್ತ, ಪು ೨೬೯.

೧೨೫. ಸೌ.ಇ.ಇ.೧೮ ನಂ- ೧೫೧. ಅದೇ ಪು ೨೦೧.

೧೨೬. ಹಂಪ ನಾಗರಾಜಯ್ಯ, ಪೂರ್ವೋಕ್ತ, ಪು ೨೭೪.

೧೨೭. ಸೌ.ಇ.ಇ.೧೮ ನಂ- ೩೪೫. ಕಾಗಿನೆಲೆ, ೧೧-೧೨ನೇ ಶ. ಪು ೪೩೭.

೧೨೮. ರವಿಕುಮಾರ ಕೆ.ನವಲಗುಂದ. ಪೂರ್ವೋಕ್ತ. ಪು ೧೦೪.

೧೨೯. ಹನುಮಾಕ್ಷಿ ಗೋಗಿ, ಪೂರ್ವೋಕ್ತ. ಅನುಬಂಧ ಶಾಸನಗಳು ನಂ- ೦೯.

೧೩೦. ಕ.ಇ.೦೪. ನಂ--೧೫ ಯಮ್ಮಿಗನೂರು. ಕ್ರಿ.ಶ. ೧೧೪೯-೧೧೬೮. ಪು ೪೪

೧೩೧. ಹಂಪ ನಾಗರಾಜಯ್ಯ ಚಂದ್ರಕೊಡೆ. ಪು ೪೬

೧೩೨. ಸೌ.ಇ.ಇ. ೧೮ ನಂ-೩೭೫. ಮಾಕನೂರು. ೧೨-೧೩ ನೇ ಶ. ಪು ೪೫೭. ಮತ್ತು ಅದೇ., ನಂ-೧೪೯ ಮಾಕನೂರು. ಕ್ರಿ.ಶ. ೧೧೪೪. ಪು ೧೯೪.

೧೩೩. ಪಿ.ವಿ.ನಾರಾಯಣ, ಪೂರ್ವೋಕ್ತ, ಪು ೧೧೭.

೧೩೪. ಅದೇ., ಪು ೧೧೭.

೧೩೫. ಸೌ.ಇ.ಇ.೧೮. ನಂ-೨೭೪. ಸಂಗೂರು. ಕ್ರಿಶ. ೧೫೯೬ ಪು ೩೫೭.

೧೩೬. ಸಂಕ್ಷಿಪ್ತ ಕನ್ನಡ ನಿಘಂಟು (ಪರಿಷ್ಕೃತ) ಪು ೬೧೨.

೧೩೭. ರವಿಕುಮಾರ ಕೆ.ನವಲಗುಂದ. ಪೂರ್ವೋಕ್ತ. ಪು ೧೦೨-೧೦೩.

೧೩೮. ಹನುಮಾಕ್ಷಿ ಗೋಗಿ, ಪೂರ್ವೋಕ್ತ. ಪು ೭೦.

೧೩೯. ಅದೇ., ಪು ೭೦.

೧೪೦. ಅದೇ., ಅನುಬಂಧ ಶಾಸನಗಳು ನಂ-೦೯

೧೪೧. ಸೌ.ಇ.ಇ. ೧೮. ನಂ-೨೭೪. ಸಂಗೂರು. ಕ್ರಿ.ಶ. ೧೫೯೬. ಪು ೩೫೪.

೧೪೨. ಕೇಶವಭಟ್ಟ ಎಂ. (ಸಂ)-ನಾಡೋಜ ಪಂಪ. ಪು ೧೦೯-೧೧೦.

೧೪೩. ಸೌ.ಇ.ಇ.೧೮ ನಂ-೨೭೪ ಪೂರ್ವೋಕ್ತ. ಪು ೩೫೪.

೧೪೪. ಅಪ್ಪಣ್ಣ ಎನ್.ಹಂಜೆ ಸಮವಸರಣ. ಪು ೨೨೪.

೧೪೫. ಸಂಕ್ಷಿಪ್ತ ಕನ್ನಡ ನಿಘಂಟು (ಪರಿಷ್ಕೃತ) ಪು ೨೦೪.

೧೪೬. ಹಾವೇರಿ ಪರಿಸರದಲ್ಲಿ ಹಿಂದೆ ಇಟ್ಟಿಗೆ-೩೦, ಸತ್ತಳಿಗೆ-೭೦ (ಸಾತೇನಹಳ್ಳಿ) ರಟ್ಟಿಹಳ್ಳಿ ನೂಱುಂಬಾಡ, ಬಾಸವೂರು-೧೪೦ (ಬಾಸೂರು) ಕಂಪಣಗಳಿದ್ದವು ಊರ ಮುಂದಿರುವ ಸಂಖ್ಯೆ ಆ ಕಂಪಣದಲ್ಲಿದ್ದ ಹಳ್ಳಿಗಳ ಸಂಖ್ಯೆಯನ್ನು ಹೇಳುತ್ತದೆ.

೧೪೭. ಬಾಸವೂರು-೧೪೦ ಎಂಬುದು ಒಂದು ೧೪೦ ಹಳ್ಳಿಗಳನ್ನು ಹೊಂದಿದ ಕಂಪಣ. ಇದರ ಮುಖ್ಯ ಪಟ್ಟಣ ಬಾಸವೂರು ಆಗಿತ್ತು. ಇಂದಿನ ಹಿರೇಬಾಸೂರು (ಹಾವೇರಿ ಜಿ) ಅಂದಿನ ಬಾಸವೂರು-೧೪೦. ಇದು 'ಪದ್ಮಾವತಿ ಲಬ್ಧ ವರಪ್ರಸಾದ' ರಾದ ಒಂದು ಜೈನ ಮನೆತನದ ಆಳ್ವಿಕೆಗೆ ಒಳಪಟ್ಟಿತು. ಕಲಿಯಮರಸ ಈ ಕಂಪಣವನ್ನು ಆಳ್ವಿಕೆ ಮಾಡಿದವರಲ್ಲೊಬ್ಬ. ಇವನು ದೇವಗಿರಿ (ಹಾವೇರಿ ತಾ) ಯಲ್ಲಿ ಕ್ರಿ.ಶ. ೧೧೫೯ರಲ್ಲಿ ಶಾಂತಿನಾಥ ಜಿನಾಲಯವೊಂದನ್ನು ಕಟ್ಟಿಸಿದ.-ರವಿಕುಮಾರ ಕೆ.ನವಲಗುಂದ-ಉಪಸರ್ಗ. ಪು ೧೭.

೧೪೮. ರವಿಕುಮಾರ ಕೆ.ನವಲಗುಂದ. ಪೂರ್ವೋಕ್ತ. ಪು ೧೦೩.

೧೪೯. ಹನುಮಾಕ್ಷಿ ಗೋಗಿ, ಪೂರ್ವೋಕ್ತ, ಅನುಬಂಧ ಶಾಸನಗಳು ನಂ-೦೯.

೧೫೦. ಅದೇ., ಪು ೭೨.

೧೫೧. ರವಿಕುಮಾರ ಕೆ.ನವಲಗುಂದ. ಪೂರ್ವೋಕ್ತ. ಪು ೧೦೩.

೧೫೨. ಹನುಮಾಕ್ಷಿ ಗೋಗಿ, ಪೂರ್ವೋಕ್ತ, ಅನುಬಂಧ ಶಾಸನಗಳು ನಂ-೦೮.

೧೫೩. ಸೌ.ಇ.ಇ.೧೮ ನಂ-೨೭೪ ಸಂಗೂರು. ಕ್ರಿ.ಶ. ೧೫೯೬ ಪು ೩೫೫.

೧೫೪. ಸಾಧನೆ ಸಂ-೧೦, ಸಂಚಿಕೆ, ೦೩. ಪು ೭೪.

೧೫೫. ನೇಗಿನಹಾಳ ಎಂ.ಬಿ. - ಪೂರ್ವದ ಹಳಗನ್ನಡ ಶಾಸನಗಳ ಸಾಹಿತ್ಯಕ ಅಧ್ಯಯನ. ಪು ೮೩.

೧೫೬. ಸಿ.ವಿ.ಪಾಟೀಲ - ಕನ್ನಡ ಛಂದಶಾಸ್ತ್ರ ಪರಿಚಯ. ಪು ೩೩.

೧೫೭. ಟಿ.ವಿ.ವೆಂಕಟಾಚಲ ಶಾಸ್ತ್ರೀ-ಕನ್ನಡ ಛಂದಃಸ್ವರೂಪ, ಪು ೨೬೦.

೧೫೮. ಇತಿಹಾಸ ದರ್ಶನ. ಸಂ- ೨೭. ಪು ೮೭.

೧೫೯. ಸೌ.ಇ.ಇ.೧೮ ನಂ-೧೫೧ ನೇರಲಗಿ. ಕ್ರಿ.ಶ. ೧೧೪೮ ಪು೨೦೦.

೧೬೦. ಅದೇ., ನಂ-೩೫೦. ೧೩ನೇ.ಶ. ಪು ೪೬೮.

೧೬೧. ಡಿ.ವಿ.ವೆಂಕಟಾಚಲಶಾಸ್ತ್ರಿ. ಪೂರ್ವೋಕ್ತ. ಪು ೧೭೭.

೧೬೨. ಸಿ.ವಿ.ಪಾಟೀಲ, ಪೂರ್ವೋಕ್ತ. ಪು ೨೯.

೧೬೩. ಬಿ.ಎಂ.ಶ್ರೀಕಂಠಯ್ಯ (ಸಂ.)– ಕನ್ನಡ ಕೈಪಿಡಿ–೧. ಪು ೯೦.

೧೬೪. ಅಪ್ಪಣ ಎನ್.ಹಂಜೆ–ಅರಟಾಳದ ಪಾರ್ಶ್ವನಾಥ ಜಿನಾಲಯ ವಾಸ್ತು–ಶಿಲ್ಪ–ಶಾಸನ. ಪು೧೭.

೧೬೫. ಬಿ.ಎಂ.ಶ್ರೀಕಂಠಯ್ಯ, ಪೂರ್ವೋಕ್ತ, ಪು ೮೯.

೧೬೬. ಅಪ್ಪಣ್ಣ ಎನ್ ಹಂಜೆ. ಪೂರ್ವೋಕ್ತ. ಪು ೧೭.

೧೬೭. ಬಿ.ಎಂ.ಶ್ರೀಕಂಠಯ್ಯ, ಪೂರ್ವೋಕ್ತ, ಪು ೮೯.

೧೬೮. ಇತಿಹಾಸ ದರ್ಶನ. ಸಂ.೨೭. ಪು ೮೭.

೧೬೯. ಎ.ಕ.೦೨.ನಂ–೯೮ ಚಿಕ್ಕಬೆಟ್ಟ (ಶ್ರವಣಬೆಳಗೊಳ) ಪು ೭೦.

೧೭೦. ಬಿ.ಎಂ.ಶ್ರೀಕಂಠಯ್ಯ, ಪೂರ್ವೋಕ್ತ, ಪು ೯೦.

೧೭೧. ಸೌ.ಇ.ಇ.೧೮ ನಂ–೭೧ ಮೋಟೆಬೆನ್ನೂರು. ಕ್ರಿ.ಶ. ೧೦೬೬. ಪು೬೬.

೧೭೨. ಬಾ.ರಾ.ಗೋಪಾಲ ಪೂರ್ವೋಕ್ತ ಪು ೧೯.

೧೭೩. ಕೆ.ಇ.೦೧. ನಂ–೦೩. ಆಡೂರು. ಪು ೦೮.

೧೭೪. ಹನುಮಾಕ್ಷಿ ಗೋಗಿ, ಪೂರ್ವೋಕ್ತ. ಪು ೧೦೦.

೧೭೫. ಇತಿಹಾಸ ದರ್ಶನ ಸಂ.೨೭. ಪು ೮೭.

೧೭೬. ರವಿಕುಮಾರ ಕೆ.ನವಲಗುಂದ. ಪೂರ್ವೋಕ್ತ. ಪು ೧೦೬.

೧೭೭. ಅದೇ., ಪು೪೪.

೧೭೮. ಹು.ಕಾ.ಜಯದೇವ–ಶಾಸನ ಮತ್ತು ಗದ್ಯ. ಪು ೧೧೨–೧೧೩.

೧೭೯. ಡಿ.ವಿ.ವೆಂಕಟಾಚಲಶಾಸ್ತ್ರಿ–ಪೂರ್ವೋಕ್ತ. ಪು ೪೭.

೧೮೦. ರವಿಕುಮಾರ ಕೆ.ನವಲಗುಂದ. ಪೂರ್ವೋಕ್ತ. ಪು ೧೦೨–೧೦೩.

೧೮೧. ಅದೇ., ಪು ೧೦೨.

೧೮೨. ಸೌ.ಇ.ಇ.೧೮ ನಂ–೧೫೧ ನೇರಲಗಿ. ಕ್ರಿ.ಶ. ೧೧೪೮ ಪು೨೦೨.

೧೮೩. ಅದೇ., ಪು ೨೦೧.

೧೮೪. ಸೌ.ಇ.ಇ.೧೮ ನಂ–೩೮ ಕದರಮಂಡಲಗಿ. ೦೯–೧೦ನೇ ಶ. ಪು ೨೫.

೧೮೫. ತೀ.ನಂ–ಶ್ರೀಕಂಠಯ್ಯ– ಭಾರತೀಯ ಕಾವ್ಯ ಮೀಮಾಂಸೆ. ಪು ೧೭–೩೭.

೧೮೬. ಸೌ.ಇ.ಇ.೧೮ ನಂ–೨೭೪ ಸಂಗೂರು. ಕ್ರಿ.ಶ. ೧೩೯೬. ಪು ೩೫೭.

೧೮೭. ಅದೇ., ಪು ೩೫೪.

೧೮೮. ಇತಿಹಾಸ ದರ್ಶನ. ಸಂ–೨೭. ಪು ೮೭.

೧೮೯. ಸೌ.ಇ.ಇ.೧೮ ನಂ–೧೫೧, ನೇರಲಗಿ, ಕ್ರಿ.ಶ.೧೧೮೪, ಪು ೨೦೨, ಅದೇ., ನಂ–೭೧ ಮೋಟೆಬೆನ್ನೂರು. ಕ್ರಿ.ಶ. ೧೦೬೬. ಪು೬೫.

೧೯೦. ಅದೇ., ನಂ–೩೪೫, ಕಾಗಿನೆಲೆ. ೧೧–೧೨ನೇ.ಶ. ಪು ೪೩೭.

೧೯೧. ನಾಯಕರ ಹುಲುಗಪ್ಪ–ಶಾಸನಗಳ ಪ್ರಕಾರ ಮತ್ತು ಅವುಗಳ ಮಹತ್ವ ಪು ೧೧.

೧೯೨. ಬಾ.ರಾ.ಗೋಪಾಲ, ಪೂರ್ವೋಕ್ತ, ಪು ೧೯.

೧೯೩. ಎ.ಇಂ.೩೨.ನಂ––೩೮ ಶಿಗ್ಗಾವಿ. ಕ್ರಿ.ಶ.೭೦೮. ಪು ೨೨೦–೨೨೧.

೧೯೪. ಕ.ಇ.೦೫.ನಂ–೦೧ ಮೇದೂರು. ಕ್ರಿ.ಶ.೭೯೩–೮೧೪. ಪು ೦೨.

೧೯೫. ಸೌ.ಇ.ಇ.೧೮ ನಂ–೭೧ ಮೋಟೇಬೆನ್ನೂರು. ಕ್ರಿ.ಶ.೧೦೬೬. ಪು೬೫.

೧೯೬. ಹನುಮಾಕ್ಷಿ ಗೋಗಿ. ಪೂರ್ವೋಕ್ತ. ಅನುಬಂಧ ಶಾಸನಗಳು ನಂ– ೦೯.

೧೯೭. ರವಿಕುಮಾರ ಕೆ.ನವಲಗುಂದ. ಪೂರ್ವೋಕ್ತ. ಪು ೬೦.

೧೯೮. ಅದೆ., ಪು ೯೯.

೧೯೯. ಎಂ.ಜಿ.ಮಂಜುನಾಥ, ಜಿ.ಕೆ. ದೇವರಾಜಸ್ವಾಮಿ–ಕನ್ನಡ ಲಿಪಿ ವಿಕಾಸ ಪು ೧೩೨.

೨೦೦. ಹನುಮಾಕ್ಷಿ ಗೋಗಿ, ಪೂರ್ವೋಕ್ತ. ಪು ೯೩

೨೦೧. ಅದೇ., ಅನುಬಂಧ ಶಾಸನಗಳು ನಂ–೦೮.

೨೦೨. ಅದೆ., ಪು ೭೦.

೨೦೩. ಅಪ್ಪಣ್ಣ ಎನ್.ಹಂಜೆ. ಪೂರ್ವೋಕ್ತ. ಪು ೧೭.

೨೦೪. ರವಿಕುಮಾರ ಕೆ.ನವಲಗುಂದ. ಪೂರ್ವೋಕ್ತ. ಪು ೧೦೬.

೨೦೫. ಅದೇ., ಪು ೧೦೬.

೨೦೬. ಎಂ.ಜಿ.ಮಂಜುನಾಥ, ಜಿ.ಕೆ.ದೇವರಾಜಸ್ವಾಮಿ, ಪೂರ್ವೋಕ್ತ, ಪು ೨೨೫.

೨೦೭. ಹನುಮಾಕ್ಷಿ ಗೋಗಿ, ಪೂರ್ವೋಕ್ತ. ಪು ೮೧

೨೦೮. ಅದೇ., ಅನುಬಂಧ ಶಾಸನಗಳು

೨೦೯. ಸೌ.ಇ.ಇ.೧೮ ನಂ–೨೭೫ ಮಾಕನೂರು. ೧೨–೧೩ ನೇ ಶ. ಪು೪೫೭.

೨೧೦. ಹನುಮಾಕ್ಷಿ ಗೋಗಿ, ಪೂರ್ವೋಕ್ತ. ಪು ೧೦೫

೨೧೧. ದೇವರಕೊಂಡಾರೆಡ್ಡಿ–ಕರ್ನಾಟಕ ಶಾಸನಗಳಲ್ಲಿ ಶಾಪಾಶಯ. ಪು ೦೨.

೨೧೨. ಬಾ.ರಾ.ಗೋಪಾಲ. ಪೂರ್ವೋಕ್ತ. ಪು ೧೭.

೨೧೩. ಅದೇ., ಪು ೬೪.

೨೧೪. ಅದೇ., ಪು ೧೮.

೨೧೫. ಎ.ಇಂ.೩೨. ನಂ––೩೮. ಶಿಗ್ಗಾವಿ. ಕ್ರಿ.ಶ. ೭೦೮. ಪು ೩೨೪.

೨೧೬. ಕ.ಇ.೦೬.ನಂ–೦೧ ಮೇದೂರು. ಕ್ರಿ.ಶ. ೭೬೩–೮೧೪. ಪು ೦೨.

೨೧೭. ರಾಷ್ಟ್ರಕೂಟರ ಶಾಸನಗಳು ಸಂ–೦೧. ನಂ–೮೧. ಶಿರಗಂಬಿ. ೯ನೇ ಶ. ಪು ೧೯೫–೧೯೬.

೨೧೮. ಕ.ಇ.೦೬. ನಂ–೦೬. ಅದೇ., ಪು ೦೮.

೨೧೯. ಸೌ.ಇ.ಇ.೧೮. ನಂ–೩೧೫. ರಾಣೆಬೆನ್ನೂರು. ಕ್ರಿ.ಶ. ೮೫೯–೬೦, ಪು ೪೨೫.

೨೨೦. ಅದೇ., ನಂ–೩೨೭. ಮೋಟೇಬೆನ್ನೂರು. ೧೦ನೇ ಶ. ಪು೪೨೫.

೨೨೧. ಹನುಮಾಕ್ಷಿ ಗೋಗಿ, ಪೂರ್ವೋಕ್ತ. ಅನುಬಂಧ ಶಾಸನಗಳು ನಂ– ೦೮.

೨೨೨. ರವಿಕುಮಾರ ಕೆ.ನವಲಗುಂದ. ಪೂರ್ವೋಕ್ತ. ಪು ೧೦೬–೧೦೭.

೨೨೩. ಎ.ಕ.೦೪. ನಂ–೪೦೪ ಸೋಮಸಮುದ್ರ, ಕ್ರಿ.ಶ.೯೩.ಪು೨೬೫.

೨೨೪. ಕ.ಇ.೦೬. ನಂ–೦೧ ಮೇದೂರು. ಕ್ರಿ.ಶ. ೭೯೩–೮೧೪. ಪು ೦೨.

೨೨೫. ಎ.ಕ.೦೮.ನಂ–೨೪ ತಾಳಗುಂದ, ೫ನೇ ಶ. ಪು ೨೨೦.

೨೨೬ ಸೌ.ಇ.ಇ.೨೦ ನಂ–೭೬ ಬಾಳಂಬೀಡ. ಕ್ರಿ.ಶ. ೧೧೧೮. ಪು೫.

೨೨೭. ಎಂ.ಎಂ.ಕಲಬುರ್ಗಿ ಮಾರ್ಗ ಸಂ–೨. ಪು೨೦೧.

೨೨೮. ಅದೇ., ಪು ೧೮೮.

೨೨೯. ಅದೇ., ಪು ೧೭೧.

೨೩೦. ಅದೇ., ಪು ೧೭೯.

೨೩೧. ಸಂಕ್ಷಿಪ್ತ ಕನ್ನಡ ನಿಘಂಟು (ಪರಿಷ್ಕೃತ) ಪು.

೨೩೨. ಬಾ.ರಾ.ಗೋಪಾಲ, ಪೂರ್ವೋಕ್ತ, ಪು ೧೮.

೨೩೩. ಇ.ಆ.೦೫.ಹಲಸಿ. ಕ್ರಿ.ಶ. ೪೫೫–೪೮೦. ಪು ೨೪.

೨೩೪. ಅದೇ., ಪು ೨೯.

೨೩೫. ಬಾ.ರಾ. ಗೋಪಾಲ, ಪೂರ್ವೋಕ್ತ. ಪು ೨೦.

೨೩೬. ಸೌ.ಇ.ಇ.೧೮ ನಂ-೩೨೭ ಮೋಟೇಬೆನ್ನೂರು. ೧೦ನೇ ಶ. ಪು೪೨೫.

೨೩೭. ಹನುಮಾಕ್ಷಿ ಗೋಗಿ, ಪೂರ್ವೋಕ್ತ. ಅನುಬಂಧ ಶಾಸನಗಳು ನಂ- ೦೮.

೨೩೮. ರವಿಕುಮಾರ ಕೆ.ನವಲಗುಂದ. ಪೂರ್ವೋಕ್ತ. ಪು ೧೦೬.

೨೩೯. ಎಂ.ಎಂ.ಕಲಬುರ್ಗಿ, ಪೂರ್ವೋಕ್ತ, ಪು ೧೯೦.

೨೪೦. ಅದೇ., ಪು ೧೮೯.

೨೪೧. ಕ.ಇ.೦೬. ನಂ-೦೧, ಮೇದೂರು ಕ್ರಿ.ಶ. ೭೯೩-೮೧೪. ಪು ೦೨.

೨೪೨. ಸೌ.ಇ.ಇ.೧೮ ನಂ-೩೨೭ ಮೋಟೇಬೆನ್ನೂರು. ೧೦ನೇ ಶ. ಪು೪೨೫.

೨೪೩. ರವಿಕುಮಾರ ಕೆ.ನವಲಗುಂದ, ಪೂರ್ವೋಕ್ತ. ಪು ೧೦೬.

೨೪೪. ಹನುಮಾಕ್ಷಿ ಗೋಗಿ, ಪೂರ್ವೋಕ್ತ. ಪು ೮೩.

೨೪೫. ಎಂ.ಎಂ.ಕಲಬುರ್ಗಿ, ಪೂರ್ವೋಕ್ತ, ಪು ೧೯೭

೨೪೬. ಕ.ಇ.೦೬ ನಂ-೦೧. ಪೂರ್ವೋಕ್ತ. ಪು ೦೨.

೨೪೭. ಸೌ.ಇ.ಇ.೧೮ ನಂ-೭೧ ಮೋಟೇಬೆನ್ನೂರು. ಕ್ರಿ.ಶ.೧೦೬೬. ಪು೬೭.

೨೪೮. ಅಪ್ಪಣ್ಣ ಎನ್.ಹಂಜೆ, ಪೂರ್ವೋಕ್ತ, ಪು ೨೪.

೨೪೯. ಎಂ.ಬಿ.ನೇಗಿನಹಾಳ-ನೇಗಿನಹಾಳ ಪ್ರಬಂಧಗಳು ಪು ೪೫೦.

೨೫೦. ಹನುಮಾಕ್ಷಿ ಗೋಗಿ, ಪೂರ್ವೋಕ್ತ. ಪು ೧೦೨.

೨೫೧. ಲಕ್ಷ್ಮಣ ತೆಲಗಾವಿ (ಸಂ)-ಹರತಿಸಿರಿ. ಪು ೫೯೬.

೨೫೨. ಡಿ.ವಿ.ಪರಮಶಿವಮೂರ್ತಿ-ಕನ್ನಡ ಶಾಸನ ಶಿಲ್ಪ. ಪು ೦೭.

೨೫೩. ಅದೇ., ಪು ೦೯.

೨೫೪. ಅದೇ., ಪು ೦೯.

೨೫೫. ಅದೇ., ಪು ೫೭.

೨೫೬. ಷ.ಶೆಟ್ಟರ್-ಬಾದಾಮಿ ಚಾಳುಕ್ಯರ ಶಾಸನ ಸಾಹಿತ್ಯ. ಪು೧೧.

೨೫೭. ಅದೇ., ಪು ೧೨.

೨೫೮. ಲಕ್ಷ್ಮಣ ತೆಲಗಾವಿ ಪೂರ್ವೋಕ್ತ. ಪು ೫೯೬.

೨೫೯. ಮೋಟೇಬೆನ್ನೂರಿ(ಬ್ಯಾಡಗಿ ತಾ/ಹಾವೇರಿ ಜಿ)ನ ಕುಂಬಾರಗೇರೆಯಲ್ಲಿ ನಿಲ್ಲಿಸಿದ ಶಾಸನ, ಹೊನ್ನತ್ತಿ(ರಾಣೆಬೆನ್ನೂರು ತಾ / ಹಾವೇರಿ ಜಿ)ಯ ವೀರಭದ್ರೇಶ್ವರ ದೇಗುಲದ ಸಂದಿಯಲ್ಲಿ ಬಿದ್ದ ಜಿನಶಾಸನ.

೨೬೦. ಶಾಂತನಿರಂಜನ ವಿರಚಿತ ಅಬ್ಬಲೂರು ಚರಿತೆ. ಸಂ. ಎನ್.ಬಸವಾರಾಧ್ಯ, ಪು ೧೨೧.

೨೬೧. ಸೌ.ಇ.ಇ.೧೫ ನಂ-೫೬ ತಾಳಿಕೋಟೆ. ಕ್ರಿ.ಶ.೧೧೮೪. ಪು೭೩-೨೪.

೨೬೨. ಅದೇ., ನಂ-೫೯. ಅಣ್ಣಿಗೇರಿ. ಕ್ರಿ.ಶ. ೧೧೮೪. ಪು ೮೫.

೨೬೩. ಸೌ.ಇ.ಇ.೧೮ ನಂ-೩೪೫. ಕಾಗಿನೆಲೆ. ೧೧-೧೨ನೇ ಶ. ಪು೪೩೭.

೨೬೪. ನದಿಹರಳಹಳ್ಳಿ(ರಾಣೆಬೆನ್ನೂರು ತಾ/ಹಾವೇರಿ ಜಿ)ಯ ಸೋಮೇಶ್ವರ ದೇವಾಲಯದಲ್ಲಿರುವ ಶಿಲ್ಪ.

೨೬೫. ಎಂ.ಚಿದಾನಂದಮೂರ್ತಿ, ಪೂರ್ವೋಕ್ತ, ಪು ೧೦೦.

೨೬೬. ಬಾ.ಬ್ರ. ಸೋಮದೇವ ಭೈಯಾಜಿ. ಪೂರ್ವೋಕ್ತ ಪು ೧೧೫.

೨೬೭. ಸೌ.ಇ.ಇ. ೧೮. ನಂ ೨೩೬ ಬೆಳವಿಗಿ ಕ್ರಿ.ಶ. ೧೨೫೪, ಪು ೩೧೨.

೨೬೮. ಹೊನ್ನತ್ತಿಯ ಈಗಿನ ನಾರಾಯಣ ದೇಗುಲದಿಂದ ಅನತಿ ದೂರದಲ್ಲಿರುವ ಮುಳ್ಳಿನ ಪೊದೆಯನ್ನು ಗ್ರಾಮಸ್ಥರು ಶುಚಿಗೊಳಿಸುವಾಗ ನಿಸಿಧಿ ಕಲ್ಲೊಂದು ಕಂಡು ಬಂದಿದ್ದು, ಅದನ್ನು ಕಿತ್ತಾಗ ಅದರ ಕೆಳಗೆ ಮೂಳೆಗಳು ಮತ್ತು ಚಿತಾಭಸ್ಮ ಇರುವುದು ಕಂಡು ಬಂದುದಾಗಿ ಗ್ರಾಮಸ್ಥರು ತಿಳಿಸಿದರು. ಈ ನಿಸಿಧಿ ಕಲ್ಲನ್ನು ಈಗ ನಾರಾಯಣ ದೇಗುಲ ಬಳಿ ಇಡಲಾಗಿದೆ.

೨೬೯. ಎಂ.ಜಿ.ಮಂಜುನಾಥ – ನಿಸಿಧಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ಪು ೧೩೨.

೨೭೦. ಅದೇ., ಪು ೧೩೧.

೨೭೧. ಅದೇ., ಪು ೧೩೨.

೨೭೨. ದೇವಚಂದ್ರ ಸಂಪುಟ ರಾಜಾವಳಿ ಕಥಾಸಾರ – ಸಂ. ಎಚ್.ಜೆ.ಲಕ್ಕಪ್ಪ ಗೌಡ. ಪು ೧೨೦–೧೨೧.

೨೭೩. ಡಿ.ವಿ.ಪರಮಶಿವಮೂರ್ತಿ, ಪೂರ್ವೋಕ್ತ, ಪು ೧೨೬.

೨೭೪. ಭೋಜರಾಜ ಪಾಟೀಲ–ನಾಗರಖಂಡ–೭೦ ಒಂದು ಅಧ್ಯಯನ, ಪು ೪೩.

೨೭೫. ಶಾಸನ ಅಧ್ಯಯನ ಸಂ–೦೧. ಸಂಚಿಕೆ–೦೧. ಪು ೨೭೫.

೨೭೬. ಅದೇ., ಪು ೨೯.

೨೭೭. ಡಿ.ವಿ.ಪರಮಶಿವಮೂರ್ತಿ, ಪೂರ್ವೋಕ್ತ. ಪು ೨೩.

೨೭೮. ಅದೇ., ಪು ೨೩.

೨೭೯. ರವಿಕುಮಾರ ಕೆ.ನವಲಗುಂದ. ಪೂರ್ವೋಕ್ತ. ಪು ೨೬.

೨೮೦. ಸುಣಕಲ್ಲಬಿದರೆ (ರಾಣೆಬೆನ್ನೂರು ತಾ / ಹಾವೇರಿ ಜಿ)., ಆಲದಗೆರೆ (ಹಿರೇಕೇರೂರು ತಾ/ಹಾವೇರಿ ಜಿ) ಹುಂಚ (ಸಾಗರ ತಾ/ಶಿವಮೊಗ ಜಿ).

೨೮೧. ರವಿಕುಮಾರ ಕೆ.ನವಲಗುಂದ. ಪೂರ್ವೋಕ್ತ. ಪು ೫೧.

೨೮೨. ಷ.ಶೆಟ್ಟರ್ – ಸಾವಿಗೆ ಆಹ್ವಾನ. ಪು ೦೫.

೨೮೩. ಅದೇ., ಪು ೧೫.

೨೮೪. ರವಿಕುಮಾರ ಕೆ.ನವಲಗುಂದ. ಪೂರ್ವೋಕ್ತ. ಪು ೩೬ ಮತ್ತು ೫೧.

೨೮೫. ಮೋಟೇಬೆನ್ನೂರು (ಬ್ಯಾಡಗಿ ತಾ / ಹಾವೇರಿ ಜಿ), ಹಿರೇಕೋಣತಿ (ಹಿರೇಕೇರೂರು ತಾ / ಹಾವೇರಿ ಜಿ.), ಹಿರೇಅಣಜಿ (ಬ್ಯಾಡಗಿ ತಾ / ಹಾವೇರಿ ಜಿ.).

೨೮೬. ಸುತಕೋಟೆ (ಹಿರೇಕೆರೂರು ತಾ / ಹಾವೇರಿ ಜಿ.) ಹಿರೇಕೋಣತಿ (ಹಿರೇಕೆರೂರು ತಾ / ಹಾವೇರಿ ಜಿ).

೨೮೭. ಬಾಳೇಹಳ್ಳಿ (ಹಾನಗಲ್ಲು ತಾ / ಹಾವೇರಿ ಜಿ.)

೨೮೮. ಹಿರೇಕೋಣತಿ (ಹಿರೇಕೆರೂರು ತಾ / ಹಾವೇರಿ ಜಿ.)ಯ ಹನುಮಂತ ದೇಗುಲದ ಮುಂದೆ ಇರುವ ನಿಸಿಧಿ.

೨೮೯. ಬಾಳೂರು (ಹಾನಗಲ್ಲು ತಾ / ಹಾವೇರಿ ಜಿ.) ನಾಳ್ಪ್ರಭು ಕಸಪಗಾವುಂಡನ ನಿಸಿಧಿ. ಈಗ ಕನ್ನಡ ಸಂಶೋಧನಾ ಸಂಸ್ಥೆ ಧಾರವಾಡದಲ್ಲಿದೆ.

೨೯೦. ಕ.ಇ.೦೫.ನಂ–೨೧, ತೇರದಾಳ, ಕ್ರಿ.ಶ.೧೧೨೫. ಪು ೭೯.

೨೯೧. ಸಾಂದರ್ಭಿಕವಾಗಿ ಭೇಟಿಯಾದಾಗ ಹಂಪ. ನಾಗರಾಜಯ್ಯನವರು ಹೇಳಿದ್ದು.

೨೯೨. ಯಳವಟ್ಟಿ (ಹಾನಗಲ್ಲು ತಾ / ಹಾವೇರಿ ಜಿ.)ಯ ಚಂದ್ರನಾಥ ಬಸದಿಯ ಹಿಂಭಾಗದಲ್ಲಿರುವ ನಿಸಿಧಿಗಳು.

೨೯೩. ನೆಗಳೂರು (ಹಾವೇರಿ ತಾ / ಹಾವೇರಿ ಜಿ.)

೨೯೪. ಬಾಳಂಬೀಡ (ಹಾನಗಲ್ಲು ತಾ / ಹಾವೇರಿ ಜಿ.) ಬಾಳಂಬೀಡ ಬಸದಿಯಲ್ಲಿ ಸಂರಕ್ಷಿತಗೊಂಡ ಸ್ಮಾರಕ.

೨೯೫. ವೀರಾಪುರ (ಹಾನಗಲ್ಲು ತಾ / ಹಾವೇರಿ ಜಿ.)ದ ಬಸದಿ ಮುಂದೆ ಇರುವ ನಿಸಿಧಿಗಲ್ಲು.

೨೯೬. ಕಡಕೋಳ (ಸವಣೂರು ತಾ / ಹಾವೇರಿ ಜಿ.)ದ ರಾಮಣ್ಣ ಮಗದೂರು ಅವರ ಹೊಲದಲ್ಲಿರುವ ನಿಸಿಧಿ.

೨೯೭. ಆಡೂರು (ಹಾನಗಲ್ಲು ತಾ / ಹಾವೇರಿ ಜಿ.) ಇಲ್ಲಿನ ಮಠದ ಬದಿಗೆ ಬಿದ್ದಿರುವ ನಿಸಿಧಿ ಸ್ಮಾರಕಗಳಲ್ಲಿ ಒಂದು.

೨೯೮. ಬಾಳೂರು (ಹಾನಗಲ್ಲು ತಾ / ಹಾವೇರಿ ಜಿ.) ಇಲ್ಲಿನ ಕೆರೆಯಲ್ಲಿ ಬಿದ್ದಿರುವ ನಿಸಿಧಿಗಲ್ಲು.

೨೯೯. ಆಡೂರು (ಹಾನಗಲ್ಲು ತಾ / ಹಾವೇರಿ ಜಿ.) ಇಲ್ಲಿನ ಮಠದ ಬದಿಗೆ ಬಿದ್ದಿರುವ ನಿಸಿಧಿ.

೩೦೦. ಅದೇ., ಮಠದ ಪಕ್ಕ ಬಿದ್ದಿರುವ ನಿಸಿಧಿ ಸ್ಮಾರಕ.

೩೦೧. ಸೌ.ಇ.ಇ.೧೮, ನಂ-೨೭೪, ಸಂಗೂರು. ಕ್ರಿ.ಶ.೧೩೯೬, ಪು ೩೫೭.

೩೦೨. ಯಳವಟ್ಟಿ (ಹಾನಗಲ್ಲು ತಾ / ಹಾವೇರಿ ಜಿ.)ಯ ಚಂದ್ರನಾಥ ಬಸದಿಯ ಹಿಂದೆ ಇರುವ ನಿಸಿಧಿ.

೩೦೩. ಬಾಳಂಬೀಡ (ಹಾನಗಲ್ಲು ತಾ / ಹಾವೇರಿ ಜಿ.) ಬಾಳಂಬೀಡ ಬಸದಿಯಲ್ಲಿ ಸಂರಕ್ಷಿತಗೊಂಡ ಸ್ಮಾರಕ.

೩೦೪. ಬಾಳೂರು (ಹಾನಗಲ್ಲು ತಾ / ಹಾವೇರಿ ಜಿ.) ನಾಳ್ಪ್ರಭು ಕಸಪಗಾವುಂಡನ ನಿಸಿಧಿ. ಈಗ ಕನ್ನಡ ಸಂಶೋಧನಾ ಸಂಸ್ಥೆ ಧಾರವಾಡದಲ್ಲಿದೆ.

೩೦೫. ಹಿರೇಕೊಣತಿಯ ನಾರಾಯಣ ದೇಗುಲದ ಬಳಿ ಇರುವ ಸ್ಮಾರಕ.

೩೦೬. ಸದ್ಯ ಈ ಸ್ಮಾರಕ ಕನ್ನಡ ಸಂಶೋಧನಾ ಸಂಸ್ಥೆ ಧಾರವಾಡದಲ್ಲಿದೆ.

೩೦೭. ಸೌ.ಇ.ಇ.೨೦, ನಂ-೨೨೩. ಕಲಕೇರಿ, ಕ್ರಿ.ಶ. ೧೨೪೪, ಪು ೩೫೪.

೩೦೮. ರವಿಕುಮಾರ ಕೆ.ನವಲಗುಂದ, ಪೂರ್ವೋಕ್ತ, ಪು ೯೭.

೩೦೯. ಸೌ.ಇ.ಇ.೧೮, ನಂ-೨೭೪. ಸಂಗೂರು, ಕ್ರಿ.ಶ. ೧೩೯೬, ಪು ೩೫೭.

೩೧೦. ಡಿ.ವಿ. ಪರಮಶಿವಮೂರ್ತಿ, ಪೂರ್ವೋಕ್ತ, ಪು ೧೧೮.

೩೧೧. ರವಿಕುಮಾರ ಕೆ.ನವಲಗುಂದ, ಪೂರ್ವೋಕ್ತ, ಪು ೪೩.

೩೧೨. ಹಿರೇಕೋಣತಿ (ಹಿರೇಕೆರೂರು ತಾ / ಹಾವೇರಿ ಜಿ.)ಯ ಹನುಮಂತ ದೇಗುಲದ ಎದುರಿಗೆ ಹುಗಿದಿರುವ ಕಂಭ ನಿಸಿಧಿ.

೩೧೩. ಎ.ಕ.೦೨. ನಂ-೬೪, ಚಿಕ್ಕಬೆಟ್ಟ (ಶ್ರವಣಬೆಳಗೊಳ), ಪು ೨೩.

೩೧೪. ಷ.ಶೆಟ್ಟರ. ಪೂರ್ವೋಕ್ತ, ಪು ೨೦೧.

೩೧೫. ಅದೇ ಪು ೨೦೧.

೩೧೬. ಎಂ.ಬಿ. ನೇಗಿನಹಾಳ. ಪೂರ್ವೋಕ್ತ, ಪು ೪೫೧.

೩೧೭. ಸೌ.ಇ.ಇ.೧೮, ನಂ-೩೮. ಕದರಮಂಡಲಗಿ, ೦೯-೧೦ನೆಯ ಶ, ಪು ೨೪.

೩೧೮. ರನ್ನ ಸಂಪುಟ – (ಸಂ) ಹಂಪ. ನಾಗರಾಜಯ್ಯ, ಪು ೧೧.

೩೧೯. ಧಾ.ಜಿ.ಶಾ.ಸೂ. ಪು ೬೪.

# ಅಧ್ಯಾಯ–೦೪.

## ಜೈನ ಐತಿಹ್ಯಗಳು.

**ಅ. ಐತಿಹ್ಯಗಳ ಅರ್ಥ ಮತ್ತು ಅಧ್ಯಯನದ ಅವಶ್ಯಕತೆ.**

೦೧. ಐತಿಹ್ಯದ ಅರ್ಥ.

೦೨. ಅಧ್ಯಯನದ ಅವಶ್ಯಕತೆ.

**ಆ. ಶಾಸನ ಸಂಬಂಧಿತ ಐತಿಹ್ಯಗಳು.**

**ಇ. ಬಸದಿ ಸಂಬಂಧಿತ ಐತಿಹ್ಯಗಳು.**

**ಈ. ಧರ್ಮ ಸಂಬಂಧಿತ ಐತಿಹ್ಯಗಳು.**

**ಉ. ವೃತ್ತಿ ಸಂಬಂಧಿತ ಐತಿಹ್ಯಗಳು.**

**ಊ. ವ್ಯಕ್ತಿ ಸಂಬಂಧಿತ ಐತಿಹ್ಯಗಳು.**

**ಋ. ಶಿಲ್ಪ ಅವಶೇಷ ಸಂಬಂಧಿತ ಐತಿಹ್ಯಗಳು.**

೦೧. ಹಾವೇರಿ ಮುತ್ತುಮಾಣಿಕ ಸ್ವಾಮಿ.

೦೨. ಅದರಗುಂಚಿಯ ದೊಡ್ಡಪ್ಪ.

೦೩. ಮಂತಗಿಯ ದೇವರು.

# ಅಧ್ಯಾಯ-೦೪.

# ಜೈನ ಐತಿಹ್ಯಗಳು.

ಪ್ರಪಂಚದ ಯಾವುದೇ ಧರ್ಮವಾಗಲಿ ಅದು ಜನರ ಒಡನಾಡಿಯಾಗಿರುತ್ತದೆ. ಜನಸಂಸ್ಕೃತಿ ಅನಾವರಣವೇ ಧರ್ಮ. ಅಂತೆಯೇ ಜನರ ಆಚಾರ, ವಿಚಾರ, ನಂಬಿಕೆ, ಭಯ-ಭಕ್ತಿ ಧರ್ಮದಲ್ಲಿ ತುಂಬಿ ತುಳುಕುತ್ತಿರುತ್ತವೆ. ಬಹುಮುಖ್ಯವಾಗಿ ಜನರಿಂದಲೇ ಧರ್ಮ ರೂಪಗೊಂಡಿದ್ದು ಎಂಬುದನ್ನು ಗಮನಿಸಬೇಕು. ಆದ್ದರಿಂದ ಅದು ಜನಸಂಸ್ಕೃತಿಯನ್ನು ಬೆರೆಸಿಕೊಂಡು ನೆಲದಲ್ಲಿ ತನ್ನ ಛಾಪನ್ನು ಒತ್ತಿ ಊರ್ಧ್ವಮುಖಿಗೊಳ್ಳುತ್ತದೆ. ಹೀಗೆ ಊರ್ಧ್ವಗೊಂಡ ಧರ್ಮದ ಮೂಲ ಸೆಲೆಗಳು ನೆಲದಲ್ಲಿಯೇ ಬೇರೂರಿರುತ್ತವೆ. ಆ ಬೇರುಗಳನ್ನು ಗಟ್ಟಿಗಳಿಸುವ ಹರಿಕಾರರು ಜನಪದರು.

ಜನಪದರಲ್ಲಿ ತಮ್ಮ ಧರ್ಮ ಮತ್ತು ಆರಾಧ್ಯ ದೈವದ ಬಗ್ಗೆ ಅನನ್ಯ ಕಾಳಜಿ, ಪ್ರೀತಿ, ಹೆಮ್ಮೆಯ ಗುಣಗಳು ಹರಡಿಕೊಂಡಿರುತ್ತವೆ. ಅಂತೆಯೇ ಅವುಗಳ ಬಗ್ಗೆ ಹಾಡುತ್ತಾರೆ, ಭಕ್ತಿಪರವಶರಾಗಿ ಕುಣಿಯುತ್ತಾರೆ, ಕಥೆ ಕಟ್ಟುತ್ತಾರೆ ಜೊತೆಗೆ ಐತಿಹ್ಯಗಳನ್ನು ಹೆಣೆಯುತ್ತಾರೆ. ಈ ಪ್ರಕ್ರಿಯೆಗೆ ಜೈನ ಧರ್ಮವು ಹೊರತಾಗಲಿಲ್ಲ. ಜೈನಧರ್ಮ 'ಕರ್ಮಸಿದ್ಧಾಂತ'ದ ತಳಹದಿ ಮೇಲೆ ಹುಟ್ಟಿದರೂ ಅದು ಸ್ಥಳೀಯ ಪರಿಸರದ ಒಡನಾಡಿಯಾಯ್ತು. 'ಜನರಂತೆ ಜಿನ' ಅಲ್ಲವೇ. ಜನಪದರು ಜಿನ ಸಂಬಂಧಿ ಮತ್ತು ಆ ಧರ್ಮದ ಸಂಬಂಧಿಯಾದ ಸ್ಮಾರಕಗಳು, ಕೆಲಸ, ವ್ಯಕ್ತಿ ಅವಶೇಷಗಳ ಬಗ್ಗೆ ರೋಚಕ ಕತೆಗಳನ್ನು ಹೆಣೆಯುವುದರಲ್ಲಿ ಹಿಂದೇ ಬೀಳಲಿಲ್ಲ. ಈ ಕತೆಗಳೇ ಮೌಖಿಕ ಪರಂಪರೆಯ ಮೂಲಕ ಐತಿಹ್ಯಗಳ ರೂಪ ತಳೆದವು. ಇಂಥಹ ಜೈನಸಂಬಂಧಿ ಐತಿಹ್ಯಗಳ ಸಂಕ್ಷಿಪ್ತ ಪರಿಕ್ರಮಣ ಪ್ರಸ್ತುತ ಅಧ್ಯಾಯದಲ್ಲಿದೆ.

## ಅ. ಐತಿಹ್ಯಗಳ ಅರ್ಥ ಮತ್ತು ಅಧ್ಯಯನದ ಅವಶ್ಯಕತೆ.

### ೦೧. ಐತಿಹ್ಯದ ಅರ್ಥ.

"ಐತಿಹ್ಯವೆಂದರೆ ನಿರ್ದಿಷ್ಟ ಸ್ಥಳವೊಂದಕ್ಕೆ ಸಂಬಂಧಪಟ್ಟದ್ದಾಗಿದ್ದು, ಪ್ರಾಚೀನವಾಗಿದ್ದು, ವಾಸ್ತವಿಕ ಘಟನೆಯೊಂದರ ಆಧಾರದ ಮೇಲೆ ಕಾಲ್ಪನಿಕ ಅಂಶವನ್ನು ಒಳಗೊಂಡು ಬೆಳೆದು ನಿಂತಿರುವ, ಪರಂಪರಾಗತವಾಗಿ ಜನಪದ ನಂಬಿಕೊಂಡು ಬಂದ ಒಂದು ವಿಶೇಷ ಸಂಗತಿ".[೧] ಮೌಖಿಕ ಪರಂಪರೆಯ ಪ್ರತಿನಿಧಿಯಾದ ಐತಿಹ್ಯವು ನಿತ್ಯ ಸೃಜನ ಎಂಬುವಂತೆ ಬಾಯಿಂದ ಬಾಯಿಗೆ ದಾಟುವಾಗ ರಸವತ್ತಾಗುತ್ತಾ ಹೋಗುತ್ತದೆ. ಅದು ಐತಿಹ್ಯವನ್ನು ಹೇಳುವವನ ಬುದ್ಧಿವಂತಿಕೆಯ ಮೇಲೆ ನಿರೂಪಿತವಾಗಿರುತ್ತದೆ. "ನಮ್ಮ ಜನಪದರು ನೋಡಿದ ಘಟನೆಯೊಂದರ, ಕೇಳಿದ ಸುದ್ದಿಯೊಂದರ ಕಂಠಸ್ಥ ಪರಂಪರಾಗತ ನಿರೂಪಣೆಯೇ ಐತಿಹ್ಯ"[೨] ವಾಗುತ್ತದೆ. " 'ಇತಿ', 'ಇತಿಹ'

ಎನ್ನುವ ಸಂಸ್ಕೃತ ರೂಪದಿಂದ 'ಐತಿಹ್ಯ'ವು ನಿಷ್ಪನ್ನವಾಗಿದ್ದು ಈ ಶಬ್ದರೂಪಗಳಿಗೆ ಹೀಗೆ, ಹೀಗಿತ್ತು ಹೀಗೆ ನಡೆದದ್ದು ಎಂಬಿತ್ಯಾದಿ ಅರ್ಥಗಳಿವೆ. ಅದರಂತೆ ಇಂದು ನಾವು ಯಾವುದನ್ನು 'ಐತಿಹ್ಯ' ಎಂದು ಗುರುತಿಸುತ್ತೇವೆಯೋ ಅದು ಒಂದು ಕಾಲದಲ್ಲಿ ನಿಜವಾಗಿ ನಡೆದ ಘಟನೆಯೊಂದರ ನಿರೂಪಣೆಯೆಂಬ ವಿಶ್ವಾಸ ಅದರ ಪ್ರಸಾರಕದಲ್ಲಿರುತ್ತದೆ. ಈ ಅಂಶವನ್ನು ಮನಗಂಡೇ ನಮ್ಮ ಜಾನಪದ ವಿದ್ವಾಂಸರು ಜನಪದ ಸಾಹಿತ್ಯದ ಈ ವಿಶಿಷ್ಟ ಪ್ರಕಾರವನ್ನು ಐತಿಹ್ಯವೆಂದು ಕರೆದರು."[೩] ಬಹುಮುಖ್ಯವಾಗಿ ಐತಿಹ್ಯಗಳ ಉಗಮಕ್ಕೆ ಕಾರಣಗಳನ್ನು ಈ ಕೆಳಗಿನಂತೆ ಗುರುತಿಸಬಹುದು.

೦೧. ಇತಿಹಾಸದ ಅರಿವಿನ ಕೊರತೆ.

೦೨. ಘಟನೆಯ ಬಗ್ಗೆ ಪಾರಂಪರಿಕ ಜ್ಞಾನ.

೦೩. ಅನಕ್ಷರತೆ.

೦೪. ಅಲ್ಪಸ್ವಲ್ಪ ಜ್ಞಾನ.

೦೫. ಆಶ್ಚರ್ಯ.

೦೬. ಭಯ.

೦೭. ಸಂತೋಷ.

೦೮. ವಿಷಾಧ.

೦೯. ಹಳತರ ವ್ಯಾಮೋಹ.

೧೦. ಭಕ್ತಿ.

೧೧. ಸೃಷ್ಟಿಯ ಬಗ್ಗೆ ಕಥೆ ಹೆಣೆಯುವ ಗುಣ.

೧೨. ವದಂತಿ ಹುಟ್ಟಿಸಿ ಸತ್ಯವೆಂದು ಸಾಧಿಸುವುದು.

'ಐತಿಹ್ಯ' ಎಂಬ ಪದವು 'ಲೆಜೆಂಡ್'ನ ಸಂವಾದಿ ಪದ. ಲೆಜೆಂಡ್ ಎಂದರೆ ಪರಂಪರಾಗತವಾಗಿ ಬಂದಿರುವುದು ಎಂದರ್ಥ. ಹೀಗೆ ಪರಂಪರೆಯಿಂದ ಬಂದ ಅರ್ಧಸತ್ಯದ ಸ್ವರೂಪಕ್ಕೆ ಐತಿಹ್ಯಗಳು ಎನ್ನಲಡ್ಡಿಯಿಲ್ಲ. ಈ ಐತಿಹ್ಯಗಳನ್ನು ವಿವಿಧ ವಿದ್ವಾಂಸರರು ಅವುಗಳ ಸ್ವರೂಪಗಳ ಆಧಾರದ ಮೇಲೆ ವರ್ಗೀಕರಿಸಿದ್ದಾರೆ ಹಾಗೆ ನೋಡಿದರೆ ಐತಿಹ್ಯಗಳ ಸ್ವರೂಪ ಸಂಕೀರ್ಣವಾದ್ದರಿಂದ ಅವುಗಳ ಕರಾರುವಾಕ್ಕು ವಿಭಜನೆ ಅಸಾಧ್ಯ. ಆದರೂ ಐತಿಹ್ಯಗಳ ವಿಶೇಷತೆ ಅರಿತು ವಿಭಾಗಗಳನ್ನು ಗುರುತಿಸಿದ್ದಾರೆ.

ಪಾಶ್ಚಾತ್ಯ ಜಾನಪದ ತಜ್ಞ ರಾಲ್ಫ್ ಸ್ಟೀಲೆ ಬಾಗ್ಸ ಐತಿಹ್ಯಗಳನ್ನು ೧. ಅತಿ ಮಾನುಷ ವರ್ಗ, ೨. ಮಾನವ ವರ್ಗ, ೩. ಪ್ರಾಣಿ ವರ್ಗ, ೪. ಆಕಾಶಕಾಯಗಳು, ೫. ಪ್ರಕೃತಿದತ್ತ ವಸ್ತು, ೬. ಭೂಮಿ ಮತ್ತು ೭. ನೀರು ಎಂದು ಏಳು ವಿಧವಾಗಿ ವರ್ಗೀಸಿಕೊಂಡು ಅವುಗಳಲ್ಲಿ ಉಪವರ್ಗಗಳನ್ನು ಗುರುತಿಸಿದ್ದಾನೆ.[೪]

ಗ್ರೀಮ್ ಸಹೋದರರು ಉಪಲಬ್ಧ ಐತಿಹ್ಯಗಳನ್ನು ಮೂರು ರೀತಿಯಿಂದ ವಿಭಜಿಸಿಕೊಂಡು ೧. ಸ್ಥಳೀಯ ಐತಿಹ್ಯಗಳು (Local Legends), ೨. ವಿವರಣಾತ್ಮಕ ಐತಿಹ್ಯಗಳು (Etiological Legends), ೩. ಚಾರಿತ್ರಿಕ ಐತಿಹ್ಯಗಳು (Historical Legends) ಎಂದು ಮೂರು ಬಗೆಯಲ್ಲಿ ಗುರುತಿಸಿದ್ದಾರೆ. ಈ ವರ್ಗೀಕರಣವು ಗೊಂದಲಕಾರಿಯಾಗಿದ್ದು ವಿದ್ವಾಂಸರು ಇವೆಲ್ಲವೂ ಸ್ಥಳೀಯ ಐತಿಹ್ಯಗಳೆಂದೇ ಕರೆದಿದ್ದಾರೆ.[೫]

ಅಂತರಾಷ್ಟ್ರೀಯ ಮಟ್ಟದ ವಿಚಾರ ಸಂಕಿರಣವೊಂದರಲ್ಲಿ ಐತಿಹ್ಯಗಳನ್ನು ನಾಲ್ಕು ರೀತಿಯಾಗಿ ವಿಭಾಗಿಸಲಾಗಿದೆ.

೧. ವಿವರಣಾತ್ಮಕ ಮತ್ತು ಅಂತಿಮಗತಿ ಶಾಸ್ತ್ರದ ಐತಿಹ್ಯಗಳು.

೨. ಚಾರಿತ್ರಿಕ ಮತ್ತು ನಾಗರಿಕತೆಯ ಚರಿತ್ರೆಗೆ ಸಂಬಂಧಿಸಿದ ಐತಿಹ್ಯಗಳು.

೩. ಅತಿಮಾನುಷ ಶಕ್ತಿಗಳ ಅಥವಾ ಪೌರಾಣಿಕ ಐತಿಹ್ಯಗಳು.

೪. ಧಾರ್ಮಿಕ ಐತಿಹ್ಯಗಳು ಅಥವಾ ದೇವರುಗಳ ಮತ್ತು ನಾಯಕರುಗಳ ಪುರಾಣ.

ಈ ವಿಭಜನೆಯು ಯೂರೋಪಿನ ಚಿಂತನೆಯನ್ನು ಆಧರಿಸಿದ್ದು, ಭಾರತದಂಥ ದೇಶಕ್ಕೆ ಅನ್ವಯವಾಗುವುದಿಲ್ಲ.[೬]

ಜಾನಪದ ತಜ್ಞರಲ್ಲಿ ದೊಡ್ಡ ಹೆಸರಾಗಿರುವ ರಿಜರ್ಡ್ ಡಾರ್ಸನ್ನರು ಐತಿಹ್ಯಗಳನ್ನು ಮೂರು ರೀತಿಯಿಂದ ವಿಭಜಿಸಿಕೊಂಡಿದ್ದಾರೆ. ೧. ವ್ಯಕ್ತಿ ಐತಿಹ್ಯಗಳು (Legends Deal With Persons), ೨. ಸ್ಥಳ ಐತಿಹ್ಯಗಳು (Legends Deal With Places), ೩. ಘಟನಾ ಐತಿಹ್ಯಗಳು (Legends Deal With Events) ಈ ವಿಭಜನೆಯೇ ತಕ್ಕಮಟ್ಟಿಗೆ ವೈಜ್ಞಾನಿಕವಾಗಿದೆ. ಡಾರ್ಸನ್ನರು ಇದರ ವಿವರಣೆಯಲ್ಲಿ ಸ್ಪಷ್ಟಪಡಿಸಿದಂತೆ, ಈ ವಿಭಜನೆಯು ಐತಿಹ್ಯದ ವಸ್ತುವನ್ನು ಗಮನದಲ್ಲಿಟ್ಟುಕೊಂಡಿದೆ. ವಸ್ತುವಿನ ನಿರ್ವಹಣೆಯಲ್ಲಿ ಇತರ ಅಂಶಗಳೂ ಸೇರ್ಪಡೆಯಾದರು ವಸ್ತುವಿನ ಪ್ರಧಾನ ಒತ್ತು ಒಬ್ಬ ವ್ಯಕ್ತಿ, ಒಂದು ಸ್ಥಳ ಅಥವಾ ಒಂದು ಘಟನೆಗೆ ಸಂಬಂಧಿಸಿರುತ್ತದೆ.[೭] ಭಾರತೀಯ ಸಂದರ್ಭದ ಐತಿಹ್ಯಗಳನ್ನು ಇದರಲ್ಲಿ ಒಂದಲ್ಲ ಒಂದು ವರ್ಗಕ್ಕೆ ಸೇರಿಸಬಹುದು. ಈ ವರ್ಗೀಕರಣದ ವಿಧಾನದ ಜೊತೆಗೆ ಎ.ಸುಬ್ಬಣ್ಣ ರೈ ಅವರು ೧. ಪ್ರಾಣಿ-ಪಕ್ಷಿ ಐತಿಹ್ಯಗಳು, ೨. ಪ್ರಕೃತಿ ವೈಚಿತ್ರ್ಯಗಳಿಗೆ-ಸೃಷ್ಟಿ ವಿಶೇಷಗಳಿಗೆ ಸಂಬಂಧಪಟ್ಟ ಐತಿಹ್ಯಗಳು, ೩. ಇತರ ವಸ್ತು ಐತಿಹ್ಯಗಳು ಎಂಬ ಮೂರು ವಿಧಗಳನ್ನು ಸೇರಿಕೊಂಡಿದ್ದಾರೆ.[೮]

ಪ್ರಸ್ತುತ ಅಧ್ಯಯನವು ಒಂದು ನಿರ್ದಿಷ್ಟ ಧರ್ಮಕ್ಕೆ (ಜೈನ) ಸಂಬಂಧಿಸಿದ ಐತಿಹ್ಯಗಳಾದ್ದರಿಂದ ಆ ಧರ್ಮವು ಶಾಸನ (ವಸ್ತು), ಬಸದಿ (ವಸ್ತು), ಧರ್ಮ (ಘಟನೆ) ವೃತ್ತಿ

(ಕಾರ್ಯ), ವ್ಯಕ್ತಿ ಮತ್ತು ಶಿಲ್ಪ (ವಸ್ತು)ಗಳಿಗೆ ಸಂಬಂಧಪಟ್ಟ ಐತಿಹ್ಯಗಳು ಎಂದು ವರ್ಗೀಕರಿಸಕೊಂಡು ಅಭ್ಯಸಿಸಲಾಗಿದೆ. ಇಲ್ಲಿ ಮುಖ್ಯವಾಗಿ ವಸ್ತು, ಕಾರ್ಯ, ವ್ಯಕ್ತಿ, ಘಟನೆಗೆ ಸಂಬಂಧಿಸಿದ ಐತಿಹ್ಯಗಳ ಅಧ್ಯಯನವಿದೆ.

## ೦೨. ಅಧ್ಯಯನದ ಅವಶ್ಯಕತೆ.

ಐತಿಹ್ಯ ಮತ್ತು ಇತಿಹಾಸ ಸ್ವರೂಪದಲ್ಲಿ ಒಂದೇ ಗುಣಸ್ವಭಾವದ ದಾಖಲೆಗಳು. ಎರಡೂ ಹಿಂದೇ ಹೀಗೆ ಆಗಿತ್ತು ಎಂದೇ ಹೇಳುತ್ತವೆ. ಒಂದು ಗ್ರಂಥಸ್ಥ; ಇನ್ನೊಂದು ಕಂಠಸ್ಥ. ಇತಿಹಾಸ ಪಂಡಿತರ ಸೃಷ್ಟಿಯಾದರೆ; ಐತಿಹ್ಯ ಪಾಮರ ಜನ್ಯ. ನಿಖರವಾದ ಸತ್ಯಾಸತ್ಯತೆಯ ಅಂಶವನ್ನು ಪರಿಗಣಿಸಿದಾಗ ಇತಿಹಾಸಕ್ಕೆ ಲಭಿಸುವ ಸ್ಥಾನ ಐತಿಹ್ಯಕ್ಕೆ ಲಭಿಸದು. ಏಕೆಂದರೆ ಇತಿಹಾಸವು ಲಿಖಿತ ಆಧಾರಗಳಾದ ಶಾಸನ, ಕಾವ್ಯ, ಕೃತಿ, ನಾಣ್ಯ, ಬಖೈರು, ವಿದೇಶಿ ಪ್ರವಾಸಿಗರ ಬರೆಹಗಳು ಮತ್ತು ಉತ್ಖನನದ ಆಧಾರಗಳಾದ ಶಿಲಾಸ್ಮಾರಕಗಳು, ಕಲ್ಲು, ಮೂಳೆ, ವಸ್ತುಗಳು, ಸಮಾಧಿಗಳು, ಸ್ಮಾರಕಗಳು ಮತ್ತು ಇತ್ಯಾದಿ ಪಳೆಯುವಳಿಕೆಯ ಆಧಾರದ ಮೇಲೆ ರಚಿತವಾಗುತ್ತದೆ. ಇಲ್ಲಿ ಪೂರ್ವಾಗ್ರಹ ಪೀಡಿತರಿಗೆ ಅವಕಾಶ ಇಲ್ಲ. (ಆದರೂ ಕೆಲವೊಂದು ಸಾರಿ ಇಂಥಹ ಭಾವ ನುಸುಳದೇ ಇರದು ಉದಾ: ಶಾಸನಗಳಲ್ಲಿ ರಾಜರು ತಾವು ಔತ್ತರೇಯ ಮೂಲದವರು ಎಂದಿದ್ದು). ಆದರೆ ಐತಿಹ್ಯದ ಮಾತು ಬೇರೆ. ಇದು ಮಾತಿನಿಂದ ಹುಟ್ಟಿದು. ಒಂದು ವಸ್ತು, ಘಟನೆ, ವ್ಯಕ್ತಿ ಇತ್ಯಾದಿ ಇದಕ್ಕೆ ಮೂಲ ಆಧಾರ. ಉಳಿದದ್ದು ರಸವತ್ತಾದ ನಿರೂಪಣೆ. (ಕೆಲವೊಂದು ಸಾರಿ ಶಾಸನಗಳು ಈ ರೀತಿ ನಿರೂಪಿತವಾಗಿವೆ).

'ಐತಿಹ್ಯ'ವೆಂದರೆ ಮೌಖಿಕ ಸಂಪ್ರದಾಯದಲ್ಲಿ ಉಳಿದುಕೊಂಡು ಬಂದಿರುವ, ಹಿಂದೆ ವಾಸ್ತವವಾಗಿ ನಡೆದದ್ದೇ ಎಂಬುದಾಗಿ ಅದರ ಪ್ರಸಾರಕರಿಗೆ ವಿಶ್ವಾಸವಿರುವ ಘಟನೆಗಳ ಗದ್ಯದ ರೂಪದ ನಿರೂಪಣೆ. ಒಂದು ದೃಷ್ಟಿಯಿಂದ ಇದು ಜನಪದ ಇತಿಹಾಸ. ಇಲ್ಲಿ ಲಿಖಿತ ದಾಖಲೆಗಳೇನೂ ಇರುವುದಿಲ್ಲ. ಇತರ ಲಿಖಿತ ದಾಖಲೆಗಳಿಗೂ ಐತಿಹ್ಯದಲ್ಲಿ ಹೇಳಲಾಗುವ ವಿಚಾರಗಳಿಗೂ ಕೆಲವೊಮ್ಮೆ ಸಾಮ್ಯ-ಸಂಬಂಧ ಕಂಡುಬರಬಹುದು. ಇನ್ನು ಕೆಲವು ಬಾರಿ ಇವೆರಡು ತೀರಾ ವ್ಯತ್ಯಸವೇ ಆಗಿ ಕಾಣಬಹುದು. ಅಂದರೆ 'ಐತಿಹ್ಯ'ವೆಂದು ನಾವಿಂದು ತಿಳಿಯುವ ಈ ಜನಪದ ಇತಿಹಾಸವು ನೈಜ ಘಟನೆಗಳ ನಿರೂಪಣೆಯಾಗಿರಬಹುದು ಅಥವಾ ಕಲ್ಪಿತ ಅಂಶಗಳ ನಿರೂಪಣೆಯಾಗಿರಲೂಬಹುದು. ಕೆಲವು ಐತಿಹ್ಯಗಳಲ್ಲಿ ನೈಜ ಘಟನೆಯ ಸಣ್ಣ ಎಳೆಯೊಂದು ಮಾತ್ರವಿದ್ದು, ಅದರ ಸುತ್ತ ಕಲ್ಪಿತಾಂಶಗಳು ಹಬ್ಬಿಕೊಂಡಿರುತ್ತವೆ. ಎಂತಿದ್ದರೂ ಈಗ 'ಐತಿಹ್ಯ'ವನ್ನು ಜನಪದ ಸಾಹಿತ್ಯದ ಒಂದು ಪ್ರಕಾರವಾಗಿ ಪರಿಗಣಿಸಲಾಗುತ್ತದೆ; ಜೊತೆಗೆ 'ಜನಪದ ಇತಿಹಾಸ'ವೆಂದೂ ತಿಳಿಯಲಾಗುತ್ತದೆ. ಒಂದು ದೃಷ್ಟಿಯಿಂದ ನೋಡಿದರೆ ಇತಿಹಾಸ ಮತ್ತು ಸಾಹಿತ್ಯ ಇವೆರಡರ ಅಂಶಗಳೂ ಇದರೊಳಗಿವೆ. ಹಿಂದೆ ನಡೆದ ನಡೆದಿರಬಹುದಾದ, ಕೇಳಿದ ಘಟನೆಯೊಂದರ ಪುನರ್‌ಸೃಷ್ಟಿ ಇದಾಗಿದ್ದರೂ ಇಂದು ಇದಕ್ಕೂ ಇತಿಹಾಸ ರಚನೆ ಒಂದು

ಆಕರವಾಗಿ ಬಳಕೆಯಾಗುವ ಸ್ಥಾನ ದೊರೆತಿದೆ.[8] ಆದ್ದರಿಂದ ಐತಿಹ್ಯಗಳು ಇತಿಹಾಸವನ್ನು ಪುನ: ರಚಿಸಲು ಸಹಾಯಕವಾಗಿ ನಿಲ್ಲುತ್ತವೆ. ಇವುಗಳಿಂದ ಪೂರ್ಣಪ್ರಮಾಣದ ಸತ್ಯ ದೊರೆಯದಿದ್ದರೂ ಇತಿಹಾಸದ ಮೂಲ-ಚೂಲಗಳನ್ನು ಗುರುತಿಸಬಹುದು. ಈ ಅಲ್ಪ ವಿಷಯಗಳೆ ಇತಿಹಾಸವನ್ನು ಕಲ್ಪ ಮಾಡುವುದರಲ್ಲಿ ಯಾವುದೇ ಸಂದೇಹವಿಲ್ಲ. ಆದರೇ ಐತಿಹ್ಯವೆಲ್ಲವೂ ಇತಿಹಾಸ ಎಂದು ಹೇಳುವ ದುಡಿಕಿನ ನಿರ್ಧಾರದ ಬಗ್ಗೆ ಎಚ್ಚರದಿಂದಿರುವುದು ಅವಶ್ಯ.

ಶಾಸನಗಳು ಏಕಮುಖಿ ಅಧ್ಯಯನಕ್ಕೆ ಸೀಮಿತವಾಗದೆ ಅನ್ಯಜ್ಞಾನದ ಶಿಸ್ತನ್ನು ಬಯಸುವಂತಹವು. ಆದ್ದರಿಂದಲೇ ಅವುಗಳನ್ನು ಸಾಹಿತ್ಯ, ಜಾನಪದ ಶಿಸ್ತುಗಳ ಜೊತೆಗಿರಿಸಿ ತೌಲನಿಕವಾಗಿ ಅಧ್ಯಯನ ಮಾಡಬೇಕಾದ ಅವಶ್ಯಕತೆ ಇದೆ. ಈ ರೀತಿಯ ಅಧ್ಯಯನ ಒಂದು ಮುಖ್ಯಗ್ರಹಿತೆಯ ವಿಷಯವನ್ನು ಹಲವು ಆಯಾಮಗಳಲ್ಲಿ ಅಭ್ಯಸಿಸಿ ಅವು ಕಂಡುಕೊಂಡ ವಿವಿಧ ಜ್ಞಾನದ ಶಿಸ್ತನ್ನು ಗುರುತಿಸಲು ಸಹಾಯಕವಾಗುತ್ತದೆ. ಸದ್ಯ ಶಾಸನಗಳ ಜಾನಪದ ಪ್ರಕಾರವಾದ ಐತಿಹ್ಯಗಳನ್ನು ಗಮನಿಸಿದಾಗ ಅವು ಒಂದರಜೊತೆಗೊಂದು ಅವಿನಾಭಾವ ಸಂಬಂಧ ಹೊಂದಿವೆ. ಶಾಸನಗಳಲ್ಲಿ ಐತಿಹ್ಯವಿದೆ ಹಾಗೆ ಐತಿಹ್ಯಗಳಲ್ಲಿ ಶಾಸನಗಳ ಬಗ್ಗೆ ಕಳಕಳಿ ಇದೆ. ಆ ಕುರಿತಾಗಿ ಭಯ, ಭಕ್ತಿ, ಕಾಳಜಿ, ಇತಿಹಾಸ, ನಂಬಿಕೆ, ಮೂಢನಂಬಿಕೆ ಜನಪದರಲ್ಲಿದೆ. ಹಾಗೆ ನೋಡಿದರೆ ಶಾಸನಗಳು ಜನಪದರ ಒಂದು ಭಾಗವೇ ಆಗಿವೆ. ಅದರೆ ಜನಪದವಲ್ಲ. ಶಿಷ್ಟಪ್ರಕಾರದ ಶಾಸನಗಳನ್ನು ಮತ್ತು ಜಾನಪದ ಪ್ರಕಾರವಾದ ಐತಿಹ್ಯಗಳನ್ನು ಗಮನಿಸಿದಾಗ ಅವುಗಳಲ್ಲಿ ಕಂಡುಬರುವ ಒಂದು ಮುಖ್ಯ ಅಂಶ ಇತಿಹಾಸದ ವಿಷಯಗಳನ್ನು ಕೊಡುಕೊಳ್ಳುವಿಕೆ ಮಾಡಿಕೊಂಡಿರುವುದು. ಈ ಅನುಸಂಧಾನವು ಶಿಥಿಲಗೊಂಡ ಇತಿಹಾಸವನ್ನು ಮರುಸೃಷ್ಟಿಸಲು ಸಾಧ್ಯ. ಆದ್ದರಿಂದಲೇ ಈ ಎರಡೂ ಪ್ರಕಾರಗಳನ್ನು ಅಂತರ್ ಶಿಸ್ತಿಗೆ ಒಳಪಡಿಸುವ ಅವಶ್ಯಕತೆ ಇದೆ. ಅಂತೆಯೇ ಪ್ರಸ್ತುತ ಅಧ್ಯಾಯದಲ್ಲಿ ಅಂಥದೊಂದು ಪ್ರಯತ್ನ ಮಾಡಲಾಗಿದೆ. ಇಲ್ಲಿ ಐತಿಹ್ಯಗಳ ಚರಿತೆಯನ್ನು ಸಂಪೂರ್ಣವಾಗಿ ಚರ್ಚಿಸದೆ ಅವು ಶಾಸನಗಳಿಗೆ ಹೇಗೆ ಪೂರಕ ಎಂದು ಕೆಲವೊಂದು ಐತಿಹ್ಯಗಳ ಮೂಲಕ ನೇರವಾಗಿ ಅಭ್ಯಸಿಸಲಾಗಿದೆ.

### ೨. ಶಾಸನ ಸಂಬಂಧಿತ ಐತಿಹ್ಯಗಳು.

ಐತಿಹ್ಯಗಳು ಕೇವಲ ಜೈನಧರ್ಮದ ಶಾಸನಗಳಿಗೆ ಸೀಮಿತವಾಗದೆ ಕರ್ನಾಟಕದ ಪ್ರತಿಯೊಂದು ಊರುಗಳ ಶಾಸನಗಳಿಗೂ ಅಂಟಿಕೊಂಡಿರುತ್ತದೆ. ಅದು 'ಈ ಲಿಪಿಗಲ್ಲನ್ನು ಯಾರೂ ಓದಲು ಸಾಧ್ಯವಿಲ್ಲ. ಓದಿದರೆ ರಕ್ತಕಾರಿಕೊಂಡು ಸತ್ತು ಹೋಗುವರು. ಅವರ ವಂಶ ನಿರ್ವಂಶವಾಗುತ್ತದೆ. ಒಂದು ವೇಳೆ ಇದನ್ನು ಓದಲೇ ಬೇಕಾದರೆ ತಲೆಯನ್ನು ಕೆಳಗೆ ಮಾಡಿ ಮುಕಳಿಯನ್ನು ಮೇಲೆ ಮಾಡಿ ಓದಬೇಕು, ಅವರಿಗೆ ಕೊಪ್ಪರಿಗೆ ಹೊನ್ನು ಸಿಕ್ಕಿತ್ತಂತೆ, ಹಿಂದೆ ಯಾರೋ ಹಾಗೇ ಓದಿದ್ದರಂತೆ ನಮ್ಮ ಅಜ್ಜ ಹೇಳುತ್ತಿದ್ದ'[೧೦] ಎಂದು ನಾನಾ ವಿಧದ ವರಸೇ ಮಾತು ಜನಪದರಿಂದ ಕೇಳಿಬರುತ್ತವೆ. ನಾನು ಕ್ಷೇತ್ರ ಕಾರ್ಯ ಕೈಗೊಂಡ ಹಿರೇಕಣಗಿ, ಕರಗುದರೆ,

ಬಾಳೇಹಳ್ಳಿ, ಯಳವಟ್ಟಿ (ಹಾನತಾ), ಸವಣೂರು, ಕಡಕೋಳ (ಸತಾ), ಹೊನ್ನತ್ತಿ, ಮಾಕನೂರು ನದಿಹರಳಹಳ್ಳಿ (ರಾತಾ) ಕದರಮಂಡಲಗಿ, ಹಿರೇಅಣಜಿ (ಬ್ಯಾತಾ), ಅರಟಾಳ, ಶೀಲವಂತ ಸೋಮಾಪುರ (ಹಾತಾ) ಇತ್ಯಾದಿ ಜೈನ ಶಾಸನಗಳ ಸುತ್ತ ಈ ತರಹದ ಐತಿಹ್ಯಗಳು ಮೆತ್ತಿಕೊಂಡಿವೆ. ಐತಿಹ್ಯ ಒಂದೇ ಆದರು ಹೇಳುವ ವಿಧಾನ, ಮಾತಿನ ಶೈಲಿ ಬೇರೆ ಬೇರೆ.

ಐತಿಹ್ಯದ ಹಿಂದೆ ಐತಿಹಾಸಿಕ ಪ್ರಜ್ಞೆ ಇದೆ. ಶಾಸನಗಳು ಹಾಳಾಗದಿರಲಿ, ಅದನ್ನು ಕೆಡಸದಿರಲಿ, ನಿಧಿ ಆಸೆಗಾಗಿ ಅದನ್ನು ಅಗೆಯದಿರಲಿ ಒಡೆಯದಿರಲಿ ಎಂದು ಯಾರೋ ಈ ರೀತಿ ಕಥೆ ಕಟ್ಟಿದ್ದಾರೆ. ಆ ಕತೆಯೇ ಮುಂದೆ ಐತಿಹ್ಯವಾಗಿ ರೂಪು ತಳೆದಿದೆ. ಶಾಸನಗಳು ಇಂದಿಗೂ ಸುರಕ್ಷಿತವಾಗಿರಲಿಕ್ಕೆ ಈ ಐತಿಹ್ಯ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಕಾರಣವಾಗುತ್ತದೆ. ಆದರೆ ಈ ಐತಿಹ್ಯ ಹುಟ್ಟಲಿಕ್ಕೆ ಬೇರೆಯದ್ದೇ ಐತಿಹಾಸಿಕ ಸತ್ಯವಿದೆ. ಅದು ದಾನ ಭೂಮಿಯ ರಕ್ಷಣೆಯೂ ಹೌದು. ಪ್ರಾಚೀನರು ತಾವು ಕೊಟ್ಟ ದಾನ ಭೂಮಿಯನ್ನು ಗುರುತಿಸಿದ್ದು ಶಾಸನಗಳಲ್ಲೆ ನಮೂದಿಸಿರುತ್ತಾರೆ. ಮೇರೆಯ ಸಮೇತವಾಗಿ ಇದು ನಿರೂಪಿತವಾಗಿರುತ್ತದೆ. ಬಹುಮುಖ್ಯವಾಗಿ 'ಬ್ರಹ್ಮದೇಯ' ಎನ್ನಿಸುವ ಬ್ರಾಹ್ಮಣರಿಗೆ ಕೊಟ್ಟ ಭೂಮಿಯ ರಕ್ಷಣೆಗೆ ಹುಟ್ಟಿದ ಶಾಪಾಶಯಗಳು[೧೧] ತದನಂತರ 'ದೇವಾದೇಯ'ದ ಸಂಪತ್ತು ರಕ್ಷಿಸುವಲ್ಲಿಯೂ ತಮ್ಮ ಪರಿಧಿಯನ್ನು ವಿಸ್ತರಿಸಿಕೊಂಡವು. ಆದ್ದರಿಂದಲೇ ಇಂದಿಗೂ ಬ್ರಾಹ್ಮಣರ ಸಂಪತ್ತನ್ನು ಕಬಳಿಸಿದವರು, ಅವರ ಹೊಲ-ಮನೆಗಳನ್ನು ಖರೀದಿಸಿದವರು ಸರ್ವನಾಶವಾಗಿ ಹೋಗುವರೆಂಬ ಭಾವ ಜನಪದರಲ್ಲಿ ಮನೆಮಾಡಿದೆ. ಬಲಹೀನ ವ್ಯಕ್ತಿ ತನ್ನ ಬೌದ್ಧಿಕ ಬಲದಿಂದ ತನ್ನ ಆಸ್ತಿಯನ್ನು ಕಾಪಾಡಿಕೊಂಡು ಬಂದ ಬಗೆಯು ಐತಿಹಾಸಿಕ ಸತ್ಯ. ಈ ನಿದರ್ಶನಗಳಿಂದ ಪ್ರಾಚೀನ ಸಮುದಾಯದ ಸಾಂಸ್ಕೃತಿಕತೆಯನ್ನು ಅಧ್ಯಯನಕ್ಕೆ ಒಳಪಡಿಸಬಹುದು.

ಬಂಕಾಪುರದಲ್ಲಿ ಮರಣಹೊಂದಿದ ಗಂಗರ ಮಾರಸಿಂಹನ ನಿಸಿಧಿ ಸ್ಮಾರಕ ಶಾಸನ (ಮಾನಸ್ತಂಭ) ಶ್ರವಣಬೆಳಗೊಳದ ಚಿಕ್ಕಬೆಟ್ಟದಲ್ಲಿದೆ. ಇದಕ್ಕೆ ಕೂಗೆ ಬ್ರಹ್ಮದೇವರ ಕಂಭ ಎಂದು ಕರೆಯಲಾಗುತ್ತದೆ. ಈ ಕಂಭದ ಮೇಲಿರುವ ಬ್ರಹ್ಮಯಕ್ಷನು ಬೆಳಗೊಳದ ಮೇಲೆ ಯಾರಾದರೂ ದಾಳಿ ಮಾಡಿದಾಗ, ಶತ್ರುಗಳು ಊರನ್ನು ಪ್ರವೇಶ ಮಾಡಿದಾಗ, ಕಳ್ಳರು, ದರೋಡೆಕೋರರು ಊರನ್ನು ಹೊಕ್ಕಾಗ ಬ್ರಹ್ಮದೇವ ಕೂಗಿ ಜನರನ್ನು ಜಾಗೃತಗೊಳಿಸುತ್ತಿದ್ದನಂತೆ. ಬ್ರಹ್ಮದೇವನ ಕೂಗು ಅಪಾಯದ ಮುನ್ಸೂಚನೆ ಎಂದು ತಿಳಿದ ಜನ ಜಾಗೃತರಾಗುತ್ತಿದ್ದರಂತೆ. ಆದ್ದರಿಂದ ಈ ಕಂಭಕ್ಕೆ ಕೂಗೆ ಬ್ರಹ್ಮದೇವರ ಕಂಭ ಎಂದು ಹೆಸರು ಬಂದಿದೆ.[೧೨] ವಾಸ್ತವವಾಗಿ ಈ ಕಂಭದ ಮೇಲಿರುವುದು ಬ್ರಹ್ಮಯಕ್ಷನಾಗಿರದೆ ಅದು ಸರ್ವಾಹ್ಣ ಯಕ್ಷನ ಶಿಲ್ಪವಾಗಿದೆ.

ಜೈನ ಯಕ್ಷರಲ್ಲಿ ಪ್ರಭಾವಿ ಯಕ್ಷ ಬ್ರಹ್ಮಯಕ್ಷ. ಹತ್ತನೆಯ ತೀರ್ಥಂಕರನಾದ ಶೀತಲನಾಥನ ಯಕ್ಷ ಈ ಬ್ರಹ್ಮ. ಪ್ರಬಲರಕ್ಷಾಮಣಿ, ಕ್ಷೇತ್ರಪಾಲನಾದ ಬ್ರಹ್ಮಯಕ್ಷನ ವಿಗ್ರಹವನ್ನು ಬಸದಿಯಲ್ಲಿಟ್ಟು

ಪೂಜಿಸುವ ಪರಿಪಾಟ ಇಂದಿಗೂ ರೂಢಿಯಲ್ಲಿದೆ. ೧೧ನೆಯ ಶತಮಾನದ ಹೊತ್ತಿಗೆ ಅತ್ತಿಮಬ್ಬೆಯಂತೂ ಈ ಯಕ್ಷನ ಹೆಸರಿನ 'ಬ್ರಹ್ಮಜಿನಾಲಯ'ವನ್ನೇ ಲಕ್ಕುಂಡಿಯಲ್ಲಿ ಕಟ್ಟಿಸಿದಳು.[೧೩] ಬಹುಶಃ ಬಸದಿ ಈ ಯಕ್ಷನ ರಕ್ಷಣೆಯಲ್ಲಿದೆ ಅನ್ನುವ ಭಯವನ್ನು ಮೂಡಿಸಲು ಈ ಕ್ರಮವನ್ನು ಅತ್ತಿಮಬ್ಬೆ ಅನುಸರಿಸಿದಂತೆ ತೋರುತ್ತದೆ. ಬ್ರಹ್ಮಯಕ್ಷನ ಪ್ರಭಾವವನ್ನು ಕ್ರಿ.ಶ. ೧೧೮೪ರ ಅರಸಿಕೆಯರೆಯ ಶಾಸನವೊಂದು ಹೀಗೆ ವರ್ಣಿಸುತ್ತದೆ.

> ಕತ್ತುರಿಯ ಗಂಪು ಕೈಕುಸುರಿಗೆ ಹೊನ್ನೆಱ ಸಣ್ಣ ಗಗ್ಗರಂ
> ಮುತ್ತಿನದಂಡೆ ತೋಲಮಣಿ ಬಯ್ತಲೆ ನೆಯ್ದಲೆ ತೊಲಜನ್ನಂ
> ಬೆತ್ತದ ಸೆಂಡುಗೋಲ್ ಮೊರೆವ ದಂತದ ಪಾವುಗೆ ಭೃಂಗದೊಲೆ ಮೆ
> ಯ್ವೆತ್ತಿರೆ ರಾತ್ರಿಯೊಳ್ ಸುಱುವ ಬ್ರಹ್ಮಯನೀಗೆಮಗಿಷ್ಟ ಸಿದ್ಧಿಯಂ.[೧೪]

'ರಾತ್ರಿಯಲ್ಲಿ ಸುಳಿವ ಬ್ರಹ್ಮಯನೀಗೆಮಗಿಷ್ಟ ಸಿದ್ಧಿಯಂ' ಎಂಬ ವಾಕ್ಕು ಬ್ರಹ್ಮಯಕ್ಷ ರಕ್ಷಾಪಾಲಕನಾಗಿದ್ದನು ಎಂಬುದನ್ನಿಲ್ಲಿ ಸೂಚಿಸುತ್ತದೆ. ಆದ್ದರಿಂದಲೇ ಮಾರಸಿಂಹನ ಸ್ಮಾರಕವನ್ನು ಇಲ್ಲಿ ರಕ್ಷಾಸೂಚಕವಾಗಿ ಕೂಗೆ ಬ್ರಹ್ಮದೇವರ ಕಂಭ ಎಂದಿರಲಿಕ್ಕೂ ಸಾಕು. ಅಂತೆಯೇ ಇಲ್ಲಿರುವ ಸರ್ವಾಹ್ಣ ಯಕ್ಷನೂ ಬದಲಾಗಿ ಬ್ರಹ್ಮಯಕ್ಷನಾಗಿದ್ದಾನೆ. ಇದು ಬ್ರಹ್ಮಯಕ್ಷನ ಕಂಭವೇ ಎಂದು ಪಂಚಬಾಣ 'ಭುಜಬಲಿ ಚರಿತೆಯಲ್ಲಿ

> ಅಂಬೋಧಿಪಯಂತಾವನ ಕೀರ್ತಿ ವಿಜೃಂಭಿಸಿತಾ ಬೆಳ್ಗೊಳದ
> ಸ್ತಂಭದ ಬ್ರಹ್ಮನೆಸಿಸುವೆ ಸಕಲ ವಿಶ್ವಂಭರೆಯನು ರಕ್ಷಿಸೆಂದು,[೧೫]

ಐತಿಹ್ಯ ಚರಿತ್ರೆಯಾದ ಘಟನೆಯಿದು. ಅಂತೆಯೇ ಅದು ಕಾವ್ಯದಲ್ಲಿಯೂ ದಿಟ ಎಂಬಂತೆ ವ್ಯಕ್ತವಾಗಿದೆ. ಒಟ್ಟಿನಲ್ಲಿ ಇಲ್ಲಿರುವ ಐತಿಹ್ಯಕ್ಕೂ ಮತ್ತು ಸ್ಮಾರಕಕ್ಕೂ ಸಂಬಂಧವೇ ಇಲ್ಲ. ಜನರ ಭಾವನೆಯಲ್ಲಿ ಸರ್ವಾಹ್ಣ ಯಕ್ಷ ಬ್ರಹ್ಮಯಕ್ಷನಾಗಿ ಮಾರ್ಪಟ್ಟು ಅವನು ರಕ್ಷಣೆ ಮಾಡುತ್ತಾನೆ ಎನ್ನುವ ತಿರುಳು ಈ ಐತಿಹ್ಯದಿಂದ ವ್ಯಕ್ತವಾಗುತ್ತದೆ.

**ಇ. ಬಸದಿ ಸಂಬಂಧಿತ ಐತಿಹ್ಯಗಳು.**

ಹಾವೇರಿ ತಾಲ್ಲೂಕು ನೆಗಳೂರಿನಲ್ಲೊಂದು ಈಶ್ವರ ದೇವಾಲಯವಿದೆ. ಲಲಾಟದಲ್ಲಿರುವ ಜಿನಬಿಂಬದಿಂದ ಇದು ಮೊದಲು ಬಸದಿಯಾಗಿತ್ತು. ಈ ಬಸದಿಯು ಕದಂಬನಾಗರ ಶಿಖರವನ್ನು ಹೊಂದಿದ್ದು ಶಿಖರದಲ್ಲಿ ವ್ಯಕ್ತಿ ಒಬ್ಬ ಕುಳಿತುಕೊಂಡು ಬಾಗಿ ಒಳಹೋಗಬಹುದಾದ ಚಿಕ್ಕ ಗರ್ಭಗೃಹವಿದೆ. ಈ ಗರ್ಭಗೃಹ ಕುರಿತಾಗಿ 'ಈ ಗುಹೆಯಲ್ಲಿ ಹಿಂದೆ ಸಾಧು ಸಂತರು ಕುಳಿತು

ತಪಸ್ಸು ಮಾಡುತಿದ್ದರು. ಅವರು ತಪಸ್ಸು ಮಾಡುವಾಗ ಯಾರೂ ತೊಂದರೆ ಮಾಡಬಾರದೆಂದು ಗುಡಿಯ ಮೇಲೆ ಸಣ್ಣಗುಡಿಯನ್ನು ಕಟ್ಟಿದ್ದಾರೆ'[೧೬] ಎಂದು ಐತಿಹ್ಯವೊಂದು ಪ್ರಚಲಿತದಲ್ಲಿದೆ.

ವಾಸ್ತವವಾಗಿ ಬಸದಿಯ ವಾಸ್ತುಶೈಲಿಯನ್ನು ಗಮನಿಸಿದಾಗ ಇಲ್ಲಿ ಜೈನ ಸಿದ್ಧಾಂತದ ಸ್ಪಷ್ಟ ಲಕ್ಷಣಗಳು ಅಳವಡಿಕೆಯಾಗಿದ್ದು, ಇಲ್ಲಿರುವ ಗುಹೆ, ಗವಿ, ಚಿಕ್ಕಗರ್ಭಗೃಹ 'ಸಮವಸರಣ' ಮಂಟಪದ ಕಲ್ಪನೆಯಾಗಿದೆ. ಸಮವಸರಣ ಎಂದರೆ ತೀರ್ಥಂಕರ ಮೋಕ್ಷ ಹೊಂದುವ ಕೊನೆಯ ಘಟ್ಟ. ತೀರ್ಥಂಕರನಾದವನು ಕೇವಲಜ್ಞಾನ ಪಡೆದುಕೊಂಡನಂತರ ದೇಶಪರ್ಯಟನೆ ಮಾಡಿ ಶ್ರಾವಕರಿಗೆ ಉಪದೇಶ ಮಾಡುತ್ತಾನೆ. ಇಲ್ಲಿ ಶ್ರಾವಕರಿಗೆ ತೀರ್ಥಂಕರನನ್ನು ದರ್ಶಿಸುವ ಅವಕಾಶವೂ ಲಭಿಸುತ್ತದೆ. ಹಾಗೆ ದೇಶಪರ್ಯಟನೆ ಮಾಡಿದ ತೀರ್ಥಂಕರ ಜಿನಸ್ವರೂಪಿಯಾಗಲು ಸಮವಸರಣವನ್ನು ಅನುಸರಿಸುತ್ತಾನೆ. ಇದು ಏಕಾಗ್ರತೆ ಸಾಧಿಸುವ ಕ್ರಮವಾಗಿದ್ದು, ಅಂತಿಮದಲ್ಲಿ ತೀರ್ಥಂಕರ ಜಿನಸ್ವರೂಪಿಯಾಗುತ್ತಾನೆ. ಈ ಮಾದರಿಯನ್ನು ಜೈನ ವಾಸ್ತುಶಿಲ್ಪದಲ್ಲಿ ಅಳವಡಿಸಿಕೊಂಡು ಸಾಕಷ್ಟು ಬಸದಿಗಳು ನಿರ್ಮಾಣವಾಗಿವೆ. ಶ್ರವಣಬೆಳಗೊಳದ ಚಾವುಂಡರಾಯ ಬಸದಿ, ರಟ್ಟರ ಪಟ್ಟಜಿನಾಲಯವಾದ ಸವದತ್ತಿ ಪಾರ್ಶ್ವನಾಥ ಜಿನಾಲಯ (ಈಗ ಎಲ್ಲಮ್ಮನ ದೇವಾಲಯ) ಸಮವಸರಣ ಮಂಟಪದ ಮಾದರಿ ವಾಸ್ತುಶೈಲಿಗೆ ಸ್ಪಷ್ಟ ಉದಾಹರಣೆಗಳು. ನೆಗಳೂರಿನಲ್ಲಿರುವ ರೂಪಾಂತರ ಜಿನಾಲಯವೂ ಇದೇ ಮಾದರಿಯಾಗಿದೆ.

ಬಸದಿಯ ಗರ್ಭಗೃಹದಲ್ಲಿ ಇರುವ ತೀರ್ಥಂಕರರ ಬಿಂಬವನ್ನು ದರ್ಶಿಸಲು ಪ್ರತಿಯೊಬ್ಬರಿಗೂ ಅವಕಾಶ ದೊರೆಯುತ್ತದೆ. ಆದರೆ ಶಿಖರದಲ್ಲಿರುವ ಚಿಕ್ಕಗರ್ಭಗೃಹದಲ್ಲಿರುವ ತೀರ್ಥಂಕರ ಮೂರ್ತಿಯ ದರ್ಶನ ನಿಷಿದ್ಧ. ಏಕೆಂದರೆ ಇಲ್ಲಿ ತೀರ್ಥಂಕರ ಧ್ಯಾನಸ್ಥ ಸ್ಥಿತಿಯಲ್ಲಿ ಜಿನಸ್ವರೂಪಿಯಾಗುವ ಹಂತದಲ್ಲಿರುತ್ತಾನೆ. ಈ ಕಲ್ಪನೆಯೇ ಜನರಲ್ಲಿ ತಪಸ್ಸು ಮಾಡುವ ಗುಹೆ ಎಂದು ಅಚ್ಚೊತ್ತಿದೆ. ಸದ್ಯ ಇಲ್ಲಿ ತೀರ್ಥಂಕರರ ಬಿಂಬವಿಲ್ಲ ಖಾಲಿ ಗರ್ಭಗೃಹವಿದೆ.

**ಈ. ಧರ್ಮ ಸಂಬಂಧಿತ ಐತಿಹ್ಯಗಳು.**

ಹಾನಗಲ್ಲು ತಾಲ್ಲೂಕಿನ ವೀರಾಪುರಕ್ಕೆ 'ಕೋಳಿ ಕೂಗದ ಊರು' ಎಂಬ ಐತಿಹ್ಯವೊಂದಿದೆ. 'ಈ ಊರಲ್ಲಿ ಶತಶತಮಾನದಿಂದಲೂ ಕೋಳಿನೇ ಕೂಗಿಲ್ಲ, ಕೋಳಿಗೂ ಈ ಊರಿಗೆ ಆಗಿಬರೋದಿಲ್ವಂತೆ ಹಾಗೇನಾದರು ಈ ಊರಲ್ಲಿ ಕೋಳಿ ಕೂಗಿದ್ರೇ ಆದರೆ ಅಪಾಯ ತಪ್ಪಿದ್ದಲ್ಲಂತೆ'[೧೭] ಎಂಬ ಚಿಕ್ಕ ಐತಿಹ್ಯ ಇಡೀ ಹಾವೇರಿ ಜಿಲ್ಲೆಯಾದ್ಯಂತ ಪ್ರಸರಣದಲ್ಲಿದೆ.

ಈ ಐತಿಹ್ಯ ಜೈನ ಧರ್ಮದ ತತ್ವ ಸಿದ್ಧಾಂತದ ತಳಹದಿಯಲ್ಲಿ ರೂಪಿತವಾಗಿದೆ. ಜೈನಧರ್ಮದ ಮೂಲಸಿದ್ಧಾಂತ 'ಅಹಿಂಸೆ' ಈ ಹಿನ್ನೆಲೆಯ ಗುಣಧರ್ಮವನ್ನು ಹೊಂದಿರುವ ಜೈನಧರ್ಮವು 'ಅಹಿಂಸಾ ಪರಮೋ ಧರ್ಮ' ಎಂದೇ ಪ್ರತಿಪಾದಿಸುತ್ತದೆ. ಈ ಧರ್ಮದಲ್ಲಿ ಹಿಂಸೆ

ನಿಷಿದ್ಧ. ಆದ್ದರಿಂದ ವೀರಾಪುರದಲ್ಲಿ ಕೋಳಿಗಳು ಇಲ್ಲ. ಏಕೆಂದರೆ ಈ ಊರಲ್ಲಿ ಸಂಪೂರ್ಣವಾಗಿ ಜೈನರೇ ವಾಸವಾಗಿರುವುದರಿಂದ ಜೈನಧರ್ಮದ ಆಚರಣೆಗಳು ಸಾಂಗವಾಗಿ ನೆರವೇರುತ್ತವೆ. ಇಂಥಹ ಅಹಿಂಸಾ ತತ್ವಕ್ಕೆ ಒಳಪಟ್ಟ ಬಹುಸಂಖ್ಯೆ ಜೈನರಿರುವ ಊರಲ್ಲಿ ಮಾಂಸಹಾರಿಗಳು ನೆಲೆಗೊಳ್ಳಲಿಲ್ಲ. ಕೋಳಿಯನ್ನು ತಿನ್ನುವವರು ಅಥವಾ ಅದರಿಂದ ಪ್ರಯೋಜನ ಪಡೆಯುವವರು ಕೋಳಿಗಳನ್ನು ಸಾಕುತ್ತಾರೆ. ಅಂತೆಯೇ ಅವು ಊರಲ್ಲಿ ನೆಲೆಗೊಳ್ಳುತ್ತವೆ, ಬೆಳಿಗ್ಗೆ ಎದ್ದು ಕೂಗುತ್ತವೆ. ಮುಂಜಾವಿನಲ್ಲಿ ಕೋಳಿ ತನ್ನ ಬಳಗವನ್ನು ಎಚ್ಚರಗೊಳಿಸಲು ಸಹಜವಾಗಿ ಕೂಗೇ ಕೂಗುತ್ತದೆ. ವೀರಾಪುರದಲ್ಲಿ ಕೋಳಿಯೂ ಇಲ್ಲ, ಅದರ ಕೂಗು ಇಲ್ಲ. ಇದೊಂದು ಸಂಪೂರ್ಣವಾಗಿ ಜೈನಧರ್ಮ ಪ್ರಭಾವ ಬೀರಿರುವ ಐತಿಹ್ಯ. ಈಗಲೂ ವೀರಾಪುರದಲ್ಲಿ ಜೈನರನ್ನು ಹೊರತುಪಡಿಸಿ ಅನ್ಯಧರ್ಮೀಯರಿಲ್ಲ. ಕರ್ನಾಟಕದಲ್ಲಿ ಏಕಮಾತ್ರ ಸಂಪೂರ್ಣ ಜೈನರಿರುವ ಊರು ವೀರಾಪುರ.

೧೨ನೆಯ ಶತಮಾನದಲ್ಲಿ ಜೈನಧರ್ಮವನ್ನು ಕುಟ್ಟಿ ಪುಡಿಮಾಡಿದ ಐತಿಹ್ಯವು ಹಿರೇಕೆರೂರು ತಾಲ್ಲೂಕಿನ ಅಬ್ಬಲೂರಿನಲ್ಲಿ ಜನಜನಿತವಾಗಿದೆ. "ಒಂದು ಕಾಲದಲ್ಲಿ ಅಬ್ಬಲೂರಲ್ಲಿ ಜೈನರೇ ತುಂಬಿ ತುಳುಕುತ್ತಿದ್ದರು. ಅವರು ಊರಲ್ಲಿದ್ದ ಶಿವಾಲಯವನ್ನು ಹಾಳು ಮಾಡಿ ಮೆರೆಯುತ್ತಿದ್ದರು. ಈ ವಿಷಯ ಕೇಳಿ ಸಿಟ್ಟಾದ ಏಕಾಂತ ರಾಮಯ್ಯ ಅಬ್ಬಲೂರಿಗೆ ಬಂದು ನೀವೇಕೆ ಶಿವಾಲಯವನ್ನು ಹಾಳು ಮಾಡಿದಿರಿ ಎಂದು ಜಗಳಕ್ಕೆ ಬಿದ್ದನಂತೆ. ಅದಕ್ಕೆ ಜೈನರು ನೀನು ನಿನ್ನ ತಲೆಕತ್ತರಿಸಿಕೊಂಡು ಏಳುದಿನದೊಳಗೆ ಮತ್ತೆ ಅದನ್ನು ದಿಡ(ದೇಹ)ಕ್ಕೆ ಹಚ್ಚಿಕೊಂಡು ಜೀವಂತವಾದರೆ ನೀನು ಹೇಳಿದ ಹಾಗೆ ಕೇಳುತ್ತೇವೆ ಎಂದರಂತೆ. ಇದನ್ನು ಕೇಳಿದ ಏಕಾಂತರಾಮಯ್ಯ ತಡಮಾಡದೆ ತನ್ನ ತಲೆಯನ್ನು ಕತ್ತರಿಸಿಕೊಂಡ, ಏಳುದಿನಗಳ ಕಾಲ ಅವನ ತಲೆಯನ್ನು ಪುಣ್ಯಕ್ಷೇತ್ರಗಳಿಗೆ ಭೇಟಿಕೊಡಿಸಿ ದೇವರಿಂದ ಆಶೀರ್ವಾದ ಪಡೆದ ಅವನ ಶಿಷ್ಯರು ಏಳನೆಯ ದಿನಕ್ಕೆ ಅಬ್ಬಲೂರಿಗೆ ಬಂದು ಏಕಾಂತರಾಮಯ್ಯನ ದೇಹಕ್ಕೆ ಕತ್ತರಿಸಿದ ಶಿರಸ್ಸನ್ನು ಮರಳಿ ಜೋಡಿಸಿದರಂತೆ. ಅವಾಗ ಏಕಾಂತರಾಮಯ್ಯ ಜೈನರಿಗೆ ನೀವು ಹೇಳಿದ ಹಾಗೆ ಮಾಡಿದ್ದೇನೆ ಎಂದಾಗ ಜೈನರು ಇವನ ಕಾಲಿಗೆ ಬಿದ್ದು ಲಿಂಗಾಯತರಾದರಂತೆ. ಕೆಲವು ಜೈನರು ಇದರಲ್ಲಿ ಏನೋ ಮೋಸ ಅಡಗಿದೆ ಎಂದಾಗ ಅವರನ್ನು ಏಕಾಂತರಾಮಯ್ಯ ಹೊಡೆದನಂತೆ. ನಂತರ ಊರಲ್ಲಿ ಇರುವ ಬಸದಿಗಳನ್ನೆಲ್ಲ ಶಿವಾಲಯಗಳನ್ನಾಗಿ ಮಾಡಿದನಂತೆ."[೧೮] ಎನ್ನುವ ಏಕಾಂತರಾಮಯ್ಯನ 'ಶಿರಸ್ಸು ಪವಾಡ' ಐತಿಹ್ಯವನ್ನು ಅಬ್ಬಲೂರಿನಲ್ಲಿ ಯಾರನ್ನು ಕೇಳಿದರೂ ರಸವತ್ತಾಗಿ ಹೇಳುತ್ತಾರೆ. ಒಬ್ಬರಿಂದ ಒಬ್ಬರಿಗೆ ಹೇಳುವ ಶೈಲಿ ವಿಭಿನ್ನ.

ಈ ಇಡೀ ಐತಿಹ್ಯವು ಅಬ್ಬಲೂರಿನಲ್ಲಿ ಜೈನರಿಗಾದ ಪರಿಸ್ಥಿತಿಯನ್ನು ಅರಹುವ ಜೊತೆಗೆ ೧೨ನೆಯ ಶತಮಾನದಲ್ಲಿ ಜೈನಧರ್ಮದ ಮೇಲಾದ ದಾಳಿಗೆ ಸಾಕ್ಷಿಪ್ರಜ್ಞೆಯಾಗಿ ನಿಲ್ಲುತ್ತದೆ. ಈ ಐತಿಹ್ಯವು ಏಕಾಂತರಾಮಯ್ಯನ ಶಿರಸ್ಸುಪವಾಡವನ್ನು ಔನ್ನತ್ತೀಕರಿಸುತ್ತದೆ ಎಂಬುದು ಎಷ್ಟು ಸತ್ಯವೊ;

ಹಾಗೆಯೇ ಜೈನಧರ್ಮವನ್ನು ಧಾರ್ಮಿಕವಾಗಿ ವಧೆ ಮತ್ತು ತೋಜೋವಧೆ ಮಾಡಿದ್ದು ಅಷ್ಟೇ ಸತ್ಯ. ಐತಿಹ್ಯ ಐತಿಹಾಸಿಕ ಸತ್ಯದಿಂದ ಕೂಡಿದ್ದು, ಇಲ್ಲಿರುವ ಶಾಸನದಲ್ಲಿಯೂ ವ್ಯಕ್ತವಾಗಿದೆ.[೧೮] ೧೨ನೆಯ ಶತಮಾನದಲ್ಲಿ ರಚಿತವಾದ ಶಾಸನ ಏಕಾಂತರಾಮಯ್ಯನು ಅಳಂದೆಯವನು ಶಿವಪಾರಮ್ಯವನ್ನು ಮೆರೆಯಲು ಅಬ್ಬಲೂರಿಗೆ ಬಂದು ಇಲ್ಲಿ ಕಳೆಗುಂದಿದ ಶಿವಾಲಯವನ್ನು ನೋಡಿ ಜೈನರಲ್ಲಿ ತಲೆಯನ್ನು ಕತ್ತರಿಸಿಕೊಳ್ಳುವ ಪಂಥವೊಡ್ಡಿ ಅದರಲ್ಲಿ ಗೆಲ್ಲುತ್ತಾನೆ. ಹಾಗೆ ಗೆದ್ದಾಗ ಅವನು ಜೈನರ ಮೇಲೆ ದಾಳಿಯನ್ನೂ ಮಾಡುತ್ತಾನೆ. ಅವನ ದಾಳಿಯ ಸ್ವರೂಪ ಹೇಗಿತ್ತೆಂದರೆ

> ಬಡಿಗೊಂಡೆರ್ಬನೆ ಸೊಕ್ಕಿ ಬಾಳೆವನಮಂ ಕಾಡಾನೆ ಪೊಕ್ಕಂತಿರು
> ಕ್ಕಡಗಲು ಕಾಪಿನ ವೀರರಂ ತುರಗಮಂ ಸಾಮಂತರಂ ತೂಳ್ದು ಮಾಮಾ
> ರ್ಪಡೆಗಳು ಜೈನರ ಮಾರಿಬಂದುದೆನುತುಂ ಬೆಂಗೊಟ್ಟು ಪೋಗಲು ಜಿನಂ
> ಕೆಡೆವನ್ನಂ ಬಡದಲ್ಲಿ ಕೈಕೊಳಿಸಿದಂ ಶ್ರೀವೀರಸೊಮೇಶನಂ.[೨೦]

ಜೈನರನ್ನು, ಅರಸೊತ್ತಿಗೆಯ ಪ್ರತಿನಿಧಿಗಳನ್ನು ತುಳಿದು ಬಸದಿಯಲ್ಲಿರುವ ಜಿನಬಿಂಬವನ್ನು ಕಿತ್ತು, ವೀರಸೋಮೇಶ್ವರನನ್ನು ಏಕಾಂತರಾಮಯ್ಯ ಸ್ಥಾಪಿಸಿದ ಎನ್ನುವಲ್ಲಿ ಅವನು ಧಾರ್ಮಿಕವಾಗಿ ಮತ್ತು ರಾಜಕೀಯವಾಗಿ ಪ್ರಭಾವವಿರುವ ವ್ಯಕ್ತಿಯಾಗಿದ್ದನು ಎಂಬಂಶ ತೋರ್ಪಡುತ್ತದೆ. ಅಂತೆಯೇ ತಮಗಾದ ಅನ್ಯಾಯವನ್ನು ಪ್ರಶ್ನಿಸಿ ಜೈನರು 'ಬಿಜ್ಜಣ ಮಹೀಪಾಲಂಗೆ'[೨೧] ಹೇಳಲು ಅವನೂ ಸಹ ಏಕಾಂತರಾಮಯ್ಯನಿಗೆ ಒತ್ತಾಸೆಯಾಗಿ ನಿಂತು 'ನೀವಿನ್ನುಸಿರದೆ ಪೋಗಿ'[೨೨] ಎಂದು ಹೇಳಿ "ಬಿಜ್ಜಣದೇವಂ ರಾಮಯ್ಯಂಗಳು ಮಾಡಿದ ಪರಮ ಸಾಹಸಕಂ ನಿರತಿಶಯವಪ್ಪ ಮಾಹೇಶ್ವರ ಭಕ್ತಿಗಂ ಮೆಚ್ಚಿ ವೀರಸೋಮನಾಥ ದೇವರ ದೇಗುಲದ ಮಾಟಕೂಟ ಪ್ರಾಕಾರ ಖಂಡಸ್ಫುಟಿತ ಜೀರ್ಣೋದ್ಧಾರಕ್ಕಂ ದೇವರಂಗಭೋಗ ನೈವೇದ್ಯಕ್ಕಂ . . . . . . . . . . . . . . ಶ್ರೀಮದು ಬಿಜ್ಜಣದೇವಂ . . . ಗೋಗಾವೆಯಂಬ ಗ್ರಾಮಮಂ . . . . . ಶ್ರೀಮದೇಕಾಂತ ರಾಮಯ್ಯಂಗಳ ಕಾಲಂ ಕಚ್ಚಿ ಧಾರಾಪೂರ್ಬಕ್ಕಂ ಮಾಡಿಕೊಟ್ಟು ಪ್ರತಿಪಾಲಿಸಿದಂ."[೨೩] ಕಳಚೂರ್ಯ್ಯ ಬಿಜ್ಜಳನೇ ಏಕಾಂತರಾಮಯ್ಯನಿಗೆ ಕಾಲಿಗೆ ಬಿದ್ದು ಅವನು ರೂಪಾಂತರಗೊಳಿಸಿದ ದೇವಾಲಯಕ್ಕೆ ಗೋಗಾವೆ ಗ್ರಾಮವನ್ನು ದತ್ತಿಹಾಕಿ ಕೊಡುವನು. ಇಡೀ ಪ್ರಭುತ್ವವೇ ಏಕಾಂತರಾಮಯ್ಯನ ಬೆಂಬಲಕ್ಕೆ ನಿಂತ ಪ್ರಸಂಗವಿದು. ಬಹುಶಃ ಈ ಶಾಸನವೇ ಮುಂದೇ ಐತಿಹ್ಯವಾದಂತೆ ತೋರುತ್ತದೆ.

ಶಾಸನದಲ್ಲಿ ವ್ಯಕ್ತವಾದ ಏಕಾಂತರಾಮಯ್ಯನ ಪಾರಮ್ಯವು ಕಾವ್ಯಕೃತಿಗಳಾಗಿದ್ದು, ಒಟ್ಟು ೧೧ ಕೃತಿಗಳಲ್ಲಿ ವ್ಯಕ್ತವಾಗಿದೆ.

೧. ಏಕಾಂತದ ರಾಮಯ್ಯನ ರಗಳೆ – ಹರಿಹರ.
೨. ಬಸವ ಪುರಾಣ – ಭೀಮಕವಿ.

೩. ಶಿವತತ್ವ ಚಿಂತಾಮಣಿ – ಲಕ್ಕಣ್ಣ ದಂಡೇಶ.
೪. ವೀರಶೈವಾಮೃತ ಪುರಾಣ – ಗುಬ್ಬಿಯ ಮಲ್ಲಣಾರ್ಯ
೫. ಪಾಲ್ಕುರಿಕೆ ಸೋಮೇಶ್ವರ ಪುರಾಣ – ವಿರಕ್ತ ತೋಂಟದಾರ್ಯ.
೬. ಬಸವೇಶ್ವರ ಪುರಾಣದ ಕಥಾಸಾಗರ – ಬಸವಲಿಂಗ.
೭. ವೃಷಭೇಂದ್ರ ವಿಜಯ – ಷಡಕ್ಷರಿ.
೮. ಪ್ರಭುದೇವರ ಪುರಾಣ – ಹರೀಶ್ವರ.
೯. ಭೈರವೇಶ್ವರ ಕಾವ್ಯ – ಶಾಂತಲಿಂಗ.
೧೦. ತೆಲುಗು ಬಸವಪುರಾಣ – ಪಾಲ್ಕುರಿಕೆ ಸೋಮೇಶ್ವರ.
೧೧. ಅಬ್ಬಲೂರು ಚರಿತೆ – ಶಾಂತನಿರಂಜನ.[೨೪]

ಅಬ್ಬಲೂರು ಸೋಮೇಶ್ವರ ದೇವಾಲಯದ ನವರಂಗದಲ್ಲಿರುವ ಶಾಸನ ಮತ್ತು ಪ್ರಸ್ತುತ ಐತಿಹ್ಯ ಸೇರಿ ಒಟ್ಟು ೧೩ ಕಡೆ ಏಕಾಂತರಾಮಯ್ಯನ ಕಥೆ ವ್ಯಕ್ತವಾಗಿದೆ. ಇವುಗಳ ಜೊತೆಗೆ ಅಬ್ಬಲೂರು ಸೋಮೇಶ್ವರ ದೇವಾಲಯದ ಜಾಲಂಧ್ರ ಕೆಳಗಿರುವ ಶಿಲ್ಪ ಮತ್ತು ಶಾಸನಗಳು, ಒರಗು ಕಟ್ಟೆಯ ಹೊರಭಿತ್ತಿಯಲ್ಲಿರುವ ಏಕಾಂತರಾಮಯ್ಯ ಜೈನರ ಮೇಲೆ ದಾಳಿಮಾಡುವ ಶಿಲ್ಪ ಶಾಸನಗಳಿವೆ. ಏಕಾಂತರಾಮಯ್ಯನ ಅಬ್ಬಲೂರಿನ ಮೇಲಿನ ದಾಳಿಯ ಛಾಯೆ ಇಡೀ ಹಾವೇರಿ ಪರಿಸರದಲ್ಲಿ ಬೀರಿದ್ದು ಐತಿಹಾಸಿಕ ಸತ್ಯ. ಅಂತೆಯೇ ಅಬ್ಬಲೂರು ಸುತ್ತಲಿರುವ ಆಲದಗೆರೆ, ನೇಸ್ವಿ, ಕುಂಚೂರು, ಲಿಂಗದೇವರಕೊಪ್ಪ, ಸಾತೇನಹಳ್ಳಿ, ಮಲ್ಲೂರು, ಸುಣಕಲ್ಲಬಿದರಿ, ನಾಗವಂದ, ಹಿರೇಅಣಜಿ, ಹಿರೇಕೋಣತಿ, ಸುತಕೋಟೆಯಲ್ಲಿ ಜೈನಸ್ಮಾರಕಗಳು ಮತಾಂತರಗೊಂಡಿವೆ. ಹೀಗೆ ಒಂದು ಐತಿಹ್ಯ ಧರ್ಮಸಂಬಂಧಿ ಐತಿಹಾಸಿಕ ಸತ್ಯ ತೆರೆದಿಡುವಲ್ಲಿ ಸಹಾಯಕವಾಗುತ್ತದೆ.

### ಉ. ವೃತ್ತಿ ಸಂಬಂಧಿತ ಐತಿಹ್ಯಗಳು.

'ಜೈನ ಕೆಟ್ಟು ಬಣಜಿಗನಾದ' ಎಂಬ ಐತಿಹ್ಯದ ತುಂಡುವಾಕ್ಯವೊಂದು ಹಾವೇರಿ ಪರಿಸರದಲ್ಲಿ ಪ್ರಸರಣದಲ್ಲಿದೆ. "ಹಿಂದ್ಯೆ ಲಿಂಗಾಯತರೆಲ್ಲರೂ ಜೈನರಾಗಿದ್ದರು. ಅದರಲ್ಲೂ ಈಗಿನ ಬಣಜಿಗ ಲಿಂಗಾಯತರಂತೂ ಪಕ್ಕಾ ಜೈನರೆ ಆಗಿದ್ದರಂತೆ ಅದಕ್ಕೆ ಜೈನರು ಕೆಟ್ಟು ಬಣಜಿಗರಾದ್ರು"[೨೫] ಎನ್ನುವ ಐತಿಹ್ಯವೂ ಇಲ್ಲಿ ಪ್ರಚಲಿತವಿದೆ. ಇದೊಂದು ವೃತ್ತಿಗೆ ಸಂಬಂಧಿಸಿದ ಐತಿಹ್ಯವಾಗಿದ್ದು ಜೈನರ ಮೂಲ ವೃತ್ತಿಯ ಸಂಸ್ಕೃತಿಯನ್ನು ತೆರೆದಿಡುತ್ತದೆ.

'ಬಣಂಜು' ಎಂದರೆ ವ್ಯಾಪಾರ ಮತ್ತು ಮಾರಾಟ; ಬಣ(ಂ)ಜಿಗ ಎಂದರೆ ವರ್ತಕ; ವ್ಯಾಪಾರಿ. ೨ ವೀರಶೈವರ ಒಂದು ಒಳಪಂಗಡ ಎಂದು ನಿಘಂಟುಗಳು ಅರ್ಥೈಯಿಸುತ್ತವೆ.[೨೬] ಜೈನರು ಅವರ ಧರ್ಮದ ಅಹಿಂಸಾ ತತ್ವವನ್ನು ಒಪ್ಪಿಕೊಂಡವರು. ಅಂತೆಯೇ ಅವರು

ಹಿಂಸೆಯಲ್ಲದ ವೃತ್ತಿಗಳನ್ನು ಆಯ್ದುಕೊಂಡರು. ಅದರಲ್ಲಿ ಬಹುಸಂಖ್ಯೆಯ ಜನರು ವ್ಯಾಪಾರದಲ್ಲಿ ತೊಡಗಿಸಿಕೊಂಡರು. ಅಂತೆಯೇ ಜೈನರು ಸಹಜ ಶ್ರೀಮಂತರಾದರು. ಈ ವ್ಯಾಪಾರಸ್ಥ ಜೈನರು ೧೨ ಶತಮಾನದಲ್ಲಿ ಒಂದು ಧರ್ಮದಿಂದ ಇನ್ನೊಂದು ಧರ್ಮಕ್ಕೆ ಧರ್ಮಪಲ್ಲಟವನ್ನು ಮಾಡಿದಂತೆ ತೋರುತ್ತದೆ. ದಕ್ಷಿಣ ಕರ್ನಾಟಕದಲ್ಲಿ ರಾಮಾನುಜಾಚಾರ್ಯರ ವೈಷ್ಣವ ಪ್ರಭಾವ ಒಂದೆಡೆಯಾದರೆ; ಉತ್ತರದಲ್ಲಿ ಬಸವಣ್ಣನವರ ವೀರಶೈವ ಲಿಂಗಾಯತ ಧರ್ಮದ ಆಕರ್ಷಣೆ ಈ ಧರ್ಮಗಳ ಪ್ರಭಾವ ಚುಂಬಕಕ್ಕೆ ಜೈನರು ಮಾರುಹೋಗದೆ ಇರಲಿಲ್ಲ. ಹೊಯ್ಸಳರ ಜೈನ ಬಿಟ್ಟಿದೇವ ವೈಷ್ಣವ ವಿಷ್ಣುವರ್ಧನನಾದುದು ಒಂದು ಉದಾಹರಣೆ. ಜೈನರು ಪರಧರ್ಮಕ್ಕೆ ತಾವೇ ಒಲಿದುಹೋದ ಉದಾಹರಣೆ ವಿರಳ. ಅವರನ್ನು ಮತಾಂತರ ಮಾಡಿದ್ದೇ ಹೆಚ್ಚು ಅಬ್ಬಲೂರಿನ ಏಕಾಂತರಾಮಯ್ಯನ ಜೈನರ ಮೇಲಿನ ದಾಳಿಯ ಪ್ರಸಂಗದಲ್ಲಿ ಈ ಕುರುಹುಗಳು ವ್ಯಕ್ತವಾಗಿವೆ. ಮೂಲ ಆಕರವಾದ ಅಬ್ಬಲೂರು ಶಾಸನದಲ್ಲಿ ಈ ಅಂಶ ವ್ಯಕ್ತವಾಗದೇ ಹೋದರು ತದನಂತರ ಬಂದ ಕಾವ್ಯಕೃತಿಗಳಲ್ಲಿ ವ್ಯಕ್ತವಾಗಿದೆ. ಏಕಾಂತರಾಮಯ್ಯನ ಕುರಿತಾಗಿ ಕ್ರಿ.ಶ. ೧೬೫೦ರಲ್ಲಿ ಮೂಡಿಬಂದ ಶಾಂತನಿರಂಜನ ವಿರಚಿತ ಅಬ್ಬಲೂರು ಚರಿತೆಯಲ್ಲಿ ಜೈನರಿಗೆ ಲಿಂಗಧಾರಣೆ ಮಾಡಿದ ಸ್ಪಷ್ಟ ಕುರುಹುಗಳಿವೆ. ಶಿರಸ್ಸುಪವಾಡ ಮಾಡಿ ಗೆದ್ದನಂತರ ಏಕಾಂತರಾಮಯ್ಯನು ಜೈನರ ಮಾರಣಹೋಮ ಮಾಡಿದ್ದನ್ನು ಕವಿ ಮಾತಿನಲ್ಲಿ ನೋಡುವುದಾದರೆ.

ಎಳೆತನ್ನಿ ಮೂಲಜಿನೇಶ್ವರ ಶ್ರವಣರ
ಎಳೆತನ್ನಿ ಗುರುಗುಡ್ಡರುಗಳ
ಎಳೆತನ್ನಿರೆಂದು ಪೇಳಲು ಚಾರರುಗಳಿಗೆ
ಎಳೆತಂದು ಕೊಡುತಿರ್ದರವರು

ಇರಿವುತ ತರಿವುತ ಕೊನೆಮೂಗನರಿವುತ
ಕರಗಳ ಕಡಿದು ನಾಲಿಗೆಯ
ನರಿಸುತ ರಾಮಯ್ಯಾರುಹ್ಯರ ಪಡೆದನು
ಒರಸಿದ ಕಾಲಾಳ್ಗಳೊಡನೆ

ಬತ್ತಿದ ಕೈಕಾಲು ಹತ್ತಿದ ಹೊಟ್ಟೆಯು
ಮೊತ್ತ ಭೂತಗಳೆಲ್ಲ ನೆರೆದು
ತುತ್ತು ತುತ್ತಿಗೆ ರಕ್ತ ಸುರಿದು ಶಾಕಿನಿಯರು
ಎತ್ತಿ ಕರಗಳ ಮುಗಿದರು

ಹದ್ದು ಕಾಗೆಯು ತಿಂದು ದಣಿದು ಮಾಂಸದ ಮಜ್ಜೆ
ಮುದ್ದೆಯ ತೆಗೆದು ಬಚ್ಚಿಟ್ಟು
ಮೆದ್ದು ಚಪ್ಪರಿದು ಡಾಕಿನಿಯರು ದಣಿದು ಪ್ರ
ಸಿದ್ಧರಾಮನ ಹೊಗಳಿದರು

ಎತ್ತ ನೋಡಲು ರಕ್ತ ಪಾನಗಳಿಲ್ಲದೆ
ತುತ್ತು ತುತ್ತಿಗೆ ಸತಿಸುತರ
ಮುತ್ತಿ ಹಿಡಿವ ಪಿಶಾಚಿಗಳ ಬಯಕೆಯ
ಇತ್ತ ರಾಮಯ್ಯ ಪುಷ್ಕಳವ

ಬಟ್ಟೆ ಬಟ್ಟೆಯೊಳೆಲ್ಲ ಹರಿವ ರಕ್ತದ ತೊರೆ
ಅಟ್ಟೆ ಮುಂಡವು ತೇಲಿ ಮುಳುಗೆ
ಕಟ್ಟಳಿಲ್ಲದೆ ಪೆಣಗಳ ಕಂಡು ಶ್ರವಣರು
ಘಟ್ಟದ ಕೆಳಯಿಕೆ ಸರಿಯೆ

ಗುರು ಗುಡ್ಡರುಗಳ ಮೂಗಿಗೆ ಮೂಗನೂರಿಸಿ
ನೆರದಿರ್ದ ಸತಿಯರ ಕರೆಸಿ
ಬರಸಿಯು ಲಿಂಗಮುದ್ರೆಯ ಬಸವೆಯರ ಮಾಡಿ
ಹರುಷದಿಂದಿರ್ದ ರಾಮಯ್ಯ.[೨೭]

ಇಷ್ಟೆಲ್ಲಾ ರಕ್ತಪಾತಗಳನ್ನು ನೋಡಿ ದಿಗ್ಭ್ರಾಂತರಾದ ಜೈನರು ಭಯಗೊಂಡು ರಾಮಯ್ಯನ ಬಳಿಬಂದು ಪ್ರಾಣಭಿಕ್ಷೆಗಾಗಿ ಅಂಗಲಾಚುವರು ಅದರಲ್ಲಿಯೂ ಶಂಕಪಾಲನ ಹೆಂಡತಿ (ಇವನೊಬ್ಬ ಜೈನ ಅಧಿಕಾರಿ) ತನ್ನ ವಾಲೆ (ಮಾಂಗಲ್ಯ) ಭಾಗ್ಯವ ಉಳಿಸಿಕೊಳ್ಳಲು

ಶೈವರಾಹೆವು ವಾಲೆಭಾಗ್ಯ ಪಾಲಿಸಿ
ದೇವ ರಾಮನೆಯೆಮ್ಮ ಸಲಹು
ದೇವರ ಕಟ್ಟಿ ನಿಮ್ಮಡಿಗಂಟು ಬದುಕೇವು
ಶ್ರಾವಕಮತವ ನಿಷ್ಕರಿಸಿ

ಮಡದಿಗೆ ವಾಲೆಭಾಗ್ಯವ ಪ್ರತಿಪಾಲಿಸೆ
ಸಡಗರದಲಿ ಶಂಖಪಾಲ

ಗಡಣವೆಲ್ಲಕೆ ಲಿಂಗವ ಕಟ್ಟಿ ನಿಮ್ಮಡಿ
ಒಡಗೂಡಿಸೆಂದು ಸೈಗೆಡೆದ.[೨೮]

ಹೀಗೆ ಜೈನರು ಸ್ವಪ್ರೇರಣೆಯಿಂದ ಲಿಂಗಧಾರಣೆ ಮಾಡದೆ ಮತಾಂತರವಾಗಲಿಲ್ಲ. ಜೀವ ಭಯಕ್ಕೆ ಹೆದರಿ ಅಂಗದಲ್ಲಿ ಲಿಂಗವನ್ನಲಂಕರಿಸಿದರು. ಹಂಪ ನಾಗರಾಜಯ್ಯ ಅವರು 'ಜೈನ ಸಮಾಜ ಮತ್ತು ಮತಾಂತರ" ಕುರಿತು ಬರೆಯುತ್ತಾ "೧೨ನೆಯ ಶತಮಾನದ ಉತ್ತರಾರ್ಧದಲ್ಲಿ ಸಂಭವಿಸಿ ಮತೀಯ ಘರ್ಷಣೆಯಾಗಲಿ . . . . . . ತತ್ತರಿಸಿ ಹೋದ ಲಕ್ಷಾಂತರ ಜೈನರು ಜೀವ ಉಳಿದರೆ ಸಾಕೆಂದು ಲಿಂಗಧಾರಣೆ ಮಾಡಿದರು. ಜೈನ ಮಠಗಳು ವೀರಶೈವ ಮಠಗಳಾದುವು. ಇದು ಪ್ರಾಣಭಯ ಜೀವಬೀತಿಯಿಂದ ಸಾಮೂಹಿಕ ಮತಾಂತರಕ್ಕೆ ಜೀವಂತ ದೃಷ್ಟಾಂತವಾಯಿತು"[೨೯] ಎಂದಿದ್ದಾರೆ. ಈ ಜೀವಭಯದ ಭೀತಿ ಬಣಂಜು ವೃತ್ತಿಯ ಜೈನರನ್ನೂ ಮತಾಂತರ ಮಾಡಿತು. ಇದಕ್ಕೆ ಮೂಲ ಕಾರಣ ಆರ್ಥಿಕತೆ, ಬಣಂಜಗಳು ಸಹಜ ಶ್ರೀಮಂತರೂ ಆಗಿದ್ದರಿಂದ ಇಡೀ ಸಂಪತ್ತನ್ನಷ್ಟೇ ಪಲ್ಲಟಗೊಳಿಸಲೂ ಮತಾಂತರ ಅಸ್ತ್ರವಾಯಿತಷ್ಟೇ. ಹಾಗಾದರೆ ಸಂಪತ್ತನ್ನು ಕಸಿದುಕೊಂಡರಾಗಿತ್ತು. ಇಲ್ಲಿ ಏಕಾಂತರಾಮಯ್ಯನ ಉದ್ದೇಶ ಒಂದೇ ಕಲ್ಲಿನಲ್ಲಿ ಎರಡು ಹಣ್ಣುಗಳನ್ನು ಉದುರಿಸುವುದಾಗಿತ್ತು. ಸಂಪತ್ತನ್ನು ಹೊಂದಿದ ವ್ಯಕ್ತಿಯನ್ನೇ ಮತಾಂತರಗೊಳಿಸಿದರೆ ತನ್ನ ಧರ್ಮಕ್ಕೆ ಜನಬಲವೂ ವೃದ್ಧಿಯಾಗುತ್ತದೆ ಜೊತೆಗೆ ಅವರಲ್ಲಿರುವ ಹಣಬಲವೂ ದೊರೆಯುತ್ತದೆ ಎಂಬ ದೂರದೃಷ್ಟಿಯಿದು. ಶತ್ರುಗಳು ಸ್ವಧರ್ಮರಾದಾಗ ಮರುವಕ್ಕವೇ ಇಲ್ಲ.

ಪಿ.ಬಿ. ದೇಸಾಯಿಯವರು ವೀರಬಣಂಜುಗಳ ಬಗ್ಗೆ ಹೇಳುತಾ " We may note in this connection the following fact in regard to the parent body of the Vira Banajus, to which the above guild was attached. Allegiance to the faith of Lord Jain appears to have been apart creed of the corporation of Vira Bananjus. This is gleaned from the following epithet, commonly occurring in their prasasti, to wit, 'embellished by the banner of the guddas' (guddu – dhvajavirajamana),

The Jaina leanings of this body are cleary disclosed by the word 'Gudda' here, which is a peculiar jaina expression signifying a lay follower mountain' does not fit in the context, though some scholars have tried to interpret it is ssence".[೩೦] ಈ ವಾದವನ್ನು ಒಪ್ಪದ ಎಂ.ಚಿದಾನಂದ ಮೂರ್ತಿಯವರು ಗುಡ್ಡ ಎಂಬುದು ಜೈನಪದವಾಗಿರದೆ ಅದೊಂದು ದ್ರಾವಿಡ ಪದವಾಗಿದೆ. ಅದರ ಒಟ್ಟಾರೆ ಅರ್ಥ ವಾತ್ಸಲ್ಯದ ಶಿಷ್ಯ ಎಂದು ಅರ್ಥೈಯಿಸುತ್ತಾ, ಜೈನರಲ್ಲದೆ ಜೈನೇತರರಲ್ಲೂ 'ಗುಡ್ಡು(ಡ್ಡ)' ಎಂಬ

ಪದವನ್ನು 'ಶಿಷ್ಯ' ಎಂಬರ್ಥದಲ್ಲಿ ಬಳಸುತ್ತಾರೆ ಎಂದಿದ್ದಾರೆ.[೩೧] ಎರಡನೆಯ ವಾದದಲ್ಲಿಯೇ ಹುರುಳಿದೆ. ಗುಡ್ಡ ಪದದ ಸಾಮಾನ್ಯ ಅರ್ಥ ಶಿಷ್ಯ. ಆದ್ದರಿಂದ ಗುಡ್ಡಧ್ವಜವನ್ನು ಹೊಂದಿದ ಮಾತ್ರಕ್ಕೆ ಬಣಂಜುಗಳು ಜೈನರಾಗುವುದಿಲ್ಲ.[೩೨] 'ಬಳಂಜು ಧರ್ಮ'ವು ಬ್ರಹ್ಮ ವಿಷ್ಣು ಮಹೇಶ್ವರರ 'ಮಂಥನದಿಂದ' ಆದುದೆಂದು ಶಾಸನಗಳಲ್ಲಿ ಬಂದುದರಿಂದ ಕೊನೆಯದಾಗಿ ಈ ಅಭಿಪ್ರಾಯಕ್ಕೆ ಬರಬಹುದು. ಬಣಂಜುಗಳೆಲ್ಲ ಜೈನರಲ್ಲ; ಅದು ಒಂದು ವೃತ್ತಿಸೂಚಕ ಪದವಾಗಿದ್ದು ಯಾರು ಬೇಕಾದವರೂ ಅನುಸರಿಸಬಹುದಿತ್ತು. ಆದರೆ ಈ ವೃತ್ತಿಯಲ್ಲಿ ತೊಡಗಿಸಿಕೊಂಡವರಲ್ಲಿ ಜೈನರೆ ಹೆಚ್ಚಾಗಿದ್ದಂತೆ ತೋರುತ್ತದೆ. ಅಂತೆಯೇ ಹಾವೇರಿ ಪರಿಸರದ ವಿವಿಧ ಜೈನಶಾಸನಗಳಲ್ಲಿ ಬೊಮ್ಮಿಸೆಟ್ಟಿ (ಅರಟಾಳ), ಕಲಿದೇವಸೆಟ್ಟಿ (ಕರಗುದರೆ), ಸಿವಿರಸೆಟ್ಟಿ (ಯಳವಟ್ಟಿ), ನಾಗಿಸೆಟ್ಟಿ (ಕುಂಟನಹೊಸಳ್ಳಿ), ಬಮ್ಮಿಸೆಟ್ಟಿ (ಬಾಳೇಹಳ್ಳಿ), ಕೇತಿಸೆಟ್ಟಿ (ಗುತ್ತಲ), ಕೇತಿಸೆಟ್ಟಿ (ಅರಟಾಳ, ಮಾದಿಸೆಟ್ಟಿ, ಬೋಗಿಸೆಟ್ಟಿ (ಸಮ್ಮಸಗಿ), ಜೋಗಿಸೆಟ್ಟಿ (ಕುಂಚೂರು), ಬೆಳ್ಳಿಸೆಟ್ಟಿ (ಚಿನ್ನಮುಳುಗುಂದ), ಸೋವಿಸೆಟ್ಟಿ (ಕೂಲಿ), ಬೊಪ್ಪಿಸೆಟ್ಟಿ (ಸುಣಕಲ್ಲಬಿದರೆ), ಬೊಮ್ಮಿಸೆಟ್ಟಿ (ಸುತಕೋಟೆ), ರಾಜಶ್ರೇಷ್ಠಿ ಸೋಮ (ಸಂಗೂರು), ಬೋಗಾಜಿ ಬೊಮ್ಮಿಸೆಟ್ಟಿ (ಕೆರೆಕ್ಯಾತನಹಳ್ಳಿ) ಹೀಗೆ ನೂರಕ್ಕೂ ಹೆಚ್ಚು ಶಾಸನೋಕ್ತ ವರ್ತಕರ ಹೆಸರುಗಳು ದಾಖಲಾಗಿವೆ ಈ ಪರಿಸರದಲ್ಲಿ ಲಭ್ಯವಿವೆ. ಈ ಎಲ್ಲ ಹೆಸರುಗಳು ೧೨–೧೩ನೆಯ ಶತಮಾನದ ಮಧ್ಯಾವಧಿಯವು. ತದನಂತರದ ಶಾಸನಗಳಲ್ಲಿ ಜೈನ ವರ್ತಕರ ಹೆಸರು ಅತೀ ವಿರಳವಾಗಿ ದೊರೆಯುವವು. ವಿಜಯನಗರ ಕಾಲಾವಧಿಯಲ್ಲಂತೂ ಹಾವೇರಿ ಪರಿಸರದಲ್ಲಿ ಕೇವಲ ೧೬ ಶಾಸನಗಳು ಮಾತ್ರ ಲಭ್ಯವಿವೆ. ಕಾರಣ ಆ ಹೊತ್ತಿಗೆ ಜೈನಧರ್ಮದ ಅನುಯಾಯಿಗಳು ಕ್ಷೀಣಿಸಿದ್ದರು. ಮುಖ್ಯವಾಗಿ ಆರ್ಥಿಕ ಬಲ ಹೊಂದಿ ಈ ಧರ್ಮದ ಆನೆಬಲವಾದ ಬಣಂಜು ಜೈನರು ಇಲ್ಲವಾಗಿದ್ದರು. ಹಾಗಾದರೆ ಅವರು ಎಲ್ಲಿ ಹೋದರು ಎನ್ನುವ ಪ್ರಶ್ನೆಗೆ ಪ್ರಸ್ತುತ ಐತಿಹ್ಯ ಆಧಾರವಾಗಿ ನಿಲ್ಲುತ್ತದೆ.

## ಊ. ವ್ಯಕ್ತಿ ಸಂಬಂಧಿತ ಐತಿಹ್ಯಗಳು.

ಜೈನಧರ್ಮದ ಆಚಾರ್ಯ ಪರಂಪರೆಯಲ್ಲಿ ಅಗ್ರಮಾನ್ಯವಾದ ಪೂಜ್ಯಪಾದ ಮುನಿಯ ಬಗ್ಗೆ ಹಾವೇರಿ ಪರಿಸರದಲ್ಲಿ ವ್ಯಕ್ತಿಗೆ ಸಂಬಂಧಿಸಿದ ಐತಿಹ್ಯವೊಂದು ಹರಿದಾಡುತ್ತಿದೆ. "ಪೂಜ್ಯಪಾದ ಸ್ವಾಮಿಗಳು ಕಣ್ಣು ಕಳಕೊಂಡಾಗ ಬಂಕಾಪುರದ ಶಾಂತಿನಾಥನನ್ನು ಪೂಜೆ ಮಾಡಿ ಮತ್ತs ಕಣ್ಣುಪಡಕೊಂಡಂರಂತೆ, ಈಗ ಬಂಕಾಪುರದಾಗ ಜೈನರೂ ಇಲ್ಲ, ಶಾಂತಿನಾಥ ಬಸದಿನೂ ಇಲ್ಲ"[೩೩] ಎಂಬುದು ಐತಿಹ್ಯದ ಸಂಕ್ಷಿಪ್ತ ರೂಪ. ಇದೇ ಐತಿಹ್ಯ ದೇವಚಂದ್ರನ ರಾಜಾವಳಿ ಕಥಾಸಾರದಲ್ಲಿ ಇನ್ನಷ್ಟು ವಿವರವಾಗಿದೆ. "ಪೂಜ್ಯ ಪಾದಯತೀಂದ್ರಂ ಪದಿನಾಡಿನೊಳ್ ತಪಂಗೆಯ್ವುತ್ತ ತೀರ್ಥವಂದನೆಯಂ ಮಾಡಲೆಂದು ಆಂಧ್ರ ಕರ್ಣಾಟ ಚೋಳ ಪಾಂಡ್ಯ ಮೊದಲಾದೆಲ್ಲಾ ದೇಶಂಗಳಂ ವಿಹಾರಿಸಿ ಕಾಂಗೆರೆಯಾ ಶೈಲಕ್ಕಂ ಬಂದು ಜಿನಾಗಮಮಂ ಕೆಲವಂ ನೋಡಿ ತಿಳಿದುಪದೇಶಮಂ ಮಾಳ್ಪರಿಲ್ಲದೆ ಕೆಲವು ಸಿದ್ಧಾಂತಂ ಮರೆಗರೆದಿದ್ದುದರಿಂ ಸಂದೇಹಗ್ರಸ್ತಮಾಗೆ ಪೂರ್ವವಿದೇಹಕ್ಕೆ ಪಾದಲೇಪೌಷಧಿ ಸಾಮರ್ಥ್ಯದಿಂ ಪೋಗಿ ಸಮವರಸಣದೊಳಿರ್ದ ಶ್ರೀ

ಜಿನಪತಿಗಳಂ ಬಂದಿಸಿ ತತ್ವಮಂ ನಿಸ್ಸಂದೇಹಮಾಗರಿದಲ್ಲಿಯೆ ಪುಸ್ತಕದೊಳ್ ಬರೆದುಕೊಂಡು ದೈವಾಯತ್ತದಿಂ ಬಂಕಾಪುರಮೆಂಬುದರೊಳ್ ಶಾಂತೀಶ್ವರರಂ ಬಂದಿಸಿ ಶ್ಯಾಂತ್ಯಷ್ಟಕಮಂ ಪೇಳಿ ದೃಷ್ಟಿಯಂ ಪಡೆದು ಬಂದು ಶಾಂತೀಶ್ವರರಂ ಬಂದಿಸಿ ಶಾಂತ್ಯಷ್ಟಕಮಂ ಪೇಳಿ ದೃಷ್ಟಿಯಂ ಪಡೆದು ಬಂದು ಸಿದ್ಧಾಂತಮಂ ಶಿಷ್ಯಪ್ರಶಿಷ್ಯರ್ಗಮುಪದೇಶಂಗೆಯ್ದು ಲೌಕಿಕ ಪಾರಮಾರ್ಥಂದಳಂ ರಚಿಸಿ ಸುಗತಿಪ್ರಾಪ್ರರಾದರ್"[೩೪]

ಹಾವೇರಿ ಪರಿಸರದಲ್ಲಿ ಪ್ರಚಲಿತದಲ್ಲಿದ್ದ ಪೂಜ್ಯಪಾದರ ಐತಿಹ್ಯವನ್ನೇ ರಸವತ್ತಾಗಿ ದೇವಚಂದ್ರ ನಿರೂಪಣೆ ಮಾಡಿದ್ದಾನೆ. ಐತಿಹ್ಯದ ಮೂಲ ಉದ್ದೇಶ ಪೂಜ್ಯಪಾದ ಮುನಿಯ ಸಿದ್ಧಿ-ಸಾಧನೆ ಮತ್ತು ಬಂಕಾಪುರ ಶಾಂತಿನಾಥ ತೀರ್ಥಂಕರ ಪಾರಮ್ಯತೆಯನ್ನು ಹೇಳುವುದಾಗಿದೆ. ಪಾದಲೇಪನ ಔಷಧಿ ವಿದ್ಯೆಯಿಂದ ವಿದೇಹ (ಬಿಹಾರ)ಕ್ಕೆ ಹಾರಿಹೋದುದು ಒಂದು ಉತ್ಪ್ರೇಕ್ಷೆ. ಈ ಉತ್ಪ್ರೇಕ್ಷೆಯ ಹಿಂದಿನ ತಿರುಳು ಕರ್ನಾಟಕದಿಂದ ದೂರದ ಬಿಹಾರಕ್ಕೆ ಹೋಗಿಬಂದ ಸಾಹಸದ ವೈಭವೀಕರಣವಾಗಿದೆ. ಇಂದಿನ ಬೆಂಗಳೂರಿನಿಂದ ಬಿಹಾರಕ್ಕೆ ರಾಷ್ಟ್ರೀಯ ಹೆದ್ದಾರಿ ೪೮ರ ಮೂಲಕವೆ ೨೨೬೦ ಕಿಲೋ ಮೀಟರ್ ದೂರವಿದೆ.[೩೫] ಸದ್ಯ ವಾಹನಗಳ ಮೂಲಕ ಒಂದೆರಡು ದಿನಗಳಲ್ಲಿ ಬಿಹಾರವನ್ನು ತಲುಪಬಹುದು. ಆದರೆ ೫ನೆಯ ಶತಮಾನದಲ್ಲಿ ಈವಾವು ಸೌಲಭ್ಯ ಇರಲಿಲ್ಲ. ಇದ್ದರೂ ಜಿನಮುನಿ ನಿತ್ಯ ಕಾಲ್ನಡಿಗೆಯ ಸಂಚಾರಿ. ಪೂಜ್ಯಪಾದ ಮುನಿಯು ಕಾಲ್ನಡಿಗೆಯ ಮೂಲಕ ಬಿಹಾರಕ್ಕೆ ಹೋಗಿ ಬಂದಿದ್ದಾರೆ. ಕಾಲ್ನಡಿಗೆಯ ಮೂಲಕ ಕಾಡುಮೇಡು ಅಲೆದು ದುಷ್ಟ ಮೃಗ-ಜಂತುಗಳಿಂದ ಪಾರಾಗಿ ಸುಮಾರು ೩೦೦೦ ಸಾವಿರ ಕಿಲೋ ಮೀಟರ್ ದೂರದ ವಿದೇಹ (ಬಿಹಾರ)ಕ್ಕೆ ಹೋಗಿ ತೀರ್ಥಂಕರರಿಗೆ ವಂದಿಸಿ ತಮ್ಮ ಸಂದೇಹವನ್ನು ಹೇಳಿ, ಉತ್ತರ ಬರೆದುಕೊಂಡು ಮರಳಿ ಅಷ್ಟೇ ಕಿಲೋಮೀಟರ್ ನಡೆದು ಕರ್ನಾಟಕ ಭಾಗವನ್ನು ಸೇರಿದ್ದಾರೆ. ಈ ರೀತಿಯ ಪಯಣ "ಇಂದು ಚಂದ್ರಲೋಕಕ್ಕೆ ಹೋಗಿ ಬಂದವನು ಇದ್ದಂತೆ. ಅಷ್ಟು ದೂರದ ದಾರಿ ಶ್ರಮಿಸಿದವನಿಗೆ ಗಗನ ಸಾಮರ್ಥ್ಯವೇ ಇರಬೇಕೆಂಬ ಭಾವನೆಗಳು ಬಲಿತು ಗರಿಗೆದರಿದ್ದರಿಂದ ಪೂಜ್ಯಪಾದನಿಗೆ ಪವಾಡ ಪುರುಷನ ಪಟ್ಟ ಕಟ್ಟಲಾಯಿತು. ಅವನ ಕಾಲುಗಳಿಗೆ ನೆಲಬಿಟ್ಟು ನಡೆಯುವ ಲೇಪೌಷಧಿಯನ್ನು ಬಳಿಯಲಾಯಿತು. ಘಟನೆ ಕಥೆಯಾಯಿತು, ನಿಜಕ್ಕೆ ಬಣ್ಣ ಸವರಲಾಯಿತು"[೩೬] ಮುಂದೆ ಇದೆ ಘಟನೆ ಐತಿಹ್ಯವಾಗಿ ನಾಡಿನಾದ್ಯಂತ ಪಸರಿಸಿ ಐತಿಹ್ಯವಾಗಿ ರೂಪಗೊಂಡಿತು. ಪೂಜ್ಯಪಾದ ಮುನಿಯ ಇರುವಿಕೆ ಬಗ್ಗೆ ಶಾಸನಗಳು, ಕಾವ್ಯಕೃತಿಗಳು ಆಧಾರವಾಗಿವೆ.[೩೭] ಪೂಜ್ಯಪಾದನ ಐತಿಹ್ಯದ ಮೂಲ ಸೆಲೆಯೂ ಆ ಮುನಿಯ ಪಾರಮ್ಯತೆಯನ್ನು ಸಾರುವುದಾಗಿದೆ.

ಪೂಜ್ಯಪಾದರನ್ನು ಪವಾಡ ಪುರುಷನನ್ನಾಗಿ ಮಾಡುವುದರ ಜೊತೆ ಜೊತೆ ತಾವು ವಿದೇಹ ಪ್ರಯಾಣದಿಂದ ಮರಳಿ ಬರುವಾಗ ತಾಪದಿಂದ ದೃಷ್ಟಿಯನ್ನು ಕಳೆದುಕೊಂಡಿದ್ದನ್ನು ಬಂಕಾಪುರದ ಶಾಂತಿನಾಥನ ಸನ್ನಿಧಿಯಲ್ಲಿ ಶಾಂತ್ಯಾಷ್ಟಕವನ್ನು ಮರಳಿ ಪಡೆದದ್ದನ್ನು ವೈಭವೀಕರಿಸಲಾಗಿದೆ. ಇಲ್ಲಿ

ಪ್ರಮುಖವಾಗಿ ಜಿನಪಾರಮ್ಯ ಎಂಥದ್ದು ಎಂದು ಸಾರುವ ಮೂಲ ಉದ್ದೇಶ ವ್ಯಕ್ತವಾಗಿದೆ. ಶಾಂತಿನಾಥನನ್ನು ಕುರಿತಾಗಿ ಶಾಂತ್ಯಾಷ್ಟಕವನ್ನು ಪೂಜ್ಯಪಾದರು ಬರೆದದ್ದು ದಿಟ.[೩೮] ಈ ರೀತಿ ಶಾಂತಿನಾಥನನ್ನು ಕುರಿತು ಸ್ಮರಿಸುತ್ತ ಬರೆದ ಶಾಂತ್ಯಾಷ್ಟಕ ಮತ್ತು ಶಾಂತಿನಾಥನ ಸ್ಮರಣೆ ಕಳೆದುಕೊಂಡ ದೃಷ್ಟಿಯನ್ನೂ ಮರಳಿ ಪಡೆಯಲು ಸಹಾಯಕವಾಗುತ್ತವೆ ಎಂಬ ಭಾವ ಐತಿಹ್ಯದಲ್ಲಡಗಿದೆ. ಪೂಜ್ಯಪಾದ ಮುನಿಯು ಬಂಕಾಪುರದಲ್ಲಿಯೇ ಕಳೆದುಕೊಂಡ ದೃಷ್ಟಿಪಡೆದುಕೊಂಡಿದ್ದು ಆ ಕೇಂದ್ರದಲ್ಲಿ ಮಹತ್ವ ಅರಿತು. ಆ ಕಾಲದಲ್ಲಿ ಇದೊಂದು ಜೈನ ಅಗ್ರಗಣ್ಯ ಕೇಂದ್ರವಾಗಿದ್ದಂತೆ ತೋರುತ್ತದೆ. ಸದ್ಯ ಬಂಕಾಪುರ ಯಾವುದೇ ಜಿನಾಲಯಗಳು ಉಳಿದು ಬಂದಿಲ್ಲ. ೧೦ನೆಯ ಶತಮಾನದ ಜೈನ ಧರ್ಮದ 'ಮಹಾಮೇರು' ಆಗಿದ್ದ ಬಂಕಾಪುರ ಇಂದು ಸಾಧಾರಣ ಪಟ್ಟಣ. ಈ ಎಲ್ಲ ಐತಿಹಾಸಿಕ ಸತ್ಯಾಸತ್ಯಗಳ ಮುಖಾಮುಖಿ ಪ್ರಸ್ತುತ ಐತಿಹ್ಯದಲ್ಲಿದೆ.

ಹಾವೇರಿ ಪರಿಸರದಲ್ಲಿ ಇತರೆ ವ್ಯಕ್ತಿಗಳ ಐತಿಹ್ಯಗಳು ಲಭ್ಯವಿದ್ದರು ಅವು ಶಾಸನದಲ್ಲಿರುವ ಶಿಲ್ಪಗಳಿಗೆ ತಳುಕು ಹಾಕಿಕೊಂಡಿವೆ. ಅವುಗಳನ್ನು ಶಿಲ್ಪ ಅವಶೇಷ ಸಂಬಂಧಿತ ಐತಿಹ್ಯಗಳಡಿಯಲ್ಲಿ ಚರ್ಚಿಸಲಾಗಿದೆ.

### ಖ. ಶಿಲ್ಪ ಅವಶೇಷ ಸಂಬಂಧಿತ ಐತಿಹ್ಯಗಳು.

ಜೈನಧರ್ಮದ ಶಿಲ್ಪ ಮತ್ತು ಅವಶೇಷಗಳಿಗೆ ಸಂಬಂಧಿಸಿದಂತೆ ಹಾವೇರಿ ಪರಿಸರ ಭಾಗದಲ್ಲಿ ಯಥೇಚ್ಛವಾದ ಐತಿಹ್ಯಗಳು ಲಭ್ಯವಿವೆ. ಜೈನಧರ್ಮದ ಬಾಹುಳ್ಯ ಕಡಿಮೆಯಾದನಂತರ ಅಥವಾ ಅವರನ್ನು ಮತಾಂತರಗೊಳಿಸಿದ ನಂತರ ಅವರ ಬಸದಿಗಳು ಅದರಲ್ಲಿರುವ ತೀರ್ಥಂಕರರ ವಿಗ್ರಹಗಳು ಅನಾಥವಾದವು. ಹಾಳಾದವು. ಹಾಗೆ ಹಾಳು ಬಿದ್ದು ಚದುರಿದ ಜೈನ ಅವಶೇಷಗಳು ನಾಡಿನಾದ್ಯಂತ ದೊರೆಯುತ್ತವೆ. ಅಂತೆಯೇ ಹಾವೇರಿ ಪರಿಸರದಲ್ಲೂ ಈ ರೀತಿಯ ಜೈನ ಅವಶೇಷಗಳಿಗೇನು ಕಡಿಮೆ ಇಲ್ಲ. ಇಂತಹ ಶಿಲ್ಪಗಳ ಅವಶೇಷ, ಜಿನಶಾಸನಗಳು, ಸುಸ್ಥಿತಿಯಲ್ಲಿರುವ ಜಿನಮೂರ್ತಿಗಳ ಸುತ್ತ ಸ್ಥಳೀಯವಾಗಿ ಐತಿಹ್ಯಗಳು ಹರಡಿಕೊಂಡಿವೆ. ಅವುಗಳಲ್ಲಿ ಅತಿಮುಖ್ಯವಾದವುಗಳನ್ನು ಮಾತ್ರ ಅಭ್ಯಸಿಸಲಾಗಿದೆ.

### ೦೧. ಹಾವೇರಿಯ ಮುತ್ತುಮಾಣಿಕ ಸ್ವಾಮಿ.

ಹಾವೇರಿಯ ಆದಿತೀರ್ಥಂಕರರ ಬಸದಿಯಲ್ಲಿ ಒಂದು ಪ್ರಾಚೀನ ಆದಿತೀರ್ಥಂಕರ ಬಿಂಬವಿದೆ. ಮೂರ್ತಿಯ ಶೈಲಿ ದೃಷ್ಟಿಯಿಂದ ೧೨ನೇ ಶತಮಾನಕ್ಕೆ ಸೇರಿದ್ದೆಂದು ಹೇಳಬಹುದು. ಸ್ಥಳೀಯರು ಈ ಮೂರ್ತಿಗೆ ಮುತ್ತುಮಾಣಿಕ ಸ್ವಾಮಿ ಎಂದು ಕರೆಯುತ್ತಾರೆ. ಇದರ ಸುತ್ತ ಒಂದು ಐತಿಹ್ಯವು ಈ ರೀತಿಯಾಗಿ ಪ್ರಚಲಿತವಿದೆ. "ಕ್ರಿ.ಶ. ಸುಮಾರು ೧೮೮೦ರ ದಶಕದಲ್ಲಿ 'ಪಾಯಸಾಗರ' ಎಂಬ ಮುನಿಗಳು ಹಾವೇರಿಯಲ್ಲಿ ಚಾತುರ್ಮಾಸ ಆಚರಿಸುತ್ತಿದ್ದರಂತೆ. ಒಂದು ದಿನ ಅವರ ಕನಸಲ್ಲಿ ಮುತ್ತುಮಾಣಿಕ ಸ್ವಾಮಿ ಬಂದು 'ನಾನು ಸಿದ್ಧೇಶ್ವರ ದೇವಾಲಯದ ಬಾವಿಯಲ್ಲಿ ಇದ್ದೇನೆ

ಯಾರಿಗೂ ತೊಂದರೆಯಾಗದಂತೆ ರಾತ್ರಿಯ ವೇಳೆ ನನ್ನನ್ನು ಬಾವಿಯಿಂದ ತೆಗೆದುಕೊಂಡು ಹೋಗಿ' ಎಂದರಂತೆ."[೩೯] ಪಾಯಸಾಗರ ಮುನಿಗಳು ಅನೇಕ ಜೈನ ಶ್ರಾವಕರ ಒಡನೆ ಒಡಗೂಡಿ ಮಾಣಿಕಸ್ವಾಮಿ ಹೇಳಿದ ಹಾಗೆಯೇ ಮಾಡಿದರಂತೆ.

ಮುತ್ತುಮಾಣಿಕ ಸ್ವಾಮಿಗಳ ಮಾತುಗಳು ಇಲ್ಲಿ ಮನನೀಯ 'ಬೇರೆಯವರಿಗೆ ತೊಂದರೆಯಾಗದಂತೆ ನನ್ನನ್ನು ಮೇಲೆತ್ತಿ' ಎಂಬ ಮಾತಿನ ಹಿಂದೆ ಪರಧರ್ಮ ಸಹಿಷ್ಣುತಾ ಅಂಶ ಎದ್ದು ಕಾಣುತ್ತದೆ. ಜೈನರಲ್ಲಿ ಅಷ್ಟೇ ಅಲ್ಲದೆ ಜಿನನಲ್ಲಿ ಈ ಅಂಶ ಕಾಣುವುದು ಸೋಜಿಗ. ಬಹುಶಃ ೧೨ನೇ ಶತಮಾನದಲ್ಲಾದ ಮತೀಯ ಕಲಹದಿಂದ ಜೈನರು ತತ್ತರಿಸಿ ಹೋಗಿದ್ದರು. ಅಬ್ಬಲೂರು,[೪೦] ತಾಳಿಕೋಟೆಯ[೪೧] ಶಾಸನಗಳು ಈ ವಾದಕ್ಕೆ ಪುಷ್ಟಿ ನೀಡುತ್ತವೆ. ಈ ದಾಳಿಗಳಿಂದ ಜೈನ ಸ್ವಭಾವ ಸೂಕ್ಷ್ಮವಾಗತೊಡಗಿತು. ಒಂದು ಕಾಲದಲ್ಲಿ ವಿಜೃಂಭಣೆಯಿಂದ ಜೈನರು, ಜೈನಧರ್ಮ ೧೨ನೇ ಶತಮಾನದ ಹೊತ್ತಿಗೆ ತಮ್ಮ ಅಸ್ಥಿತ್ವ ಉಳಿಸಿಕೊಳ್ಳಲು ಪರಧರ್ಮದವರಿಗೆ, ಪ್ರಬಲ ಧರ್ಮದವರಿಗೆ ಅನಿವಾರ್ಯವಾಗಿ ಹೆದರಬೇಕಾಯಿತು. ಆ ಹೆದರಿಕೆ ಜನರಲ್ಲಿ ಅಷ್ಟೇ ಅಲ್ಲದೆ 'ಜಿನ'ನಲ್ಲಿಯೂ ಕಂಡು ಬಂತು. 'ಜನರಂತೆ ಜಿನ' ಎಂಬ ವಿಷಯ ಮೇಲಿನ ಅಂಶದಿಂದ ಸ್ಪಷ್ಟವಾಗುತ್ತದೆ.

### ೦೨. ಅದರಗುಂಚಿಯ ದೊಡ್ಡಪ್ಪ.

ಹಾವೇರಿ ಪಕ್ಕದ ಧಾರವಾಡ ಜಿಲ್ಲೆಯ ಹುಬ್ಬಳ್ಳಿ ತಾಲ್ಲೂಕಿನ ಅದರಗುಂಚಿಯಲ್ಲಿ ಆದಿನಾಥನ ಮೂರ್ತಿಯೊಂದಿದೆ. ಇದರ ಸುತ್ತಲೂ ಸ್ಥಳೀಯ ಐತಿಹ್ಯಗಳು ಹರಡಿಕೊಂಡಿವೆ. "ಸುಮಾರು ವರ್ಷಗಳ ಹಿಂದಿನ ಕಾಲದಲ್ಲಿ ವಿಜಯಪುರದ ವಾಲಿಕಾರ ಮನೆತನದಲ್ಲಿ ದೊಡ್ಡಪ್ಪ ಎಂಬಾತನಿದ್ದನು. ಆತನ ಪ್ರಿಯತಮೆ ಹಾವೇರಿ ಜಿಲ್ಲೆಯ ಶಿಗ್ಗಾಂವ ತಾಲ್ಲೂಕಿನ ಬಂಕಾಪುರದಲ್ಲಿ ನೆಲೆಸಿದ್ದಳು. ದೊಡ್ಡಪ್ಪನು ಪ್ರತಿದಿನ ಸೂರ್ಯಸ್ತವಾದೊಡನೆ ವಿಜಯಪುರದಿಂದ ಕಾಲ್ನಡಿಗೆಯಲ್ಲಿ ಬಂಕಾಪುರಕ್ಕೆ ಬಂದು ರಾತ್ರಿಯಲ್ಲಿ ತನ್ನ ಪ್ರಿಯತಮೆಯ ಜೊತೆಗಿದ್ದು, ಸೂರ್ಯೋದಯಕ್ಕೆ ಮುಂಚಿತವಾಗಿ ವಿಜಯಪುರಕ್ಕೆ ಹಿಂತಿರುಗುತ್ತಿದ್ದನು. ಆದರೆ ಒಂದು ದಿನ ಬಂಕಾಪುರಕ್ಕೆ ಬಂದಾಗ ಬೆಸತ್ತು ಏಳುವುದು ತಡವಾಯಿತು. ಲಗುಬಗೆಯಿಂದ ಹೊರಡಲು ಪ್ರಾರಂಭಿಸಿದನು. ಅದರಗುಂಚಿಗೆ ಬರುವುದರೊಳಗಾಗಿ ಬೆಳಕು ಹರಿಯಿತು. ತನ್ನನ್ನು ಜನರು ಗುರುತಿಸಬಹುದೆಂದು ಸ್ಥಳದಲ್ಲಿಯೇ (ಅದರಗುಂಚಿಯಲ್ಲಿ) ಕಲ್ಲಾಗಿ ಕುಳಿತನು. ಇದನ್ನು ಗಮನಿಸಿದ ಸ್ಥಳೀಯ ಹೆಣ್ಣುಮಗಳು 'ಇಲ್ಲಿಯೇ ಕುಳಿತಿಯಾ' ಎಂದು ತನ್ನ ಕೈಯಲ್ಲಿದ್ದ ಚರಿಗೆಯಿಂದ (ತಂಬಿಗೆ) ಇವನ ಕುಂಡಿಯ ಮೇಲೆ ಅಪ್ಪಳಿಸಿದಳು"[೪೨] ಎಂಬ ಐತಿಹ್ಯವನ್ನು ಊರಲ್ಲಿ ಪ್ರತಿಯೊಬ್ಬರೂ ಹೇಳುತ್ತಾರೆ. ಅಲ್ಲದೇ 'ಮಕ್ಕಳಾಗದ ಸ್ತ್ರೀಯರು ದೊಡ್ಡಪನ ತೊಡೆಯಮೇಲೆ ಕುಳಿತರೆ ಮಕ್ಕಳಾಗುತ್ತವೆ', 'ಊರಿಗೆ ಬಂದ ಸೊಸೆಯರು ದೊಡ್ಡಪ್ಪನ ದರ್ಶನ ಪಡೆಯದಿದ್ದರೆ ಕೆಡಕಾಗುತ್ತದೆ'[೪೩] ಎಂಬ ಇತರೆ ಐತಿಹ್ಯಗಳು ಮೂರ್ತಿಯ ಸುತ್ತಲೂ ಹರಡಿಕೊಂಡಿವೆ.

ಐತಿಹ್ಯದಲ್ಲಿ ಬಂಕಾಪುರದ ಉಲ್ಲೇಖ ಐತಿಹಾಸಿಕ ಆಕರದ ಮೂಲ. ದೊಡ್ಡಪ್ಪ ಎಂಬ ಅಭಿದಾನ ಮೂರ್ತಿಯ ಎತ್ತರದಿಂದ ಆರೋಪಿತವಾಗಿದೆ. ದೊಡ್ಡ + ಅಪ್ಪ = ದೊಡ್ಡಪ್ಪ ಈ ಮೂರ್ತಿ ಐದು ಅಡಿ ಎತ್ತರದ್ದು. ಇನ್ನು ದೊಡ್ಡಪ್ಪ ಬಂಕಾಪುರದಿಂದ ಬಂದು ಅದರಗುಂಚಿಯಲ್ಲಿ ಕಲ್ಲಾದ ಎಂಬ ಮೂಲ ಸೆಲೆಯು ಮೂರ್ತಿಯು ಬಂಕಾಪುರದಿಂದ ಬಂದದ್ದು ಎಂದು ಬೇರೆ ಹೇಳಬೇಕಿಲ್ಲ. ಬಂಕಾಪುರದಿಂದ ಆದಿನಾಥ ತೀರ್ಥಂಕರರ ಮೂರ್ತಿಯನ್ನು ಅದರಗುಂಚಿಗೆ ತರುವಾಗ ಶಿಥಿಲಗೊಂಡಿದೆ. ಅದನ್ನೇ ಹೆಣ್ಣುಮಗಳೊಬ್ಬಳು ತಂಬಿಗೆಯಿಂದ ಹೊಡೆದ ಪರಿಣಾಮವಾಗಿ ತಗ್ಗಾಗಿದೆ ಎಂದು ತೋರಿಸಲಾಗುತ್ತದೆ. ಉಳಿದ ಐತಿಹ್ಯಗಳು ಸ್ಥಳೀಯರ ಮಾರ್ಪಾಡು. ಅದರಲ್ಲೂ ದೊಡ್ಡಪ್ಪನ ತೊಡೆಯ ಮೇಲೆ ಕೂತರೆ ಮಕ್ಕಳಾಗುತ್ತವೆ ಎಂಬುದು ಒಂದು ಧರ್ಮದ ಧಾರ್ಮಿಕತೆಯ ನೆಲೆಗಟ್ಟನ್ನು ಘಾಸಿಗೊಳಿಸುವುದಾಗಿದೆ. ಸಕಲವನ್ನೂ ತ್ಯಜಿಸಿದ ತೀರ್ಥಂಕರನು ಮಕ್ಕಳನ್ನು ಹೇಗೆ ಕೊಟ್ಟಾನು. ತೀರ್ಥಂಕರರೆಲ್ಲರೂ ವರಕೊಡುವವರಲ್ಲ ಬದಲಾಗಿ ಅನುಯಾಯಿಗಳಿಗೆ ಕರ್ಮಸಿದ್ಧಾಂತವನ್ನು ಸಾರಿದವರು. ಇಡೀ ಐತಿಹ್ಯ ಬಂಕಾಪುರದಲ್ಲಿ ಜೈನಧರ್ಮ ಅವಸಾನಗೊಂಡ ಮೂಲ-ಚೂಲಗಳನ್ನು ತೆರೆದಿಡುತ್ತದೆ. ೧೧ನೆಯ ಶತಮಾನಕ್ಕೆ ಬಂಕಾಪುರ ದೊಡ್ಡ ಜೈನಕೇಂದ್ರವಾಗಿದ್ದು, ಚಲ್ಲಕೇತನ ಎಂಬ ಜೈನ ಆಡಳಿತಗಾರರಿಂದ ಸಮೃದ್ಧಗೊಂಡಿತ್ತು. ಪೂಜ್ಯಪಾದ, ಜಿನಸೇನ ದೇವೇಂದ್ರಮುನಿ, ಅಜಿತಸೇನಾಚಾರ್ಯ ಎಂಬ ಅತಿರಥ ಮುನಿಗಳಿಗೆ ನೆಲೆಯಾಗಿ, ಪಂಪ, ರನ್ನ, ಚಾವುಂಡರಾಯ ವಿದ್ಯಾಕೇಂದ್ರವಾಗಿ ಬೆಳೆದು ನಿಂತಿತ್ತು. ಅಂತೆಯೇ ಇಲ್ಲಿ ಧೋರಬಸದಿ, ಉಪ್ಪಟಾಯ್ತನ, ಕಲಿವಿಟ, ಕೊಂತಿಮಹಾದೇವಿ ಬಸದಿಗಳು ಇದ್ದುವು. ಕಾಲಾನಂತರದಲ್ಲಿ ಇಲ್ಲಿ ಜೈನ ಧರ್ಮದ ಪ್ರಾಬಲ್ಯ ಕಡಿಮೆಯಾದಾಗ ಇಲ್ಲಿನ ಸ್ಮಾರಕಗಳು ಪರಿವರ್ತನೆಗೊಂಡು ಇಲ್ಲಿರುವ ಜಿನಬಿಂಬಗಳು ಬೇರೆಡೆಗೆ ಸ್ಥಳಾಂತರಗೊಳ್ಳುವಾಗ ಒಂದು ಮೂರ್ತಿ ಅದರಗುಂಚಿಯನ್ನು ಸೇರಿದೆ. ಈಗ ಇಲ್ಲಿ ಜೈನರಿಲ್ಲ. ಆದಿನಾಥ ದೊಡ್ಡಪ್ಪನಾಗಿ ಸ್ಥಳೀಯರ ಸಂಪ್ರದಾಯದಂತೆ ವಿಭೂತಿ ಪೂಸಿಕೊಂಡು ಆರಾಧನೆಗೊಳ್ಳುತ್ತಿದ್ದಾನೆ.

### ೦೩. ಮಂತಗಿಯ ದೇವರು.

ಮಂತಗಿಯ (ಹಾನತಾ) ಪಕ್ಕ ಹರಿಯುವ ಧರ್ಮಾನದಿ ದಂಡೆಯಲ್ಲಿ ಒಂದು ನಿಸಿಧಿಯಿದೆ. ಈ ನಿಸಿಧಿಯಲ್ಲಿರುವ ಸಲ್ಲೇಖನ ವ್ರತಧಾರಿಯ ಬಿಂಬವನ್ನು ಕುರಿತು ಐತಿಹ್ಯವೊಂದಿದೆ. "ಹಿಂದಿನ ಕಾಲದಲ್ಲಿ ಒಂದು ವರ್ಷ ಮಳೆ ಬರದಿದ್ದಾಗ ಯಾವುದೋ ಊರಿನ ಈ ಮನುಷ್ಯ ಮಳೆ ಬರಲೆಂದು ಉಪವಾಸ ಮಾಡಿ ಸತ್ತನಂತೆ. ಅವನು ಸತ್ತನಂತರ ಮಳೆ ಬಂದು ನಮ್ಮೂರ ಪಕ್ಕ ನದಿಯೇ ಹರಿಯಲು ಶುರುಮಾಡಿತಂತೆ ಅಂದಿನಿಂದ ನಮ್ಮೂರಿಗೆ ನೀರಿನ ಬರ ನೀಗಿತಂತೆ ಅದಕ್ಕೆ ನಾವು ಇವನನ್ನು ದೇವರೆಂದು ಪೂಜಿಸುತ್ತೇವೆ" ಎಂದು ಸ್ಥಳೀಯರು ಹೇಳುತ್ತಾರೆ.[೪೪]

ಮೇಲಿನ ಐತಿಹ್ಯ ಶಾಸನದ ಮೂಲದಿಂದ ಹುಟ್ಟಿದ್ದು. ಸದ್ಯ ಪೂಜೆಗೊಳ್ಳುತ್ತಿರುವ ಶಿಲ್ಪವು ವಿಠಗೌಡನದಾಗಿದ್ದು. ಈ ವಿಠಗೌಡ ಮಂತಗಿಯ ಸಮೀಪದ ಮಲ್ಲಿಗುಂದ (ಮಲಗುಂದ)ದವನು

'ಮೂಲಸಂಘ ಸೂರಸ್ತಗಣದ ಸಹಸ್ರಕೀರ್ತಿದೇವರ ಗುಡ್ಡ. "ಮಲ್ಲಿಗುಂದದ ಮಹಾಪ್ರಭು ಏಿಠಗೌಡ ಸಮಾಧಿ ವಿಧಿಯಿಂ ಮುಡಿಪಿ"[೪೫]ದ ಎಂದು ಸ್ಮಾರಕದಲ್ಲಿನ ಶಾಸನವು ಏಿಠಗೌಡ ಮಂತಗೆಗೆ ಬಂದು ಸಮಾಧಿ ಮರಣ ಹೊಂದಿದ್ದಾಗಿ ಅರಹುತ್ತದೆ. ಮಂತಗಿಯಲ್ಲಿ ಒಂದು ಚತುರ್ವಿಂಶತಿ ತೀರ್ಥಂಕರರ ಬಸದಿಯಿದ್ದು,[೪೬] ಅಲ್ಲಿ ಬಂದು ಏಿಠಗೌಡ ಸಮಾಧಿಮರಣದ ವ್ರತ ತೆಗೆದುಕೊಂಡಿದ್ದಾನೆ. ಬಸದಿಯಲ್ಲಿ ಸಮಾಧಿ ಮರಣದ ವ್ರತವನ್ನು ತೆಗೆದುಕೊಳ್ಳುವ ಪ್ರಕ್ರಿಯೆ ಒಂದು ರೂಢಿ. ಏಿಠಗೌಡನ ಪ್ರಾಣತ್ಯಾಗ ಶ್ರೇಷ್ಠವೆನಿಸಿ ಮುಂದೆ ಐತಿಹ್ಯವಾಗಿ ಬೆಳೆದಿದೆ. ಮೇಲಾಗಿ ಏಿಠಗೌಡನು ಮಲ್ಲಿಗುಂದದ ಗೌಡ (ಮಹಾಪ್ರಭು) ಆಗಿದ್ದು, ಆರ್ಥಿಕವಾಗಿ ಪ್ರಬಲವಿದ್ದ ವ್ಯಕ್ತಿಯ ಮರಣ ಸೋಜಿಗ ಮತ್ತು ಶ್ರೇಷ್ಠ ಎನಿಸಿ ಐತಿಹ್ಯ ಹುಟ್ಟಿಕೊಂಡಿದೆ.

ಹೀಗೆ ತೀರ್ಥಂಕರರ ಮುಕ್ಕೊಡೆಗೆ ಕೋಳೂರು ಕೊಡಗೂಸಿನ ಕಥೆ ಆರೋಪಿಸುವುದು (ಕಲಕೇರಿ/ಹಾನತಾ), ರಾಜನ ಕಿರೀಟವೆಂದು (ಕನವಳ್ಳಿ/ಹಾತಾ), ಸಮಾಧಿ ಮರಣ ಅಹ್ವಾನಿಸಿದ ಕನಕವ್ವೆಯ ಶಿಲ್ಪ (ಹೆರೂರು/ಹಾನತಾ)ಕ್ಕೆ ಚೌಡವ್ವ ಎಂದು, ಇಂಥದ್ದೇ ನಿಸಿಧಿ ಶಿಲ್ಪಕ್ಕೆ (ಪುರುಷನ ಶಿಲ್ಪ) ಮುದುಕಿ ಎಣ್ಣೆ ಮಾರುವ ಐತಿಹ್ಯ (ಲಿಂಗದೇವರಕೊಪ್ಪ/ಹಿತಾ), ತೀರ್ಥಂಕರ ರುಂಡವೊಂದಕ್ಕೆ ಏಕಾಂತರಾಮ್ಯ ಕತ್ತರಿಸಿದ ರಾಕ್ಷಸನ ರುಂಡವೆಂದು (ಮಲ್ಲೂರು/ಹಿತಾ), ಇಂಥದ್ದೆ ಇನ್ನೊಂದು ರುಂಡ ಕುರಿತಾಗಿ ಗೋಣಹೊಂಡ (ಚಿನ್ನಮುಳಗುಂದ/ಹಿತಾ) ಎಂಬ ಸಾಕಷ್ಟು ಐತಿಹ್ಯಗಳು ಹಾವೇರಿ ಪರಿಸರದಲ್ಲಿ ಪ್ರಚಲಿತವಿವೆ. ಪ್ರಸ್ತುತ ವಿಷಯ ಒಂದು ಪ್ರತ್ಯೇಕ ಸಂಶೋಧನ ವಿಷಯವೇ ಆಗಿದ್ದರಿಂದ ಸಂಪೂರ್ಣ ಅಧ್ಯಯನ ಅಸಾಧ್ಯವಾದುದು.

ಜನಪದ ಪ್ರಕಾರದ ಐತಿಹ್ಯ ಕೇವಲ ಜನರ ಕಟ್ಟುಕತೆಯಾಗಿರದೆ ಅದು ಐತಿಹಾಸಿಕ ಮೂಲ–ಚೂಲಗಳನ್ನು ತೆರೆದಿಡುವ ಅಸ್ಮಿತೆ ಎಂದು ಸಾಬೀತಾಗುತ್ತದೆ. ಒಂದು ಕಾಲದ ಜನಜೀವನದ ಸಂಸ್ಕೃತಿಯ ತೆರೆದಿಡುವಲ್ಲಿ ಐತಿಹ್ಯಗಳ ಅಧ್ಯಯನ ಅತೀ ಅವಶ್ಯ. ಸದ್ಯ ದೊರೆತಿರುವ ಐತಿಹ್ಯಗಳು ಬಹುಕಾಲದಲ್ಲಿ ಪ್ರಬಲವಾಗಿದ್ದ ಜೈನ ಧರ್ಮದ ಮೇಲೆ ದೈಹಿಕವಾಗಿ, ಮಾನಸಿಕವಾಗಿ, ಧಾರ್ಮಿಕವಾಗಿ, ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ದಬ್ಬಾಳಿಕೆಯಾದ ಬಗೆಗಳನ್ನು ತೆರೆದಿಡುತ್ತವೆ. ಇನ್ನೂ ಕೆಲವು ಐತಿಹ್ಯಗಳು ಆ ಧರ್ಮದ ಸಾತ್ವಿಕತೆ, ಪಾರಮ್ಯತೆಯನ್ನು ತೆರೆದಿಡುತ್ತವೆ. ಇವೆಲ್ಲವೂ ಕೇವಲ ಉದ್ದೇಶಪೂರ್ವಕವಾಗಿ ಕಟ್ಟಿದ ಐತಿಹ್ಯಗಳಾಗಿರದೇ ಶಾಸನ ಸಂಬಂಧಿತವಾಗಿವೆ. ಆದ್ದರಿಂದ ಶಾಸನಗಳನ್ನು ಅಧ್ಯಯನ ಮಾಡುವಾಗ ಸ್ಥಳೀಯ ಐತಿಹ್ಯಗಳನ್ನು ಗಮನಿಸುವುದು ಅತಿ ಅವಶ್ಯಕವೆನಿಸುತ್ತದೆ.

## ಅಡಿ ಟಿಪ್ಪಣಿಗಳು.

೧. ಕನ್ನಡ ವಿಷಯ ವಿಶ್ವಕೋಶ–ಜಾನಪದ, ಪು ೧೭೪.

೨. ಎ. ಸುಬ್ಬಣ್ಣ ರೈ – ದ.ಕ. ಜಿಲ್ಲೆಯ ಐತಿಹ್ಯಗಳು. ಪು ೧೬–೧೭

೩. ಅದೇ., ಪು ೧೭.

೪. ಅದೇ., ೧೭–೧೮.

೫. ಜಾನಪದ ಕೈಪಿಡಿ – (ಪ್ರ.ಸಂ) ಎಚ್.ಜೆ. ಲಕ್ಕಪ್ಪಗೌಡ. ಪು ೩೪.

೬. ಅದೇ., ಪು ೩೪.

೭. ಅದೇ., ಪು ೩೫.

೮. ಎ. ಸುಬ್ಬಣ್ಣ ರೈ, ಪೂರ್ವೋಕ್ತ. ಪು ೨೩.

೯. ಅದೇ., ಪು ೧೦–೧೧.

೧೦. ಸರಸ್ವತಿ ವೆಂಕಪ್ಪಗೌಡರ, ವಯಸ್ಸು–೮೧, ಕರಗುದರಿ, ಹಾನಗಲ್ಲು ತಾಲ್ಲೂಕು.

೧೧. ಇದೇ ಅಧ್ಯಯನ ೩ನೆಯ ಅಧ್ಯಾಯದಲ್ಲಿ ಶಾಪಾಶಯಗಳ ಬಗ್ಗೆ ವಿವರವಾಗಿ ಚರ್ಚಿಸಲಾಗಿದೆ.

೧೨. ನಿತಿನ್.ಎಚ್.ಪಿ. ವಯಸ್ಸು ೩೫, ಬೆಂಗಳೂರು.

೧೩. ಸೌ.ಇ.ಇ. ೧೧ ನಂ–೫೨, ಲಕ್ಕುಂಡಿ. ಕ್ರಿ.ಶ. ೧೦೦೨. ಪು ೩೯–೪೩.

೧೪. ಅಪ್ಪಣ್ಣ ಎನ್ ಹಂಜೆ – ಸಮವಸರಣ. ಪು ೧೦೬.

೧೫. ಅದೇ ಪು ೧೦೬.

೧೬. ಗದಿಗಯ್ಯಸ್ವಾಮಿ ಫಕ್ಕೀರಸ್ವಾಮಿ ಹಿರೇಮಠ. ವಯಸ್ಸು ೫೫, ನೆಗಳೂರು, ಹಾವೇರಿ ತಾಲ್ಲೂಕು.

೧೭. ಆನಂದ ಹವಳ್ಳನವರ. ವಯಸ್ಸು ೩೪, ಹಾವಣಗಿ, ಹಾನಗಲ್ಲು ತಾಲ್ಲೂಕು.

೧೮. ನಿಜಲಿಂಗಯ್ಯ ಅಡಿವೆಯ್ಯ ಗೌಡರ. ವಯಸ್ಸು ೬೨, ಅಬ್ಬಲೂರು, ಹಿರೇಕೆರೂರು ತಾಲ್ಲೂಕು. ಇದೇ ಊರಿನ ಶ್ರೀ ವೀರೇಶ್ ಗೌಡರ, ವಯಸ್ಸು ೪೩.

೧೯. ಎನ್.ಬಸವಾರಾಧ್ಯ (ಸಂ) ಶಾಂತನಿರಂಜನ ವಿರಚಿತ ಅಬ್ಬಲೂರು ಚರಿತೆ. ಪು ೧೧೪–೧೨೪.

೨೦. ಅದೇ., ಪು ೧೧೮.

೨೧. ಕಳಚೂರ್ಯ್ಯ ಅರಸ ವೀರ ಬಿಜ್ಜಣ (ಬಿಜ್ಜಳ)ದೇವ.

೨೨. ಎನ್. ಬಸವಾರಾಧ್ಯ, ಪೂರ್ವೋಕ್ತ, ಪು ೧೧೯.

೨೩. ಅದೇ., ಪು ೧೨೦.

೨೪. ಅದೇ., ಪು ೧೧೩–೧೬೨.

೨೫. ಪದ್ಮರಾಜ ಶ್ರೀಕಾಂತಪ್ಪ ಕಳಸೂರ. ವಯಸ್ಸು ೫೯, ಹಾವೇರಿ, ಹಾವೇರಿ ತಾಲ್ಲೂಕು.

೨೬. ಸಂಕ್ಷಿಪ್ತ ಕನ್ನಡ ನಿಘಂಟು (ಪರಿಷ್ಕೃತ) ಪು ೮೫೪. ಸಂಕ್ಷಿಪ್ತ ಆಧುನಿಕ ಕನ್ನಡ ನಿಘಂಟು (ಸಂ) ಎ. ಸುಬ್ಬಣ್ಣ ರೈ, ಮಾಧವ ಪೆರಾಜಿ. ಪು ೧೧೨.

೨೭. ಎನ್ ಬಸವಾರಾಧ್ಯ, ಪೂರ್ವೋಕ್ತ. ಪು ೯೩–೯೪.

೨೮. ಅದೇ., ಪು ೯೫.

೨೯. ಹಂಪ. ನಾಗರಾಜಯ್ಯ – ಅನನ್ಯ. ಪು ೭೩–೭೪.

೩೦. P.B. DESAI – JAINISM IN SOUTH INDIA AND SOME JAIN EPIGRAPHS. ಪುಟ ೧೨೨–೧೨೩.

೩೧. ಎಂ. ಚಿದಾನಂದಮೂರ್ತಿ – ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು ೪೨೩.

೩೨. ಐ ಎ ೧೦. ಪು ೧೮೫.

೩೩. ಸರಸ್ವತಿ ವೆಂಕಪ್ಪಗೌರಡ. ವಯಸ್ಸು ೮೧, ಕರಗುದರಿ, ಹಾನಗಲ್ಲು ತಾಲ್ಲೂಕು.

೩೪. ಎಚ್.ಜೆ. ಲಕ್ಕಪ್ಪಗೌಡ (ಸಂ) ದೇವಚಂದ್ರ ಸಂಪುಟ. ಪು ೧೨೦-೧೨೧.

೩೫. ಗೂಗಲ್ ವೆಬ್ ತಾಣ.

೩೬. ಹಂಪ ನಾಗರಾಜಯ್ಯ – ಚಂದ್ರಕೊಡೆ. ಪು ೪೭೮.

೩೭. ಎ.ಕ. ೦೨. ನಂ-೩೬೦ (೨೫೫), ೭೧ (೬೪) ಶ್ರವಣಬೆಳಗೊಳ. ಪಂಪನ ಆದಿಪುರಾಣ, ಪೊನ್ನನ ಶಾಂತಿಪುರಾಣ, ನಯಸೇನನ ಧರ್ಮಪರೀಕ್ಷೆ, ಬ್ರಹ್ಮಶಿವನ ಸಮಯ ಪರೀಕ್ಷೆ ಇತ್ಯಾದಿ ೩೭ ಕವಿಗಳು ಪೂಜ್ಯಪಾದ ಮುನಿಯ ಬಗ್ಗೆ ಸ್ಮರಿಸಿದ್ದಾರೆ. ಹಂಪ. ನಾಗರಾಜಯ್ಯ – ಚಂದ್ರಕೊಡೆ. ಪು ೪೯೩-೪೯೫.

೩೮. ಶಾಂತಿರಾಜಶಾಸ್ತ್ರಿ.ಎ (ಅನು) ಪೂಜ್ಯಪಾದಾಚಾರ್ಯರ ಶಾಂತ್ಯಾಷ್ಟಕ.

೩೯. ಮಹಾವೀರ ಜಿನ್ನಪ್ಪ ದೊಡಮನಿ. ವಯಸ್ಸು ೫೪. ಹಾವೇರಿ, ಹಾವೇರಿ ತಾಲ್ಲೂಕು.

೪೦. ಎನ್.ಬಸವಾರಾಧ್ಯ, ಪೂರ್ವೋಕ್ತ. ಪು ೧೧೪-೧೨೪.

೪೧. ಸೌ.ಇ.ಇ. ೧೫. ನಂ-೫೬, ತಾಳೀಕೋಟೆ. ಕ್ರಿ.ಶ. ೧೧೮೪. ಪು ೭೩-೭೪.

೪೨. ಅಪ್ಪಣ್ಣ.ಎನ್. ಹಂಜೆ, ಪೂರ್ವೋಕ್ತ. ಪು ೧೮೫-೧೮೬.

೪೩. ದಿ. ಶ್ರೀಮತಿ ಸರಸ್ವತಿ ಕುಬೇರಪ್ಪ ನವಲಗುಂದ. ವಯಸ್ಸು ೪೯, ಪಾಳೆ, ಹುಬ್ಬಳ್ಳಿ ತಾಲ್ಲೂಕು.

೪೪. ರಾಮಪ್ಪ ಹಾನಗಲ್. ವಯಸ್ಸು ೮೧, ಮಂತಗಿ, ಹಾನಗಲ್ಲು ತಾಲ್ಲೂಕು.

೪೫. ರವಿಕುಮಾರ.ಕೆ.ನವಲಗುಂದ – ಉಪಸರ್ಗ್ಗ. ಪು ೭೪.

೪೬. ಹನುಮಾಕ್ಷಿ ಗೋಗಿ – ಜಿನಸಮಯ. ಅನುಬಂಧ ಶಾಸನಗಳು. ನಂ-೦೯.

## ಅಧ್ಯಾಯ–೦೫.

# ಲಿಪಿ ವೈವಿಧ್ಯತೆ.

೦೧. ಕದಂಬರ ಲಿಪಿ.

೦೨. ಬಾದಾಮಿ ಚಲುಕ್ಯರ ಲಿಪಿ.

೦೩. ರಾಷ್ಟ್ರಕೂಟರ ಲಿಪಿ.

೦೪. ಕಲ್ಯಾಣ ಚಾಳುಕ್ಯರ ಲಿಪಿ.

೦೫. ಹೊಯ್ಸಳ–ಸೇವುಣ ಲಿಪಿ.

೦೬. ವಿಜಯನಗರ ಲಿಪಿ.

## ಅಧ್ಯಾಯ–೦೫.

# ಲಿಪಿ ವೈವಿಧ್ಯತೆ.

ಮಾನವನ ವಿಕಸನದ ಮಾರ್ಗಗಳಲ್ಲಿ ಭಾಷೆ ಪ್ರಮುಖ ಪಾತ್ರವಹಿಸುತ್ತದೆ. ಆದಿಮಾನವ ತನಗಾದ ಪ್ರಕೃತಿವೈಚಿತ್ರ್ಯದ ಅನುಭವಗಳು ಮೊದಲು ವ್ಯಕ್ತಪಡಿಸಿದ್ದು ಧ್ವನಿ ಸಂಜ್ಞೆಗಳ ಮೂಲಕ. ತದನಂತರದ ಹಂತವೆ ಧ್ವನಿಗಳಿಗೆ ಅರ್ಥ ಕಲ್ಪಿಸಿಕೊಂಡ ಬಗೆ. ಹಾಗೆ ಅರ್ಥವತ್ತಾದ ಧ್ವನಿಸಂಕೇತಗಳೇ ಮುಂದೆ ಭಾಷೆಯ ಉಗಮಕ್ಕೆ ನಾಂದಿಯಾಯಿತು. ಭಾವನೆಗಳ ಬಯಕೆಯೇ ಭಾಷೆ. ಹಾಗೆ ನೋಡಿದರೆ ಧ್ವನಿ ಸಂಕೇತಗಳಿಗೆ ಯಾವುದೇ ನಿರ್ದಿಷ್ಟ ಅರ್ಥವಿರುವುದೇ ಇಲ್ಲ. ಅದು ಒಂದು ನಿರ್ದಿಷ್ಟ ಜನಾಂಗ ಅಳವಡಿಸಿಕೊಂಡ ಧ್ವನಿಗಳ ಅರ್ಥವಂತಿಕೆಯ ಆಧಾರದ ಮೇಲೆ ಮೂರ್ತಗೊಳ್ಳುತ್ತದೆ. ಧ್ವನಿ (ಶಬ್ದ) ಜನಿಸುವ ಪ್ರಕ್ರಿಯೆಯನ್ನು ಕೇಶಿರಾಜನು

ತನು ವಾದ್ಯಂ ನಾಲಿಗೆ ವಾ  
ದನದಡಂ ಕರ್ತೃವಾತ್ಮನವನ ಮನೋವೃ  
ತ್ತಿ ನಿಮಿತ್ತವಾಗಿ ಶಬ್ದಂ  
ಜನಿಯಿಸುಗುಂ ಧವಳವರ್ಣಮಕ್ಷರ ರೂಪಂ.

ಶರೀರವೇ ವಾದ್ಯ, ನಾಲಗೆಯೇ ವಾದನದಂಡ, ಆ ವಾದ್ಯವನ್ನು ಬಾರಿಸುವವನು ಜೀವಾತ್ಮ ಆತನ ಮನೋವೃತ್ತಿಗನುಗುಣವಾಗಿ ಧವಳವರ್ಣದ ಅಕ್ಷರರೂಪವಾದ ಶಬ್ದವು ಜನಿಸುತ್ತದೆ.[೧] ಎನ್ನುತ್ತಾನೆ. "ಮೂಲತ: ಭಾಷೆ ಎನ್ನುವುದು ಒಂದು ಶಬ್ದವ್ಯಾಪಾರ; ಧ್ವನಿ ಸಂಕೇತಗಳ ಮೊತ್ತ; ವಕ್ತೃವಿನ ಭಾವ ಭಾವನೆಗಳು ಶ್ರೋತೃದಿನ ಭಾವಕಲ್ಪವನ್ನು ತಲುಪಿ, ಅಲ್ಲಿ ಗ್ರಹಣದ ಮೂಲಕ ಆಲೋಚನೆಯ ಅಲೆಗಳನೆಬ್ಬಿಸುವ ಸಮರ್ಥ ಸಂವಹನ ಸಾಧನ (Communicative Media) ದೈನಂದಿನ ವ್ಯವಹರಣೆಯ ಶ್ರೇಷ್ಠ ಅಭಿವ್ಯಕ್ತಿ ಮಾಧ್ಯಮ (Media of Expression). ಅನುಭವಗಳ ಅಭಿವ್ಯಕ್ತಿ ರೂಪವು ಹೌದು, ರಚನೆಗಿಳಿದರೆ ಅಮೂರ್ತ ಭಾವಗಳ ಮೂರ್ತ ಸ್ವರೂಪವೂ ಹೌದು"[೨] ಒಟ್ಟಿನಲ್ಲಿ ಹೇಳುವುದಾದರೆ ಮಾನವ ತನ್ನ ದಿನನಿತ್ಯ ವ್ಯವಹಾರಗಳ ಸಂಪರ್ಕಕ್ಕಾಗಿ ಕಂಡುಕೊಂಡ ಪ್ರಕ್ರಿಯೇ ಭಾಷೆ ಎನ್ನಬಹುದು. "ಭಾಷೆ ನಾವು ಆಡುವ ಮಾತಾದರೆ, ಅದನ್ನು ಹಿಡಿದಿಡುವ ಸಾಧನವೇ ಲಿಪಿ"[೩]

ಭಾಷೆ ರೂಢಿಸಿಕೊಂಡ ಧನಿವಾಹಕವಾದರೆ; ಲಿಪಿ ಬಹುಮುಖಿ ದೀಪಕ. ನಿರ್ಧಿಷ್ಟ ಜನಾಂಗಗಳು ಬಳಸುವ ಧ್ವನಿಸಂಜ್ಞೆಗಳು ಸಂವಹನವೇ ನುಡಿಯಾದರೆ ಆ ನುಡಿಯನ್ನು ಮೂರ್ತರೂಪಗೊಳಿಸುವುದೆ ಲಿಪಿಯೆನಿಸುವುದು. ಒಂದು ಧ್ವನಿಮೇರು; ಇನ್ನೊಂದು ಅಕ್ಷರಮೇರು.

ಒಂದು ಬೌದ್ಧಿಕ; ಇನ್ನೊಂದು ಭೌತಿಕ. ಒಂದು ಭಾಷೆಯನ್ನು ಒಂದು ನಿರ್ದಿಷ್ಟ ಜನಾಂಗ ಬಳಸಲು ಮಾತ್ರ ಸಾಧ್ಯ. ಆದರೆ "ಒಂದು ಭಾಷೆ ಅಳವಡಿಸಿಕೊಂಡ ಲಿಪಿಯನ್ನು ಯಾವ ಭಾಷೆಗೆ ಬೇಕಾದರೂ ಬಳಸಿಕೊಳ್ಳಬಹುದು."[೪] ಈ ಕ್ರಮವನ್ನು ಶಾಸನಗಳಲ್ಲಿ ಅಳವಡಿಸಿಕೊಳ್ಳಲಾಗಿದೆ. ಲಿಪಿ ವಿಕಾಸವೆಂದರೆ ಅದು ಮಾನವನ ವಿಕಾಸವು ಹೌದು. ಜಾಗತಿಕ ಪ್ರತಿಯೊಂದು ಲಿಪಿಗಳ ಆರಂಭದ ಮೂಲ ಚಿದಂಬರರಹಸ್ಯ. ಆದರೆ ಲಿಪಿ ವಿಕಸನ, ವೈವಿಧ್ಯತೆಗಳ ಆಧಾರಗಳು ದೊರೆತಿವೆ. "ಪ್ರಪಂಚದಾದ್ಯಂತ ಇಂದು ವರ್ಣಲಿಪಿ ಬಳಕೆಯಲ್ಲಿದ್ದರೂ ಈ ವರ್ಣಲಿಪಿಯು ಬಳಕೆಗೆ ಬರುವುದಕ್ಕೆ ಮೊದಲು ಬರವಣಿಗೆಯಲ್ಲಿ ಅನೇಕ ಪ್ರಯೋಗಗಳಾಗಿವೆ. ಮಾನವ ಮೊದಲು ಬರೆದ ಚಿತ್ರಲಿಪಿಯಿಂದ ಆರಂಭವಾಗಿ, ಭಾವಲಿಪಿ, ಮಧ್ಯಮಲಿಪಿ (Transitional Script), ಧ್ವನಿರೂಪಕ ಲಿಪಿ. ಅರೆವರ್ಣಲಿಪಿ ಹಾಗೂ ಈಗಿನ ವರ್ಣಲಿಪಿಯ ರೂಪಕ್ಕೆ ಬಂದಿವೆ. ಈ ಬದಲಾವಣೆಯ ಅವಧಿ ಸಾವಿರಾರು ವರ್ಷಗಳು"[೫] ಹೀಗೆ ಸಹಸ್ರಾರು ವರ್ಷಗಳ ಜಾಡಿನಲ್ಲಿ ವಿಕಸನ ಹೊಂದಿದ ಕನ್ನಡ ಲಿಪಿ ವೈವಿಧ್ಯತೆ ಅಧ್ಯಯನ ಪ್ರಸ್ತುತ ಅಧ್ಯಾಯದಲ್ಲಿದೆ. ಈ ಅಧ್ಯಯನವು ಹಾವೇರಿ ಜಿಲ್ಲೆಗೆ ಅನುಲಕ್ಷಿಸಿ, ಇಲ್ಲಿರುವ ಜೈನಶಾಸನಗಳ ನೆಲೆಗಟ್ಟಿಗೆ ಸೀಮಿತವಾಗಿದೆ.

ಕನ್ನಡ ಅಕ್ಷಮೇರುವಿನ ಇತಿಹಾಸವೆಂದರೆ ಅದು ಆ ಲಿಪಿಯ ಶಾಸನ ಇತಿಹಾಸವೂ ಹೌದು. ಕನ್ನಡ ಲಿಪಿಯ ತಾಯ್‌ಬೇರು ಬ್ರಾಹ್ಮಿ ಲಿಪಿ. "ಭಾರತದಲ್ಲಿ ಇದುವರೆಗೆ ದೊರಕಿರುವ ಓದಲು ಸಾಧ್ಯವಾಗಿರುವ ಪ್ರಾಚೀನ ಲಿಪಿ ಬ್ರಾಹ್ಮಿ ಲಿಪಿಯೇ ಆಗಿದೆ. ಅಶೋಕನ ಕಾಲಕ್ಕಾಗಲೇ ಬ್ರಾಹ್ಮೀ ಲಿಪಿಯು ಚೆನ್ನಾಗಿ ಬೆಳದಿತ್ತು. ಆ ಕಾಲಕ್ಕಾಗಲೇ ಬ್ರಾಹ್ಮಿಯು ಉತ್ತರ ಮತ್ತು ದಕ್ಷಿಣ ಎಂಬ ಎರಡು ಭಿನ್ನ ರೂಪಗಳಲ್ಲಿ ಬಳಕೆಯಾಗುತ್ತಿತ್ತು. ಅಲ್ಲದೆ, ಕ್ರಿ.ಪೂ. ನಾಲ್ಕು-ಐದನೆಯ ಶತಮಾನಗಳಿಗೆ ಸೇರಿದ ಕೆಲವು ಗಮನಾರ್ಹ ನಾಣ್ಯಗಳೂ ಉತ್ತರದಲ್ಲಿ ದೊರಕಿವೆ. ಅವುಗಳಲ್ಲಿ ಕಂಡು ಬರುವ ಬರಹವೂ ಬ್ರಾಹ್ಮೀ ಲಿಪಿಯೊಂದಿಗೆ ಹೋಲಿಕೆಯಾಗುತ್ತದೆ. ಆದುದರಿಂದ ಅಶೋಕನ ಕಾಲಕ್ಕಿಂತಲೂ ಹಿಂದೆಯೇ ಬ್ರಾಹ್ಮಿ ಲಿಪಿ ಭಾರತದಲ್ಲಿದ್ದುದು ತಿಳಿಯುತ್ತದೆ. ಕ್ರಿ.ಪೂ. ೨-೩ನೆಯ ಶತಮಾನಗಳ ಅವಧಿಯಲ್ಲಿ ಬೌದ್ಧರೂ. ಜೈನರೂ ಉತ್ತರದಿಂದ ದಕ್ಷಿಣಕ್ಕೆ ಬಂದಾಗ ಬ್ರಾಹ್ಮಿ ಲಿಪಿಯನ್ನು ಇಲ್ಲಿಗೆ ಪರಿಚಯಿಸಿರಬೇಕು"[೬] ಜೈನರು ಪ್ರಥಮ ತೀರ್ಥಂಕರ ಆದಿನಾಥನ ಮಗಳಾದ ಬ್ರಹ್ಮಿಯಿಂದಲೇ ಬ್ರಾಹ್ಮಿ ಲಿಪಿ ಉದಯವಾಯಿತೆಂದು ಪ್ರತಿಪಾದಿಸುತ್ತಾರೆ.[೭]

ಅಶೋಕನ ಶಾಸನಗಳಲ್ಲಿ, ಶಾತವಾಹನರ ಶಾಸನಗಳಲ್ಲಿ ಬ್ರಾಹ್ಮಿ ಲಿಪಿಯು ಬಳಕೆಗೊಂಡಿದೆ. ಈ ರಾಜಮನೆತನ ಶಾಸನಗಳಲ್ಲಿ ಬ್ರಾಹ್ಮಿ ಲಿಪಿಯಲ್ಲಿ ಅವಸ್ಥಾಭೇದಗಳುಂಟಾಗಿದ್ದು ಕಂಡುಬರುತ್ತದೆ.[೮] ನಿತ್ಯ ಸೃಜನಶೀಲತೆ ಬರವಣಿಗೆಯ ಮೂಲಧರ್ಮವೂ ಹೌದು. ಈ ಪ್ರಕ್ರಿಯೆ ಕಂಡುಬರಲು ಕಾರಣ ಹಲವಾರು. ಅವುಗಳಲ್ಲಿ ಬಹುಮುಖ್ಯವಾಗಿ

೧. ಬರವಣಿಗಾ ಪರಿಕರಣಗಳು.

೨. ಸಮಕಾಲೀನ ಪ್ರಬಲ ರಾಜರ ಪ್ರಭಾವ.

೩. ಬೇರೆ ಬೇರೆ ಕಾಲಘಟ್ಟಗಳಲ್ಲಿ ಬೇರೆ ಬೇರೆ ರಾಜಪ್ರಭುತ್ವಗಳ ಅಡಿಯಲ್ಲಿನ ಪರಾಧೀನತೆ.

೪. ಶಾಸನಗಳ ಭಾಷಾಮಾಧ್ಯಮ.

೫. ಲಿಪಿಗಳ ಮೇಲಾಗುವ ಪ್ರಾದೇಶಿಕ ಭಾಷೆಗಳ ಪ್ರಭಾವ.

೬. ಲಿಪಿಯನ್ನು ಕಲಾ ಮಾಧ್ಯಮವಾಗಿ ಗುರುತಿಸುವುದು.

೭. ಧರ್ಮದ ಪ್ರಭಾವ.

೮. ಬೇರೆ ಬೇರೆ ಶಿಲ್ಪಕಾರರು ಶಾಸನಗಳನ್ನು ಕಂಡರಿಸಿರುವುದು.[೯]

"ಬ್ರಾಹ್ಮಿಯನ್ನು ಮರಳಿನ ಮೇಲೆ ಬರೆದು ಅಳಿಸುತ್ತಿದ್ದುದರಿಂದ ಅಕ್ಷರಗಳನ್ನು ಹೇಗೆ ಬರೆದರು ನಡೆಯುತ್ತಿತ್ತು. ಮುಂದೆ ಅದು ಶಿಲಾ ಮಾಧ್ಯಮಕ್ಕೆ ಬಂದಾಗ ಆರಂಭದಲ್ಲಿ ಮರಳಿನ ಮೇಲೆ ಬರೆಯುತ್ತಿದ್ದ ಲಿಪಿಯನ್ನೇ ಅನುಸರಿಸಿದರು. ಒಮ್ಮೆ ಲಿಪಿ ಸಾರ್ವತ್ರಿಕವಾಗಡೊಗಿದಮೇಲೆ ಬಳಸುವವರ ಸಂಖ್ಯೆ ಹಾಗೂ ಬಳಸುವ ಮಾಧ್ಯಮಗಳು ಹೆಚ್ಚಾದವು ಹೀಗಾಗಿ ಬರವಣಿಗೆಯ ಸಾಧನಗಳೂ ಬದಲಾಗುತ್ತಾ ಬಂದವು. ಹೀಗೆ ಬರವಣಿಗೆಯ ಮಾಧ್ಯಮದಲ್ಲಿ ಬಳಸಲಾದ ಬಹು ಮುಖ್ಯ ಸಾಧನಗಳಲ್ಲಿ ಕುಂಚ ಮತ್ತು ಮಸಿ. ಅಶೋಕನು ಶಾಸನಗಳನ್ನು ಬರೆಸುವಾಗ ಶಾಸನ ಶಿಲೆಗಳ, ಬಂಡೆಗಳ ಮೇಲ್ಮುಖವನ್ನು ನಯಮಾಡಿಕೊಂಡಿರಲಿಲ್ಲ. ಲಿಪಿಕಾರರು ಸಾಧ್ಯವಾದಷ್ಟೂ ಸಮತಟ್ಟಾದ ಸ್ಥಳಗಳನ್ನು ಆಯ್ದು ಅಲ್ಲಿ ಬರೆದಿರುತ್ತಾರೆ. ಆದರೆ ಮುಂದೆ ಕೊರೆದ ಗುಹೆಗಳಲ್ಲಿ, ಆಯ್ದ ಸ್ಥಳಗಳಲ್ಲಿ ಸಿದ್ಧಪಡಿಸಿದ ಸ್ಥಳಗಳಲ್ಲಿ ಬರೆಸಿದರು. ಅಶೋಕನು ತನ್ನ ಶಾಸನಗಳನ್ನು ಆಳವಾಗಿ ಕೊರೆಸಿರುತ್ತಾನೆ. ಹೀಗಾಗಿ ಇಂದಿಗೂ ಇವು ಉಳಿದು ಬರಲು ಕಾರಣವಾಯಿತು. ಈ ಕಾರಣದಿಂದ ಎಷ್ಟೇ ಉಬ್ಬು ತಗ್ಗುಗಳಿದ್ದರೂ ಶಾಸನಗಳನ್ನು ಓದಲು ಏನೂ ತೊಂದರೆಯಾಗಿಲ್ಲ. ಅಕ್ಷರಗಳ ವಿನ್ಯಾಸವನ್ನು ಗುರುತಿಸಲು ಕಷ್ಟವಾಗಿಲ್ಲ. ಅಶೋಕನ ನಂತರದ ಕಾಲದಲ್ಲಿ ಬಂಡೆಗಳು, ಚಪ್ಪಡಿಗಲ್ಲುಗಳು, ನಯವಾದ ಅಮೃತಶಿಲೆ ಜಾತಿಯ ಕಲ್ಲುಗಳನ್ನು ಬರವಣಿಗೆಗೆ ಬಳಸಿ, ಅವುಗಳ ಮೇಲೆ ಬಣ್ಣದಲ್ಲಿ ಬರೆಯುವಾಗ ಬಣ್ಣವು ಇಳಿಯುತ್ತಿತ್ತು. ಬೀಳುವ ಬಣ್ಣವನ್ನು ಎಳೆದು ಮೇಲೆ ಇಡಬೇಕಾಗಿತ್ತು. ಹೀಗಾಗಿ ಅಕ್ಷರಗಳು ದಪ್ಪವಾಗುತ್ತಾ ಬಂದವು. ಕಾಲಕ್ರಮೇಣ ಕೆಳಮುಖದ ಗೆರೆಗಳು ಕೆಳಕ್ಕೆ ಇಳಿಯುತ್ತಾ ಬಂದವು."[೧೦] ಹೀಗೆ ಬ್ರಾಹ್ಮೀ ಲಿಪಿಯು ಸಾಂದರ್ಭಿಕ ಕಾರಣಗಳಿಂದ ಕಾಲಕಾಲಕ್ಕೆ ಬದಲಾಗುತ್ತ ಅದು ಔತ್ತರೇಯ ಮತ್ತು ದಾಕ್ಷಿಣಾತ್ಯ ಭಾರತ ಲಿಪಿಗಳ ತಾಯಿ ಎನಿಸಿತು. ಈ ತಾಯಿ ಬ್ರಾಹ್ಮಿಲಿಪಿಯ ಒಂದು ಕೂಸು ಕನ್ನಡಲಿಪಿ. ಕದಂಬರ ಕಾಲಕ್ಕೆ ಮೊಳೆತ ಕನ್ನಡಲಿಪಿ ಕಲ್ಯಾಣ ಚಾಳುಕ್ಯರ ಕಾಲಾವಧಿಯ ಹೊತ್ತಿಗೆ ಹೆಮ್ಮರವಾಗಿ ಬೆಳೆದು ನಿಂತಿತು ತದನಂತರ ಇದರಲ್ಲಿಯೂ ಅವಸ್ಥಾಭೇದಗಳು ಕಂಡು ೧೯ನೆಯ ಶತಮಾನದಲ್ಲಿ ಒಂದು ಸ್ಥಿರರೂಪ ಪಡೆದು ಯಥಾಸ್ಥಿತಿಯನ್ನು ಕಾಪಾಡಿಕೊಂಡು ಹೊರಟಿದೆ. ಪ್ರಸ್ತುತ ಹಾವೇರಿ ಪರಿಸರದ ಜೈನಶಾಸನಗಳ

ಲಿಪಿಗಳ ವೈವಿಧ್ಯತೆಯನ್ನು ರಾಜಸತ್ತೆಗೆ ಅನುಗುಣವಾಗಿ ಬನವಾಸಿ ಕದಂಬರಿಂದ ಹಿಡಿದು ವಿಜಯನಗರ ಕಾಲಾವಧಿವರೆಗೂ ಅಭ್ಯಸಿಸಲಾಗಿದೆ.




## ೦೧. ಕದಂಬರ ಲಿಪಿ.

ಕನ್ನಡದ ಮೊದಲ ಅರಸು ಮನೆತನ ಕದಂಬರದ್ದು. ಬನವಾಸಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಇವರು ಬನವಾಸಿ ಕದಂಬರೆಂದೇ ಪ್ರಸಿದ್ಧಿ ಪಡೆದಿದ್ದಾರೆ. ಕರ್ನಾಟಕದ ಕೆಲವು ಭಾಗಗಳಲ್ಲಿದ್ದ ಪಲ್ಲವರ ಆಡಳಿತ ಕೊನೆಗೊಳಿಸಿ ಸಾಮ್ರಾಜ್ಯ ಕಟ್ಟಿದವರು ಕದಂಬರು. ಕದಂಬರು ಕರ್ನಾಟಕದ ಎರಡು ಮೊದಲುಗಳಿಗೆ ಕಾರಣಿಕರ್ತರು ೧. ಕನ್ನಡ ಮೊದಲ ರಾಜ್ಯ ಕಟ್ಟಿದರು. ೨. ಕನ್ನಡಕ್ಕೆ ಸ್ವತಂತ್ರ ಲಿಪಿ ಪರಂಪರೆಗೆ ಬುನಾದಿ ಹಾಕಿದರು. ಇವರ ೨೦೦ ವರ್ಷಗಳ ಕಾಲದ ಲಿಪಿಯನ್ನು ಕದಂಬ ಲಿಪಿ ಎಂದೇ ಅಭ್ಯಸಿಸಲಾಗುತ್ತದೆ. ಈ ಕಾಲಾವಧಿಯನ್ನು ನಾಲ್ಕನೆಯ ಶತಮಾನದಿಂದ ಆರನೆಯ ಶತಮಾನ ಎಂದು ಗುರುತಿಸಲಾಗಿದೆ.

ಅಶೋಕನಿಂದ ಕರ್ನಾಟಕವನ್ನು ಪ್ರವೇಶ ಮಾಡಿದ ಬ್ರಾಹ್ಮಿ ಲಿಪಿಯು ಕದಂಬರ ಕಾಲಕ್ಕೆ ಹೊಸ ಮಾರ್ಗವನ್ನು ಕಂಡುಕೊಂಡು, ಕನ್ನಡ ಎಂಬ ಹೊಸ ಲಿಪಿ ಪರಂಪರೆಗೆ ನಾಂದಿಯಾಯ್ತು. 'ಕನ್ನಡ ಲಿಪಿಯ ಬೆಳವಣಿಗೆಯಲ್ಲಿ ಕದಂಬರ ಲಿಪಿಯ ಪಾತ್ರ ಅತಿ ಮಹತ್ವದ್ದು'[೧೨] ಎಂದು ಎ.ವಿ. ನರಸಿಂಹ ಮೂರ್ತಿಯವರ ಅಭಿಪ್ರಾಯ. ಈ ಅಭಿಪ್ರಾಯವನ್ನು ಒಪ್ಪದ ದೇವರಕೊಂಡಾ ರೆಡ್ಡಿಯವರು ಕದಂಬ ಲಿಪಿಯು 'ವಾಕಾಟಕರ' ಮೂಲದಿಂದ ಬಂದಿದ್ದು ಎನ್ನುತ್ತಾರೆ.[೧೩] ಇವರ

ಮಾತಿನ ಅರ್ಥ ಕನ್ನಡ ಲಿಪಿಯ ಬೆಳವಣಿಗೆ ವಾಕಟಕರ ಲಿಪಿಯಿಂದಲೆ ಬಂದಿದ್ದು ಎನ್ನುವುದಾಗಿದೆ. ಆದರೆ ಕನ್ನಡ ಲಿಪಿ ಕದಂಬರ ಕಾಲದಲ್ಲಿ ಸ್ಪಷ್ಟ ರೂಪ ಪಡೆಯಲು ಸಹಾಯಕವಾಯ್ತು ಎಂಬುದರಲ್ಲಿ ಎರಡು ಮಾತಿಲ್ಲ. ಷ.ಶೆಟ್ಟರ್ ಅವರು ಕದಂಬ ಲಿಪಿಯನ್ನು ಸ್ಪಷ್ಟವಾಗಿ ಕನ್ನಡ ಲಿಪಿ ಎಂದೇ ಗುರುತಿಸಿದ್ದಾರೆ.[೧೪]

ಬನವಾಸಿ ಕದಂಬರ ಲಿಪಿಗಳು ಎರಡು ಮಾದರಿಯಲ್ಲಿ ಕಂಡುಬರುತ್ತವೆ. ಅವುಗಳಲ್ಲಿ ೧. ಸುಂದರವಾದ ಉದ್ದ ಲಿಪಿಗಳು. ಒಂದಕ್ಕೊಂದು ಹತ್ತಿರದಲ್ಲಿ ಬರೆಯಲಾಗಿದ್ದು ಅವುಗಳ ತಲೆಕಟ್ಟನ್ನು ಚೌಕಾಗಿ ಕೆತ್ತಲಾಗಿದೆ. ಪ್ರತಿಯೊಂದು ಸಾಲುಗಳ ಅಕ್ಷರಗಳ ಅಕ್ಷರ ಜೋಡು ಸಮಾನಾಂತರ ಸರಳ ರೇಖೆಗಳ ಮಧ್ಯ ಆಕರ್ಷಣೀಯವಾಗಿ ಬರೆದಿರುವುದು ಎದ್ದು ಕಾಣುತ್ತದೆ. ಈ ಲಕ್ಷಣವುಳ್ಳ ಲಿಪಿಗಳು ಉತ್ತರದಲ್ಲಿ ಆಳುತ್ತಿದ್ದ ಗುಪ್ತರ ಕೆಲ ಶಾಸನಗಳು ಮತ್ತು ವಾಕಾಟಕರ ಶಾಸನಗಳ ಲಿಪಿಗಳನ್ನು ಹೆಚ್ಚು ಹೋಲುತ್ತಿವೆ. ಆದರೆ ಈ ಭಾಗದ ಲಿಪಿಗಳಿಗಿರುವ ತಲೆಕೆಟ್ಟು ಕೇವಲ ಚೌಕಾದ ಗೆರೆಯನ್ನು ಹೊಂದಿರುತ್ತದೆ. ಈ ಲಕ್ಷಣವುಳ್ಳ ಕದಂಬರ ಶಾಸನಗಳು ತಾಳಗುಂದ, ಬನವಾಸಿ, ಗುಡ್ನಾಪುರ ಇತ್ಯಾದಿ ಕಡೆಗಳಲ್ಲಿವೆ. ಈ ಸ್ಥಳಗಳ ಕೆಲ 'ಅ', 'ರ', 'ಕ', ಇನ್ನಿತರ ಲಿಪಿಗಳಿಗಿಂತ ಹೆಚ್ಚು ಉದ್ದವಾಗಿವೆ. ೨. ಈ ಮಾದರಿಯ ಲಿಪಿಗಳ ತಲೆಕಟ್ಟು ನೆಟ್ಟಗೆ ತ್ರಿಕೋನಾಕೃತಿ ಅಂದರೆ ಮೊಳೆಯ ತಲೆಕಟ್ಟಿನಂತಿವೆ. ಲಿಪಿಗಳು ಡೊಂಕಾಗಿವೆ. ಆದರೆ ಕೆಲವು ಶಾಸನಗಳಲ್ಲಿ ಮೂಲ ಲಿಪಿಗಳ ತಲೆಕಟ್ಟು ಕೇವಲ ನೆಟ್ಟಗಿವೆ. ಗ, ಸ ಇನ್ನಿತರ ಲಿಪಿಗಳ ಕೆಳಭಾಗ ಡೊಂಕಾಗಿವೆ. ಕ, ರ, ಉ ಇತ್ಯಾದಿ ಲಿಪಿಗಳು ಹೆಚ್ಚು ಕಿರಿದಾಗಿವೆ ಪ, ಬ, ಹ ಇನ್ನಿತರ ಅಕ್ಷರಗಳು ಅಲಗವಾಗಿವೆ. 'ಇ' ಲಿಪಿ ಚುಕ್ಕೆಗಳ ಬದಲು ಜೋಡಿ ಜೋಡಿ ವೃತ್ತಗಳ ಎಡ-ಬಲ ತುದಿಗಳ ಕೆಳಗಡೆ ಬಿಂದುವುಳ್ಳ ಆಕಾರ ಈ ಕಾಲದಲ್ಲೇ ಬಂದಿವೆ.[೧೫] ತಾಳಗುಂದ ಕವಿ ಕುಬ್ಜನ ತಾಳಗುಂದ ಶಾಸನಗಳ ಲಿಪಿ ಕಲಾತ್ಮಕ ಸೌಂದರ್ಯಯುಳ್ಳವಾಗಿವೆ. ಇವುಗಳ ಕೆತ್ತನೆಯಲ್ಲಿ ಕಲಾತ್ಮಕತೆಯು ಕೂಡಿದ್ದು ಲಿಪಿಕಾರ ಮತ್ತು ಕಂಡಣಿಕಾರರ ನಯವಂತಿಕೆಯ ಶ್ರಮ ಅಡಗಿರುವುದು ಕಂಡುಬರುತ್ತದೆ.

ಕದಂಬರ ಒಟ್ಟು ಮೂರು ಜೈನಶಾಸನಗಳು ಹಾವೇರಿ ಪರಿಸರದ ದೇವಗಿರಿಯಲ್ಲಿ ದೊರೆತ್ತಿದ್ದು ಎಲ್ಲವೂ ತಾಮ್ರಶಾಸನವಾಗಿವೆ.[೧೬] ಇವುಗಳಲ್ಲಿ ಒಂದನೆಯದು ಮೃಗೇಶವರ್ಮ, ಎರಡನೆಯದು ವಿಜಯಶಿವಮೃಗೇಶವರ್ಮ, ಮೂರನೆಯದು ಯುವರಾಜ ದೇವವರ್ಮನ ಪ್ರಭುತ್ವವನ್ನು ಅಂಕಿತಿಸುತ್ತವೆ. ಇವು 'ದೈವಸ್ವ'ದ ತಾಮ್ರ ಶಾಸನಗಳಾಗಿದ್ದು ಸಂಸ್ಕೃತ ಭಾಷೆಯನ್ನು ಬಳಸಲಾಗಿದೆ. ಈ ಶಾಸನಗಳ ಲಿಪಿ ವೈವಿಧ್ಯತೆಯನ್ನು ಹೀಗೆ ಗುರುತಿಸಬಹುದು.

❖ ಮೃಗೇಶವರ್ಮ ಶಾಸನದಲ್ಲಿ ಲಿಪಿಯ ತಲೆಕಟ್ಟುಗಳ ಚೌಕಾಕಾರ (▬)ದ, ಮತ್ತು ಸಣ್ಣಗೆರೆಯ (–) ರೀತಿಯಲ್ಲಿದ್ದು, ವಿಜಯಶಿವಮೃಗೇಶವರ್ಮ ಶಾಸನದಲ್ಲೂ ಇದೇ ಕ್ರಮ ಮುಂದುವರೆದಿದೆ.

ಯವರಾಜ ದೇವವರ್ಮನ ಶಾಸನದಲ್ಲಿ ಮಾತ್ರ ಲಿಪಿ ತಲೆಕಟ್ಟುಗಳು ತ್ರಿಕೋನ ( ▼ ) ನಾಕೃತಿಯಲ್ಲಿವೆ.

❖ ಎರಡು ಗೀಟು (॥) ಎಳೆಯುವ ಮೂಲಕ ಲೇಖನ ಚಿನ್ಹೆಯನ್ನು ಮೂರು ಶಾಸನಗಳಲ್ಲಿ ಗುರುತಿಸಲಾಗಿದೆ. ಉದಾ: ಸಿದ್ದಮ್ ॥

❖ ಅನುಸ್ವರ (ಂ) ವಿಸರ್ಗ (ಃ)ಗಳನ್ನು ಮೂರು ಶಾಸನಗಳಲ್ಲಿ ಬಳಸಲಾಗಿದೆ.

❖ ಕೆಲವೊಂದು ಅನುಸ್ವಾರ 'ಂ' ಬದಲಾಗಿ ಅನುನಾಸಿಕಗಳನ್ನು ಬಳಸಿಕೊಳ್ಳಲಾಗಿದೆ. ಉದಾ: ಪಞ್ಚ, (ಸಂಖ್ಯೆ), ಮಹಿಮಾರ್ತ್ಥಮ್ (ಕ್ರಿಯಾಪದ), ಕಾಲವಙ್ಗೂ (ಗ್ರಾಮನಾಮ), ಪುಣ್ಯಸ್ಕನ್ಧ.

❖ ಸಂಯುಕ್ತ ದ್ವಿತ್ವಾಕ್ಷರಗಳನ್ನು ಬಳಸಲಾಗಿದೆ. ಉದಾ: ವಿಜಯಾಯುರಾರೋಗ್ಯೈಶ್ವರ್ಯ್ಯ.

❖ ಇವೆಲ್ಲ ಸಂಸ್ಕೃತ ಭಾಷಾ ಶಾಸನಗಳಾದ್ದರಿಂದ ಅಲ್ಲಿನ ವರ್ಣಮಾಲೆಯ ಅಕ್ಷರಗಳನ್ನು ಬಹುತೇಕ ಬಳಸಿಕೊಳ್ಳಲಾಗಿದೆ.

ಕದಂಬರ ತಾಮ್ರ ಶಾಸನಗಳು ರಾಜಾಸ್ಥಾನದಲ್ಲಿಯೇ ರಚಿತವಾದ್ದರಿಂದ ವೈವಿಧ್ಯತೆ ಕಾಣಸಿಗವು. ಈ ಹಿಂದೆ ಹೇಳಿದ ಲಿಪಿ ವಿವಿಧ ಶಾಸನಗಳ ಲಿಪಿ ಲಕ್ಷಣಗಳೂ ದೇವಗಿರಿಯ ತಾಮ್ರಶಾಸನದಲ್ಲಿ ದೊರೆಯುತ್ತವೆ. ಕದಂಬರ ರಾಜಸ್ವ ತಾಮ್ರಶಾಸನಗಳನ್ನು 'ಭೋಜಕ', 'ಸೇನಾಪತಿ' ಅಧಿಕಾರಿಗಳು ಬರೆಯುತ್ತಿದ್ದರಿಂದ ಅದರ ಬರಹ ಒಂದೇ ತೆರನಾಗಿರುತಿತ್ತು. ಆದ್ದರಿಂದ ಇವರ ಶಾಸನಗಳು ಬೇರೆ ಬೇರೆ ಊರುಗಳಿಗೆ ಸಂಬಂಧಿಸಿದ್ದಾಗಿದ್ದರೂ ಅವೆಲ್ಲ ಒಂದು ಕಡೆ ಸಿದ್ಧವಾಗಿರುತ್ತಿದ್ದವು. ಶಿಲಾ ಶಾಸನಗಳಲ್ಲಿ ಈ ಕ್ರಮ ವ್ಯತ್ಯಾಸವಾಗುತ್ತದೆ. ಯಾಕೆಂದರೆ ರಾಜನ ಆಸ್ಥಾನದಲ್ಲಿ ರಚನೆಯಾಗದ ಹೊರತು ಅದನ್ನು ನೆಡುವ ಪ್ರದೇಶದಲ್ಲಿಯೇ ತಯಾರಾಗುತ್ತಿತ್ತು. ಅದರ ಲಿಪಿಕಾರರು ಮತ್ತು ಶಿಲ್ಪಿ ಬೇರೆ ಬೇರೆಯೇ ಆಗಿರುತ್ತಿದ್ದರು. ಉದಾ: ಮಯೂರವರ್ಮನ ಚಂದ್ರವಳ್ಳಿ ಶಾಸನ. ಶಾಸನ ಈ ಶಾಸನ ಸ್ಥಳೀಯ ಲಿಪಿಕಾರ ಮತ್ತು ಶಿಲ್ಪಿಯಿಂದ ರಚಿತವಾಗಿದ್ದರಿಂದ ಲಿಪಿಯಲ್ಲಿ ವ್ಯತ್ಯಾಸ ಕಂಡುಬರುತ್ತದೆ. ಈ ಶಾಸನದ ಲಿಪಿಯಲ್ಲಿ ತಲೆಕಟ್ಟು ದೊರೆಯದು. ಒಟ್ಟಿನಲ್ಲಿ ಹೇಳುವುದಾದರೆ ಕದಂಬರು ಕನ್ನಡ ಲಿಪಿ ವಿಕಾಸಕ್ಕೆ ಒಂದು ಸುಭದ್ರ ತಳಹದಿ ಹಾಕಿಕೊಟ್ಟರು ಎಂಬುದು ಅವರ ಶಾಸನಗಳಿಂದ ಸಾಧಿತವಾಗುತ್ತದೆ.

## ೦೨. ಬಾದಾಮಿ ಚಲುಕ್ಯರ ಲಿಪಿ.

ಬನವಾಸಿ ಕದಂಬ ರಾಜಸತ್ತೆಯನ್ನು ಬದಿಗೊತ್ತಿ, ಕ್ರಿ.ಶ. ೫೦೦ರಲ್ಲಿ ಪ್ರವರ್ಧಮಾನಕ್ಕೆ ಬಾದಾಮಿ ಚಲುಕ್ಯರು. ಬಾದಾಮಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕ್ರಿ.ಶ. ೭೫೦ರವರೆಗೆ ಆಳಿದ್ದಾರೆ. ಇವರ ಆಡಳಿತಾವಧಿಯ ಅಂದರೆ ಸು ೨೫೦-೩೦೦ ವರ್ಷಗಳ ಕಾಲ ಇವರ ಅಳವಡಿಸಿಕೊಂಡ ಲಿಪಿ ಶಾಸನದಲ್ಲಿ ಬಳಕೆಯಿತ್ತು. ಈ ಅವಧಿಯ ಲಿಪಿಯನ್ನು 'ಚಲುಕ್ಯ ಲಿಪಿ' ಎನ್ನಬಹುದು.

ಕದಂಬರ ಲಿಪಿ.

ವಿಜಯ ಶಿವ ಮೃಗೇಶವರ್ಮನ ತಾಮ್ರ ಶಾಸನ,

ದೇವಗಿರಿ (ಹಾತಾ). ೫ನೆಯ ಶತಮಾನ



ಬಾದಾಮಿ ಚಲುಕ್ಯರ ಲಿಪಿ

ವಿಜಯಾದಿತ್ಯನ ತಾಮ್ರ ಶಾಸನ, ಶಿಗ್ಗಾವಿ ಕ್ರಿ.ಶ ೭೦೮



ಬಹುತೇಕ ಕರ್ನಾಟಕದ ಉತ್ತರ ಭಾಗದಲ್ಲಿ ಕದಂಬರ ಆಡಳಿತವಿದ್ದುದರಿಂದ ಅವರ ಲಿಪಿಯು ಆ ಪರಿಸರದಲ್ಲಿ ಪಸರಿಸಿತ್ತು. ತದನಂತರ ಈ ಭಾಗದಲ್ಲಿ ಚಲುಕ್ಯರು ರಾಜಧಾನಿಯನ್ನು ಕಟ್ಟಿದ ನಂತರ ಕದಂಬರ ಲಿಪಿಯನ್ನು ಅವರು ಅನುಸರಿಸದೇ ಇರಲಿಲ್ಲ. ಚಲುಕ್ಯರು ಕದಂಬ ಲಿಪಿಯ ಜೊತೆಗೆ ಅನುಸಂಧಾನಿಸಿಕೊಂಡಿದ್ದು ದಿಟ. ಆದರೆ ಈ ಲಿಪಿ ಅನುಸಂಧಾನ ಸೃಜನಮಾರ್ಗದಲ್ಲಿ ಚಲಿಯಿಸಿತೇ ವಿನಃ ಚರ್ವಿತ ಚರ್ವಣವಾಗಲಿಲ್ಲ. ಲಿಪಿಯ ಗುಣವು ನಿತ್ಯ ಸೃಜನಶೀಲ ಎಂಬುದನ್ನು ಮರೆಯಬಾರದು ಅದು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನ ಸ್ವರೂಪ ಪಡೆಯುತ್ತಾ ಹೋಗುತ್ತದೆ. ಕದಂಬ ಲಿಪಿ ಜಾಡನ್ನೇ ಅನುಸರಿಸಿದ ಚಲುಕ್ಯರು ಲಿಪಿ ಬರವಣಿಗೆಯಲ್ಲಿ ಭಿನ್ನವೇ ಎನಿಸಿದ್ದಾರೆ. ಈ ಭಿನ್ನತೆ ಸಂಪೂರ್ಣ ಎನಿಸದಿದ್ದರೂ ಭಾಗಶಃ ವ್ಯತ್ಯಾಸಗಳು ಕಂಡುಬರುತ್ತವೆ. ಇಂದಿನ ಕನ್ನಡ ಲಿಪಿ ಸ್ವರೂಪದ ತಾಯ್‌ಬೇರುಗಳು ಕದಂಬರಲ್ಲಿಯೇ ಕಂಡರೂ ಅದು ಚಿಗುರಿದ್ದು ಮಾತ್ರ ಚಲುಕ್ಯರ ಕಾಲಾವಧಿಯಲ್ಲಿ. ಚಲುಕ್ಯರ ಲಿಪಿ ಸ್ವರೂಪದ ಲಕ್ಷಣಗಳನ್ನು ಹಾವೇರಿ ಜಿನಶಾಸನಗಳಿಗೆ ಅನುಗುಣವಾಗಿ ಈ ರೀತಿಯಾಗಿ ಗುರುತಿಸಬಹುದು.

- ಕದಂಬರು ಬಳಸುತ್ತಿದ್ದ ಚೌಕ [] ಮತ್ತು ತ್ರಿಕೋನಾಕೃತಿ []ಯ ತಲೆಕಟ್ಟನ್ನು ಕೈಬಿಟ್ಟು ಚಿಕ್ಕ ಲಂಭ (–) ಮತ್ತು ಕಿರಿ ವಕ್ರ ಲಂಬ (⌣) ರೇಖೆಯನ್ನು ಬಳಸಿದ್ದಾರೆ.
- ಕೆಲವೊಂದು ಕಡೆ ಕದಂಬರ ತ್ರಿಕೋನಾಕೃತಿಯ ತಲೆಕಟ್ಟು ಛಾಯೆ ಕಂಡುಬರುತ್ತದೆ. ಬಹುಮುಖ್ಯವಾಗಿ 'ಅ' (  ) ಮತ್ತು 'ಸ' (  ) ಸವರ್ಣಗಳಲ್ಲಿ ಇದನ್ನು ಗುರುತಿಸಬಹುದು.
- 'ಕ' ಕಾರವು ಆಧುನಿಕ 'ಕ' ಕಾರಕ್ಕೆ ತುಂಬಾ ಹತ್ತಿರ ಸ್ವರೂಪದ್ದಾಗಿ ಕಂಡುಬರುತ್ತದೆ. (  )
- ಲ ಕಾರವು ಕನ್ನಡ ೧ ಸಂಖ್ಯೆಯಂತೆ ಕಂಡು ಅದಕ್ಕೆ ಅರ್ಧ ವೃತ್ತದಲ್ಲಿ ಸುತ್ತಲಾಗಿದೆ [  ].
- ಕದಂಬರು ಬಳಸುವ ಱ ಕಾರ ಶೈಲಿಯನ್ನು ಮುಂದುವರಿಸಿಕೊಂಡು ಹೋಗಲಾಗಿದೆ [ ].
- ಅನುಸ್ವಾರ (೦)ದ ಬಳಕೆ ಸ್ಪಷ್ಟವಾಗಿ ತೋರುತಿದ್ದು ಕೆಲವೊಂದು ಕಡೆ ಇದರ ಬದಲಾಗಿ ಅನುನಾಸಿಕದ 'ನ'ವನ್ನು ಬಳಸಿ ಪದ ಸಂಯೋಜನೆ ಮಾಡಿಕೊಂಡಿದ್ದಾರೆ. ಪಾನ್ಯ = 

ಉಳಿದಂತೆ ಇವರ ಲಿಪಿಯಲ್ಲಿ ಕೆಳಮುಖವಾಗಿ ಬೆಳೆದ ಗೆರೆಗಳು ಎಡಕ್ಕೆ ಮೇಲ್ಭಾಗದಲ್ಲಿ ಮುಂದುವರೆದು ಅಗಲ ಸ್ವರೂಪ ಪಡೆದಿದೆ (ಉದಾ ಅ, ಕ, ರ, ತ ಇತ್ಯಾದಿ) ಅಕ್ಷರದ ಉದ್ದ ಕಡಿಮೆಯಾಗುತ್ತ ಅಗಲವು ಹೆಚ್ಚುತ್ತಿದೆ. ಇದು ಲಿಪಿ ದುಂಡಾಗುವ ಪ್ರವೃತ್ತಿಗೆ ಕಾರಣವಾಗಿದೆ.

ಬಾದಾಮಿ ಚಲುಕ್ಯರ ಎರಡೆ ಜೈನ ಶಾಸನಗಳು ಹಾವೇರಿ ಪರಿಸರದಲ್ಲಿ ಲಭ್ಯವಿರುವುದರಿಂದ ಪ್ರದೇಶವಾರು ವೈವಿಧ್ಯತೆಯನ್ನು ತಾಳೆನೋಡಲು ಕಷ್ಟಸಾಧ್ಯವಾಗುತ್ತದೆ. ಆದರು ಸದ್ಯ ದೊರೆತ ಎರಡೆ ಶಾಸನಗಳೇ ಲಿಪಿ ಸ್ವರೂಪ ವೈವಿಧ್ಯಗಳಾಗಿದ್ದು ಹೊಸ ವಿಷಯಗಳನ್ನು ಕೊಟ್ಟಂತಾಗಿದೆ.

### ೦೩. ರಾಷ್ಟ್ರಕೂಟರ ಲಿಪಿ.

ಚಲುಕ್ಯರ ತದನಂತರ ಕರ್ನಾಟಕದ ಬಹುಭಾಗವನ್ನು ಆಳಿದವರು ರಾಷ್ಟ್ರಕೂಟರು. ಇವರು ೩೦೦ ವರ್ಷಗಳು ಅಂದರೆ ಕ್ರಿ.ಶ. ೭೦೦ ರಿಂದ ಕ್ರಿ.ಶ. ೧೦೦೦ರವರೆಗೆ ಆಳ್ವಿಕೆ ನಡೆಸಿದ್ದಾರೆ. ಈ ಮಧ್ಯಾವಧಿಯ ಲಿಪಿಯನ್ನು 'ರಾಷ್ಟ್ರಕೂಟ ಲಿಪಿ' ಎಂದು ಕರೆಯಲಾಗಿದೆ. ದೇವರ ಕೊಂಡಾ ರೆಡ್ಡಿಯವರು ಈ ಕಾಲದ ಲಿಪಿಯನ್ನು 'ಗಂಗ-ರಾಷ್ಟ್ರಕೂಟ ಲಿಪಿ' ಎಂದು ಗುರುತಿಸಿದ್ದಾರೆ.[೧೭] ಗಂಗರು ಮತ್ತು ರಾಷ್ಟ್ರಕೂಟ ವಂಶಗಳ ವೈವಾಹಿಕ ಸಂಬಂಧಗಳಿಂದ ಲಿಪಿಯ ಕೊಡುಕೊಳ್ಳುವಿಕೆ ಆಗಿದೆ ಎಂದು ಅವರು ಗುರುತಿಸುತ್ತಾರೆ.[೧೮] ರಾಷ್ಟ್ರಕೂಟ ಲಿಪಿ ಸ್ವರೂಪವನ್ನು ಈ ರೀತಿ ಗುರುತಿಸಬಹುದು.

- ಅಕ್ಷರಗಳು ದುಂಡಾಗಿವೆ. (  )
- ತಲೆಕಟ್ಟು ಸ್ಪಷ್ಟ ಹಂತದತ್ತ ರಚನೆಯಾಗಿದೆ. (  )
- 'ಸ' ಕಾರದ ತ್ರಿಕೋನಾಕೃತಿಯ ತಲೆಕಟ್ಟು ಮೂಲಸ್ವರೂಪದ ಛಾಯೆಯನ್ನು ಹಾಗೆ ಉಳಿಸಿಕೊಂಡಿದೆ (  )
- ಸ್ವರಗಳು ಅ, ಆ, ಕ, ಖ, ಗ, ತ, ಡ, ದ, ನ, ವ್ಯಂಜನಗಳು ಸ, ಯ, ರ, ಸ ಅವರ್ಗೀಯ ವ್ಯಂಜನಗಳು ಆಧುನಿಕ ಅಕ್ಷರಗಳ ರೂಪಕ್ಕೆ ಹತ್ತಿರವೆನಿಸಿವೆ.
- ಅನುನಾಸಿಕಗಳು ನೆಲೆಕಂಡುಕೊಂಡಿವೆ.
- ಲ, ತ, ಸ, ನ, ರ ಕಾರಗಳು ಆಧುನಿಕ ಅಕ್ಷರಗಳಿಗೆ ಸಮೀಪವೆನಿಸಿವೆ.
- ಱ, ೞ ಕಾರಗಳ ಪ್ರಯೋಗ ನಿತ್ಯವಾಗಿದೆ.
- ರಾಷ್ಟ್ರಕೂಟರ ಹಾವೇರಿ ಪರಿಸರದ ಜೈನಶಾಸನಗಳು ಅತ್ಯಲ್ಪವಿದ್ದು ಲಿಪಿಗಳನ್ನು ಅಧ್ಯಯನ ಮಾಡಲು ಕದರಮಂಡಲಗಿ ಶಾಸನವನ್ನು ಹೊರತುಪಡಿಸಿ ಕ್ಷೇತ್ರಕಾರ್ಯಕ್ಕೆ ತೆರಳಿದಾಗ ಲಭ್ಯವಾಗಿಲ್ಲ.

### ೦೪. ಕಲ್ಯಾಣ ಚಾಳುಕ್ಯರ ಲಿಪಿ.

ಇಮ್ಮಡಿ ತೈಲಪ (ಕ್ರಿ.ಶ. ೯೭೩-೯೭)ನಿಂದ ಕರ್ನಾಟಕದ ಉತ್ತರ ಭಾಗದಲ್ಲಿ ಪಟ್ಟಾಧಿಕಾರಕ್ಕೆ ಬಂದ ಚಾಳುಕ್ಯರು ನಾಲ್ಕನೆಯ ಸೋಮೇಶ್ವರ (ಕ್ರಿ.ಶ. ೧೧೫೪-೯೮)ನ ಕಾಳದವರೆಗೂ ರಾಜ್ಯಭಾರ ಮಾಡಿದರು. ಕಾವೇರಿಯಿಂದ ನರ್ಮದೆಯವರೆಗೂ ಹಬ್ಬಿದ ಇವರ ಸಾಮ್ರಾಜ್ಯ ಸರಿಸುಮಾರ ೨೦೦ ವರ್ಷಗಳ (ಕಲಚೂರ್ಯ್ಯರು ಆಕ್ರಮಿಸಿದ ರಾಜ್ಯವನ್ನು ಹೊರತುಪಡಿಸಿ)ಗಳ ಕಾಲ ಆಳಿದ್ದಾರೆ. ಈ ಮಧ್ಯಾವಧಿಯ ಲಿಪಿಯನ್ನು ಚಾಳುಕ್ಯ ಲಿಪಿ ಎಂದು ಗುರುತಿಸಬಹುದು.

ಚಾಳುಕ್ಯರ ಲಿಪಿಯು ಕದಂಬ, ಚಲುಕ್ಯ, ರಾಷ್ಟ್ರಕೂಟರ ಲಿಪಿಗಳಿಗಿಂತಲೂ ವಿಕಸನ ಹೊಂದಿದ ಲಿಪಿಯಾಗಿದೆ. ಆಧುನಿಕ ಲಿಪಿಗೆ ಬಹುತೇಕ ಇವರ ಲಿಪಿಯ ಸಾಕಷ್ಟು ಅಕ್ಷರಗಳು ಹೋಲಿಕೆ ಹೊಂದುತ್ತವೆ. ಚಾಳುಕ್ಯ ಲಿಪಿ ಒಂದು ಸುಂದರವಾದ ಲಿಪಿ. ಇದಕ್ಕೆ ಕಾರಣವಿಲ್ಲದಿಲ್ಲ. ಈ ಹಿಂದೆ ಕದಂಬರು, ಚಲುಕ್ಯರು, ರಾಷ್ಟ್ರಕೂಟರು ಬಳಸುತ್ತಿದ್ದ ವಿಭಿನ್ನ ಕಲ್ಲಿನ ಆಯ್ಕೆ ಸುಂದರ ಲಿಪಿ ಬರವಣಿಗೆಗೆ ಕಾರಣ. ಇವರು ಬಳಸದ ಶಿಲೆಯನ್ನು ಶಾಸನ ರಚನೆಯಲ್ಲಿ ಬಳಸುವ ಕಾರಣ ಅಕ್ಷರಗಳು ಗುಂಡಾಗತೊಡಗಿದವು. ಜೊತೆ ಸಾವಿರಾರು ಶಾಸನಗಳು ಇವರ ಕಾಲದಲ್ಲಿ ಪ್ರಸರಣಗೊಂಡಿದ್ದರಿಂದ ಶಾಸನ ಬರೆವಣಿಗೆ ಒಂದು ವೃತ್ತಿಯಾಯಿತು. ಈ ವೃತ್ತಿ ನಿರತ ಲಿಪಿಕಾರರು ಮತ್ತು ಶಿಲ್ಪಿಗಳು ತಮಗಿದ್ದ ಅನುಭವದಿಂದ ಶಾಸನಗಳು ಸುಂದರವಾಗಿ ಒಡಮೂಡುವಲ್ಲಿ ಸಹಕಾರಿಯಾದರು. ಹಾವೇರಿ ಪರಿಸರದ ಜೈನ ಚಾಳುಕ್ಯ ಲಿಪಿಯ ವೈವಿಧ್ಯತೆಯ ಕೆಲಸವನ್ನು ಈ ರೀತಿಯಾಗಿ ಗುರುತಿಸಬಹುದು.

- ❖ ಅಕ್ಷರಗಳು ಗುಂಡಾಗಿ, ವ್ಯವಸ್ಥಿತವಾಗಿ ರಚನೆಯಾಗಿವೆ.
- ❖ ಆಧುನಿಕ ಲಿಪಿಗೆ ಹತ್ತಿರವಾದ ಲಿಪಿಗಳಿವು.
- ❖ ಹಳೆಗನ್ನಡ 'ಱ' 'ೞ' ಕಾರವನ್ನು ಮುಂದುವರೆಸಿಕೊಂಡು ಬರಲಾಗಿದೆ.
- ❖ ಚಾಳುಕ್ಯರ ಕಾಗಿನೆಲೆ ಶಾಸನದಲ್ಲಿ 'ಳ' ಕಾರವು ಸ್ಪಷ್ಟವಾಗಿ 'ನ' ಕಾರದ ತಿರುವು ರಚನೆಯಲ್ಲಿದೆ.
- ❖ 'ಶ್ರೀ' ಕಾರವು ಅಲಂಕಾರಿಕವಾಗಿ ಚಿತ್ರಿತವಾಗಿದೆ.
- ❖ ಜ ಮತ್ತು ಚ ಕಾರಗಳು ಒಂದೇ ತೆರನಾಗಿದ್ದು 'ಬ' ಕರಾದ ಹೊಕ್ಕಳ ಕೂಡುವಿಕೆಯಲ್ಲಿ ಚಿಕ್ಕ ಅಂತರವನ್ನು ಕಾಯ್ದುಕೊಳ್ಳಲಾಗಿದೆ.
- ❖ ಸಂಯುಕ್ತ ದ್ವಿತ್ವಾಕ್ಷರಗಳನ್ನು ಬಳಸಲಾಗಿದೆ. ಉದಾಃ ತ್ರೈಲೋಕ್ಯ.
- ❖ ಸಬಿಂಧು ನಿರ್ಬಿಂಧು ರಚನೆಗಳಿವೆ. ಉದಾಃ ನನ್ದನ, ಭಾಗದಿಂ.
- ❖ ತಲೆಕಟ್ಟು ಅರ್ಧಚಂದ್ರಾಕೃತಿಯಲ್ಲಿ ರಚನೆಗೊಂಡಿವೆ. ( ‿ )
- ❖ ತಲೆಕಟ್ಟು ರಚಿಸುವ ಮಧ್ಯದಲ್ಲಿ ಒಂದು ಸಣ್ಣ ಕಂಭ (।) ಗೆರೆಯನ್ನು ಬಳಸಿಕೊಳ್ಳಲಾಗಿದೆ.
- ❖ ಅ, ಆ, ಇ, ಈ, ಎ ಸ್ವರಗಳು ಕ, ಖ, ಗ, ಥ, ಜ, ತ, ಪ, ಬ, ವರ್ಗೀಯ ವ್ಯಂಜನಗಳು, ಯ, ರ, ಲ, ವ, ಶ, ಸ, ಅವರ್ಗೀಯ ವ್ಯಂಜನಗಳು ಸ್ಪಷ್ಟ ರೂಪವನ್ನು ಕಂಡುಕೊಂಡಿವೆ.
- ❖ ಮ, ದ, ನ, ಯ, ವ, ರ ಒತ್ತಕ್ಷರಗಳು ಬಳಕೆಗೊಂಡಿವೆ.
- ❖ 'ಕ್ಷ' ಕಾರವು ಸ್ಪಷ್ಟವಾಗಿ ರಚನೆಗೊಂಡಿದೆ.
- ❖ ಙ, ಞ ಅನುನಾಸಿಕಗಳ ಬಳಕೆ ಕಡಿಮೆಯಾಗಿದೆ.

ಕದಂಬರು ಸಂಸ್ಕೃತ ಭಾಷೆಯನ್ನು ಶಾಸನಗಳಲ್ಲಿ ಬಳಸಿದ್ದರಿಂದ ಆ ಭಾಷೆಯ ವರ್ಣಮಾಲೆಯ ಅಕ್ಷರಗಳು ಕನ್ನಡ ವರ್ಣ ಮಾಲೆಯಲ್ಲಿ ಸೇರಿಹೋದವು. ಅವುಗಳ ಬಳಕೆ ಪ್ರಸ್ತುತ ರಾಜಸತ್ತೆಯ ಶಾಸನಗಳಲ್ಲಿ ಕಂಡುಬರುತ್ತವೆ. ಬಾಳೇಹಳ್ಳಿ, ಕಾಗಿನೆಲೆ, ಕರಗುದರಿ, ಮಂತಗಿ, ಹೊನ್ನತ್ತಿ, ಗುತ್ತಲ ಇತ್ಯಾದಿ ಊರುಗಳಲ್ಲಿ ಚಾಳುಕ್ಯ ಶಾಸನಗಳಿರುವುದು ಕಂಡುಬರುತ್ತದೆ.

ಚಾಳುಕ್ಯರ ಲಿಪಿ

**ಆರನೇ ವಿಕ್ರಮಾದಿತ್ಯ ಕಾಗಿನೆಲೆ, (ಬ್ಯಾತಾ) ೧೦ ನೇ ಶತಮಾನ**



**ರಾಷ್ಟ್ರಕೂಟರ ಲಿಪಿ.**

**ಮೂರನೇ ಗೋವಿಂದ, ಕದರಮಂಡಲಗಿ (ರಾತಾ) ೧೦ ನೇ ಶತಮಾನ**



## ೦೫. ಹೊಯ್ಸಳ–ಸೇವುಣ ಲಿಪಿ.

ಕಲ್ಯಾಣ ಚಾಲುಕ್ಯರ ಆಳ್ವಿಕೆಯ ಕಾಲಘಟ್ಟದಲ್ಲಿಯೇ ಕ್ರಿ.ಶ. ಸುಮಾರು ೧೧೨೫ರ ವೇಳೆಗಾಗಲೇ ರಾಜ್ಯವನ್ನು ಸ್ಥಾಪಿಸಿದ್ದ ಹೊಯ್ಸಳರು ಕಲ್ಯಾಣ ಚಾಲುಕ್ಯರ ನಂತರ ಕರ್ನಾಟಕದ ಸಾರ್ವಭೌಮರಾದರು. ಹೊಯ್ಸಳರ ಶಾಸನಗಳು ಕ್ರಿ.ಶ. ೧೦೫೦ ರಿಂದ ಕ್ರಿ.ಶ. ೧೩೪೫ರವರೆಗೆ ದೊರೆಯುತ್ತವೆ. ಈ ಅವಧಿಯಲ್ಲಿನ ಲಿಪಿಗೆ ಹೊಯ್ಸಳರ ಲಿಪಿ ಎಂದೇ ಕರೆಯಲಾಗುತ್ತಿದೆ. ಹೊಯ್ಸಳರ ಸಮಕಾಲೀನರಾಗಿದ್ದ ರಾಜವಂಶಗಳ ಲಿಪಿಯಲ್ಲಿ ಹೊಯ್ಸಳರ ಲಿಪಿಗಿಂತಲೂ ಭಿನ್ನವಾದ ಅಂಶಗಳು ಹೆಚ್ಚಾಗಿ ಕಂಡುಬರುವುದಿಲ್ಲ. ಕೆಲವು ಅಕ್ಷರಗಳು ಮಾತ್ರ ಪ್ರಾದೇಶಿಕವಾಗಿ ಭಿನ್ನವಾಗಿದ್ದು ಎರಡು ಮೂರು ವೈವಿಧ್ಯಮಯ ರೂಪಗಳಲ್ಲಿ ಕಂಡುಬರುತ್ತವೆ. ಆದ್ದರಿಂದ ಈ ವಂಶಗಳ ಲಿಪಿಯನ್ನೂ ಸಹ ಹೊಯ್ಸಳರ ಲಿಪಿ ಎಂದೇ ಕರೆಯಲಾಗುತ್ತದೆ.[೧೯] ಸದ್ಯ ಹಾವೇರಿ ಪರಿಸರದಲ್ಲಿ ಹೊಯ್ಸಳರ ಒಂದೇ ಒಂದು ಶಾಸನವು ಬಾಳೂರಿನಲ್ಲಿ ದೊರೆಯುತ್ತದೆ. ಕಳಚೂರ್ಯ್ಯರ ಶಾಸನಗಳು ಮಂತಗಿ, ನದಿಹರಳಹಳ್ಳಿ, ಹಿರೇಕಣಗಿಯಲ್ಲಿ ಒಟ್ಟು ೦೬ ಶಾಸನಗಳು ದೊರೆತಿವೆ. ಈ ಪ್ರದೇಶದಲ್ಲಿ ಸೇವುಣರ ೭೧ ಜಿನಶಾಸನಗಳು ದೊರೆತದ್ದರಿಂದ ಹಾವೇರಿ ಪರಿಸರದ ೧೨ ರಿಂದ ೧೪ನೆಯ ಶತಮಾನದ ಜೈನಶಾಸನಗಳ ಕಾಲಘಟ್ಟವನ್ನು ಸೇವುಣ ಲಿಪಿ ಯುಗವೆಂದು ಪರಿಗಣಿಸಬಹುದು.

ಶಾಸನಗಳನ್ನು ರಚಿಸುವ ನೆಲೆಗಟ್ಟು ನುಣುಪಾದಂತೆ ಅಕ್ಷರಗಳು ಸುಂದರವಾಗುತ್ತವೆ. ಚಾಳುಕ್ಯರು ಈ ವಿಷಯವನ್ನರಿತು ಬಳಪದ ಕಲ್ಲನ್ನು ಬಳಸಿದರು. ಈ ಒಂದು ಕ್ರಮವು ಕಳಚೂರ್ಯ, ಹೊಯ್ಸಳ, ಸೇವುಣ ಶಾಸನಗಳಲ್ಲಿ ಅನುಸರಿಸಲ್ಪಟ್ಟು ಒಂದು ವ್ಯವಸ್ಥೆಗೊಳಪಟ್ಟಿತು. ಇವರ ಕಾಲದಲ್ಲಿ ಬಳಪದ ಕಲ್ಲಿನ ಜೊತೆಜೊತೆಗೆ ಕಪ್ಪು ಗ್ರಾನೈಟ್ ಶಿಲೆಯು ಶಾಸನ ರಚನೆಯಲ್ಲಿ ಪದಾರ್ಪಣೆಗೊಂಡಿತು. ಈ ಕಲ್ಲುಗಳ ಮಾದರಿ ಸೂಕ್ಷ್ಮ ಕೆತ್ತನೆಗೆ ಸ್ಪಂದಿಸುವುದರಿಂದ ಅಕ್ಷರಗಳೂ ಸಂಪೂರ್ಣ ಗುಂಡಾಗತೊಡಗಿದವು. ಅಕ್ಷರಗಳ ಗುಂಡಾಗುವಿಕೆ ಒಂದು ಮೂಲ ಕಾರಣ ತಾಳೆಗರಿಗಳ ಬಳಕೆ.

ಹಳೆಗನ್ನಡ ಕಾವ್ಯಗಳು ತಾಳೆಗರಿಯಮೇಲೆ ರಚನೆಯಾಗಿದ್ದು ತಿಳಿದ ವಿಚಾರ. ತಾಳೆಯು ಸೂಕ್ಷವಾದ ಲಕ್ಷಣಗಳನ್ನು ಹೊಂದಿದ್ದು ಕಂಠಪತ್ರದಲ್ಲಿ ಬರೆಯುವಾಗ ನಾಜೂಕಿನಿಂದ ಬರೆಯಬೇಕಾಗಿತ್ತು. ನೇರಗೆರೆ ಹೊಡೆದರೆ ತಾಳೆಗರಿ ತುಂಡರಿಸುವ ಸಾಧ್ಯತೆ ಹೊಂದಿದ್ದರಿಂದ ಬರವಣಿಗೆ ದುಂಡಾಗ ತೊಡಗಿತು. ಈ ಕ್ರಮದಿಂದ ಕನ್ನಡ ಅಕ್ಷರಗಳು ದುಂಡು ಸ್ವರೂಪವನ್ನು ಪಡೆಯಲು ಪ್ರಾರಂಭಿಸಿದವು. ಅಂತೆಯೇ ತಾಳೆಗರಿಯನ್ನು ಹೆಚ್ಚು ಬಳಸುತ್ತಿದ್ದರಿಂದ ಶಾಸನಗಳ ಮೂಲ ಪಾಠವು ಮೊದಲು ಅದರಲ್ಲಿಯೇ ರಚನೆಯಾಗತೊಡಗಿತು. ಇದನ್ನು ಶಾಸನಗಳಲ್ಲಿ ಪ್ರತಿಸುವಾಗ ಲಿಪಿಕಾರರು ಇನ್ನೂ ಗುಂಡಾಗಿ ಬರೆಯತೊಡಗಿದರು. ಯಾಕೆಂದರೆ ಕಲ್ಲಿನ ಮೇಲೆ ಬಣ್ಣದ ಕೈ ಬರಹ ಸುಲಭವಾಗಿ ಹೊರಳುವ ಗುಣಹೊಂದಿದ್ದರಿಂದ ತಾಳೆಗರಿಯಂತೆ ಬರವಣಿಗೆ

ಸೂಕ್ಷ್ಮತೆಯನ್ನು ಅನುಸರಿಸಬೇಕಾಗಿರಲಿಲ್ಲ. ಆದ್ದರಿಂದ ತಾಳೆಗರಿಯ ಬರವಣಿಗಾ ಕ್ರಮ ನಯವಾದ ಕಲ್ಲುಗಳ ಬಳಕೆ ಕಳಚೂರ್ಯ, ಹೊಯ್ಸಳ, ಸೇವುಣ ರಾಜಸತ್ತೆಯ ಲಿಪಿಗಳ ಸುಂದರತೆಗೆ ಕಾರಣವಾದವು. ಹಾವೇರಿ ಪರಿಸರದ ಕಳಚೂರ್ಯ ಸೇವುಣ ಲಿಪಿಗಳ ವೈವಿಧ್ಯತೆಯ ಕೆಲ ಅಂಶಗಳನ್ನು ಈ ರೀತಿ ಗುರುತಿಸಬಹುದು.

- ಅಕ್ಷರಗಳು ಗುಂಡಾಗಿದ್ದು ಸುಂದರ ಚೌಕಟ್ಟಿಗೆ ಒಳಪಟ್ಟವು.
- ಅಕ್ಷರಗಳು ಆಧುನಿಕ ಸ್ವರೂಪಕ್ಕೆ ಹತ್ತಿರ ರಚನೆಯನ್ನು ಹೊಂದಿವೆ.
- ಅಂದಿನ ಕಾಲದಲ್ಲಿದ್ದ ವರ್ಣಮಾಲೆಯ ಬಹುತೇಕ ಅಕ್ಷರಗಳನ್ನು ಹೊಂದಿವೆ.
- 'ಬ' ಮತ್ತು 'ಚ' ಅಕ್ಷರಗಳು ಒಂದೇ ತೆರನಾಗಿದ್ದು ಮಹಾಪ್ರಾಣ 'ಭ' ಕಾರವನ್ನು ಗುರುತಿಸುವಲ್ಲಿ ಹೊಕ್ಕಳು ಭಾಗದಲ್ಲಿ ಸ್ವಲ್ಪ ಸ್ಥಳ ಬಿಡಲಾಗಿದೆ.
- ಱ, ೞ ಕಾರದ ನಿತ್ಯ ಬಳಕೆಯಿದೆ.
- 'ಶ್ರೀ'ಯನ್ನು ಆಧುನಿಕ ಲಿಪಿ 'ಇ' ಕಾರದ ರೀತಿ ಬರೆಯಲಾಗಿದೆ.
- 'ಮ' ಕಾರವು 'ರ' ಕಾರದ ರೀತಿ ಬರೆಯಲಾಗಿದೆ.
- ಅಂಕಿಗಳ ಬಳಕೆಯಿದೆ.
- ಅನುಸ್ವಾರವು ಅಕ್ಷರದ ಪಕ್ಕಕ್ಕೆ ಸ್ಥಾನ ಪಡೆದಿದೆ. ಅಕ್ಷರದ ಮೇಲೆ ಬರೆಯುವ ಪರಿಪಾಠವೂ ಮುಂದುವರೆದಿದೆ.
- 'ತ' 'ಯ' ಕಾರಗಳ ಒತ್ತಕ್ಷರಗಳು ಆಧುನಿಕ ಸ್ವರೂಪದ ರೀತಿ ಇವೆ.
- ಅನುಸ್ವರ ಗುರುತಿಸುವಲ್ಲಿ ಸೊನ್ನೆಯನ್ನು ಬಳಸಿದ್ದು, ಙ, ಞ ಬಳಕೆ ಮರೆಯಾಗಿದೆ.

### ೧೬. ವಿಜಯನಗರ ಲಿಪಿ.

ಕ್ರಿ.ಶ. ೧೪ನೆಯ ಶತಮಾನದಿಂದ ೧೬ನೆಯ ಶತಮಾನದವರೆಗೂ ಬಳಕೆಯಲ್ಲಿದ್ದ ಲಿಪಿಯನ್ನು ವಿಜಯನಗರ ಅರಸರ ಲಿಪಿ ಎಂದು ಗುರುತಿಸಲಾಗುತ್ತಿದೆ. ಹೊಯ್ಸಳರ ಲಿಪಿಯು ಎಷ್ಟು ಗುಂಡಗಾಗಿ ಆಕರ್ಷಕವಾಗಿದೆಯೋ ವಿಜಯನಗರದ ಅರಸರ ಲಿಪಿಯು ಅಷ್ಟೇ ಡೊಂಕಾಗಿರುತ್ತದೆ. ಲಿಪಿ ಸೌಂದರ್ಯದ ದೃಷ್ಟಿಯಿಂದ ಇದು ಕನ್ನಡ ಲಿಪಿಯ ಅವನತಿಯ ಕಾಲವೆಂದು ಹೇಳಬಹುದು. ಇದಕ್ಕೆ ಕಾರಣವೆಂದರೆ ವಿಜಯನಗರದ ಅರಸರ ಕಾಲದಲ್ಲಿ ಶಿಲಾಶಾಸನಗಳನ್ನು ಬರೆಯಲು ಆಯ್ಕೆ ಮಾಡಿಕೊಂಡ ಒರಟು ಕಣ ಶಿಲೆಗಳೆಂದು ಹೇಳಬಹುದು.[೨೦]

ಹಾವೇರಿ ಪರಿಸರದಲ್ಲಿ ೧೬ ಜೈನ ಶಾಸನಗಳು ರಚಿತವಾಗಿದ್ದು, ಒರಟು ಶಿಲೆಯನ್ನು ಶಾಸನ ರಚನೆಯಲ್ಲಿ ಬಳಸಲಾಗಿದೆ. ಸಂಗೂರಿನ ಸಂಗಮನ ಒಂದೇ ನಿಸಿಧಿ ಶಾಸನವು ಬಳಪದ ಕಲ್ಲನ್ನು ಹೊಂದಿದ್ದು ಅಕ್ಷರಗಳು ದುಂಡಾಗಿವೆ. ಉಳಿದ ಶಾಸನಗಳ ಕಲ್ಲು ಒರಟಾಗಿದ್ದು ಅಷ್ಟೊಂದು

ಕಲಚೂರಿ ಲಿಪಿ.

ನದಿಹರಳಹಳ್ಳಿ (ರಾತ) ಕ್ರಿ.ಶ. ೧೧೬೮



ಯಾದವ ಸೇವುಣ ಲಿಪಿ.

ಅರಟಾಳ (ಶಿತಾ) ೧೨ - ೧೩ ನೇಯ ಶತಮಾನ



ಯಾದವ ಸೇವುಣ ಲಿಪಿ.

ಸಿಂಹಣ ದೇವ, ಅರಟಾಳ (ಶಿತಾ) ೧೨ - ೧೩ ನೇಯ ಶತಮಾನ





ನಯವಂತಿಕೆಯಿಂದ ಕೂಡಿಲ್ಲ. ಒರಟು ಶಿಲೆಯಲ್ಲಿ ಅಕ್ಷರಗಳನ್ನು ಆಳವಾಗಿ ಕೊರೆಯಬೇಕೆಂದರೆ ಅಕ್ಷರಗಳ ಗಾತ್ರ ಹೆಚ್ಚಾಗುತ್ತದೆ. ಹಾವೇರಿ ಪರಿಸರದಲ್ಲಿ ನಿಸಿಧಿ ಶಾಸನಗಳೇ ದೊರೆಯುವುದರಿಂದ ಶಿಲ್ಪಕ್ಕೆ ಮಹತ್ವ ಕೊಟ್ಟು ಅಕ್ಷರಗಳನ್ನು ಚಿಕ್ಕದಾಗಿ ಕೊರೆಯಲಾಗಿದೆ. ಒರಟು ಶಿಲೆಯಲ್ಲಿ ಅಕ್ಷರಗಳನ್ನು ಚಿಕ್ಕದಾಗಿ ಕೊರೆದರೆ ಸ್ಪಷ್ಟತೆ ಇರದು. ಅಂತೆಯೇ ಈ ಪರಿಸರದ ಅಕ್ಷರಗಳು ಬಹಳಷ್ಟು ಸವೆದ ರೀತಿಯಲ್ಲಿ ಕಂಡುಬರುತ್ತವೆ. ಸದ್ಯ ದೊರೆಯುವ ನಿಸಿಧಿ ಶಾಸನಗಳ ಸಹಾಯದಿಂದ ವಿಜಯನಗರ ಲಿಪಿ ವೈವಿಧ್ಯತೆಯನ್ನು ಹೀಗೆ ಗುರುತಿಸಹುದು.

- ❖ ಅಕ್ಷರಗಳು ಚಿಕ್ಕದಾಗಿಯೂ ಒರಟಾಗಿವೆ.
- ❖ ಶಾಸನಗಳು ಚಿಕ್ಕದಾಗಿದ್ದು ಸರಳ ನಿರೂಪಣೆ ಹೊಂದಿವೆ.
- ❖ ಢ, ಧ, ಭ, ಮಹಾಪ್ರಾಣಾಕ್ಷರಗಳಿಗೆ ಹೊಕ್ಕಳು ಸೀಳಲಾಗಿದೆ.
- ❖ ಸಂಗೂರು ಮತ್ತು ಸಾವಿಕೆರೆಯ ಶಾಸನಗಳು ಅಕ್ಷರಗಳು ದುಂಡಾಗಿವೆ.
- ❖ ಬಹುತೇಕ ಅಕ್ಷರಗಳು ಆಧುನಿಕ ಲಿಪಿ ಸ್ವರೂಪಕ್ಕೆ ಹತ್ತಿರವಾಗಿವೆ.
- ❖ ಐ, ಟಿ ಕಾರದ ಬಳಕೆ ಅಪರೂಪಕ್ಕೆಂಬಂತೆ ಬಂದಿದೆ.
- ❖ ಅನುಸ್ವಾರ ಅಕ್ಷರದ ಪಕ್ಕದಲ್ಲಿ ವೃತ್ತಾಕಾರದಲ್ಲಿ ಬರೆಯಲ್ಪಟ್ಟಿದೆ.
- ❖ ಅಂಕೆಗಳು ಬಳಸಲ್ಪಟ್ಟಿವೆ.
- ❖ ಒತ್ತಕ್ಷರಗಳು ಸ್ಪಷ್ಟವಾಗಿದ್ದು ಆಧುನಿಕ ಸ್ವರೂಪಕ್ಕೆ ಹತ್ತಿರವಾಗಿವೆ.

ಕದಂಬರಿಂದ ಸ್ಥಾಯಿಯಾಗಿ ನೆಲೆಕಂಡುಕೊಂಡು ಕನ್ನಡ ಲಿಪಿಯು ವಿಜಯನಗರ ಕಾಲದ ಹೊತ್ತಿಗೆ ಸ್ಥಿರ ಸ್ವರೂಪವನ್ನು ಪಡೆದುಕೊಂಡಿತು. ಕವಿಗಳು, ಲಿಪಿಕಾರರು, ರೂವಾರಿಗಳು, ರಾಜಸತ್ತೆಗಳು, ಬರವಣಿಗೆ, ಮಾಧ್ಯಮಗಳು, ಕನ್ನಡ ಲಿಪಿ ವೈವಿಧ್ಯತೆಗೆ ಕಾರಣ. ಹಾವೇರಿ ಪರಿಸರದ ಜೈನಶಾಸನಗಳು ರಾಜಸತ್ತೆಯ ಭಾಗಗಳಾಗಿದ್ದು ಅಂದಿನ ಲಿಪಿ ಪರಂಪರೆಗೆ ಅನುಗುಣವಾಗಿಯೇ ಮೈದಾಳಿವೆ. ಜೈನ ಶಾಸನಗಳ ಲಿಪಿಯು ಸ್ವತಂತ್ರವಲ್ಲ ಅವು ಸಹ ಅಂದಿನ ರಾಜಸತ್ತೆಯಲ್ಲಿ ಬಳಕೆಯಲ್ಲಿದ್ದ ಕನ್ನಡವೇ ಆಗಿದ್ದರಿಂದ ಒಟ್ಟಾರೆಯಾಗಿ ಕನ್ನಡ ಲಿಪಿ ವೈವಿಧ್ಯತೆಯ ಸ್ವರೂಪವನ್ನು ಹಾವೇರಿ ಜಿಲ್ಲೆಯ ಜೈನ ಶಾಸನಗಳಿಗೆ ಸೀಮಿತಗೊಳಿಸಿ ಪ್ರಸ್ತುತ ಅಧ್ಯಾಯದಲ್ಲಿ ಅಭ್ಯಸಿಸಲಾಗಿದೆ.

## ಅಡಿ ಟಿಪ್ಪಣಿಗಳು.

೧. ತ.ಸು ಶಾಮರಾಯ. ಹೆಚ್.ನಂಜೇಗೌಡ –ಕೇಶಿರಾಜ ವಿರಚಿತ ಶಬ್ದಮಣಿದರ್ಪಣಂ. ಪು ೦೫.

೨. ಸಾ.ಶಿ. ಮರುಳಯ್ಯ – ಕನ್ನಡ ಭಾಷೆಯ ಚರಿತ್ರೆ, ಪು ೦೧.

೩. ಎಂ. ಚಿದಾನಂದಮೂರ್ತಿ – ಭಾಷಾವಿಜ್ಞಾನದ ಮೂಲ ತತ್ವಗಳು, ಪು ೦೪.

೪. ಕ್ರಿ.ಶ. ೭೦೮ರಲ್ಲಿ ರಚಿತವಾದ ಚಲುಕ್ಯ ವಿಜಯಾದಿತ್ಯನ ಶಿಗ್ಗಾವಿ ತಾಮ್ರಶಾಸನದಲ್ಲಿ ಕನ್ನಡ ಲಿಪಿಯನ್ನು ಸಂಸ್ಕೃತ ಭಾಷೆಯನ್ನು ಬಳಸಿಕೊಳ್ಳಲಾಗಿದೆ. ಇದೇ ರಾಜಮನೆತನದ ಕ್ರಿ.ಶ. ೭೫೦ರ ಆಡೂರು (ಕೆ.ಐ.೦೧. ನಂ–೦೧. ಪು ೦೭–೦೮) ಶಿಲಾಶಾಸನದಲ್ಲಿ ಸಂಸ್ಕೃತ ಮತ್ತು ಕನ್ನಡ ದ್ವಿಭಾಷೆ (ಒಂದೇ ವಿಷಯದ ಪ್ರತ್ಯೇಕ ಶಾಸನಗಳು. ಒಂದೇ ಕಲ್ಲಿನಲ್ಲಿವೆ) ಬಳಕೆಯಾಗಿದ್ದು ಎರಡು ಭಾಷಾ ಶಾಸನಗಳಿಗೆ ಕನ್ನಡ ಲಿಪಿಯನ್ನು ಬಳಸಲಾಗಿದೆ. ಹರಿಹರ ತಾಲ್ಲೂಕು ದೇವರಬೆಳಕೆರೆ (ದಾವಣಗೆರೆ ಜಿಲ್ಲೆ) ಗ್ರಾಮದ ವಿಜಯನಗರ ಕಾಲದ ಅಪ್ರಕಟಿತ ತಾಮ್ರಶಾಸನವೊಂದರಲ್ಲಿ ಕನ್ನಡ ಭಾಷೆ, ದೇವನಾಗರೀ ಲಿಪಿಯನ್ನು ಬಳಸಲಾಗಿದೆ.

೫. ದೇವರಕೊಂಡಾ ರೆಡ್ಡಿ – ಲಿಪಿಯ ಹುಟ್ಟು ಮತ್ತು ಬೆಳವಣಿಗೆ, ಪುಟ ೦೨.

೬. ಕೆ.ಆರ್. ಗಣೇಶ್ – ಗುಣಮಧುರ (ಡಾ.ದೇವರಕೊಂಡಾ ರೆಡ್ಡಿ ಅಭಿನಂದನ ಗ್ರಂಥ), ಪು ೨೧೧.

೭. ಆದಿನಾಥನು ರಾಜ್ಯವಿಯೋಗ ಸಂದರ್ಭದಲ್ಲಿ ತನ್ನ ವಿದ್ಯೆಯನ್ನು ಮಕ್ಕಳೆಲ್ಲರಿಗೂ ಧಾರೆಯೆರೆದ ಅದರಲ್ಲಿ ಅಕ್ಷರ ವಿದ್ಯೆಯನ್ನು ತನ್ನ ಮಗಳಾದ ಬ್ರಾಹ್ಮಿಗೆ ಕಲಿಸಿಕೊಟ್ಟ ಎಂದು ಪಂಪ ತನ್ನ ಆದಿ ಪುರಾಣದಲ್ಲಿ ಹೇಳುತ್ತಾನೆ.
ವ॥ ಅಂತಕಾರಾದಿ ಹಕಾರಾಂತ ಸ್ವರ ವ್ಯಂಜನಭೇದಭಿನ್ನ ಶುದ್ಧಾಕ್ಷರಂಗಳು
ಮುಂ ಅಯೋಗವಾಹಚತುಷ್ಟಯುಮಂ ಸಂಯೋಗಾಕ್ಷರುಗಳುಮಂ
ಬ್ರಹ್ಮಿಗೆ ದಕ್ಷಿಣ ಹಸ್ತದೊಳುಪದೇಶಂಗೆಯ್ದು. ಎಸ್.ಜಿ. ನರಸಿಂಹಾಚಾರ್ – ಪಂಪಕವಿ ವಿರಚಿತಂ ಆದಿಪುರಾಣಂ, ಪು ೧೭೪.

೮. ದೇವರಕೊಂಡಾ ರೆಡ್ಡಿ, ಪೂರ್ವೋಕ್ತ ಪುಟ ೬೧–೮೯.

೯. ಡಿ.ಸ್ಮಿತಾರೆಡ್ಡಿ – ರಾಷ್ಟ್ರಕೂಟ – ಗಂಗರ ಕಾಲದ ಲಿಪಿ ಸ್ವರೂಪ (ಅಪ್ರಕಟಿತ ಲೇಖನ).

೧೦. ದೇವರಕೊಂಡಾ ರೆಡ್ಡಿ, ಪೂರ್ವೋಕ್ತ, ಪು ೧೨೨.

೧೧. ಎಂ.ಜಿ. ಮಂಜುನಾಥ., ಜಿ.ಕೆ. ದೇವರಾಜಸ್ವಾಮಿ – ಕನ್ನಡ ಲಿಪಿ ವಿಕಾಸ. ಪು ೫೭.

೧೨. ದೇವರಕೊಂಡಾ ರೆಡ್ಡಿ, ಪೂರ್ವೋಕ್ತ. ಪುಟ ೧೩೧.

೧೩. ಅದೇ., ಪು ೧೩೧.

೧೪. ಷ.ಶೆಟ್ಟರ್ – ಹಳಗನ್ನಡ ಲಿಪಿ, ಲಿಪಿಕಾರ, ಲಿಪಿ ವ್ಯವಸಾಯ. ಪು ೨೬.

೧೫. ಕೆ.ಜಿ. ಭಟ್‌ಸೂರಿ (ಸಂ) – ಕರ್ನಾಟಕ ಶಾಸನ ಸಂಶೋಧನೆ, ಪು ೦೨–೦೩.

೧೬.ಬಾ.ರಾ. ಗೋಪಾಲ – ಬನವಾಸಿ ಕದಂಬರು. ಪು ೧೬, ೧೮, ೬೪.

೧೭.ದೇವರಕೊಂಡಾರೆಡ್ಡಿ ಪೂರ್ವೋಕ್ತ. ಪು ೧೬೨.

೧೮.ಅದೇ., ಪು ೧೬೨.

೧೯.ಎಂ.ಜಿ. ಮಂಜುನಾಥ, ಜಿ.ಕೆ. ದೇವರಾಜ ಸ್ವಾಮಿ, ಪೂರ್ವೋಕ್ತ. ಪು ೮೬.

೨೦. ಅದೇ ಪು., ೯೦.

# ಅಧ್ಯಾಯ-೦೬.

# ಸಮಾರೋಪ.

'ಹಾವೇರಿ ಜಿಲ್ಲೆಯ ಜೈನ ಶಾಸನಗಳು ಮತ್ತು ಐತಿಹ್ಯಗಳು: ಒಂದು ಅಧ್ಯಯನ' ಎಂಬ ಈ ಶೀರ್ಷಿಕೆಯ ಮಹಾಪ್ರಬಂಧದ ವ್ಯಾಪ್ತಿಯು ಬನವಾಸಿ ಕದಂಬರ ಕಾಲದಿಂದ (೫ನೆಯ ಶತಮಾನ) ವಿಜಯನಗರ ಕಾಲಾವಧಿಯವರೆಗಿನದು. ಜಿಲ್ಲೆಯಲ್ಲಿ ದೊರೆತ ಜೈನ ಶಾಸನಗಳ ವೈವಿಧ್ಯಮಯ ಸಂಸ್ಕೃತಿಯನ್ನು ಮತ್ತು ಜೈನಧರ್ಮಕ್ಕೆ ಸಂಬಂಧಿಸಿದ ಚಿತ್ರಣವನ್ನು ಈ ಮಹಾಪ್ರಬಂಧದಲ್ಲಿ ಅನಾವರಣಗೊಳಿಸಲಾಗಿದೆ. ಕ್ರಿ.ಶ. ೧೨ ನೆಯ ಶತಮಾನದ ಹೊತ್ತಿಗೆ ಶೈವ-ವೀರಶೈವ ಧರ್ಮದ ದಾಳಿಗೆ ನಲುಗಿದ ಜೈನಧರ್ಮವು ೧೨ ನೆಯ ಶತಮಾನದ ನಂತರ ವೈಷ್ಣವರ ದಾಳಿಯನ್ನು ಎದುರಿಸಬೇಕಾಯಿತು. ಈ ಕಾಲಕ್ಕಾಗಲೇ ಅಲ್ಪಸಂಖ್ಯಾತರಾಗಿದ್ದ ಜೈನ ಸಮುದಾಯ ಅಸ್ತಿತ್ವ ಉಳಿಸಿಕೊಳ್ಳಲು ಬಹಳ ಹೆಣಗಾಡಬೇಕಾಯಿತು. ರಕ್ಷಿತ ಸ್ಥಳಗಳಿಗೆ ವಲಸೆ ಹೋಗಬೇಕಾಯಿತು. ಜೈನ ಸಮುದಾಯ ವಲಸೆ ಹೋದರು ಅವರ ನಿರ್ಮಾಣದ ಬಸದಿಗಳು, ಶಿಲ್ಪಗಳು ಮತ್ತೆ ಮತ್ತೆ ದಾಳಿಗೊಳಗಾಗಿ ಧಾರ್ಮಿಕವಾಗಿ ಭಗ್ನಗೊಂಡವು. ಕೆಲವೊಂದು ನಿರ್ಮಿತಿಗಳು ರೂಪಾಂತರಗೊಂಡು ವೀರಭದ್ರ ಗುಡಿ, ಹನುಮಪ್ಪನ ಗುಡಿ, ಸೋಮೇಶ್ವರ ಗುಡಿ, ಬಸವಣ್ಣನ ಗುಡಿ, ಲಕ್ಷ್ಮೀದೇವಿ ಗುಡಿ ಅಥವಾ ದ್ಯಾಮವ್ವನ ಗುಡಿಗಳಾದವು. ಅರಣ್ಯಗಳಲ್ಲಿ ಹಾಳೂರುಗಳಲ್ಲಿನವು ಅನಾಥವಾಗಿ, ಶಿಥಿಲವಾಗಿ ಮಣ್ಣು ಸೇರಿದವು.

ನಮ್ಮ ಈ ಅಧ್ಯಯನದಲ್ಲಿ ಜೈನಶಾಸನಗಳು ಮಹಾಪ್ರಬಂಧದ ಪ್ರಧಾನ ಆಕರಗಳೆನಿಸಿದರೂ ಇವುಗಳ ಬಹುಮುಖಿ ಅಂತಸತ್ವವನ್ನು ಅನುಸಂಧಾನಿಸಿಕೊಂಡ ಜಿಲ್ಲೆಯ ಜೈನ ಐತಿಹ್ಯಗಳು ಉಪಪ್ರಧಾನ ಆಕರಗಳೆನಿಸುತ್ತವೆ. ಇವುಗಳ ಜೊತೆಗೆ ಆನುಷಂಗಿಕ ಆಕರಗಳು ಎನಿಸುವ ಜಿಲ್ಲೆಯ ಸೀಮಾರೇಖೆಯನ್ನೂ ಮೀರಿ ಹಬ್ಬಿರುವ ಜೈನಧರ್ಮದ ಮತ್ತು ಜೈನೇತರ ಧರ್ಮದ ಶಾಸನಗಳು, ಸಾಹಿತ್ಯ ಕೃತಿಗಳು, ಸಂಶೋಧನಾಪ್ರಬಂಧಗಳು, ಸಂಶೋಧನಾ ಲೇಖನಗಳು ಪ್ರಬಂಧ ರಚನೆಗೆ ಒತ್ತಾಸೆಯಾಗಿವೆ. ಪ್ರಸ್ತುತ ಏಳು ಅಧ್ಯಾಯಗಳಲ್ಲಿಯೂ ಹಾವೇರಿ ಜಿಲ್ಲೆಯ ಜೈನಧರ್ಮ ಬಹುಮುಖಿ ಆಯಾಮಗಳಲ್ಲಿ ಅಸ್ಮಿತೆ ಹೊಂದಿದ್ದು ಕಂಡುಬರುತ್ತದೆ.

ಪ್ರಬಂಧದ ಮೊದಲ ಅಧ್ಯಾಯವು ಅಧ್ಯಯನ ಉದ್ದೇಶ, ವ್ಯಾಪ್ತಿ ಮತ್ತು ಆಕರಗಳಿಗೆ ಸಂಬಂಧಿಸಿದ್ದು. ಇಡೀ ಹಾವೇರಿ ಜಿಲ್ಲೆಗೆ ಸಂಬಂಧಿಸಿದ ಜೈನಶಾಸನಗಳು ಅಲ್ಲಲ್ಲಿ ಚದುರಿದ್ದವು. ಸಾಕಷ್ಟು ಜೈನಶಾಸನಗಳು ಅಪ್ರಕಟಿತವೂ ಆಗಿದ್ದವು. ಹಾಗೆ ಚದುರಿಹೋದ ಜೈನ ಶಾಸನಗಳ ಸಮಗ್ರ ಮಾಹಿತಿಯನ್ನು ಕ್ಷೇತ್ರಕಾರ್ಯದ ಮೂಲಕ ಒಗ್ಗೂಡಿಸಿ ಆಕರಗಳ ಸಮೀಕ್ಷೆಯನ್ನು ಪ್ರಸ್ತುತ ಅಧ್ಯಾಯದಲ್ಲಿ ಕೊಡಲಾಗಿದೆ. ಇನ್ನು ಅಧ್ಯಯನದ ಉದ್ದೇಶ ಇದೇ ಆಗಿದ್ದು ಜೈನಧರ್ಮ ಆಡಳಿತದ ಕಟ್ಟಕಡೆಯ ಶಾಖೆಯಲ್ಲಿ ತನ್ನ ಪ್ರಸರಣವನ್ನು ಹೇಗೆ ಪಸರಿಸಿಕೊಂಡಿತು ಎಂಬ ಸಂಕ್ಷಿಪ್ತ

ದಾಖಲಿಕರಣ ಇಲ್ಲಿದೆ. ಈ ಜಿಲ್ಲೆಯ ಜಿನಧರ್ಮದ ಸಂಸ್ಕೃತಿಯು ಜನಧರ್ಮದ ಐತಿಹ್ಯವಾದ ಬಗೆಯನ್ನು ಇಲ್ಲಿ ಚರ್ಚಿಸಲಾಗಿದೆ.

ಎರಡನೆಯ ಅಧ್ಯಾಯವು ಜಿಲ್ಲೆಯ ಜೈನ ಪರಂಪರೆಯ ಸಮಗ್ರವಾದ ಐತಿಹಾಸಿಕ ಹಿನ್ನೋಟವಾಗಿದ್ದು, ಶಾಸನ, ಮುನಿ ಪರಂಪರೆ, ಪ್ರಾಚೀನ ಜೈನಕೇಂದ್ರಗಳು ಎಂಬ ಮೂರು ಆಯಾಮಗಳಲ್ಲಿ ನಿವೇದನೆಗೊಂಡಿದೆ. ಇದರಲ್ಲಿ 'ಅ' ವಿಭಾಗವು ಶಾಸನಾಧಾರಿತ ಹಿನ್ನೋಟವಾಗಿದ್ದು ಜಿಲ್ಲೆಯಲ್ಲಿ ಇದುವರೆಗೂ ದೊರೆತ ೧೫೦ ಜೈನಶಾಸನಗಳ ತಲಸ್ಪರ್ಷಿ ಅಧ್ಯಯನ ನಿರೂಪಿತವಾಗಿದೆ. ಈ ಪರಿಸರದ ಮೇಲೆ ಹಿಡಿತ ಸಾಧಿಸಿದ ವಿವಿಧ ರಾಜಸತ್ತೆಯ ನೆಲೆಗಟ್ಟಿನಲ್ಲಿ ಪ್ರಸ್ತುತ ಜಿನಶಾಸನ ಸಂಸ್ಕೃತಿಯ ಅನಾವರಣವಿಲ್ಲಿದೆ. ಹಾವೇರಿ ಪರಿಸರದಲ್ಲಿ ಜೈನಧರ್ಮವು ಶಾತವಾಹನರ ಅವಧಿಯಲ್ಲಿ ಉತ್ತೇಜನಗೊಂಡು, ಕದಂಬರಲ್ಲಿ ಉದ್ದೀಪನವಾಗಿ, ರಾಷ್ಟ್ರಕೂಟರ ಅವಧಿಯಲ್ಲಿ ರಾಜಧರ್ಮವಾಯ್ತು. ಚಾಳುಕ್ಯ, ಕಳಚೂರ್ಯರ ಕಾಲಾವಧಿಯಲ್ಲಿ ತನ್ನ ಅಸ್ಥಿತ್ವದ ಉಳಿವಿಕೆಗಾಗಿ ಹೋರಾಡುತ್ತಾ ಸೇವುಣ ಮತ್ತು ವಿಜಯನಗರ ರಾಜಸತ್ತೆಯ ಕಾಲಾವಧಿಯಲ್ಲಿ ಇಳಿಮುಖವಾಯ್ತು. ಈ ಎಲ್ಲಾ ಅಂಶಗಳನ್ನು ಸಾರುವಲ್ಲಿ ಇಲ್ಲಿನ ಶಾಸನಗಳು ಸಾಕ್ಷಿ ಪ್ರಜ್ಞೆಯಂತಿವೆ. ಈ ಅಂಶದ ಜೊತೆಜೊತೆಗೆ ಕೆಲವೊಂದು ವಿಶೇಷ ಶಾಸನಗಳ ವೈವಿಧ್ಯತೆಯ ಅನಾವರಣವನ್ನು ಈ ವಿಭಾಗದಲ್ಲಿ ಅಭ್ಯಸಿಸಲಾಗಿದೆ. ಇನ್ನು 'ಆ' ವಿಭಾಗದಲ್ಲಿ ಇಡೀ ಹಾವೇರಿ ಪ್ರದೇಶಾದ್ಯಂತ ಜಿನಧರ್ಮವನ್ನು ಸಂಘಟನೆಯನ್ನು ಮಾಡಿದ ಮುನಿಗಳ, ಅವರ ಪರಂಪರೆಯ ಸಚಿತ್ರ ಮಾಹಿತಿಯನ್ನು ಸಾರ್ಥಕ್ಯಗೊಳಿಸಲಾಗಿ. 'ಇ' ವಿಭಾಗದ ಪ್ರಾಚೀನ ಜೈನ ಕೇಂದ್ರಗಳು ತಮ್ಮನ್ನು ಕುಟ್ಟಿಪುಡಿಮಾಡಿದರೂ ಆ ಧರ್ಮದ ಅಸ್ಮಿತೆಯನ್ನು ಸಾರುವಲ್ಲಿ ಇನ್ನೂ ಸ್ಮೃತಿಗಲ್ಲುಗಳಾಗಿ ನಿಂತು ಐತಿಹಾಸಿಕತೆಯನ್ನು ಬಿಚ್ಚಿಟ್ಟಿವೆ. ಧರ್ಮದ ಪ್ರಾಚೀನ ಕಾಲದ ಕೀರ್ತಿಮುಖ ಬಿಂಬಿಸುವ ಹಾವೇರಿ ಪರಿಸರದ ಜೈನಕೇಂದ್ರಗಳು ಅನ್ಯಧರ್ಮದ ದಾಳಿ ದಬ್ಬಾಳಿಕೆಗೆ ನಾಶವಾದ ಬಗೆಯನ್ನು ಈ ವಿಭಾಗದಲ್ಲಿ ಚರ್ಚಿಸಲಾಗಿದೆ. ಬಹುಮುಖ್ಯವಾಗಿ ಅಬ್ಬಲೂರಿನ ಜೈನರ ಮತ್ತು ಅವರ ಬಸದಿ, ಸಿದ್ಧಾಂತಗಳ ಮೇಲೆ ನಡೆದ ಒಂದು ದಾಳಿ ಇಡೀ ಪರಿಸರದಲ್ಲಿ ಜೈನಧರ್ಮ ಹೇಗೆ ಇಳಿಮುಖಗೊಂಡು ಸಾಕಷ್ಟು ಊರುಗಳಲ್ಲಿ ತನ್ನ ಅಸ್ಥಿತ್ವ ಕಳೆದುಕೊಂಡಿತು ಎಂದು ಆಧಾರಸಹಿತವಾಗಿ ನಿರೂಪಿಸಲಾಗಿದೆ.

ಮೂರನೆಯ ಅಧ್ಯಾಯವು ಪ್ರಸ್ತುತ ಅಧ್ಯಯನದ ಕೇಂದ್ರಬಿಂದುವಾಗಿದ್ದು, ಹಾವೇರಿ ಪರಿಸರದ 'ಜೈನಶಾಸನಗಳ ಅಧ್ಯಯನ' ವಾಗಿದೆ. ಇದರಲ್ಲಿ ವಿಭಾಗಗಳು, ಉಪವಿಭಾಗಗಳನ್ನು ಮಾಡಿಕೊಂಡು ಜಿಲ್ಲೆಯ ೧೫೦ ಶಾಸನಗಳ ವೈವಿಧ್ಯಮಯ ಚಿತ್ರಣವನ್ನು ಅನಾವರಣಗೊಳಿಸಲಾಗಿದೆ. ಈ ಅಧ್ಯಾಯದಲ್ಲಿ ಅ, ಆ, ಇ, ಈ ಎಂಬ ಮುಖ್ಯ ವಿಭಾಗಗಳಿದ್ದು, 'ಅ' ವಿಭಾಗವು ಶಾಸನಗಳ ಪ್ರಸರಣದ್ದಾಗಿದೆ. ಇಡೀ ಜಿಲ್ಲೆಯಾದ್ಯಂತ ಪ್ರಸರಣಗೊಂಡ ೧೫೦ ಜೈನ ಶಾಸನಗಳನ್ನು ತಾಲ್ಲೂಕುವಾರು ವಿಭಾಗಿಸಿಕೊಂಡು ಅವು ಆರ್ಥಿಕ, ರಾಜಕೀಯ, ಧಾರ್ಮಿಕ,

ನೈಸರ್ಗಿಕ ನೆಲೆಗಟ್ಟಿನಲ್ಲಿ ಹರಡಿರುವ ಬಗೆಯನ್ನು ಸವಿಸ್ತರಿಸಲಾಗಿದೆ. ಒಂದು ಧರ್ಮ ಪಸರಿಸಲು ಈ ಎಲ್ಲ ಅಂಶಗಳು ಅವಶ್ಯಕ ಎಂಬುದು ಅಧ್ಯಯನದ ತಿರುಳು. ಇನ್ನು 'ಆ' ವಿಭಾಗದಲ್ಲಿ 'ಶಾಸನಗಳ ವಿಂಗಡನೆ' ಕುರಿತಾಗಿದ್ದು, ಶಾಸನಗಳು ರಚನೆಗೊಂಡ ಶಿಲೆ, ತಾಮ್ರ ಮಾಧ್ಯಮಗಳ ಸಂಸ್ಕೃತಿ, ರಾಜಸತ್ತೆಯ ಕಾಲದಲ್ಲಿ ಪ್ರೋತ್ಸಾಹಗೊಂಡ ಶಾಸನಗಳ ಬಾಹುಳ್ಯದ ಕುರಿತಾದ 'ವಂಶಾಧಾರಿತ' ವಿಂಗಡನೆ, ದಾನ ಮತ್ತು ಮರಣ ಕುರಿತಾದ 'ವಿಷಯಾಧಾರಿತ'ವಾಗಿ ವಿಂಗಡಿಸಿಕೊಳ್ಳಲಾಗಿದೆ. ಇದರಲ್ಲಿ ಬಸದಿಯ ಮುಂದೆ ಆಡುವವರಿಗೆ (ಕಲಾವಿದರು) ದಾನ ಕೊಟ್ಟ ಪ್ರಕ್ರಿಯೆ, ಸಾವನ್ನು ಆಹ್ವಾನಿಸುವ ವಿಧಾನಗಳನ್ನು ವಿಶೇಷವಾಗಿ ಗಮನಿಸಲಾಗಿದೆ.

ಮೂರನೆಯ ಉಪವಿಭಾಗವಾದ 'ಇ' ವಿಭಾಗವು ಜೈನ 'ಶಾಸನಗಳ ಸಾಹಿತ್ಯ ಅಧ್ಯಯನ'ವಾಗಿದೆ. ಶಾಸನಗಳು ಕೇವಲ ಐತಿಹಾಸಿಕ ಆಕರಗಳಾಗದೆ ಅವು ಆಯಾ ಕಾಲಘಟ್ಟದ ಸಂಸ್ಕೃತಿ ಮತ್ತು ಸಾಹಿತ್ಯದ ಪ್ರತೀಕಗಳೂ ಹೌದು ಎಂಬಂಶವನ್ನು ಇಲ್ಲಿ ಸಾಧಿಸಲಾಗಿದೆ. ಹಾವೇರಿ ಪರಿಸರದ ಜೈನಶಾಸನಗಳಲ್ಲಿ ವ್ಯಕ್ತವಾದ ವರ್ಣನೆಗಳು, ಛಂದಸ್ಸು, ಪ್ರಶಸ್ತಿ, ಕಾಲದ ಉಲ್ಲೇಖ, ಶಾಪಾಶಯಗಳು, ಶಾಸನ ಕವಿಗಳು ಮತ್ತು ರೂವಾರಿಗಳು, ಜೈನಶಾಸನ ಶಿಲ್ಪದ ಅಂಶಗಳನ್ನು ತಲಸ್ಪರ್ಷಿಯ ಅಧ್ಯಯನ ಮಾಡಲಾಗಿದೆ. ೧.ವರ್ಣನೆಗಳಲ್ಲಿ ವ್ಯಕ್ತವಾಗುವ ಪ್ರಕೃತಿ, ವ್ಯಕ್ತಿ, ಸ್ಥಳ ವರ್ಣನೆಯನ್ನು ಶಾಸನಗಳ ಹಿನ್ನೆಲೆಯಲ್ಲಿ ಬಣ್ಣಿಸಲಾಗಿದೆ. ಕಾವ್ಯಗಳಲ್ಲಿ ವ್ಯಕ್ತವಾಗುವ ಅಷ್ಟಾದಶ ವರ್ಣನೆಯ ಕೆಲವು ಮಜಲುಗಳು ಇಲ್ಲಿ ಒಡಮೂಡಿವೆ. ೨.ಕಾವ್ಯ ಕೃತಿಗಳ ಒಡಮೂಡುವ ಮೊದಲೇ ಛಂದಸ್ಸು ಶಾಸನಗಳಲ್ಲಿ ವ್ಯಕ್ತವಾಗಿತ್ತು. ಅಂತೆಯೇ ಕಂದ, ವೃತ್ತಗಳು, ಪ್ರಾಸ, ರೂಪಕ, ಉಪಮೆ, ಶ್ಲೇಷಗಳು ನಿತ್ಯವೆನ್ನುವಂತೆ ಬಂದದ್ದನ್ನು ಉದಾಹರಣೆ ಸಹಿತ ನಿರೂಪಿಸಲಾಗಿದೆ. ೩.ರಾಜನನ್ನು ಹೊಗಳುವ ಪ್ರಶಸ್ತಿಗಳಲ್ಲಿ ತಮಗರಿವಿಲ್ಲದಂತೆ ಸಾಹಿತ್ಯಿಕ ಅಂಶಗಳನ್ನು ಮೈಗೂಡಿಸಿಕೊಂಡಿದ್ದನ್ನು ಪ್ರಶಸ್ತಿಭಾಗದಲ್ಲಿ ಅರ್ಥೈಯಿಸಲಾಗಿದೆ. ೪.ಕಾಲದ ಉಲ್ಲೇಖ ವಿಭಾಗದಲ್ಲಿ ಶಾಸನಗಳಲ್ಲಿ ವ್ಯಕ್ತವಾದ ಕಾಲದ ಉಲ್ಲೇಖಗಳು ಅವುಗಳ ನಿಖರವಾದ ತೇದಿಯನ್ನು ಕೊಡುವಲ್ಲಿ ಹೇಗೆ ಸಹಕಾರಿಯಾಗಿವೆ ಎಂಬುದನ್ನು ದಾಖಲಿಸಲಾಗಿದೆ. ೫.ಶಾಸನಗಳು ಇಂದಿಗೂ ಉಳಿದುಬರಲು ಅವುಗಳಲ್ಲಿ ವ್ಯಕ್ತವಾದ ಶಾಪೋಕ್ತಿಗಳ ಸಂಸ್ಕೃತಿಯನ್ನು ಶಾಪಾಶಯಗಳು ವಿಭಾಗದಡಿಯಲ್ಲಿ ವಿಶ್ಲೇಷಿಸಲಾಗಿದೆ. ೬.ನೆಯ ವಿಭಾಗವು ಶಾಸನ ನಿರ್ಮಾಣದ ಚರಿತೆಯಾಗಿದ್ದು, ಅವುಗಳ ನಿರ್ಮಾಣದಲ್ಲಿ ಒಂದು ಬೌದ್ಧಿಕ ಮತ್ತು ಶ್ರಮಿಕ ವರ್ಗವೇ ಕೆಲಸ ಮಾಡುತಿತ್ತು ಎಂದು ಶಾಸನ ಕವಿಗಳು ಮತ್ತು ರೂವಾರಿಗಳು ಎಂಬ ಶೀರ್ಷಿಕೆಯಡಿಯಲ್ಲಿ ಸಾದರಪಡಿಸಲಾಗಿದೆ.

ದುಂಡು ಶಿಲ್ಪದಿಂದ ಪ್ರತ್ಯೇಕ ಅಧ್ಯಯನ ಬಯಸುವ ಶಾಸನ ಶಿಲ್ಪಗಳ ಅಭ್ಯಾಸವು 'ಈ' ವಿಭಾಗದಡಿಯಲ್ಲಿ 'ಜೈನ ಶಾಸನಶಿಲ್ಪ' ಎಂಬ ಶೀರ್ಷಿಕೆಯಡಿಯಲ್ಲಿ ಚರ್ಚಿಸಲಾಗಿದೆ. ಇದರಲ್ಲಿ ದಾನ, ನಿಸಿಧಿ, ವೀರಗಲ್ಲು, ಇತರೆ ಶಿಲ್ಪಗಳು ಎಂದು ಉಪವಿಭಾಗಗಳನ್ನು ಮಾಡಿಕೊಳ್ಳಲಾಗಿದ್ದು,

ಅವುಗಳ ವಿಶೇಷತೆ, ರಚನೆ, ಸ್ವರೂಪ ಬಗ್ಗೆ ಚರ್ಚಿಸಲಾಗಿದೆ. ಸಮಕಾಲೀನ ಅನ್ಯಧರ್ಮದ ಶಿಲ್ಪಗಳ ಪ್ರಭಾವ ಮತ್ತು ಕೊಡುಕೊಳ್ಳುವಿಕೆಯು ಜೈನ ಶಿಲ್ಪದ ಹಿನ್ನೆಲೆಯಲ್ಲಿ ತೌಲನಿಕವಾಗಿ ಅಭ್ಯಸಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಜೈನ ಐತಿಹ್ಯಗಳ ಸಂಸ್ಕೃತಿಯ ಅನಾವರಣವಿದ್ದು, ಐತಿಹ್ಯ ಮತ್ತು ಶಾಸನಗಳ ತೌಲನಿಕ ಅಧ್ಯಯನವು ಇತಿಹಾಸವನ್ನು ಪುನರ್ ನಿರ್ಮಿಸುವಲ್ಲಿ ಹೇಗೆ ಸಹಕಾರಿಯಾಗಬಲ್ಲವು ಮತ್ತು ಜನರ ಮುಗ್ಧಮನಸ್ಸುಗಳಿಗೆ ಹೇಗೆ ನೆಲೆಗೊಂಡಿವೆ ಎಂದು ಈ ಅಧ್ಯಾಯದಲ್ಲಿ ಸಂಕ್ಷಿಪ್ತವಾಗಿ ಸಾದರಪಡಿಸಲಾಗಿದೆ. ಅಬ್ಬಲೂರು ಏಕಾಂತರಾಮಯ್ಯ ಐತಿಹ್ಯವೊಂದು ಶಾಸನದಲ್ಲಿ ವ್ಯಕ್ತವಾದ ಅಂಶಗಳನ್ನೇ ಹೇಗೆ ಪ್ರತಿಪಾದಿಸುತ್ತದೆ ಎಂಬುದು ಪ್ರಸ್ತುತ ಅಧ್ಯಯನಕ್ಕೆ ಒಂದು ಉದಾಹರಣೆ. ಈ ವಿಭಾಗದಲ್ಲಿ ಶಾಸನ, ಬಸದಿ, ಧರ್ಮ, ವೃತ್ತಿ, ವ್ಯಕ್ತಿ, ಶಿಲ್ಪ ಅವಶೇಷಗಳಿಗೆ ಸಂಬಂಧಿಸಿದ ಐತಿಹ್ಯಗಳ ಸಚಿತ್ರ ಮಾಹಿತಿಯನ್ನು ಒದಗಿಸಲಾಗಿದೆ.

'ಲಿಪಿ ವೈವಿಧ್ಯತೆ' ಐದನೆಯ ಅಧ್ಯಾಯವಾಗಿದ್ದು, ಹಾವೇರಿ ಪರಿಸರದ ಲಭ್ಯವಿರುವ ಜೈನ ಶಾಸನಗಳ ಸಹಾಯದಿಂದ ಅಭ್ಯಸಿಸಲಾಗಿದೆ. ರಾಜಸತ್ತೆಯ ವಿಭಾಗದಡಿಯಲ್ಲಿ ಲಿಪಿ ಚರ್ಚೆ ಈ ಅಧ್ಯಾಯದ ಮುಖ್ಯ ಗ್ರಹಿತೆ. ಹಾವೇರಿ ಪರಿಸರದ ಜೈನ ಶಾಸನಗಳ ಲಿಪಿಯ ಅವಸ್ಥಾಂತರಭೇಧಗಳನ್ನು ಇಲ್ಲಿ ಸಾದರಪಡಿಸಲಾಗಿದೆ. ಆರನೆಯ ಮತ್ತು ಕೊನೆಯ ಅಧ್ಯಾಯ ಸಮಾರೋಪವಾಗಿದ್ದು ಮಹಾಪ್ರಬಂಧದ ವಿಷಯದ ಪಕ್ಷಿನೋಟವಾಗಿದೆ. ಜೊತೆಗೆ ಇಡೀ ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನೂ ದಾಖಲಿಸಲಾಗಿದೆ. ಈ ಅಧ್ಯಾಯದ ಕೊನೆಯಲ್ಲಿ ಅನುಬಂಧಗಳನ್ನು ಕೊಡಲಾಗಿದ್ದು, ಇದರಲ್ಲಿ ಅಧ್ಯಯನಕ್ಕೆ ಸಂಬಂಧಿಸಿದ ಗ್ರಂಥಋಣ, ಹಾವೇರಿ ಜಿಲ್ಲೆಯ ಜೈನ ಶಾಸನಗಳ ಸೂಚಿ, ಕೆಲವು ಅಪ್ರಕಟಿತ ಶಾಸನಗಳ ಪಾಠ, ಶಾಸನಗಳ ಛಾಯಾಚಿತ್ರಗಳು, ನಕ್ಷೆ, ಶಾಸನಗಳ ಪ್ರಸರಣ ಪಟ್ಟಿಯನ್ನು ಕೊಡಲಾಗಿದೆ.

## ಅಧ್ಯಯನದ ಫಲಿತಗಳು.

'ಹಾವೇರಿ ಜಿಲ್ಲೆಯ ಜೈನ ಶಾಸನಗಳು ಮತ್ತು ಐತಿಹ್ಯಗಳು: ಒಂದು ಅಧ್ಯಯನ' ಶೀರ್ಷಿಕೆಯ ಮಹಾಪ್ರಬಂಧವು ಜಿಲ್ಲೆಯ ಜೈನಶಾಸಗಳು ಮತ್ತು ಐತಿಹ್ಯಗಳದ್ದಾದರೂ, ಶಾಸನಗಳ ಅಧ್ಯಯನವು ಪ್ರಧಾನವಾಗಿ ಬಂದಿದೆ. ಐತಿಹ್ಯಗಳು ಇತಿಹಾಸ ಮರು ರಚಿಸುವಲ್ಲಿ ಹೇಗೆ ಮೂಲ ಆಕರಗಳಾಗಬಲ್ಲವು ಎಂಬುದನ್ನು ಪ್ರಾಯೋಗಿಕವಾಗಿ ಅಭ್ಯಸಿಸಲಾಗಿದೆ. ಆದ್ದರಿಂದ ಇಲ್ಲಿ ಶಾಸನ ಸಂಬಂಧಿತ ಹಾವೇರಿ ಪರಿಸರದ ಜೈನಧರ್ಮದ ಏಳು-ಬೀಳುಗಳನ್ನು ಅನಾವರಣಗೊಳಿಸಲಾಗಿದೆ. ಇಡೀ ಅಧ್ಯಯನದಿಂದ ಕಂಡುಕೊಂಡ ಫಲಿತಗಳು ಅನನ್ಯ. ಅಧ್ಯಯನವೇ ಒಂದು ಮುಖ್ಯ ಫಲಿತವಾದದ್ದರಿಂದ ಪ್ರತ್ಯೇಕವಾಗಿ ಫಲಿತಗಳನ್ನು ಗುರುತಿಸುವುದು ಕಷ್ಟಸಾಧ್ಯ. ಆದರೂ ಕೆಲವೊಂದು ಪ್ರಖರವಾಗಿ ಗುರುತಿಸಲ್ಪಡುವ ಫಲಿತಗಳನ್ನು ಗುರುತಿಸಬಹುದು. ಅವುಗಳನ್ನು ಈ ಕೆಳಗಿನಂತೆ ದಾಖಲಿಸಬಹುದು.

❖ ಹಾವೇರಿ ಜಿಲ್ಲೆಯಾದ್ಯಂತ ಚದುರಿಹೋಗಿದ್ದ ೧೫೦ ಜೈನಶಾಸನಗಳನ್ನು ಒಂದು ಕಡೆ ಕಲೆಹಾಕಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಕ್ರಮ ಇಡೀ ಪರಿಸರದ ಜೈನಧರ್ಮದ ಪ್ರಾಚೀನ ಸಂಸ್ಕೃತಿಯನ್ನು ಅರಿಯುವಲ್ಲಿ ಸಹಕಾರಿ.

❖ ಬಹುಚರ್ಚಿತ 'ತ್ರಿಪರ್ವತ' ಎಂಬ ಆದಿಕದಂಬರ ಆಡಳಿತ ಘಟಕ ಇಂದಿನ ದೇವಗಿರಿಯಾಗಿತ್ತು ಎಂದು ಸಾಧಿಸಲಾಗಿದೆ. ಈ ಸ್ಥಳದಲ್ಲಿರುವ ಜೈನಕುರುಹುಗಳು, ಪ್ರಾಕೃತಿಕ ಆಕರಗಳು, ಇಲ್ಲಿಯೇ ದೊರೆತ ಆದಿಕದಂಬ ಯುವರಾಜ ದೇವವರ್ಮನನ ದೇವಗಿರಿಯ ತಾಮ್ರಪಟದಲ್ಲಿ ವ್ಯಕ್ತವಾದ ಮಹತ್ವದ ಅಂಶಗಳಿಂದ ಇಂದಿನ ಹಾವೇರಿ ಪರಿಸರದ ದೇವಗಿರಿಯೇ ಪ್ರಾಚೀನ 'ತ್ರಿಪರ್ವತ' ಎಂದು ಶೋಧಿಸಲಾಗಿದೆ.

❖ ಆದಿಕದಂಬರ ಒಂದು ಶಾಖೆ ಯುವರಾಜ ದೇವವರ್ಮನ ನೇತೃತ್ವದಲ್ಲಿ ಪರಲೂರು (ತ್ರಿಪರ್ವ್ವತ, ದೇವಗಿರಿ)ಲ್ಲಿ ಆಳುತ್ತಿತ್ತು ಎಂದು ಗುರುತಿಸಲಾಗಿದೆ.

❖ ಔತ್ತರೇಯ ಮೂಲದ ಭದ್ರಬಾಹು ಜಿನಮುನಿ ಮತ್ತು ಆತನ ಶಿಷ್ಯಮುನಿ ಸಮೂಹ ಕಳ್ವಪ್ಪು (ಶ್ರವಣಬೆಳಗೊಳ)ಗೆ ಹೋಗುವಾಗ ಹಾವೇರಿ ಪರಿಸರದ ಮೂಲಕ ಪಯಣಿಸಿದ ವಿಷಯವನ್ನು ಮೊಟ್ಟಮೊದಲ ಬಾರಿಗೆ ಪ್ರಸ್ತಾಪಿಸಲಾಗಿದೆ. ಅರಸೊತ್ತಿಗೆಯ ಆಡಳಿತ, ಕಾಲ, ನಾಡು ಬದಲಾದರೂ ಪರಂಪರೆಯಿಂದ ಬಳುವಳಿಯಾಗಿ ಬಂದ, ಮುನಿಗಳ ಸುಪ್ತ ಪ್ರಜ್ಞೆಯಲ್ಲಿ ಅಚ್ಚೊತ್ತಿದ ಶ್ರವಣಬೆಳಗೊಳದ 'ಮಹಾ ಮುನಿ ಮಾರ್ಗ' ಈಗಲೂ ಚಾಲ್ತಿಯಲ್ಲಿರುವುದನ್ನು ಜೈನ ಮುನಿ ಸಂಸ್ಕೃತಿಯ ಹಿನ್ನೆಲೆಯಲ್ಲಿ ಶೋಧಿಸಲಾಗಿದೆ.

❖ ಬಸದಿಗೆ ದಾನಕೊಟ್ಟ ಭೂಮಿಯನ್ನು ಗುರುತಿಸುವ ಗಡಿಗಲ್ಲುಗಳಿಗೆ ಮುಕ್ಕೊಡೆ ಕಲ್ಲು ಎನ್ನುವುದರ ಜೊತೆಗೆ 'ಜಿನಗಲ್ಲು' ಎನ್ನುವ ವಿಚಾರ ಶಾಸನೋಕ್ತ ಪ್ರಮಾಣದಿಂದ ಮೊದಲಬಾರಿಗೆ ಬೆಳಕುಕಾಣುತ್ತಿದೆ.

❖ ಕ್ಷೇತ್ರಕಾರ್ಯದ ಮೂಲಕ ಜಿಲ್ಲೆಯ ಅಪ್ರಕಟಿತ ಜೈನಶಾಸನಗಳನ್ನು ಶೋಧಿಸಲಾಗಿದೆ.

❖ ಜೈನಧರ್ಮದ 'ಣಮೋಕಾರ' ಮೂಲಮಂತ್ರ ಸಂಪೂರ್ಣ ಪಾಠವಿರುವ ಶಾಸನವೊಂದನ್ನು ಹೊಸದಾಗಿ ಶೋಧಿಸಲಾಗಿದೆ. ಇದು ಇದುವರೆಗೂ ಶಾಸನದಲ್ಲಿ ದೊರೆತ ಮೊಟ್ಟಮೊದಲು ಸಂಪೂರ್ಣ 'ಪಂಚ ಣಮೋಕಾರ'ದ ಉಲ್ಲೇಖ ಎಂದು ಸಾಧಿತವಾಗಿದೆ. ಇದೊಂದು ಅಪರೂಪದ ಶಾಸನವಾಗಿದ್ದು ಕರ್ನಾಟಕಕ್ಷ್ಟೇಯಲ್ಲ ಇಡೀ ಭಾರತೀಯ ಜೈನ ಶಾಸನಗಳಲ್ಲಿ ಸಂಪೂರ್ಣ ಣಮೋಕಾರ ಮಹಾಮಂತ್ರ ಹೊಂದಿರುವ ಮೊದಲ ಶಾಸನ (ನಿಸಿಧಿ ಶಾಸನ–ಬಾಳೂರು ಹಾನತಾ) ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ.

❖ ಅಬ್ಬಲೂರಿನ ಜೈನಧರ್ಮದ ಮೇಲಾದ ದೈಹಿಕ ಮತ್ತು ಮಾನಸಿಕ ದಾಳಿಯು ಇಡೀ ಹಾವೇರಿ ಪರಿಸರದ ಜೈನಕೇಂದ್ರಗಳ ಮೇಲೆ ಬೀರಿದ ಪರಿಣಾಮದ ಸತ್ಯಾಸತ್ಯೆಯನ್ನು ಹಾಳಾದ ಜೈನ ಸ್ಮಾರಕಗಳ ಹಿನ್ನೆಲೆಯಲ್ಲಿ ಬೆಳಕು ಹಾಯಿಸಲಾಗಿದೆ.

❖ ಉಗ್ರಶಿವಭಕ್ತ ಏಕಾಂತರಾಮಯ್ಯ ಸತಾತನ ಧರ್ಮದ ವಿಷ್ಣುವಿನ ಅವತಾರಕ್ಕೆ ಪಲ್ಲಟಗೊಂಡ ಪ್ರಕ್ರಿಯೆಯನ್ನು ಅಬ್ಬಲೂರು ಸೋಮೇಶ್ವರ ಜಾಲಂಧ್ರ ಶಿಲ್ಪಗಳ ಕಥಾ ಸರಣಿಯ ಚಿತ್ರಣಗಳ ಮೂಲಕ ಗುರುತಿಸಲಾಗಿದೆ.

❖ ಹಾವೇರಿಯ ಜೈನವರ್ತಕರು ಗೇರುಸೊಪ್ಪೆಯ ವ್ಯಾಪಾರ ಸಂಪರ್ಕವನ್ನು ಹೊಂದಿದ್ದರೆಂಬುದನ್ನು ಪ್ರಾಚೀನ ಜಿನಮೂರ್ತಿ ಮತ್ತು ವ್ಯಕ್ತಿನಾಮಗಳ ಅಧ್ಯಯನದಿಂದ ಸಾಧಿಸಲಾಗಿದೆ.

❖ ೧೨ನೆಯ ಶತಮಾನದಲ್ಲಿ ಅನ್ಯಧರ್ಮಗಳ ಪ್ರಭಾವದ ವಿರುದ್ಧ ಸೆಣೆಸಲು ಜೈನ ಧರ್ಮ ಲೌಖಿಕ ಅಭೀಷ್ಟೆಯನ್ನು ಈಡೇರಿಸುವ ಅಂಬಿಕೆ, ಪದ್ಮಾವತಿ, ಅಪರಾಜಿತೆ ಎಂಬ ಯಕ್ಷಿಗಳ ಮಾತ್ರ ಆರಾಧನೆ ಪದ್ಧತಿಯನ್ನು ಅನುಸಂಧಾನಿಸಿಕೊಂಡದ್ದನು ಗುರುತಿಸಲಾಗಿದೆ.

❖ ನಿರ್ಗ್ರಂಥ ಮಹಾಶ್ರಮಣ ಸಂಘ (ದಿಂಗಬರ), ಶ್ವೇತಪಟ ಮಹಾಶ್ರಮಣ ಸಂಘ (ಶ್ವೇತಾಂಬರ), ಯಾಪನೀಯ ಮುನಿ ಸಂಘಗಳ ಅಸ್ಥಿತ್ವ ಹಾವೇರಿ ಪರಿಸರದ ಪರಲೂರು (ದೇವಗಿರಿ)ಲ್ಲಿ ಐದನೆಯ ಶತಮಾನದಲ್ಲಿಯೇ ಇತ್ತು ಎಂಬುದರ ಬಗ್ಗೆ ಬೆಳಕುಹಾಯಿಸಿ, ಈ ಮೂಲಕ ಹಾವೇರಿ ಪರಿಸರದ ಜೈನ ಧರ್ಮದ ಪ್ರಾಚೀನತೆಯನ್ನು ಗುರುತಿಸಲಾಗಿದೆ.

❖ ಪ್ರಾಚೀನ ಕರ್ನಾಟಕದ ಹಲಸಿಯ ನಂತರ ಎರಡನೆ ಅತಿ ದೊಡ್ಡ ಕೇಂದ್ರ ಬೃಹತ್‌ಪರಲೂರು (ತ್ರಿಪರ್ವತ > ಪರಲೂರು > ದೇವಗಿರಿ) ಎಂದು ಶಾಸನಗಳು, ಜೈನ ಅವಶೇಷಗಳಿಂದ ಪ್ರಥಮ ಬಾರಿಗೆ ಶೋಧಿಸಲಾಗಿದೆ. ಈ ಊರು ಜೈನ ತೀರ್ಥಕ್ಷೇತ್ರವು, ಮಧ್ಯಕರ್ನಾಟಕದ ಮೊದಲ ಜೈನಕೇಂದ್ರವೂ ಆಗಿತ್ತು.

❖ ದೇವಗಿರಿಯಲ್ಲಿ ಆದಿ ಕದಂಬರ ಕಾಲಕ್ಕೆ ಒಂದು ಶಾಂತಿನಾಥ ಚೈತ್ಯಾಲಯವಿತ್ತು ಎಂಬಂಶವನ್ನು ಶೋಧಿಸಲಾಗಿದೆ.

❖ ಕಲ್ಯಾಣ ಚಾಳುಕ್ಯರ ಆಡಳಿತ ಕೊನೆಯ ಘಟ್ಟದಲ್ಲಿ ಜೈನಧರ್ಮ ಇಳಿಮುಖಗೊಂಡಿತು ಎಂಬ ವಿದ್ವಾಂಸರ ಅಭಿಪ್ರಾಯಕ್ಕೆ ವ್ಯತಿರಿಕ್ತವಾದ ಅಂಶ ಹಾವೇರಿ ಪರಿಸರದಲ್ಲಿ ಕಂಡುಬಂದು, ಇಲ್ಲಿ ದೊರೆಯುವ ಜೈನ ಶಾಸನಗಳು, ಸ್ಮಾರಕಗಳು, ಜೈನ ಚಟುವಟಿಕೆಗಳಿಂದ ಆ ಕಾಲಘಟ್ಟದಲ್ಲಿ ಔನತ್ಯದಲ್ಲಿತ್ತು ಎಂದು ಸಾಬೀತು ಪಡಿಸಲಾಗಿದೆ.

❖ ಕಳಚೂರ್ಯರ ಕಾಲಾವಧಿಯಲ್ಲಿ ಈ ಪರಿಸರದ ಜೈನಧರ್ಮ ಇಳಿಮುಖ ಪಥದತ್ತ ದಾಪುಗಾಲು ಹಾಕಿದ್ದನ್ನು ಸಾಧರಪಡಿಸಲಾಗಿದೆ.

❖ ಈ ಪರಿಸರದ ಜೈನವರ್ತಕರ ಸಂಖ್ಯಾಬಾಹುಳ್ಯವು ಕಳಚೂರ್ಯ್ಯರ ಕಾಲದಲ್ಲಿ, ಜೈನಗಾವುಂಡರ ಅಧಿಕಾರದ ಅವಸಾನ ಸೇವುಣರ ಕಾಲಾವಧಿಯಲ್ಲಿ ಕಂಡುಬಂದ ಅಂಶವನ್ನು ಗುರುತಿಸಲಾಗಿದೆ.

❖ ದಿಗಂಬರ ಮತ್ತು ಯಾಪನೀಯ ಮುನಿಪರಂಪರೆಯ ಸಮಾಗಮದ ಅಂಶವನ್ನು ಗುರುತಿಸಲಾಗಿದೆ.

❖ ಯಕ್ಷಿಯನ್ನು ಆರಾಧಿಸುವ ಜೈನರು ಯಾಪನೀಯ ಮೂಲದವರು ಎಂದು ಸಂಶೋಧಿಸಲಾಗಿದೆ.

- ಹಾವೇರಿ ಪರಿಸರದ ಜೈನ ಮುನಿಪರಂಪರೆಯ ಪರಿಕ್ರಮಣದ ವಿಷಯವನ್ನು ನವೀನ ನೆಲೆಗಟ್ಟಿನಲ್ಲಿ ಪರಿಚಯಿಸಲಾಗಿದೆ.
- ಇಪ್ಪತ್ತಕ್ಕೂ ಹೆಚ್ಚು ಜೈನ ಕೇಂದ್ರಗಳ ಪ್ರಾಚೀನ ಸಂಸ್ಕೃತಿಯನ್ನು ಅನಾವರಣಗೊಳಿಸಲಾಗಿದೆ.
- ಸಂಪೂರ್ಣ ಜೈನ ಸಮುದಾಯ ಇರುವ ಊರು ಹಾನಗಲ್ಲು ತಾಲ್ಲೂಕಿನ ವೀರಾಪುರ ಎಂದು ಗುರುತಿಸಲಾಗಿದೆ. ಮಾಂಸಾಹಾರ ಭಕ್ಷಣೆ ನಡೆಯದ ಕಾರಣ ಈ ಊರಿಗೆ 'ಕೋಳಿಕೂಗದ ಊರು' ಎಂಬ ಅಬಿಧಾನವಿದೆ ಎಂಬಂಶವನ್ನು ಅನಾವರಣಗೊಳಿಸಲಾಗಿದೆ.
- ಆರ್ಥಿಕ, ಧಾರ್ಮಿಕ, ರಾಜಕೀಯ, ನಿಸರ್ಗದ ಎಂಬ ಬಹುಮುಖಿ ಆಯಾಮಗಳಲ್ಲಿ ಶಾಸನಗಳ ಪ್ರಸರಣವನ್ನು ದಾಖಲಿಸಲಾಗಿದೆ.
- ಶಾಸನ ಸಂಬಂಧಿತ ಸಾಹಿತ್ಯ ಅಧ್ಯಯನವನ್ನು ವರ್ಣನೆ, ಛಂದಸ್ಸು, ಪ್ರಶಸ್ತಿ, ಶಾಪಗಳು, ಶಿಲ್ಪಗಳ ನೆಲೆಗಟ್ಟಿನ ಅಧ್ಯಯನವನ್ನು ಪ್ರಬಂಧ ಸಾಕ್ಷಾತ್ಕರಿಸಿಕೊಂಡಿದೆ.
- 'ಸಾಕ್ಷರ ತಿಳಕ' ಎಂಬ ವಿಶೇಷ ಬಿರುದಾವಳಿಯ ಶಂಕಣಾರ್ಯ್ಯ ಎಂಬ ಲಿಪಿಕಾರ ಶಿಲ್ಪಿಯನ್ನು ಪ್ರಥಮ ಬಾರಿಗೆ ಗುರುತಿಸಲಾಗಿದೆ.
- ಜೈನಶಿಲ್ಪಗಳ ಮೇಲೆ ಸಮಕಾಲೀನ ಜೈನೇತರ ಶಿಲ್ಪಗಳ ಪ್ರಭಾವದ ಛಾಯೆಯ ಮೇಲೆ ಬೆಳಕು ಚೆಲ್ಲಲಾಗಿದೆ. ಜೈನರಲ್ಲಿಯೂ ಮಹಾಸತಿ ಆಚರಣೆ ಜಾರಿಯಲ್ಲಿತ್ತು ಎಂಬುವುದನ್ನು ಬಾಳೂರು ಮುದ್ದುಗೌಡನ ನಿಸಿಧಿ ಮೂಲಕ ಖಚಿತಪಡಿಸಲಾಗಿದೆ.
- ಜೈನಶಿಲ್ಪಗಳ ಮೇಲೆ ಮತೀಯ ರೂಪಾಂತರದ ಪ್ರಕ್ರಿಯೆಗಳನ್ನು ಗುರುತಿಸಲಾಗಿದೆ.
- ಶಾಸ್ತ್ರಸಾಹಿತ್ಯ ಮತ್ತು ಜಾನಪದ ಸಾಹಿತ್ಯದ ಪ್ರಕಾರಗಳಾದ ಶಾಸನ ಮತ್ತು ಐತಿಹ್ಯಗಳು ಅಲ್ಲಲ್ಲಿ ಶಿಥಿಲಗೊಂಡ ಐತಿಹಾಸಿಕ ಅಂಶಗಳನ್ನು ಸರಿಪಡಿಸಲು ಸಹಕಾರಿಯಾಗುತ್ತವೆ ಎಂದು ಅಂತರ್ ಶಿಸ್ತೀಯ ಅಧ್ಯಯನದಿಂದ ಸಾಬೀತುಪಡಿಸಲಾಗಿದೆ.
- ಇಡೀ ಜಿಲ್ಲೆಯ ಜೈನ ಶಾಸನಗಳ ಲಿಪಿಯ ಅವಸ್ಥಾಭೇದಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.
- ಹಾವೇರಿ ಪರಿಸರದ ಒಟ್ಟು ಜೈನಶಾಸನಗಳು ಮತ್ತು ಐತಿಹ್ಯಗಳ ಅಧ್ಯಯನ ಈ ಮಹಾಪ್ರಬಂಧದ ಮೂಲಕ ಪ್ರಪ್ರಥಮ ಬಾರಿಗೆ ಅಧ್ಯಯನಕ್ಕೆ ಒಳಪಟ್ಟಿವೆ.

# ಅನುಬಂಧಗಳು.

- ❖ ಗ್ರಂಥಋಣ.
- ❖ ಹಾವೇರಿ ಜಿಲ್ಲೆ ಜೈನ ಶಾಸನಗಳ ಸೂಚಿ.
- ❖ ಕೆಲವು ಅಪ್ರಕಟಿತ ಶಾಸನಗಳ ಪಾಠ.
- ❖ ಛಾಯಾ ಚಿತ್ರಗಳು.
- ❖ ಜೈನ ಶಾಸನಗಳು ಪ್ರಸರಣಗೊಂಡ ನಕ್ಷೆ.
- ❖ ಶಾಸನಗಳ ಪ್ರಸರಣ ಪಟ್ಟಿ.

## ಗ್ರಂಥಋಣ.

## ಆಕರ ಗ್ರಂಥಗಳು.

### ಕನ್ನಡ ಗ್ರಂಥಗಳು.


| | | |
|---|---|---|
| ೧. | ಅಣ್ಣಿಗೇರಿ. ಎ.ಎಂ.<br>ಮೇವುಂಡಿ ಮಲ್ಲಾರಿ. | ಶಾಸನ ಸಂಚಯ, ಕನ್ನಡ ಸಾಹಿತ್ಯ ಪರಿಷತ್ತು, ೨೦೧೬. |
| ೨. | ಎಲಿಗಾರ ಚೆನ್ನಕ್ಕ | ಬಂಕಾಪುರ ಶೋಧನ, ಚನ್ನಗಂಗಾ ಪ್ರಕಾಶನ, ಧಾರವಾಡ. ೧೯೯೦. |
| ೩. | ಕಲಬುರ್ಗಿ.ಎಂ.ಎಂ. | ಮಾರ್ಗ ಸಂಪುಟ–೦೧, ಸ್ವಪ್ನ ಬುಕ್ ಹೌಸ್, ಬೆಂಗಳೂರು. ೨೦೦೫. |
| ೪. | ಕಲಬುರ್ಗಿ.ಎಂ.ಎಂ. | ಮಾರ್ಗ ಸಂಪುಟ–೦೨, ಸ್ವಪ್ನ ಬುಕ್ ಹೌಸ್, ಬೆಂಗಳೂರು. ೨೦೦೫. |
| ೫. | ಕಲಬುರ್ಗಿ.ಎಂ.ಎಂ. | ಮಾರ್ಗ ಸಂಪುಟ–೦೩, ಸ್ವಪ್ನ ಬುಕ್ ಹೌಸ್, ಬೆಂಗಳೂರು. ೨೦೦೫. |
| ೬. | ಕಾಮತ್ ಸೂರ್ಯನಾಥ. | ಕರ್ನಾಟಕದ ಸಂಕ್ಷಿಪ್ತ ಇತಿಹಾಸ (ಮರುಮುದ್ರಣ), ಎಂ.ಸಿ.ಸಿ. ಪಬ್ಲಿಕೇಷನ್ಸ್. ೨೦೧೨. |
| ೭. | ಗಣೇಶ.ಕೆ.ಆರ್. (ಪ್ರ.ಸಂ). | ಗುಣಮಧುರ (ದೇವರಕೊಂಡಾರೆಡ್ಡಿ ಅವರ ಅಭಿನಂದನ ಗ್ರಂಥ). ದೇವರಕೊಂಡಾರೆಡ್ಡಿ ಅಭಿನಂದನ ಸಮಿತಿ. ೨೦೧೦. |
| ೮. | ಗೋಗಿ ಹನುಮಾಕ್ಷಿ. | ಅನುಶಾಸನ. ಮಹಿಳಾ ಸಾಹಿತ್ಯಿಕಾ, ಹುಬ್ಬಳ್ಳಿ. ೨೦೦೨. |
| ೯. | ಗೋಗಿ ಹನುಮಾಕ್ಷಿ. | ಕಲ್ಬುರ್ಗಿ ಜಿಲ್ಲೆಯ ಶಾಸನಗಳು. ಶಿವಚಂದ್ರ ಪ್ರಕಾಶನ, ಹುಬ್ಬಳ್ಳಿ. ೧೯೯೬. |
| ೧೦. | ಗೋಗಿ ಹನುಮಾಕ್ಷಿ. | ಜಿನಸಮಯ. ಸ್ವಾದಿ ಪ್ರಕಾಶನ, ಸೋಂದಾ. ೨೦೧೭. |
| ೧೧. | ಗೋಗಿ ಹನುಮಾಕ್ಷಿ. | ಲಕ್ಕುಂಡಿಯ ಶಾಸನಗಳು ಮಹಿಳಾ ಸಾಹಿತ್ಯಿಕಾ, ಹುಬ್ಬಳ್ಳಿ. ೨೦೦೮. |
| ೧೨. | ಗೋಪಾಲ ಬಾ.ರ. | ಬನವಾಸಿ ಕದಂಬರು, ಪ್ರಾಚಿ ಪ್ರಿಂಟರ್ಸ್, ಪ್ರೈವೇಟ್ ಲಿ., ಬೆಂಗಳೂರು, ೧೯೮೩. |
| ೧೩. | ಚಿದಾನಂದಮೂರ್ತಿ.ಎಂ. | ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸ್ವಪ್ನ ಬುಕ್ ಹೌಸ್, ಬೆಂಗಳೂರು. ೨೦೦೮. |
| ೧೪. | ಚಿದಾನಂದಮೂರ್ತಿ.ಎಂ. | ಭಾಷಾ ವಿಜ್ಞಾನದ ಮೂಲತತ್ವಗಳು, ಡಿ.ವಿ.ಕೆ. ಮೂರ್ತಿ ಪ್ರಕಾಶನ ಮೈಸೂರು, ೨೦೧೩. (೧೨ನೆಯ ಮುದ್ರಣ) |

೧೫. ಜಯದೇವ. ಹು.ಕಾ. ಶಾಸನ ಮತ್ತು ಗದ್ಯ (೭ನೇ ಮುದ್ರಣ), ಸ್ವಪ್ನ ಬುಕ್ ಹೌಸ್. ೨೦೧೨.

೧೬. ತೆಲಗಾವಿ ಲಕ್ಷ್ಮಣ (ಸಂ). ಹರತಿಸಿರಿ, ಹೆಚ್.ವಿ. ವೀರನಾಯಕ 'ಹರತಿ' ನೆನಪಿನ ಸಂಪುಟ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.

೧೭. ದೇವರಕೊಂಡಾರೆಡ್ಡಿ. ಕರ್ನಾಟಕ ಶಾಸನಗಳಲ್ಲಿ ಶಾಪಾಶಯಗಳು, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ. ೨೦೦೭-೨೦೦೮.

೧೮. ದೇವರಕೊಂಡಾರೆಡ್ಡಿ. ಲಿಪಿಯ ಹುಟ್ಟು ಮತ್ತು ಬೆಳವಣಿಗೆ, ಕನ್ನಡ ಪುಸ್ತಕ ಪ್ರಾಧಿಕಾರ. ೨೦೦೨.

೧೯. ದೇವರಕೊಂಡಾರೆಡ್ಡಿ (ಸಂ), ಮಾವಿನಕುಳಿ ಜಯಪ್ರಕಾಶ್ (ಸಂ) ತುಳುನಾಡಿನ ಜೈನಶಾಸನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೧೯೯೯.

೨೦. ದೇಸಾಯಿ ಗೋವಿಂದಮೂರ್ತಿ. ಸವಣೂರು ನವಾಬರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೧೯೯೯.

೨೧. ನರಸಿಂಹಮೂರ್ತಿ.ಎ.ವಿ. ಕರ್ನಾಟಕದ ಸೇವುಣರ ಇತಿಹಾಸ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು. ೨೦೧೦.

೨೨. ನರಸಿಂಹಮೂರ್ತಿ.ಎ.ವಿ. ಕನ್ನಡ ಲಿಪಿಯ ಉಗಮ ಮತ್ತು ವಿಕಾಸ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು. ೨೦೧೧.

೨೩. ನರಸಿಂಹಾಚಾರ್.ಡಿ.ಎಲ್. (ಸಂ) ಶಿವಕೋಟ್ಯಾಚಾರ್ಯ ವಿರಚಿತ ವಡ್ಡಾರಾಧನೆ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು. ೧೯೯೮.

೨೪. ನರಸಿಂಹಾಚಾರ್.ಎಸ್.ಜಿ. (ಸಂ), ವೆಂಕಟಾಚಲಶಾಸ್ತ್ರಿ (ಪರಿಷ್ಕೃತ ಸಂ) ಪಂಪಕವಿ ವಿರಚಿತ ಆದಿಪುರಾಣಂ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು. ೧೯೯೫.

೨೫. ನವಲಗುಂದ ರವಿಕುಮಾರ.ಕೆ. ಉಪಸರ್ಗ್ಗ (ಹಾವೇರಿ ಜಿಲ್ಲೆ ಜೈನ ಶಾಸನಗಳು), ಭಗವಾನ್ ಶ್ರೀ ೧೦೦೮ ನೇಮಿನಾಥ ದಿಗಂಬರ ಜೈನ ಮಂದಿರ ಕಮಿಟಿ (ರಿ), ಹಾವೇರಿ. ೨೦೧೬.

೨೬. ನಾಗರಾಜಯ್ಯ.ಹಂ.ಪ. ದಾನಚಿಂತಾಮಣಿ ಅತ್ತಿಮಬ್ಬೆ, ಐಬಿಎಚ್ ಪ್ರಕಾಶನ ಬೆಂಗಳೂರು, ೨೦೧೦.

೨೭. ನಾಗರಾಜಯ್ಯ.ಹಂ.ಪ. ಚಂದ್ರಕೊಡೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೧೯೯೭.

೨೮. ನಾಗರಾಜಯ್ಯ.ಹಂ.ಪ. ಯಾಪನೀಯ ಸಂಘ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೧೯೯೯.

೨೯. ನಾಗರಾಜಯ್ಯ.ಹಂ.ಪ. ಶಾಸನಗಳಲ್ಲಿ ಜೈನ ತೀರ್ಥಗಳು, ಪಂಡಿತರತ್ನ.ಎ. ಶಾಂತಿರಾಜಶಾಸ್ತ್ರಿ ಟ್ರಸ್ಟ್, ಬೆಂಗಳೂರು. ೧೯೯೮.

